# ದಿನಕರನ ಚೌಪದಿ

• ದಿನಕರ ದೇಸಾಯಿ



# ದಿನಕರನ ಚೌಪದಿ

◆

ದಿನಕರ ದೇಸಾಯಿ

ಸಂಪಾದಕ :

ವಿಷ್ಣು ನಾಯ್ಕ

◆

ಕೆನರಾ ವೆಲ್‌ಫೇರ್ ಟ್ರಸ್ಟ್
ಅಂಕೋಲಾ. (ಉತ್ತರ ಕನ್ನಡ ಜಿಲ್ಲೆ)

೨೦೨೨

*'DINAKARANA CHOUPADI' - a collection of 2720 Chutukas*
*written by Dinakar Desai and edited by Vishnu Naik, Ankola - 581 314 (Karnataka State)*

*Published by : CANARA WELFARE TRUST, ANKOLA - 581 314*



ಪ್ರಥಮ ಮುದ್ರಣ : ೧೯೭೮

ಪರಿಷ್ಕೃತ ದ್ವಿತೀಯ ಮುದ್ರಣ : ೨೦೧೦

ತೃತೀಯ ಮುದ್ರಣ : ೨೦೨೨

ಪುಟ ಸಂಖ್ಯೆ : ೨೦ + ೫೫೬ = ೫೭೬

ಬೆಲೆ : ರೂ. ೫೦೦-೦೦

Pages : 20 + 556 = 576

Price : Rs. 500-00

Size : Demy 1/8

Paper used : White Maplitho 70 GSM

ಹೊದಿಕೆ ಪುಟ ವಿನ್ಯಾಸ : ಗುರು ಆರ್ಟ್ಸ್, ಹುಬ್ಬಳ್ಳಿ

---

ಮುದ್ರಕರು : ಪ್ರಭು ಗ್ರಾಫಿಕ್ಸ್,
4ನೇ ಕ್ರಾಸ್, ಕೆ. ಸಿ. ರಾಣಿ ರೋಡ, ಗದಗ – 582 101
M : 9448186063, 9880904707 e-mail : prabhugadag@gmail.com

ಡಿ. ವಿ. ಗುಂಡಪ್ಪ
ಅವರ
ಪುಣ್ಯ ಸ್ಮರಣೆಗಾಗಿ
ಅರ್ಪಣ



# ಪ್ರಕಾಶಕರ ನುಡಿ



ದಿನಕರ ದೇಸಾಯಿ ಶತಮಾನೋತ್ಸವದ ನೆನಪಿನಲ್ಲಿ ಅವರ ಸಮಗ್ರ ಸಾಹಿತ್ಯವನ್ನು ಒಂದೊಂದಾಗಿ ಪ್ರಕಟಿಸಲು ಕೆನರಾ ವೆಲ್‌ಫೆರ್ ಟ್ರಸ್ಟು ನಿರ್ಧರಿಸಿದಂತೆ, ೨೦೦೭ರಲ್ಲಿ ದೇಸಾಯರ 'ಸಮಗ್ರ ಕಾವ್ಯ' ಸಂಪುಟವನ್ನು ನಾವು ಪ್ರಕಟಿಸಿದೆವು. ಅದಕ್ಕೆ ಸಹೃದಯ ಓದುಗರು ಮತ್ತು ಸರಕಾರದಿಂದ ಸಿಕ್ಕಿದ ಪ್ರೋತ್ಸಾಹ ನಮ್ಮನ್ನು ಸಾಕಷ್ಟು ಪ್ರಭಾವಿಸಿದೆ.

ಈಗ, ಅವರ ಕಾವ್ಯದ ಇನ್ನೊಂದು ಭಾಗವಾದ ಚುಟಕಗಳ ಸಂಪುಟವನ್ನು ಓದುಗರ ಕೈಗಿಡುತ್ತಿದ್ದೇವೆ. ದಿನಕರ ದೇಸಾಯಿ ಅವರು ತಮ್ಮ ಜೀವಿತ ಕಾಲಾವಧಿಯಲ್ಲಿ (೧೯೭೮) 'ದಿನಕರನ ಚೌಪದಿ' ಎಂಬ ಹೆಸರಿನಲ್ಲಿ ೨೫೦೦ ಚುಟಕಗಳ ಹೊತ್ತಿಗೆಯನ್ನು ಕೆನರಾ ವೆಲ್‌ಫೆರ್ ಟ್ರಸ್ಟಿನ ಮೂಲಕವೇ ಪ್ರಕಟಿಸಿದ್ದರು. ಅದರ ಪ್ರತಿಗಳು ಮುಗಿದು ದಶಕಗಳೇ ಕಳೆದಿವೆ. ಈ ಸಂಪುಟ ಅದರ ಪರಿಷ್ಕೃತ ಆವೃತ್ತಿಯಾಗಿದೆ. ಹಿಂದಿನ ಸಂಪುಟದಲ್ಲಿ ಇರುವ ಎಲ್ಲ ಚುಟುಕಗಳನ್ನು ಇಟ್ಟುಕೊಂಡು, ಅವರ ಹಳೆಯ ಫೈಲುಗಳಲ್ಲಿ ಉಳಿದುಕೊಂಡಿದ್ದ ಇನ್ನಷ್ಟು ಚೌಪದಿಗಳನ್ನು ಇದರಲ್ಲಿ ಸೇರಿಸಿದ್ದೇವೆ.

ಕನ್ನಡ ಸಾಹಿತ್ಯದಲ್ಲಿ 'ಚೌಪದಿ'ಗಳಿಗೆ ಒಂದು ದೀರ್ಘಪರಂಪರೆಯೇ ಇದೆ. ಈ ಕಾವ್ಯ ಪ್ರಕಾರಕ್ಕೆ ಒಂದು ಗೌರವಪೂರ್ಣ ಸ್ಥಾನಮಾನವನ್ನು ಕಲ್ಪಿಸಿಕೊಟ್ಟ ಶ್ರೇಯಸ್ಸು ದಿನಕರ ದೇಸಾಯರಿಗೆ ಸಲ್ಲುತ್ತದೆ. ಅಪ್ರಕಟಿತವಾದ ಇನ್ನೂ ಬಹಳಷ್ಟು ಚೌಪದಿಗಳನ್ನು ಅವರು ಬಿಟ್ಟು ಹೋಗಿದ್ದಾರೆ. ಅವನ್ನೆಲ್ಲ ಒಂದೆಡೆ ಕಲೆಹಾಕುವ ಕಾರ್ಯ ಮಾಡಬೇಕಾಗಿದೆ.

ಟ್ರಸ್ಟಿನ ಈ 'ಸಮಗ್ರ ಸಾಹಿತ್ಯ ಪ್ರಕಟಣೆ' ಯೋಜನೆಯ ಸಂಪಾದಕತ್ವದ ಹೊಣೆ ಹೊತ್ತುಕೊಂಡು ಯಶಸ್ವಿಯಾಗಿ ನಿರ್ವಹಿಸುತ್ತಿರುವ ಶ್ರೀ ವಿಷ್ಣು ನಾಯ್ಕ ಅವರ ಪರಿಶ್ರಮವನ್ನು ಟ್ರಸ್ಟು ಗೌರವದಿಂದ ನೆನೆಯುತ್ತದೆ.

ಈ ಸಂಪುಟಕ್ಕೆ ಕೂಡ ಓದುಗರ ಪ್ರೋತ್ಸಾಹವನ್ನು ನಿರೀಕ್ಷಿಸಲಾಗಿದೆ.

ಅಂಕೋಲಾ

೨-೨-೨೦೨೨

**– ಎಸ್. ಪಿ. ಕಾಮತ**

ಅಧ್ಯಕ್ಷರು

ಕೆನರಾ ವೆಲ್‌ಫೆರ್ ಟ್ರಸ್ಟ್

# ಪ್ರಸ್ತಾವನೆ



ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಗತಿಪರ ಚಿಂತನೆಯ ಕಾವ್ಯಗಳಿಗೆ ಹೆಸರಾದ ಒಂದು ಕಾಲವೇ ಇತ್ತು. ಇದು ೧೯೪೦ರ ದಶಕ. ಅದಕಿಂತ ಮೊದಲು ಮತ್ತು ನಂತರ ಕನ್ನಡ ಕಾವ್ಯದಲ್ಲಿ ಪ್ರಗತಿಪರ ಚಿಂತನೆಗಳಿರಲಿಲ್ಲವೆಂದೇನೂ ಅಲ್ಲ ನವೋದಯದ-ರಮ್ಯ ಸಂಪ್ರದಾಯದ ಗೇಯಗೀತಗಳ ಆರಂಭದ ನಲವತ್ತು ವರ್ಷಗಳ ಕಾಲಾವಧಿಯಲ್ಲಿ ಕನ್ನಡ ಕಾವ್ಯದಲ್ಲಿ ಪ್ರಗತಿಪರ ಚಿಂತನೆಗಳಿರಲಿಲ್ಲವೆಂದೇನೂ ಅಲ್ಲ. ನವೋದಯದ-ರಮ್ಯ ಸಂಪ್ರದಾಯದ ಗೇಯಗೀತಗಳ ಆರಂಭದ ನಲವತ್ತು ವರ್ಷಗಳ ಕಾಲಾವಧಿಯಲ್ಲಿ ಕನ್ನಡ ಕಾವ್ಯ ಸಾಮಾಜಿಕ ಚಿಂತನೆಗಿಂತ ಹೆಚ್ಚಾಗಿ ನಮ್ಮ ನೆಲ ಕಳಕೊಂಡ ಗತವೈಭವವನ್ನು ಧ್ಯಾನಿಸುವ ದಿಶೆಯಲ್ಲಿ, ಕೈತಪ್ಪಿ ಹೋಗಿರುವ ರಾಜಕೀಯ ಸ್ವಾತಂತ್ರ್ಯವನ್ನು ಮರಳಿ ಪಡೆಯುವ ದಿಶೆಯಲ್ಲಿ ಚಿಂತನೆ ನಡೆಸಿದ್ದೇ ಹೆಚ್ಚು. ಈ ನೆಲವನ್ನೂ ಇಲ್ಲಿಯ ಪರಂಪರೆಯನ್ನೂ ವೀರಾಧಿವೀರರನ್ನೂ ಕೀರ್ತಿಸುವುದರಲ್ಲೇ ನಮ್ಮ ಅಂದಿನ ಕವಿಗಳು ತಮ್ಮ ಉತ್ಸಾಹದ ಹೆಚ್ಚಿನ ಭಾಗವನ್ನು ಕಳೆದದ್ದಿದೆ.

ಇನ್ನೇನು ಕೆಲವೇ ವರ್ಷಗಳಲ್ಲಿ ನಾವು ಕಳಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆಯುತ್ತೇವೆ ಎಂಬಂಥ ರಾಜಕೀಯ ಲಕ್ಷಣಗಳು ಕಾಣತೊಡಗಿದ ಮೇಲೆ, ನಮ್ಮ ಅಂದಿನ ಮತ್ತು ಅನಂತರ ಬಾಯ್ತೆರೆದ ಕವಿಗಳ ಬರಹಗಳಲ್ಲಿ ಪ್ರಗತಿಪರ ಚಿಂತನೆಯ ಅಂಶಗಳು ಹಿಂದೆಂದಿಗಿಂತ ಹೆಚ್ಚು ಹೆಚ್ಚಾಗಿ – ಪದ್ಯದಲ್ಲೂ, ಗದ್ಯದಲ್ಲೂ – ಕಾಣಿಸಿಕೊಳ್ಳ ತೊಡಗಿದವು. ಹೊರಗಿನಿಂದ ಬಂದ ವೈರಿಗಳಷ್ಟೇ ಅಥವಾ ಅದಕ್ಕಿಂತ ತುಸು ಹೆಚ್ಚಾಗಿ ಒಳಗಿನ ವೈರಿಗಳ ಬಗ್ಗೆ ನಾವು ಚಿಂತನೆ ನಡೆಸಬೇಕಾದ ಅನಿವಾರ್ಯತೆಯನ್ನು ಕಂಡುಕೊಂಡೆವು. ನಮ್ಮ ಸುತ್ತ ಇರುವ ಜಾತೀಯತೆ, ಪ್ರತ್ಯೇಕತೆ, ಅಜ್ಞಾನ, ಬಡತನ, ಮೂಢನಂಬಿಕೆ, ಹೆಣ್ಣಿನ ಶೋಷಣೆ, ದಲಿತರ-ಶೂದ್ರರ ಅವಮಾನಕರ ಬದುಕು ಇತ್ಯಾದಿ ಬವಣೆಗಳ ವಿರುದ್ಧ ಸಾಹಿತ್ಯ ದನಿ ಎತ್ತಬೇಕಾದುದಿದೆ ಎಂಬ ಎಚ್ಚರ ದಟ್ಟವಾಗಿ ಮೂಡಿಬಂದ ಕಾಲಾವಧಿ ೧೯೪೦ರ ದಶಕದ್ದು. ಅನಕೃ, ನಿರಂಜನ, ಬಸವರಾಜ ಕಟ್ಟೀಮನಿ, ದಿನಕರ ದೇಸಾಯಿ, ವಿ. ಜಿ. ಭಟ್ ಮುಂತಾದವರು ಆಗ ಆ ಪಡೆಯಲ್ಲಿ ಎದ್ದು ಕಾಣುತ್ತಿದ್ದ ಹೆಸರುಗಳು. ದಿನಕರ ದೇಸಾಯರ ಆ ಕಾಲಘಟ್ಟದ ಪದ್ಯಗಳಲ್ಲಿ ಇಂಥ ಪ್ರಗತಿಪರ ಚಿಂತನೆ ಸ್ಪಷ್ಟವಾಗಿ ಕಾಣುತ್ತಿರುವುದನ್ನು ಯಾರಾದರೂ ಗುರುತಿಸಬಹುದಾಗಿದೆ. ಮುಂದಿನ ೧೯೫೦ರ ದಶಕ ನವ್ಯಕಾವ್ಯದ ಕಡೆ ದೃಷ್ಟಿ ನೆಟ್ಟ ಅವಧಿ. ನವ್ಯ ಎಂಬ ಒಂದು ಪ್ರತ್ಯೇಕ ಪಣೆಪಟ್ಟಿಯ ಅಗತ್ಯವನ್ನು ಆ ಸಂದರ್ಭದಲ್ಲಿ ನಯವಾಗಿಯೇ ನಿರಾಕರಿಸಿದವರು ದಿನಕರ

ದೇಸಾಯಿ. ಹೊಸ ಆಲೋಚನೆ ಮತ್ತು ಕಲ್ಪನೆಗಳೆಲ್ಲವೂ ನವ್ಯವೇ ಎನ್ನುವ ನಿಲುವಿನ ಕವಿ ಈತ. ದಿನಕರ ದೇಸಾಯರ ಕಾಲೇಜು ದಿನಗಳ ಸಹಪಾಟಿ ಮತ್ತು ಆತ್ಮೀಯ ಮಿತ್ರ ಡಾ. ವಿ. ಕೃ. ಗೋಕಾಕ್ (ವಿನಾಯಕ) ಅವರು ೧೯೫೨ರ ಹೊತ್ತಿಗೆ, 'ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು' ಎಂದು ಮುಂಬಯಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ವೇದಿಕೆ ಬಳಸಿ ಕರೆ ನೀಡಿದ್ದು ಈಗ ಇತಿಹಾಸ. ಅದನ್ನೊಂದು ಗಂಭೀರ ಕರೆಯೆಂದು ಪರಿಗಣಿಸದೇ ಆ ತನ್ನ ಗೆಳೆಯನ ಜತೆ ಸಲುಗೆಯಿಂದಲೇ ಸಾಹಿತ್ಯಿಕ ಜಗಳ ಕಾದವರು ಕೂಡ ಈ ಕವಿ. ಆದರೆ ನವ್ಯ ಕವನಗಳಲ್ಲಿ ಶಬ್ದ ಮಡಿವಂತಿಕೆ ಇಲ್ಲದಿರುವುದು ಇವರಿಗೆ ಇಷ್ಟವಾದ ಸಂಗತಿಯಾಗಿತ್ತು; ಆ ಬಗ್ಗೆ ಒಂದು ಚುಟಕವೂ ಇದೆ :

ನವ್ಯ ಕಾವ್ಯದ ನಡುವೆ ಗೀರ್ವಾಣ ಶ್ಲೋಕ
ಆಂಗ್ಲವಾಕ್ಯದ ಸಾಹಿತ್ಯ ಗಂಧರ್ವ ಲೋಕ
ಇದಕೆನ್ನುವರು ಜನರು ಆಧುನಿಕ ಕವನ
ಇದರಿಂದ ಸೃಷ್ಟಿಯಾಗುವುದು ಹೊಸ ಭವನ (ನವ್ಯ ಕಾವ್ಯ)

ಅದೇ ೫೦ರ ದಶಕದಲ್ಲಿ ದಿನಕರ ದೇಸಾಯಿ ಭಾವಗೀತೆಗಳಿಂದ ಕಿರುಗವನದ ಕಡೆ ಹೆಚ್ಚಿನ ಗಮನ ನೀಡಿದ್ದು ಕೂಡಾ ಒಂದು ವಿಶೇಷ ಘಟನೆಯೆನ್ನಬಹುದಾಗಿದೆ. ಅವರನ್ನು ಕನ್ನಡ ಕಾವ್ಯಾಭ್ಯಾಸಿಗಳು 'ಚುಟಕ ಬ್ರಹ್ಮ', 'ಚೌಪದಿಯ ಹರಿಹಾರ', 'ಚುಟಕ ಸಾರ್ವಭೌಮ', 'ಚುಟಕ ಸಾಮ್ರಾಟ' – ಎಂದೆಲ್ಲಾ ಗುರುತಿಸಿದ್ದಿದೆ. ತಾನು ಇವುಗಳಲ್ಲಿ ಯಾವುದೂ ಅಲ್ಲ ಎಂಬುದನ್ನು ಅವರು ತಮ್ಮ ಕಲವು ಚೌಪದಿಗಳ ಮೂಲಕವೇ ಸ್ಪಷ್ಟಪಡಿಸಿದಂತಿದೆ. ಜನರ ಮಧ್ಯದಿಂದ ಎದ್ದು ಬಂದ ಸರ್ವಜ್ಞ ಕವಿಯ ತ್ರಿಪದಿಗಳು, ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ', ಆಂಗ್ಲಕವಿ ವಿಲಿಯಂ ಬ್ಲೇಕ್‌ನ ಕಿರುಗವನಗಳು ತನಗೆ ಪ್ರೇರಣೆಯಾದವು ಎಂಬುದನ್ನು ಅವರು ಮುಕ್ತವಾಗಿ ಒಪ್ಪಿಕೊಂಡಿದ್ದಾರೆ. ಬೇರೊಂದು ಸಂದರ್ಭದಲ್ಲಿ ಈ ಕುರಿತು ನಾನು ಬರೆದಿರುವ ಹಾಗೆ ('ದಿನಕರ ದೇಸಾಯಿ ಆಯ್ದ ಚೌಪದಿ') ದಿನಕರ ದೇಸಾಯಿ ಅವರನ್ನು 'ಚುಟಕ ಬ್ರಹ್ಮ' ಅಥವಾ 'ಚೌಪದಿಯ ಬ್ರಹ್ಮ' ಇಲ್ಲವೇ 'ಸಾರ್ವಭೌಮ' ಎಂಬುದಕ್ಕಿಂತ ಎಪ್ಪತ್ತರ ದಶಕದಲ್ಲಿ ಕರ್ನಾಟಕ ಸರಕಾರವೇ ಗುರುತಿಸಿದಂತೆ (ರಾಜ್ಯೋತ್ಸವ ಪ್ರಶಸ್ತಿ ವಿತರಣೆ ಸಂದರ್ಭದಲ್ಲಿ) 'ಅಭಿನವ ಸರ್ವಜ್ಞ' ಎಂದು ಕರೆಯಬಹುದೇನೋ ! 'ಬಹುದೇನೋ !' ಎಂಬ ಪದವನ್ನು ಕೂಡಾ ನಾನು ಪ್ರಜ್ಞಾಪೂರ್ವಕವಾಗಿ ಬಳಸಿದ್ದೇನೆ. ಸರ್ವಜ್ಞನಂತೆ ದಿನಕರ ದೇಸಾಯಿ ಎಲ್ಲಾ ಕ್ಷೇತ್ರಗಳನ್ನು ಮುಟ್ಟಿದ್ದಾರೆ ಎಂದು ಹೇಳುವವರಿದ್ದಾರೆ. (ಹಿಂದೊಮ್ಮೆ ನನ್ನ ಅಭಿಪ್ರಾಯವೂ ಅದೇ ಆಗಿತ್ತು). ಆದರೆ ಅದು ಕೂಡ ಪೂರ್ತಿ ಸತ್ಯವಲ್ಲ ಎಂಬುದು ನನ್ನ ಇಂದಿನ ನಿಲುವು, ಒಂದು ವೇಳೆ ಮುಟ್ಟಿದರೂ ಕೂಡಾ ಆತನ ತ್ರಿಪದಿಗಳ ಒಳಗೆ ಒಡೆದುಕಾಣುವ ಜೀವನ ಜಿಜ್ಞಾಸೆ ಮತ್ತು ಗುಪ್ತವಾಗಿ ಹರಿದ ಆಧ್ಯಾತ್ಮಿಕ ಚಿಂತನೆಯ ಪ್ರಮಾಣ ದಿನಕರ ದೇಸಾಯಿಯರಲ್ಲಿ ಕಡಿಮೆ.

ಇಷ್ಟಿದ್ದೂ, ದಿನಕರ ದೇಸಾಯರನ್ನು ೨೦ನೇ ಶತಮಾನದ ಕನ್ನಡ ಕಾವ್ಯ ಪ್ರಪಂಚದಲ್ಲಿ ಚುಟಕಗಳ ಹೊಸ ಹೆದ್ದಾರಿಯನ್ನೇ ನಿರ್ಮಿಸಿದ ಕವಿಯೆಂದು ಮನ್ನಿಸಬೇಕಾಗುತ್ತದೆ.

ಅವರು ಚೌಪದಿಯ ಜೊತೆಜೊತೆಯಲ್ಲೇ ದ್ವಿಪದಿಗಳನ್ನೂ ಬರೆದಿದ್ದಾರೆಂಬುದು ಬಹಳಷ್ಟು ಓದುಗರಿಗೆ ಗೊತ್ತಿದ್ದಂತಿಲ್ಲ. ಅವೆಲ್ಲ ಇದುವರೆಗೂ ಮುದ್ರಣದ ಅವಕಾಶವನ್ನೇ ಪಡೆದಿಲ್ಲ. ನನ್ನ ಬಳಿ ಇರುವ ದೇಸಾಯರ ದ್ವಿಪದಿಗಳಲ್ಲಿ ನಾಲ್ಕನ್ನು ಇಲ್ಲಿ ಇಟ್ಟಿದ್ದೇನೆ :

**ಮಂಗ**
ಮಾನವನ ಮುತ್ತಜ್ಜನಿಗೆ ಹೆಸರು ಮಂಗ
ಮಂಗನಾಗುವುದೊಳಿತು ! ಮಾನವ ಪಟಿಂಗ.

**ಅಧಿಕಾರಲಾಲಸೆ**
ಮೇಲೇರಿ ಮೇಲೇರಿ ಮುಟ್ಟಿದೆ ಅಟ್ಟ
ಕಿರಿದಾಗಿ ಕಾಣುವುದು ಸಹ್ಯಾದ್ರಿ ಬೆಟ್ಟ.

**ದುಷ್ಟರೋಗ**
ಬೆಳ್ಳುಳ್ಳಿ ಕುಷ್ಠರೋಗಕ್ಕೆ ಉತ್ಕೃಷ್ಟ
ದುಷ್ಟರೋಗದ ನಿವಾರಣೆ ಮತ್ರ ಕಷ್ಟ.

**ಶಶಿಯ ಬೆಣ್ಣೆ**
ಅಂತರಿಕ್ಷವನೇರುವುದು ಏಕೆ, ಅಪ್ಪ ?
ಶಶಿಯ ಬೆಣ್ಣೆಯ ಕಾಸಿ ಮಾಡುವುದು ತುಪ್ಪ.

ದಿನಕರ ದೇಸಾಯಿ ಚೌಪದಿಗೆ ಹೊರಳಿಕೊಂಡ ಮೇಲೆ ದೀರ್ಘಕವನಗಳನ್ನು ಬರೆದೇ ಇಲ್ಲ ಎಂಬಂಥ ಕಲ್ಪನೆ ಕೆಲವರಲ್ಲಿದೆ. ಅದು ಸರಿಯಲ್ಲ. ಅನಂತರ ಅವರು ಬರೆದ 'ಸ್ವರ್ಗದ ಗೆಳೆಯನಿಗೆ ಪತ್ರ' ಎಂಬ ವ್ಯಂಗ್ಯ-ವಿಡಂಬನೆಗಳಿಂದ ಕೂಡಿದ ಕವನ ಅವರ ಒಟ್ಟು ಕಾವ್ಯ ಜೀವನದ ದೀರ್ಘ ಕವನವಾಗಿದೆ. ಹನ್ನೊಂದು ಅಧ್ಯಾಯಗಳನ್ನೊಳಗೊಂಡ ಆ ಪದ್ಯ ಹನ್ನೆರಡು ಪುಟದಷ್ಟು ದೀರ್ಘವಾಗಿದ್ದು, ೩೪೫ ಪಂಕ್ತಿಗಳಿಂದ ಕೂಡಿದೆ. ಈ ಪದ್ಯವನ್ನು ದೇಸಾಯಿ ಬರೆದದ್ದು, – 'ಇದು ದಿನಕರ ದೇಸಾಯರ ಚೌಪದಿಗಳ ಸುಗ್ಗಿಯ ಕಾಲ' ಎಂದೇ ಓದುಗರು ನಂಬಿದ ೧೯೬೦ರ ದಶಕದಲ್ಲಿ (ಮಾರ್ಚ, ೧೯೬೨) – ಎಂಬುದು ವಿಶೇಷವಾಗಿದೆ. **'ದಾಸಾಳ'** ಎಂಬ ಹೆಸರಿನ ಒಂದು ಕವನ ಸಂಕಲನವೂ ಬಂದಿದೆ.

೨

ಕಾವ್ಯಾಭ್ಯಾಸಿಗಳಿಗೆ ಗೊತ್ತಿರುವಂತೆ, ಈ ಚುಟಕ ಎಂಬ ಪದವು ಮೂಲತಃ ಸಂಸ್ಕೃತ 'ಮುಕ್ತಕ' ಪದಕೆ ಪರ್ಯಾಯವಾಗಿ ಕನ್ನಡದಲ್ಲಿ ಚಾಲ್ತಿಯಲ್ಲಿದೆ. ಪಾಶ್ಚಿಮಾತ್ಯ ಸಾಹಿತ್ಯದಲ್ಲಿ 'Limerick' (ಕಿರುಕಟಕಿ-ಹಾಸ್ಯನುಡಿ) ಎಂದು ಪ್ರಚಾರದಲ್ಲಿರುವ

'Epigram' (ಚಾಟು ಪದ್ಯ) ಎಂಬ ಪದಕ್ಕೂ ಕನ್ನಡದ ಚುಟಕ ತುಂಬಾ ಸಮೀಪದ್ದಾಗಿದೆ. ಆಧುನಿಕ ಇಂಗ್ಲೀಷ್ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖವಾಗಿರುವಂತೆ 'Limerick' ಎಂಬುದು ಐರ್ಲೆಂಡಿನ ಒಂದು ಊರಿನ ಹೆಸರು! ಆ ಊರಿನಲ್ಲಿ ನಡೆಯುವ ಜಾತ್ರೆಯ ಸಂದರ್ಭಗಳಲ್ಲಿ, ವಿಡಂಬನಾತ್ಮಕವಾದ ಒಂದಷ್ಟು ಬಿಡಿಪದ್ಯಗಳನ್ನು ಹಾಡುತ್ತಿದ್ದರೆಂದೂ, ಅವು ಆಶುಗೀತೆಗಳಾಗಿರುತ್ತಿದ್ದವೆಂದೂ ಪ್ರಸ್ತಾಪ ಬರುತ್ತದೆ. ಇಂತಹ ಆಶುಪದ್ಯಗಳನ್ನು ಹೇಳುತ್ತಿದ್ದ ವ್ಯಕ್ತಿ ಎಡ್ವರ್ಡ್ ಲಿಯರ್ ಎಂಬುದಾಗಿಯೂ ತಿಳಿದು ಬರುತ್ತದೆ.

ಕನ್ನಡದ ಚುಟಕಗಳ – ಹನಿಗವನಗಳ ಜಾಯಮಾನ ಕೂಡಾ ಇದೇ ಬಗೆಯದು. ಯಾವುದೋ ಸಂದರ್ಭ, – ಯಾವುದೋ ಒಂದು ಘಟನೆ ಪ್ರೇರಣೆಯಾಗಿ ಆ ಕ್ಷಣದಲ್ಲಿ ಅಥವಾ ಆ ಸಂದರ್ಭದ ನೆನಪಿನಲ್ಲಿ ಪ್ರತಿಕ್ರಿಯಾತ್ಮಕವಾಗಿ ಹೊರಹೊಮ್ಮಿದ ಕಿರುನುಡಿಗಳನ್ನು ನಾವು ಹನಿಗವನಗಳೆಂದು ಹೆಸರಿಸಬಹುದಾಗಿದೆ. ದಿನಕರ ದೇಸಾಯರ ಹೆಚ್ಚಿನ ಚುಟಕಗಳು ಕೂಡಾ ಪ್ರತಿಕ್ರಿಯಾತ್ಮಕವಾಗಿಯೇ ಹೊರಹೊಮ್ಮಿದವುಗಳಾಗಿವೆ.

ಈ ಬಗೆಯ ಆಶುಕವಿತ್ವಪರಂಪರೆ ದೇಸಾಯರಿಂದ ಮಾತ್ರ ಪ್ರಾರಂಭವಾದುದಲ್ಲ ಎಂಬುದನ್ನು ನಮ್ಮ ಗ್ರಹಿಕೆಯಲ್ಲಿಟ್ಟುಕೊಂಡೇ, ಈ ಪರಂಪರೆಯ ಪ್ರಮುಖ ವಾರಸುದಾರರಾಗಿ ಹೆದ್ದಾರಿಯೊಂದನ್ನೇ ನಿರ್ಮಿಸಿಕೊಟ್ಟ ಶ್ರೇಯಸ್ಸು ದಿನಕರ ದೇಸಾಯರಿಗೆ ಸಲ್ಲಬೇಕು. ನಮ್ಮ ಶಾಸನ ಪದ್ಯಗಳೂ ಸೇರಿದಂತೆ (ಉದಾ : ಸಾಧುಗೆ ಸಾಧು....) ಕಂದಪದ್ಯಗಳೂ ಸೇರಿದಂತೆ, ನಂಜುಂಡ ಕವಿಯಂಥವನ ಸಾಂಗತ್ಯಗಳೂ ಸೇರಿದಂತೆ, ಬಸವಣ್ಣಾದಿ ವಚನಕಾರರ ವಚನಗಳೂ ಸೇರಿದಂತೆ ನಮ್ಮ ಪ್ರಾಚೀನ ಕವಿಗಳ ಸಾವಿರಾರು ಕಿರುಗವನಗಳನ್ನು ನಾವು ಈ ಪಟ್ಟಿಗೇ ಸೇರಿಸಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಕಿರುಗವನಗಳನ್ನು ನಾವು ಈ ಪಟ್ಟಿಗೇ ಸೇರಿಸಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಈ ಮಾದರಿಯ 'ಮೂಲ' ಎನ್ನಬಹುದಾದ ನಮ್ಮ ಜನಪದ ತ್ರಿಪದಿಗಳನ್ನು ಚುಟಕ ಸಾಹಿತ್ಯ ಪ್ರಕಾರಗಳಿಂದ ಬೇರ್ಪಡಿಸಿ ನೋಡಬೇಕಾದ ಅಗತ್ಯವಿಲ್ಲ. ಆ ದಾರಿಯನ್ನೇ ಗಟ್ಟಿಯಾಗಿ ಹಿಡಿದುಕೊಂಡವರು ಸರ್ವಜ್ಞ ಕವಿ. ಈ ಹಿನ್ನೆಲೆಯಲ್ಲಿ ದಿನಕರ ದೇಸಾಯರನ್ನು ನಾನು ಆಧುನಿಕ ಕನ್ನಡ ಕಾವ್ಯದಲ್ಲಿ ಪ್ರಾಚೀನ ಚುಟಕ ಸಾಹಿತ್ಯ ಪರಂಪರೆಯ ಅತ್ಯಂತ ಮಹತ್ವದ ವಾರಸುದಾರ ಕವಿ ಎಂದು ಹೇಳಲು ಇಷ್ಟಪಡುತ್ತೇನೆ.

೨

ದಿನಕರ ದೇಸಾಯಿ ತಮ್ಮ ಭಾವಗೀತಗಳಿಂದ ಚುಟಕ ಪದ್ಯಗಳ ಕಡೆ ಹೊರಳಿಕೊಂಡದ್ದು ೧೯೫೦ರ ದಶಕದಲ್ಲಿ. ಇಡೀ ನಾಡನ್ನು ಪ್ರಭಾವಿಸುವ ಹಾಗೆ ಅವರು ಈ ಬೆಳೆ ತೆಗೆದದ್ದು ಅರವತ್ತು ಮತ್ತು ಎಪ್ಪತ್ತರ ದಶಕದಲ್ಲಿ. ಒಂದು ಅಂದಾಜಿನಂತೆ ಸುಮಾರು ಹತ್ತುಸಾವಿರದಷ್ಟು ಚೌಪದಿಗಳನ್ನು ಬರೆದಿರುವ ಬಗ್ಗೆ ಉಲ್ಲೇಖಗಳಿವೆ. ಆದರೆ

ಅವೆಲ್ಲ ಈಗ ಲಭ್ಯ ಇದ್ದಂತಿಲ್ಲ. ನನ್ನ ಬಳಿ ಇರುವ ಸಂಗ್ರಹವನ್ನು ಆಧಾರವಾಗಿಟ್ಟುಕೊಂಡು ನಾನು ಹೇಳಬಹುದಾದಲ್ಲಿ ದೇಸಾಯರು ಬರೆದ ಮುಕ್ತಕಗಳ ಸಂಖ್ಯೆ ಐದು ಸಾವಿರ ಮಿಕ್ಕಿದ್ದಂತೂ ನಿಜ. 'ಹತ್ತುಸಾವಿರದಷ್ಟಾಗಬಹುದು' ಎಂಬ ಮಾತನ್ನು ಸ್ವತಃ ದೇಸಾಯಿ ಅನೌಪಚಾರಿಕವಾದ ನಮ್ಮ ಮಾತುಗಳ ಮಧ್ಯೆ ಹೇಳಿದ್ದನ್ನು ನಾನೂ ಕೇಳಿದ್ದೇನೆ. ಅದೇ ವೇಳೆಗೆ ಅವರು ಬರೆದ ಈ ಚುಟಕವನ್ನೂ ನಾವು ಮರೆಯಲಿಕ್ಕಾಗದು :

ನಾ ಬರೆದ ಚುಟಕಗಳ ಸಂಖ್ಯೆ ವಿಪರೀತ
ಶೇಕಡಾ ತೊಂಬತ್ತು ಹೊಡೆಯುವವು ಗೋತಾ
ಉಳಿದ ಹತ್ತರ ಪೈಕಿ ಏಳೆಂಟು ಸತ್ತು
ಒಂದೆರಡು ಉಳಿದಾಗ, ಅವು ಮಾತ್ರ ಮುತ್ತು.

ತನ್ನ ಬರಹದ ಬಗ್ಗೆ ತಾನೇ ಇಷ್ಟು ಮುಕ್ತವಾಗಿ ವಿಮರ್ಶಿಸಿಕೊಂಡ ಕವಿ ಇನ್ನೊಬ್ಬ ಸಿಗಲಾರನೇನೊ ! ವ್ಯಂಗ್ಯ – ವಿಡಂಬನೆಗೆ ಇನ್ನೊಂದು ಹೆಸರೇ ಎಂಬಂತಿರುವ ಇವರ ಅಂಥ ನಾಲ್ಕು ಮುತ್ತನ್ನಾದರೂ ಇಲ್ಲಿ ಇಡುವುದು ಉಚಿತ ಅನಿಸುತ್ತದೆ :

ಕೈಕಾಲು ಸಣ್ಣಾಗಿ ಹೊಟ್ಟೆಯೇ ದೊಡ್ಡ
ಮೈಯೆಲ್ಲಾ ಕೊಳೆಯಾಗಿ ನಾರುತಿದೆ ಗಡ್ಡ
ಇದರ ಪರಿಚಯ ನಿನಗೆ ಉಂಟೇನು ಪೋರಾ
ಪೋರನೆಂದನು : ಇದುವೇ ನಮ್ಮ ಸರಕಾರ (ಪೋರನ ಉತ್ತರ)

ಇಳಿದು ಬಾ ತಾಯಿ ನೀ ಆದಷ್ಟು ಬೇಗ
ಇಲ್ಲದಿದ್ದರೆ ಪೂರ್ಣ ಹರಡುವುದು ರೋಗ.
ಪ್ರತಿಯೊಂದು ಜಿಲ್ಲೆಯಲ್ಲಿ ಚಲಿಸಿ ಬಾ ತಾಯಿ
ಹೊಲಸು ಮಾಡಿದೆ ರಾಜಕಾರಣದ ನಾಯಿ (ಗಂಗಾವತರಣ)

ಗೋವಿಂದ ಗೋಪಾಲ ಕೇಳೋ ಮುರಾರಿ,
ನೈವೇದ್ಯ ಸ್ವೀಕರಿಸಿ ಆದರು ಪರಾರಿ,
ಲೆಕ್ಕಪತ್ರಗಳಿಲ್ಲ ಕರುಣಿಸು, ಮುಕುಂದ
ಖಾದಿಬೋರ್ಡಿನ ಹಣೆಗೆ ಹಚ್ಚಿದರು ಗಂಧ. (ಖಾದಿ ಬೋರ್ಡು)

ಬಾಪೂಜಿ ನೀ ನಸುಕಿನಲಿ ನಡೆದುಬಿಟ್ಟೆ
ಈ ರಾಜ್ಯವನು ಇವರ ಕೈಯೊಳಗೆ ಕೊಟ್ಟೆ
ಈ ಲಫಂಗರು ಮಾರಿ ನಿನ್ನ ಲಂಗೋಟಿ
ಕಿಸೆಯೊಳಗೆ ಹಾಕಿದರು ಹಣ ಕೋಟಿ ಕೋಟಿ (ಬಾಪೂಜಿಗೆ)

– ಹೀಗೆ ವ್ಯಂಗ್ಯ – ವಿಡಂಬನೆಗಳೊಂದಿಗೆ ಸಾಗುವ ಪದ್ಯಗಳ ನಡುನಡುವೆ ಒಂದಷ್ಟು ಶಾಶ್ವತ ನೆಲೆಯ ಅಣಿಮುತ್ತುಗಳು ಹೊರಬಂದದ್ದಿವೆ. ಅವು ಯಾವ ವೇದ–

ಉಪನಿಷತ್ತುಗಳ ಆದರ್ಶನುಡಿಗಳಿಗೂ ಕಡಿಮೆಯಿಲ್ಲ ಎಂಬುದು ನನ್ನೆಣಿಕೆ. ಒಂದೆರಡು ಉದಾಹರಣೆಯನ್ನು ಇಲ್ಲಿ ಕೊಡಬೇಕೆನಿಸುತ್ತದೆ :

ಒಳಿತು ಮಾಡಿದರೆ ಅದು ಪುಣ್ಯಗಳ ರಾಶಿ
ಕೆಡಕು ಮಾಡಿದರೆ ಅದು ಪಾಪ ಬಿಕನಾಶಿ
ಯಾವ ದೇವರ ಪೂಜೆ ಮಾಡಿದರೂ ವ್ಯರ್ಥ
ಜನಸೇವೆಯೇ ಪೂಜೆ, ಇದುವೇ ಪುರುಷಾರ್ಥ (ಜನಸೇವೆ)

ಸಹ್ಯಾದ್ರಿಯಾಗಿರಲಿ ಜೀವನದ ಕನಸು
ಕಾವೇರಿಯಂತಿರಲಿ ಮಾನವನ ಮನಸು
ಜೋಗಜಲಪಾತವಾಗಲಿ ಗೈವ ಕಾರ್ಯ
ಯಶಗಳಿಸುತಿರಬೇಕು ಕಡಲ ಔದಾರ್ಯ (ಆದರ್ಶ)

ತ್ರಿಭುವನಕೆ ದಾರಿತೋರಿಸಿದ ಬಾಪೂಜಿ
ನಿನ್ನ ಕೈಯೊಳಗಿತ್ತು ಕಾಂಚನದ ಸೂಜಿ
ಚಿಂದಿಯಾದರೂ ಪ್ರಥಿವಿ ಹೋರಾಟದಿಂದೆ
ಅದನು ಹೊಲಿಯುವ ಶಕ್ತಿ ನಿನಗಿತ್ತು ತಂದೆ. (ಬಾಪೂಜಿಗೆ)

ನೆಮ್ಮದಿಯ ಸಮಾಜ ಎಲ್ಲ ಕವಿಗಳ ಕಾಳಜಿ. ಕಿಲುಬಿಲ್ಲದ ಪ್ರೀತಿ, ಹೊಲಸಿಲ್ಲದ ಮನಸ್ಸು, ಭ್ರಷ್ಟವಿಲ್ಲದ ಆಡಳಿತ, ಮೋಸವಿಲ್ಲದ ರಾಜಕೀಯ, ಜಾತಿ–ಧರ್ಮಗಳೆಂಬ ಗಡಿಗೋಡೆಗಳಿಲ್ಲದ ಸಮಾನತೆಯ ಸಾಮಾಜಿಕ ವ್ಯವಸ್ಥೆ – ಇವು ದಿನಕರ ದೇಸಾಯರ ಚೌಪದಿಗಳ ಪ್ರಧಾನ ಕಾಳಜಿಯಾಗಿವೆ. ಹೀಗೆ ಹಾರೈಸುವ ಈ ಕವಿಯ ಮನಸ್ಸು ಸಹಜವಾಗಿಯೇ ನಮ್ಮ ಸಮಾಜ ಈಗಾಗಲೇ ಕಂಡ ಆದರ್ಶ ವ್ಯಕ್ತಿತ್ವವನ್ನು ಓದುಗರ ಕಣ್ಮುಂದೆ ನಿಲ್ಲಿಸುತ್ತದೆ. ಬರವಣಿಗೆಯಲ್ಲಿ ನಿರತರವಾದ ಕವಿಪುಂಗವರೆಂಬವರಿಗೂ ನಿಮ್ಮ ಪರಮೋಚ್ಚ ಕಾಳಜಿ ಬಡವರ, ದೀನ–ದಲಿತರ ಕುರಿತಾಗಲಿ, ಮಾನವೀಯ ನೆಲೆಯುದ್ದಾಗಿರಲಿ ಎಂದು ಎಚ್ಚರಿಸುತ್ತದೆ. ಅದು ಅವರು ಪಡೆದ ಸಮಾಜವಾದಿ ಸಂಸ್ಕಾರದಿಂದಾಗಿ ಬಂದ ದಿಟ್ಟ–ಧೀರ ಮಾತುಗಳಾಗಿ ನನಗೆ ಕಂಡಿದೆ. ಉದಾಹರಣೆಗೆ:

ಎಲೆ ಕವಿಯೆ, ಸುಡು ನಿನ್ನ ಕವನಗಳ ಕೀರ್ತಿ
ತಿಳಿಬಾನು ಗಿರಿಕಾನುಗಳೆ ನಿನ್ನ ಸ್ಫೂರ್ತಿ
ಕೇರಿಕೇರಿಗಳಲ್ಲಿ ಉರಿದರೂ ಜ್ವಾಲೆ
ಕವನ ಕಟ್ಟುವೆ ನೀನು ಮಲ್ಲಿಗೆಯ ಮೇಲೆ ! (ಕವಿಗೆ)

ದಿನಕರ ದೇಸಾಯರ ಚೌಪದಿಗಳಲ್ಲಿ ನಾವು ಕಾಣಬಹುದಾದ ಇನ್ನೊಂದು ವಿಶೇಷ ಅಂಶವೆಂದರೆ ಅವರು ಪದಬಳಕೆ ವಿಚಾರವಾಗಿ ಮಡಿವಂತಿಕೆಯನ್ನು ಇಟ್ಟುಕೊಂಡವರಲ್ಲ. ಕನ್ನಡದ ಹೊರತಾಗಿ ಅನ್ಯಭಾಷೆಯ ಪದಗಳು ಪುಷ್ಕಳವಾಗಿ ಅವರ ಚೌಪದಿಗಳಲ್ಲಿ

ಬಳಕೆಯಾಗಿವೆ. ಉದಾಹರಣೆಗೆ : ಲೈಸೆನ್ಸು, ಚಾಕಲೇಟು, ಬೂಟು, ಕ್ಯಾರೆಟ್ಟು, ಮಿಸ್‌ಪ್ರಿಂಟು, ಕ್ಲೀನು, ಬುಷ್‌ಕೋಟು, ಪರ್ಮಿಟ್ಟು, ದರಕಾರು, ಬದ್ಮಾಸು ಇತ್ಯಾದಿ. ಗ್ರಾಮೀಣ ಪರಿಸರದ ಆಡುನುಡಿಗಳು ಕೂಡಾ ದೊಡ್ಡ ಪ್ರಮಾಣದಲ್ಲಿ ಬಳಕೆಯಾಗಿವೆ. ಉದಾಹರಣೆಗೆ : ಮಲಾಮತು (ಶನಿ), ಬಿಕ್ನಾಸಿ (ದರಿದ್ರದವ), ಎಣಚಿ (ಏಣಿ), ಧಮಾಸು (ನೆಲ ಗಟ್ಟಿಮಾಡುವ ಭಾರದ ವಸ್ತು), ಹಿಡಿಕೊಚ್ಚು (ಪೊರಕೆಯ ಕಡ್ಡಿ), ಕಪಣೆ (ಕ್ಷೌರ), ಇತ್ಯಾದಿ.

ದಿನಕರ ದೇಸಾಯರ ಚುಟಕಗಳಲ್ಲಿ ದೇಸೀಯ ಚಿಂತನೆ ಇರುವುದನ್ನು ಉದ್ದಕ್ಕೂ ಕಾಣಬಹುದು. ತನ್ನ ತಂದೆಯ ಕುರಿತು ಬರೆದ ಚುಟಕವೂ ಸೇರಿದಂತೆ, ಸಾವಿರಾರು ಚೌಪದಿಗಳಲ್ಲಿ 'ದೇಸಿಯ' ಕಳಕಳಿ ಹರಿದಿದೆ. ಅವರು ಬರೆದ ಹಾಲಕ್ಕಿಗಳ ಕುರಿತ ಚೌಪದಿಗಳು, ಉತ್ತರಕನ್ನಡ ಜಿಲ್ಲೆಯ ಕುರಿತ ಚೌಪದಿ, ಅಂಕೋಲೆಯ ಕುರಿತಾದ,–ತನ್ನ ಊರು ಅಲಗೇರಿಯ ಕುರಿತಾದ, ರೈತ ಹೋರಾಟದ ಕುರಿತಾದ, ಆ ಹೋರಾಟದಲ್ಲಿ ಉದ್ದಕ್ಕೂ ಇದ್ದ ನಿರಕ್ಷರಿ ರಾಕು ಗೌಡನ ಕುರಿತಾದ, ದಾಸಾಳದ (ದಾಸವಾಳ) ಕುರಿತಾದ, ಹೂವಿನ ಕುರುತಾದ, ತನ್ನ ನೆಲದ ಊಟೋಪಚಾರಗಳ ಕುರಿತಾದ ಚುಟಕಗಳಲ್ಲಿ ಈ ದೇಸೀಯ ಗಂಧ ದಟ್ಟವಾಗಿರುವುದನ್ನು ಕಾಣಬಹುದಾಗಿದೆ. ಹೊಲಗದ್ದೆ, ದನಕರು, ದಲಿತ–ಶೂದ್ರ–ಶ್ರಮಜೀವಿಗಳ ವರ್ಗ ಇವನ್ನೆಲ್ಲ ತಮ್ಮ ಎದೆಗೆ ಹಚ್ಚಿಕೊಂಡ ಕವಿ ಈತ. ಅವರ ಬದುಕು ಹಸನಾಗಬೇಕಾದುದಿದೆ ಎಂಬ ಕನಸಿನೊಂದಿಗೆ ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಹೋರಾಟದ ಮೈದಾನಕ್ಕಿಳಿದ ಕವಿ ಈತ. ಈ ಎಲ್ಲ ಕಾರಣಗಳಿಂದಾಗಿ ದಿನಕರ ದೇಸಾಯರನ್ನು ದೇಸೀಯ ಚಿಂತನೆಗೆ ಒತ್ತುಕೊಟ್ಟು ನೆಲದ ಕವಿಯೆಂದೇ ಗುರುತಿಸಬೇಕಾಗುತ್ತದೆ. ಈ ಮಾತಿಗೆ ಸಮರ್ಥನೆಯಾಗಬಹುದಾದ ಒಂದೆರಡು ಚೌಪದಿಗಳನ್ನು ಉಲ್ಲೇಖಿಸಿದರೆ ತಪ್ಪಾಗದು :

ಒಂದು ಬದಿ ಸಹ್ಯಾದ್ರಿ, ಒಂದು ಬದಿ ಕಡಲು
ನಡು ಮಧ್ಯದಲಿ ಅಡಕೆ ತೆಂಗುಗಳ ಮಡಲು.
ಸಿರಿಗನ್ನಡದ ಚಪ್ಪರವೆ ನನ್ನ ಜಿಲ್ಲೆ,
ಇಲ್ಲಿಯೇ ಇನ್ನೊಮ್ಮೆ ಹುಟ್ಟುವೆನು, ನಲ್ಲೆ, (ನನ್ನ ಜಿಲ್ಲೆ)

ಮೀನ ಪಳದಿಯ ಜೊತೆಗೆ ಕೊರಸಕ್ಕಿ ಅನ್ನ,
ಕನ್ನಡ ಕರಾವಳಿಯ ನಿತ್ಯ ಪಕ್ವಾನ್ನ.
ಇದರ ರುಚಿ ನೋಡಿದರೆ ದೇವರೂ ಕೊನೆಗೆ
ಸ್ವರ್ಗವನ್ನಿಳಿದು ಬರುವನು ನಮ್ಮ ಮನೆಗೆ. (ಮೀನು ಪಳದಿ)

ಇವರ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ,
ಆದರೂ ಈತನಿಗೆ ಹೆಸರು ಹಾಲಕ್ಕಿ!
ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ. (ಹಾಲಕ್ಕಿ ಒಕ್ಕಲಿಗ)

ದಿನಕರ ದೇಸಾಯಿ ಅವರ ದಾಂಪತ್ಯ ಗೀತಗಳ ಬಗ್ಗೆ ಒಂದು ಪ್ರತ್ಯಕ್ಷ ಅಧ್ಯಾಯ ಮಾಡಿ, ಚರ್ಚಿಸಬಹುದಾಗಿದೆ. ಅವರ ಭಾವಗೀತೆಗಳಲ್ಲೂ ಕೂಡ ಬಹಳಷ್ಟು ದಾಂಪತ್ಯ ಗೀತಗಳಿವೆ. ಚುಟಕಗಳಂತೂ ನೂರಾರು ಸಂಖ್ಯೆಯಲ್ಲಿವೆ. ಅವರ ಕಲ್ಪನೆಯ ಹುಡುಗಿಯರ ಹೆಸರು ಲಲಿತಾ, ಚೆನ್ನಿ, ಮಂಕಾಳಿ, ಸುನಂದೆ, ಮೀನಾಕ್ಷಿ ಹೀಗೆ ಸಾಗುತ್ತದೆ. ವಿಶೇಷವೆಂದರೆ ಅವರು ಬರೆದ ಪ್ರೇಮ ಅಥವಾ ದಾಂಪತ್ಯ ನುಡಿಗಳಲ್ಲಿ ತುಂಬಿಕೊಂಡಿರುವ ಸಂವಾದ ಗುಣದಿಂದಾಗಿ, ಒಂದು ದೃಶ್ಯರೂಪಕವೇ ಕಣ್ಣಿಗೆ ಕಟ್ಟಿದಂತಾಗುತ್ತದೆ. ಅಂತಹ ಒಂದೆರಡು ಚೌಪದಿಗಳನ್ನು ನೋಡಬಹುದು:

ಈ ಹೊತ್ತು ಇಷ್ಟು ತಡವಾಯ್ತೇಕೆ ಹೇಳಿ ?
ನಡುದಾರಿಯಲ್ಲಿ ಸಿಕ್ಕಿದಳು ಮಂಕಾಳಿ.
ಆಗಾಗ್ಗೆ ಸಿಗಲು ಕಾರಣವೇನು ಅಂದೆ ?
ಹೀಗೆ ಸಂಶಯ ತಾಳಬಾರದು, ಸುನಂದೆ. (ನಡುದಾರಿಯಲಿ)

ಎರಡು ತಿಂಗಳ ಮೇಲೆ ನೀನಿಂದು ಬಂದೆ,
ನನ್ನ ಸಲುವಾಗಿ, ಸಖಿ, ಏನೇನು ತಂದೆ ?
ಆಕೆ ಎಂದಳು : ಕೊಡಬಳೆ ಮತ್ತು ಲಾಡು.
ನನಗೆ ಎರಡೂ ಬೇಡ, ಸವಿ ಮುತ್ತು ನೀಡು (ತವರಿನಿಂದ ಮರಳಿದಾಗ)

ನನ್ನ ಲಲಿತಾ, ನೀನು ಎಲ್ಲಿ ಹೋಗಿದ್ದೆ?
ನಿನ್ನಾಣೆ ! ನಾನು ಸಂಶಯದೊಳಗೆ ಬಿದ್ದೆ,
ಅಹುದಹುದು ! ನಿಮಗೆ ಸಂಶಯವೇಕೆ ಹಾಳು ?
ಸಂಶಯ ಪಿಶಾಚಿಯಿಂದಲೇ ದೊಡ್ಡಗೋಳು. (ಎಲ್ಲಿಹೋಗಿದ್ದೆ)

ನಿಮಗೇಕೆ ಈ ಹುಚ್ಚು ಅಡಿಗೆ ಮನೆಯೊಳಗೆ
ಯಾರೇನು ಹೇಳುವರು ನೋಡಿದರೆ ನಮಗೆ,
ಯಾವುದಕ್ಕೂ ಒಂದು ಮಿತಿಬೇಕು ಅಂದೆ.
ಹೀಗೆಂದು ಕೆಂಪಗಾದಳು, ಆ ಸುನಂದೆ. (ಅಡಿಗೆ ಮನೆಯೊಳಗೆ)

ಹಿಡಿಯಬಾರದು ನನ್ನ ಸೆರಗು ಈ ರೀತಿ.
ಗೊತ್ತುಂಟು ಇಡಿ ಜಗತ್ತಿಗೆ ನಿಮ್ಮ ಪ್ರೀತಿ.
ಜನನೋಡಿದರೆ  ಏನು ಹೇಳುವರು ಗೊತ್ತೆ ?
ನಾನು ಕೆಡಿಸಿದೆನೆಂದು ಹೇಳುವಳು ಅತ್ತೆ (ಅವಳು ಹೇಳಿದ್ದು)

ಆಗಲೇ ಹೇಳಿದಂತೆ ಈ ಮಾದರಿಯ ಇನ್ನೂ ನೂರಾರು ಚುಟಕಗಳನ್ನು ನಾನು ಉಲ್ಲೇಖಿಸುತ್ತಾ ಹೋಗಬಹುದು. ಪುಟ ಮಿತಿಯ ಪ್ರಜ್ಞೆ ನನ್ನ ಕೈ ಕಟ್ಟಿದೆ. 'ಲಲಿತಾ'ಳೆಂಬ ಕಲ್ಪನೆಯ ನಾಯಕಿಯನ್ನು ಉದ್ದೇಶಿಸಿ, ಅವರು ಬರೆದ ಚುಟಕಗಳ ಸಂಖ್ಯೆ ಅಪರಿಮಿತ. ಈ ಮಾದರಿಯ ಇವರ ಪ್ರೇಮಗೀತೆಗಳಲ್ಲೂ ಗ್ರಾಮೀಣ ಸೊಗಡು ತುಂಬಿಕೊಂಡಿರುವುದು ವಿಶೇಷ.

ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಖ್ಯಾತಿ ಇರುವ – ನಿಜಾರ್ಥದಲ್ಲಿ ಜನಸೇವೆಗೆಂದೇ ಬದುಕನ್ನು ಮುಡುಪಿಟ್ಟ ನೂರಾರು ಹಿರಿಯ ಚೇತನಗಳ ಬಗ್ಗೂ ದೇಸಾಯಿ ಬರೆದಿದ್ದಾರೆ. ಗಾಂಧಿ, ವಿಶ್ವೇಶ್ವರಯ್ಯ, ಲಾಲ್ ಬಹಾದ್ದೂರ ಶಾಸ್ತ್ರೀ, ನೆಹರು, ಹರ್ಡೀಕರ್, ಚೆನ್ನಪ್ಪ ಉತ್ತಂಗಿ, ಕವಿ ಮಿರ್ಜಾ ಗಾಲಿಬ್, ಗಂಗಾಧರ್‌ರಾವ್ ದೇಶಪಾಂಡೆ, ಥಕ್ಕರ್ ಬಾಪಾ, – ಹೀಗೆ ಪಟ್ಟಿ ಬೆಳೆಯುತ್ತದೆ, ಕನ್ನಡ ಸಾಹಿತ್ಯ ದಿಗ್ಗಜರಾದ ಸರ್ವಜ್ಞ, ಬಿ.ಎಂ.ಶ್ರೀ., ಶ್ರೀರಂಗ, ಕಾರಂತ, ಬೇಂದ್ರೆ, ಡಿ.ವಿ.ಜಿ., ವಿ.ಸೀ., ಕಣವಿ ಮುಂತಾದ ನಾಮಾಂಕಿತರ ಕುರಿತು ದೇಸಾಯರ ಚುಟಕಗಳಿವೆ.

ದಿನಕರ ದೇಸಾಯಿ ಅವರ ಕಾವ್ಯವೇ ಇರಲಿ, ಚುಟಕಗಳೇ ಇರಲಿ ಅವುಗಳ ಪ್ರಧಾನ ಕಾಳಜಿ ಸಾಮಾಜಿಕ ಜಾಗೃತಿ, ಭ್ರಷ್ಟಾಚಾರದ ವಿರುದ್ಧ ಶೋಷಣೆಯ ವಿರುದ್ಧ, ಲಫಂಗ ರಾಜಕಾರಣಿಗಳ ವಿರುದ್ಧ ಕಾಳಸಂತೆಯ ವಿರುದ್ಧ, ಜಾತಿಕೋತಿಗಳ ವಿರುದ್ಧ, ಅಂಧ ಶ್ರದ್ಧೆಯ ವಿರುದ್ಧ ಅವರು ಬರೆದೇ ಬರೆದರು. ಅವರ ಚುಟಕಗಳನ್ನು ನಿಯಮಿತವಾಗಿ ಓದುತ್ತಾ ಬಂದ ಡಿ.ವಿ.ಜಿ. ಅವರು 'ಜನಸೇವಕ' ಪತ್ರಿಕೆಯ ಸಂಪಾದಕರಿಗೆ ಪತ್ರ ಬರೆದು, ಭ್ರಷ್ಟ ವ್ಯವ್ಥೆಯ ವಿರುದ್ಧ ಇಷ್ಟೊಂದು ನಿರ್ಬಿಢೆಯಿಂದ ವಿಡಂಬನಾತ್ಮಕವಾಗಿ ಬರೆಯುವ ಈ ಕವಿ ಯಾರು ?.... ಮುಂಬೈಯಲ್ಲಿರುವ 'ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿ'ಯಲ್ಲಿ ಆಜೀವ ಸೇವಕರಾಗಿ ಕೆಲಸ ಮಾಡುತ್ತಿರುವ, ದಿನಕರ ದೇಸಾಯಿ ಎಂಬ ಒಬ್ಬ ವ್ಯಕ್ತಿ ಇರುವುದು ನನಗೆ ಗೊತ್ತು, 'ಇವರು ಆ ದಿನಕರ ದೇಸಾಯಿಯೇ?' – ಎಂದು ಕೇಳಿದ್ದಿದೆ. ದಿನಕರ ದೇಸಾಯಿ ತಮ್ಮ ಒಂದು ಚುಟಕದಲ್ಲಿ ಬರೆಯುತ್ತಾರೆ :

ನಾನು ಬರೆಯುವುದೆಲ್ಲ ಕೇವಲ ತಮಾಷೆ
ಈ ಚುಟಕಗಳು ನನ್ನ ಜೀವನದ ಆಸೆ
ನನ್ನ ಪ್ರಾರ್ಥನೆಯ ತುಸು ಕೇಳು, ಜಗದಂಬೆ
ಮಾನವನು ನರನಾಗಿ ಬಾಳಬೇಕೆಂಬೆ.

ದೇಸಾಯರ ಈ ಕಳಕಳಿ ಇವರ ಎಲ್ಲ ಚುಟಕಗಳ ಸ್ಥಾಯಿಭಾವವಾಗಿದೆ.

ದಿನಕರ ದೇಸಾಯರ ಚೌಪದಿಗಳ ವಸ್ತು ವೈವಿಧ್ಯ ಬೆರಗುಗೊಳಿಸುವಂತಿದೆ. ಬೇರೆ ಯಾವ ಕವಿಗಳ ಕಿರುಗವನಗಳಲ್ಲೂ ಇಷ್ಟು ದೊಡ್ಡ ಪ್ರಮಾಣದಲ್ಲಿ ವಸ್ತು ವೈವಿದ್ಯ ಇರವುದನ್ನು ಕಾಣಲು ಸಾಧ್ಯವಿಲ್ಲ. ಅವರು ಯಾರನ್ನೂ, ಯಾವುದನ್ನೂ, ತಮ್ಮ ಚುಟುಕಗಳಿಂದ ಹೊರಗಿಟ್ಟಿಲ್ಲ. ಸೂಳೆಯಿಂದ ಸನ್ಯಾಸಿಯವರೆಗೆ, ಕಡು ಬಡವರಿಂದ, ಆಗರ್ಭ ಶ್ರೀಮಂತರವರೆಗೆ ವಿವಿಧ ವೃತ್ತಿಗಳಲ್ಲಿ, ಕಸಬು–ಉಪಕಸುಬುಗಳಲ್ಲಿ ತೊಡಗಿಕೊಂಡವರೆಲ್ಲ ಇವರ ಚುಟಕಗಳಿಗೆ ಆಹಾರವಾಗಿದ್ದರೆ. ರಾಜಕಾರಣಿಗಳು ಮತ್ತು ಸರಕಾರವನ್ನಂತೂ ಇವರು ಜಾಲಾಡಿಸಿದ ಹಾಗೆ ಇನ್ನಾವ ಕವಿಯೂ ಜಾಲಾಡಿಸಿದ್ದು ಕಂಡುಬರುವುದಿಲ್ಲ. ವ್ಯಂಗ್ಯ–ವಿನೋದ ಇವರಲ್ಲಿ ರಕ್ತಗತವಾಗಿದೆಯೋ ಎಂಬಂತೆ ಬರವಣಿಗೆಯಲ್ಲಿ ಮೂಡಿಬಂದಿದೆ. ಭ್ರಷ್ಟಾಚಾರದ ಬಗ್ಗೆ, ಆಡಳಿತಶಾಹೀ, ದರಬಾರುಗಳ

ಬಗ್ಗೆ, ಕಾಳಸಂತೆಗಳಿಂದ ಜನಕಂಟಕರಾದವರ ಬಗ್ಗೆ, ಕೊಳಕು ಅಂಧಶ್ರದ್ಧೆಗಳ ಬಗ್ಗೆ, ಹೀಗೆ ಈ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಒಳ್ಳೆಯ ಸಂಗತಿಗಳನ್ನು ಮುಕ್ತವಾಗಿ ಮೆಚ್ಚುವ ಸಾವಿರಾರು ಚುಟುಕಗಳೂ ಇವೆ. ನಾಡು–ನುಡಿ ಅಭಿಮಾನ, ಸೇವೆ, ಜೀವನಾನುಭವ, ಪ್ರೀತಿ–ಪ್ರೇಮ–ಕಾಮ, ಸುಖದಾಂಪತ್ಯ, ವ್ಯಕ್ತಿಗಳ ಕುರಿತ ಗುಣ–ಗೌರವ ಭಾವನೆ, ನಿಸರ್ಗರಮ್ಯ ಸಂಗತಿಗಳು, ಶಿಕ್ಷಣ–ಸಂಸ್ಕೃತಿ ಹೀಗೆ ಈ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಇವರ ಚುಟಕಗಳ ಒಂದು ಗುಣವಿಶೇಷವೆಂದರೆ, ನಾಲ್ಕು ಸಾಲಿನಲ್ಲಿ ಕವಿಯ, ಅವನ ಕಾವ್ಯದ ವಿಮರ್ಶೆಯನ್ನೂ ಮಾಡಿ, ನಿಜವಾದ ಕವಿತೆ ಹೇಗಿರಬೇಕು ಎಂಬ ಕುರಿತಾಗಿ ಬರೆದ ಅನೇಕ ಚೌಪದಿಗಳನ್ನು ಕಾಣಬಹುದಾದದ್ದು, ಹೀಗೆ ಹನಿಗವನಗಳನ್ನು ಕವಿ–ಕಾವ್ಯ ವಿಮರ್ಶೆಗೆ ಬಳಸಿಕೊಂಡವರು ಕನ್ನಡದಲ್ಲಿ ಬಹಳ ಕಡಿಮೆ. ಅಲ್ಲಿ ಇಲ್ಲಿ ಕಂಡರೂ, ಅವರಿಗೆಲ್ಲಾ ದೇಸಾಯಿಯೇ ಮೇಲ್ಪಂಕ್ತಿ ಎನ್ನಬಹುದು.

ರೈತ–ಕಾರ್ಮಿಕರ ಬಗ್ಗೆ, ದೀನ–ದಲಿತರ ಬಗ್ಗೆ ಎಲ್ಲವನ್ನೂ ಕಳಕೊಂಡಂಥ ಸಮಾಜದ ಸರ್ವಹಾರಾ ವರ್ಗದ ಬಗ್ಗೆ ಈ ಕವಿ ಎಷ್ಟು ತೀವ್ರವಾಗಿ ಮಿಡಿದಿದ್ದಾರೋ, ಅಷ್ಟೆ ತೀವ್ರವಾಗಿ ಎಲ್ಲ ಜನವಿರೋಧೀ ಚಟುವಟಿಕೆಗಳ ಬಗ್ಗೆ ಪ್ರತಿಭಟಿಸಿದ್ದಾರೆ. ಈ ಎಲ್ಲ ಕಾರಣಗಳಿಂದಾಗಿ, ದಿನಕರ ದೇಸಾಯರ ಚೌಪದಿಗಳಿಗೆ ಇನ್ನೊಂದು ಮಾದರಿ ಇಲ್ಲಾ, ಅವರ ಎತ್ತರಕ್ಕೆ ಇನ್ನೊಬ್ಬ ಕಿರುಗವನಗಳ ಕವಿ ಇನ್ನೂ ಏರಲಾಗಲಿಲ್ಲ. ಅನಾಯಾಸವಾಗಿ ಅವರ ಚುಟಕಗಳಲ್ಲಿ ಹರಿದುಬಂದ ಪ್ರಾಸ ಮತ್ತು ಲಯದ ಸೊಗಸು ಇನ್ನೆಲ್ಲೂ ಸಿಗುವುದಿಲ್ಲ ಎಂಬ ಮಾತು ವಿದ್ವತ್ ವಲಯದಲ್ಲಿದೆ. ಅಂತ್ಯಪ್ರಾಸಕ್ಕೆ ಕಟ್ಟುಬಿದ್ದ ಅವರ ಬಹಳಷ್ಟು ಚುಟಕಗಳು ವಿಮರ್ಶೆಗೆ ಒಳಪಟ್ಟು ದೇಸಾಯಿಯವರ ಮಿತಿ ಎಲ್ಲಿದೆ ? ಎಷ್ಟಿದೆ ಎಂಬ ಬಗ್ಗೂ ಚರ್ಚೆಗಳು ನಡೆದಿವೆ, ನಡೆಯುತ್ತಿವೆ. ಆದರೆ ತನ್ನ ಕಾವ್ಯವೇ ಆಗಲಿ, ಚೌಪದಿಗಳೇ ಆಗಲಿ, ವಿಮರ್ಶೆಯಿಂದ ಹೊರತಾಗಿಲ್ಲ ಎಂಬುದನ್ನು ಅವರು ಸಾಕಷ್ಟು ಮೊದಲೇ ಊಹಿಸಿದ್ದಿದೆ. ಬಹುಶಃ ಈ ಕಾರಣದಿಂದಾಗಿಯೂ ಅವರು,

ನಾ ಬರೆದ ಚುಟಕಗಳ ಸಂಖ್ಯೆ ವಿಪರೀತ
ಸೇಕಡಾ ತೊಂಬತ್ತು ಹೊಡೆಯುವವು ಗೋತಾ.

ಎಂದು ಬರೆದುಕೊಂಡಿರುವುದು.

ನಾನು ಸಾಯಲು ನನ್ನ ಕವನಗಳ ಮರೆತುಬಿಡಿ,
ಸತ್ತಮೇಲವು ಮತ್ತೆ ಯಾಕೆ ಬೇಕು ?
ಈ ಕವನ, ಆ ಕವನ, ಹೇಗಿತ್ತು ಕವಿಯ ಮನ
ಎಂಬ ಚರ್ಚೆಯ ಮಾತು ಮುಗಿಯಬೇಕು,

ಎಂದು ಐವತ್ತರ ದಶಕಾರಂಭದಲ್ಲಿ ಹೇಳಿಕೊಂಡಿದ್ದಾರೆ. ಆದರೆ 'ಇಂಥ ಮುದ್ದಾದ ಕವನಗಳನ್ನು ಮರೆಯುವುದಾದರೂ ಹೇಗೆ ? ಎಂಬುದು ಡಾ॥ ವಿ. ಕೃ. ಗೋಕಾಕರ ಮರುಪ್ರಶ್ನೆ.

ಈ ಸಂಪುಟದಲ್ಲಿ ೨೨೦ ಹೆಚ್ಚುವರಿ ಚೌಪದಿಗಳಿವೆ. ಈ ಚೌಪದಿಗಳು ದಿನಕರ ದೇಸಾಯಿಯವರು ತಮ್ಮ ಜೀವಿತಾವಧಿಯಲ್ಲಿ (೧೯೭೮) ಹೊರತಂದಿದ್ದ ಮೊದಲನೆಯ ಆವೃತ್ತಿಯಲ್ಲಿ ಇಲ್ಲ. ನನ್ನ ಬಳಿ ದಿನಕರ ದೇಸಾಯಿಯರು ನೀಡಿದ ಒಂದಷ್ಟು ಅಪ್ರಕಟಿತ ಚುಟುಕಳಿವೆ. ಅವುಗಳ ಹೊರತಾಗಿ ಕೆನರಾ ವೆಲ್‌ಫೆರ್ ಟ್ರಸ್ಟಿನ ಬಳಿ ಇರುವ ಕೆಲವು ಹಳೆಯ ಫೈಲುಗಳಲ್ಲಿ ಇನ್ನಷ್ಟು ಇವೆ. 'ತರಂಗ' ಸಾಪ್ತಾಹಿಕದ ಸಂಪಾದಕರ ಕೋರಿಕೆಯ ಮೇರೆಗೆ (ಟ್ರಸ್ಟಿನ ಅಧ್ಯಕ್ಷರ ಅಪೇಕ್ಷೆಯೂ ಅದೇ ಆಗಿದ್ದುದರಿಂದ) ನಮ್ಮ ಬಳಿ ಇದ್ದ ಅಪ್ರಕಟಿತ ಚುಟಕಗಳಲ್ಲಿ ಕೆಲವನ್ನು ಆಯ್ಕೆ ಮಾಡಿ ಕಳಿಸಲಾಗಿತ್ತು. 'ತರಂಗ' ಅದನ್ನು ಬಹುಶ್ರದ್ಧೆಯಿಂದ ಪ್ರತಿವಾರ ಪ್ರಕಟಿಸಿತ್ತು. ಹೀಗೆ ಪ್ರಕಟವಾದ ೨೨೦ ಚೌಪದಿಗಳನ್ನೇ ಈ ಸಂಪುಟದ ಅನುಬಂಧದಲ್ಲಿ ಸೇರಿಸಿದ್ದೇವೆ.

ಅನುಬಂಧ-೨ ರಲ್ಲಿ 'ಅಕಾರಾದಿ' ಶಬ್ದಸೂಚಿ ಇದೆ. ಅದರಲ್ಲಿ ಹೊಸದಾಗಿ ಸೇರ್ಪಡೆಯಾದ ೨೨೦ ಚೌಪದಿಗಳ ಕ್ರಮಸಂಖ್ಯೆ ಅಳವಡಿಸಲು ಒಂದಷ್ಟು ತೊಡಕುಗಳೆದುದಾದರಿಂದ ಸಧ್ಯಕ್ಕೆ ಆ ಕೆಲಸ ಉಳಿದಿದೆ. ಮುಂದಿನ ಮುದ್ರಣದ ಅವಧಿಯಲ್ಲಿ ಅದನ್ನು ಸರಿಪಡಿಸಲಾಗುವುದು. ಆಸಕ್ತ ಓದುಗರು ಇದಿಷ್ಟು ಗಮನದಲ್ಲಿಟ್ಟುಕೊಂಡರೆ ನಮ್ಮ ಶ್ರಮ ಸಾರ್ಥಕ.

ಇದರ ಮುದ್ರಣ ಕಾರ್ಯದ ಕೊನೆಯ ದಿನಗಳಲ್ಲಿ ನನ್ನ ಅನಾರೋಗ್ಯದ ಕಾರಣದಿಂದ ಮುದ್ರಕರ ಮೇಲೆ ಬಹಳಷ್ಟು ಒತ್ತಡಗಳನ್ನು ಹೇರಬೇಕಾಯಿತು. ಅವರ ಸಹನೆಗೆ ನಮಸ್ಕಾರ. ಆಕರ್ಷಕ ಹೊದಿಕೆಪುಟವನ್ನು ನಿರ್ಮಿಸಿಕೊಟ್ಟ 'ಗುರು ಆರ್ಟ್ಸ್', ಅವರಿಗೆ ಧನ್ಯವಾದಗಳು.

ಅಂಕೋಲಾ
೨-೨-೨೦೨೨

**– ವಿಷ್ಣು ನಾಯ್ಕ**
ಸಂಪಾದಕ

## ೧. ತಿನ್ನೋಣ ಗೆಣಸು

ಅಕ್ಕಿಯೇತಕೆ, ಮಗಳೆ ? ತಿನ್ನೋಣ ಗೆಣಸು,
ಸಾಲದಿದ್ದರೆ ಗೆಣಸು, ಉಂಟು ಕರಿಮೆಣಸು,
ಈ ರೀತಿ ಬಿಡಿಸಿದರೆ ಅನ್ನದ ಸಮಸ್ಯೆ –
ಬೆಳದಿಂಗಳಾಗಿ ಹೊಳೆಯುವುದು ಅಮವಾಸ್ಯೆ.

## ೨. ಬೆಲೆಗಳ ಆಕಾಶ ಯಾತ್ರೆ

ಅಕ್ಕಿ, ಸಕ್ಕರೆ, ಗೋದಿ ಆಕಾಶಕೇರಿ
ಚುಕ್ಕೆಯಾದವು ಎಂದು ಹೇಳುವರು, ನಾರಿ.
ಜನಗಳೆಲ್ಲಾ ವಿಮಾನದ ಮೇಲೆ ಕೂತು
ನಭಕೇರಿದರೆ ಮಾತ್ರ ಕೇಸರೀಭಾತು

## ೩. ಕಾವ್ಯಮೀಮಾಂಸೆ

ಅಕ್ಷಿ ಎಂದರೆ ಕಣ್ಣು; ತಿಳಿತೇನು ತಮ್ಮಾ ?
ಕಮಲಾಕ್ಷಿ ಎನ್ನುವುದು ಈ ಸುಂದರಮ್ಮ,
ಸುಂದರಮ್ಮನ ಎರಡು ಕಣ್ಣುಗಳ ಮಧ್ಯೆ
ಇರುವ ಮೂಗಿನ ಜಾಗ ಎತ್ತರದ ಗದ್ದೆ.

## ೪. ಕನ್ನಡಿಗರ ನಿರ್ಧಾರ

ಅಖಿಲ ಕನ್ನಡನಾಡು ಒಡೆಯಲಿಕೆ ಮಡಕೆ
ಎಂದು ತಿಳಿದವನ ಹೃದಯದ ಸೈಜು ಅಡಕೆ.
ಯಾರಪ್ಪ ಬಂದರೂ ಇದನೊಡೆಯಲಾರ.
ವಜ್ರದಂತಿದೆ ಕನ್ನಡಿಗರ ನಿರ್ಧಾರ.

## ೫. ಮಾಸ್ತಿಯವರು ಹೇಳಿದ್ದು

ಅಖಿಲ ಕರ್ನಾಟಕದ ಅಜ್ಜಿಗಳನೆಲ್ಲ
ಬೆಂಗಳೂರಿಗೆ ಕರೆಸಿ ಹಂಚಿದೆನು ಬೆಲ್ಲ,
ಅಜ್ಜಮ್ಮದಿರು ಅಗದಿ ಸಂತೋಷಪಟ್ಟು
ಮರಳಿದರು ನನ್ನಲ್ಲಿ ವಿಶ್ವಾಸವಿಟ್ಟು,

## ೬. ಬೆಂಗಳೂರು – ಪೂನಾ ರೈಲು

ಅಖಿಲ ಕರ್ನಾಟಕದ ಈ ರೈಲು ರಸ್ತೆ
ಧರಣಿ ಮಂಡಳ ಮಧ್ಯದಲ್ಲಿ ಅವ್ಯವಸ್ಥೆ,
ಮೂರು ತಾಸಿಗೆ ಹತ್ತು ಮೈಲು ಓಡಾಡಿ
ತಳಮಳಿಸುತಿದೆ ನಮ್ಮ ಜೀವನದ ನಾಡಿ.

## ೭. ಹಗರಣಗಳು

ಅಖಿಲ ಭಾರತವನ್ನೆವುದು ದೊಡ್ಡ ದೇಶ.
ಈ ದೇಶದೊಳಗುಂಟು ತರತರದ ವೇಷ.
ಹಗರಣಗಳೂ ಉಂಟು ಮಿತಿಯಿಲ್ಲದಷ್ಟು
ಕುಳಿತುಕೊಳಿ, ಹೇಳುವೆನು, ಮಾಡಿಬಿಡಿ ಲಿಸ್ಟು.

## ೮. ಅಖಿಲ ಮಾನವ ಕುಲಕೆ

ಅಖಿಲ ಮಾನವ ಕುಲಕೆ ಇವನು ಆದರ್ಶ.
ಈತನಿಗೆ ಕೂಸು ಹುಟ್ಟುವುದು ಪ್ರತಿವರ್ಷ.
ಜಾಗತಿಕ ಪರಿಷತ್ತಿನಲಿ ಪ್ರೈಜು ನೀಡಿ
ಸತ್ಕರಿಸಬೇಕೆಂದುಕೊಳ್ಳುವೆನು ಬೇಡಿ.

## ೯. ಪ್ರಧಾನಿಯ ಕರೆ

ಅಗ್ಗವಾಗುವುದುಂಟು ಧಾನ್ಯಗಳ ರೇಟು
ಆಮೇಲೆ ಕೂಲಿಗೂ ರೇಶಿಮೆಯ ಕೋಟು.
ಆ ತನಕ ನಾವೆಲ್ಲರೂ ತಾಳ್ಮೆಯಿಂದ
ತುಸು ಕಡಿಮೆ ತಿಂದು ಸಹಕರಿಸಬೇಕೆಂದ.

## ೧೦. ಕಾವ್ಯದ ಆಳ

ಅಗೆಯಿರೋ ಅಗೆಯಿರೋ ಮತ್ತಿಷ್ಟು ಕಂತ.
ಆಳ ಹೆಚ್ಚಾದಷ್ಟು ಶುದ್ಧ ವೇದಾಂತ.
ಈ ಬಾವಿಯಲಿ ಮುಳುಗಿ ಬದುಕಿದರೆ ಮಾತ್ರ
ಪರಿಶುದ್ಧವಾಗುವುದು ಕವಿಯ ಕುಲಗೋತ್ರ

## ೧೧. ಆಧುನಿಕ ಭಜನೆ

ಅಚ್ಚುತನ ನೆಚ್ಚದಿರು; ಆತ ಬರಿ ಸೋಗು.
ಮಂತ್ರಿಗಳ ನಾಮವನು ನೆನೆದು ಸುಖಿಯಾಗು,
ಎಂದಾದರೂ ಸಮಯ ದೊರಕುವುದು ಸಹಜ,
ಕೈಮುಗಿದು ಪರಮ ಪದವಿಯ ಪಡೆಯೊ ಮನುಜ.

## ೧೨. ಮಲೆನಾಡ ಸೌಂದರ್ಯ

ಅಡಿಕೆ ತೋಟವೆ ಸ್ವರ್ಗಗಿಂತಲೂ ಚಂದ.
ಹೀಗೆಂದು ಪದ ಹಾಡಿ ಕವಿ ಕುಳಿತುಕೊಂಡ.
ಒಡನೆಯೇ ಒಳ ನುಗ್ಗಿದವು ಕಾಡಹಂದಿ.
ಓಡಿಹೋದರು ತೋಟದೊಳಗಿದ್ದ ಮಂದಿ

## ೧೩. ಜಿಲ್ಲಾಧಿಪರ ಪ್ರಕಟನೆ

ಅಡಿಗಿಕೊಂಡಿದೆ ಪೇಟೆಯೊಳಗೊಂದು ಚಿರತೆ
ಹೀಗಾಗಿ ಆಹಾರ ಧಾನ್ಯಗಳ ಕೊರತೆ,
ಮಂತ್ರಿ ಬಂದಾಗ ಹಿಡಕೊಂಡು ಬಂದೂಕು,
ಊರ ಜನರೆಲ್ಲರೂ ಸಹಕರಿಸಬೇಕು.

## ೧೪. ಹದ್ದು

ಅಡಗಿಸಿಟ್ಟರು ಹೆಣವ ಮಾಡದೆಯ ಸದ್ದು.
ಮರುದಿವಸ ಹುಡುಕಿ ತೆಗೆಯಿತು ಒಂದು ಹದ್ದು.
ಪೋಲಿಸರೊಳಗೆ ಹದ್ದಿಗೆ ಅಗ್ರಸ್ಥಾನ.
ದೊರೆಯಬೇಕೆನ್ನುವುದೆ ಕವಿಯ ತೀರ್ಮಾನ.

## ೧೫. ನಗರ ಜೀವನ

ಅಡವಿಯಲಿ ಮಳೆ ಹೆಚ್ಚು; ನಗರದಲಿ ಕಡಿಮೆ.
ಇದಕೆ ಕಾರಣ ಪಟ್ಟಣದ ಮಹಾ ಮಹಿಮೆ.
ಪೌರಸಭೆಯಿಟ್ಟ ಸುಂಕದ ರೇಟು ಭಾರಿ.
ಕೊಡುವಷ್ಟು ತಾಕತ್ತು ಮಳೆಗಿಲ್ಲ, ನಾರಿ.

## ೧೬. ಹೊಸ ವ್ಯಾಖ್ಯೆಗಳು

ಅಡ್ಡಹಾದಿಯ ಹಿಡಿದು ಮಾಳಿಗೆಯನೇರಿ
ಗಡ್ಡ ಬೆಳೆಸಿದ ಪ್ರಾಣಿ ದೇಶದ ಪುಢಾರಿ.
ಸಮಯ ದೊರೆತಾಗೆಲ್ಲ ಸಾಕಷ್ಟು ತಿಂದು
ಕೈ ತೊಳೆದುಕೊಳ್ಳುವವನೇ ದೇಶಬಂಧು.

## ೧೭. ಚಂದ್ರನ ತಕರಾರು

ಅಣ್ಣ ತಮ್ಮಂದಿರಲಿ ಗುದ್ದಾಟವೆದ್ದು
ಅಮರಲೋಕದವರೆಗೆ ಕೇಳಿಸಿತು ಸದ್ದು.
ಚಂದ್ರನೆಂದನು; ನನ್ನ ಮೈಮೇಲೆ ಧೂಳು.
ಇವರ ಜಗಳಾಟದಲಿ ನಾನಾದೆ ಹಾಳು.

## ೧೮. ಭಕ್ತನ ಮೊರೆ

ಅಣುರೇಣು ತೃಣಕಾಷ್ಠದಲ್ಲಿರುವ ನೀನು.
ಕಾಳಸಂತೆಯ ಚೀಲದೊಳಗಿಲ್ಲವೇನು ?
ಈ ಚೀಲದೊಳಗಿಂದ ಹೊರಗೆ ಐತಂದು
ಭಕ್ತರಿಗೆ ಮೊಗದೋರು, ಹೇ ದೀನಬಂಧು.

## ೧೯. ವಿದೇಶಾಂಗ ನೀತಿ

ಅತ್ತ ಅಮೇರಿಕ, ಮತ್ತೆ ಈ ಕಡೆಗೆ ರಷ್ಯ.
ನಡುಮಧ್ಯದಲಿ ನವ್ಯಭಾರತದ ನೃತ್ಯ.
ಈ ಕಡೆಗೆ ಆ ಕಡೆಗೆ ತಿರುಗಿಸಲು ಗೆಜ್ಜೆ.
ಎರಡು ಕಡೆಗೂ ತಪ್ಪಿ ಜಾರಿದವು ಹೆಜ್ಜೆ.

## ೨೦. ನನ್ನ ಹಲ್ಲು

ಅತ್ಯಂತ ಓರೆಯಾಗಿದೆ ನನ್ನ ಹಲ್ಲು;
ಕಚ್ಚಿದರೆ ಎಲ್ಲರೂ ಹೊಡೆಯುವರು ಗುಲ್ಲು.
ಕಚ್ಚದಿದ್ದರೆ ನನಗೆ ಹಿಡಿಯುವುದು ರೋಗ.
ನನ್ನ ಬಾಯಿಗೆ ಹಾಕಬೇಕಂತೆ ಬೀಗ.

### ೨೧. ಮಾತು

ಅತ್ಯಂತ ಕಡಿಮೆಯಾಗಿರಬೇಕು ಮಾತು.
ಕಾಗದಕೆ ಬೀಳಬಾರದು ಯಾವ ತೂತು.
ತುಸು ಮಾತಿನೊಳಗಿರಲಿ ಕಸುವಿನಂಬಾರಿ.
ಬರವಣಿಗೆ ಕೆಳಗೆ ಬೀಳುವುದಿಲ್ಲ ಜಾರಿ.

### ೨೨. ಕೋಟಿಗಳ ಕನಸು

ಅತ್ಯಂತ ತುಟ್ಟಿಯಾಗಿವೆ ಎಲ್ಲ ಜಿನಿಸು.
ಸಂಪೂರ್ಣ ಸುಳ್ಳಾಯ್ತು ಕೋಟಿಗಳ ಕನಸು
ದಶ ಕೋಟಿ ಯುವಕರಿಗೆ ಇಲ್ಲ ಉದ್ಯೋಗ,
ಮೀಸೆ ಮೂಡುವ ಮೊದಲೆ ಹಿಡಿಯುವುದು ರೋಗ.

### ೨೩. ಅತಿರಥರು

ಅತಿರಥರು ಉರುಳಿದ್ದು ದೊಡ್ಡ ಸ್ವಾರಸ್ಯ.
ಇದಕೆನ್ನುವರು ಲೋಕಶಾಹಿಯ ರಹಸ್ಯ.
ಪ್ರತಿಯೊಂದು ಸಲ ಇವರು ಗದ್ದುಗೆಯನೇರಿ
ಹಾಳುಗೆಡವಿದ ಕುರ್ಚಿ ಆಗಲಿ ರಿಪೇರಿ.

### ೨೪. ಪ್ರಗತಿ

ಅತಿ ಶೀಘ್ರದಲಿ ಪ್ರಗತಿಯಾಗಿ ಬಹಳಷ್ಟು
ಈಗ್ಗೆ ಎಲ್ಲಾ ಪಕ್ಷಗಳು ಸೋಷಲಿಸ್ಟು.
ವಿಜಯಗಳಿಸುವ ಪ್ಲಾನು ಹೀಗುಂಟು, ನೀರೆ.
ಇವರ ಸಮತಾವಾದ ಕಾಗದದ ಡೇರೆ.

### ೨೫. ಕವಿಗೆ

ಅರ್ಥಗರ್ಭಿತವಾಗಿ ಇದ್ದರೂ ಕೂಡಾ
ಉಪದೇಶ ಗೈದು ನೀ ಹಾಳಾಗಬೇಡಾ.
ಉಪದೇಶದೊಳಗಿಲ್ಲ ಕವಿಗಳ ಚಾಲಾಕಿ.
ಶೈಲಿಯೊಳಗುಂಟು, ಮಗು, ಕವಿಗಳ ಚಟಾಕಿ

## ೨೬. ಅರ್ಥಮಂತ್ರಿಯ ಮಾತು

ಅರ್ಥಮಂತ್ರಿಯ ಮಾತು ಸಂಪೂರ್ಣ ಖೋಟಾ
ಎಂದಿಗೋ ಖಾಲಿಯಾಗಿದೆ ಇವರ ಲೋಟಾ,
ಆದರೂ ಒಳಗಡೆಗೆ ಉಂಟೆಂದು ತುಪ್ಪ
ಜಾಹೀರುಪಡಿಸಿದನು, ಬುರುಡೆ ಲಿಂಗಪ್ಪ.

## ೨೭. ಅರ್ಥಮಂತ್ರಿಗೆ

ಅರ್ಥಮಂತ್ರಿಗೆ ಮೊದಲನೆಯ ನಮಸ್ಕಾರ.
ಇಳಿಸಯ್ಯ ತಲೆಯ ಮೇಲಿರುವ ಕರ ಭಾರ.
ಆಮೇಲೆ ಗಣಪನಿಗೆ ಮಾಡುವೆನು ಅರ್ತಿ.
ಮೋದಕವ ತಿನಿಸುವೆನ ಸಾಕಷ್ಟು ಭರ್ತಿ.

## ೨೮. ಅರ್ಥವಾಗದ ಕವಿತೆ

ಅರ್ಥವಾಗದ ಕವಿತೆ ಅತ್ಯಂತ ಶ್ರೇಷ್ಠ
ಅರ್ಥವಾದರೆ ನಿಮ್ಮ ತಲೆಗಿಲ್ಲ ಕಷ್ಟ.
ಅರ್ಥವಾದರೆ ತಲೆಗೆ ವ್ಯಾಯಾಮು ಭರ್ತಿ.
ಕೊನೆಯ ವರೆಗೂ ಉಳಿಯುವುದು ಕವಿಯ ಕೀರ್ತಿ.

## ೨೯. ಅರ್ಥವಿಲ್ಲದ ಕವಿತೆ

ಅರ್ಥವಿಲ್ಲದ ಕವಿತೆಗೂ ಉಂಟು ಅರ್ಥ.
ಇಂಥ ಕವಿತೆಯ ಬರೆಯುವವನು ಸೃಷ್ಟಿಕರ್ತ.
ನುಡಿ ಎನ್ನುವುದೇ ಗುಡಿಯು, ಸರಿಯಾಗಿ ನೋಡು,
ಅಡಿಗಡಿಗೆ ಅವನ ಕಿವಿಯೊಳಗೆ ಮಾತಾಡು.

## ೩೦. ಅರ್ಥವೆಂಬುದು

ಅರ್ಥವೆಂಬುದು ಕೊನೆಗೆ ಆಯಿತು ಅನರ್ಥ.
ಅರ್ಥವಿಲ್ಲದೆ ಸೃಜಿಸಿದನು ಸೃಷ್ಟಿಕರ್ತ.
ಸೃಷ್ಟಿಕರ್ತನ ಹಾಗೆ ರಚಿಸಿದರೆ ಕವನ
ಶಬ್ದಗಳು ಕುಣಿಕುಣಿದು ನೀರಡಿಕೆ ಶಮನ.

## ೩೧. ಹೃದಯ ಕಮಲ

ಅರ್ಥವೊಂದೇ ನೋಡಿಕೊಂಡರೆ ಅನರ್ಥ.
ಶಬ್ದಗಳು ಕುಣಿಯದಿದ್ದರೆ ಕವನ ವ್ಯರ್ಥ.
ಕೃತಿಯಲ್ಲ ಮಾಟಗಾರನ ಕೈ ಚಲಾಕಿ.
ಕವನ ಹೃದಯದ ಕಮಲ; ಕವಿಯ ಮನೆಯಾಕಿ.

## ೩೨. ಇಣಚಿ

ಅದ ನೋಡು, ಮರವೇರುತಿದೆ ಒಂದು ಇಣಚಿ
ಅದಕೆ ಬೇಕಾಗಿಲ್ಲ ಮಾನವನ ಎಣಚಿ.
ಎಲೆ ಮಾನವಾ, ನಿನಗೆ ಎಲ್ಲವೂ ಬೇಕು.
ಸಣ್ಣ ಪ್ರಾಣಿಗೆ ಸ್ವಲ್ಪ ಆಹಾರ ಸಾಕು.

## ೩೩. ಅದು ಬೇಕು ಇದು ಬೇಕು

ಅದು ಬೇಕು ಇದು ಬೇಕು ಎಲ್ಲವೂ ಬೇಕು.
ಎಲ್ಲಿಂದ ತರಲಿ ಪೂರೈಸಲಿಕೆ ಷೋಕು?
ಸಿಗಲಿ ವಾರಕ್ಕೊಮ್ಮೆ ತಿನ್ನಲಿಕೆ ಮೀನು
ಆಮೇಲೆ ನೋಡೋಣ ದಾಗದಾಗೀನು.

## ೩೪. ಆಳುವ ಪಕ್ಷ

ಅದೃಷ್ಟಶಾಲಿ ಈ ಪಕ್ಷದ ಪುಢಾರಿ.
ಕೆಸರು ಹತ್ತುವುದಿಲ್ಲ ಬಿದ್ದರೂ ಜಾರಿ
ಈತನಿಗೆ ಉಂಟು ಇನ್ನೊಂದು ಅನುಕೂಲ.
ಸೋತುಹೋದರೆ ಆಗುವನು ರಾಜ್ಯಪಾಲ.

## ೩೫. ವರ್ತಕನ ಅನುಭವ

ಅಧ್ಯಕ್ಷನಿಗೆ ಮೊದಲು ಕೊಡಬೇಕು ಭಕ್ಷ್ಯ
ಆಮೇಲೆ ಉಳಿದ ದೇವರ ಕಡೆಗೆ ಲಕ್ಷ್ಯ
ಈ ರೀತಿ ಹಂಚದಿದ್ದರೆ ತಿಂಡಿ ತೀರ್ಥ
ಕೈಕೊಂಡ ವ್ಯವಹಾರದೊಳಗಿಲ್ಲ ಅರ್ಥ.

### ೩೬. ಚುಟಕ

ಅರ್ಧ ಚುಟಕವ ಬರೆದು ಮಲಗಿಕೊಂಡಿದ್ದೆ.
ಅರ್ಧಾಂಗಿ ಬಂದು ಎಬ್ಬಿಸಲು ನಾನೆದ್ದೆ
ಚುಟಕಕ್ಕೆ ಬರಬೇಕೇ ವಿಪರೀತ ಸಿಟ್ಟು?
ಎಲ್ಲಿಗೋ ಓಡಿಹೋಯಿತು ನನ್ನ ಬಿಟ್ಟು.

### ೩೭. ನುಡಿವೆಣ್ಣು

ಅರ್ಧ ತೆರೆದಿರಲು ಮಾಡದೆ ಪೂರ್ಣ ಸ್ಪಷ್ಟ
ಇದಕ್ಕೆನ್ನುವೆನು ನಾನು ಕವಿತೆ ಉತ್ಕೃಷ್ಟ.
ನುಡಿವೆಣ್ಣು ತೆರೆದಂತೆ ಅರೆವಾಸೆ ಸೆರಗು.
ಆಹ್ಲಾದಕರವೆಂಬೆ ಈ ತರದ ಮಿರುಗು.

### ೩೮. ಸಂಪುಟದ ವಿಸ್ತರಣೆ

ಅಧಿಕಾರ ಲಾಲಸೆಗೆ ಕೊಟ್ಟು ಒಗ್ಗರಣೆ
ಮಾರಿದರು ಸಚಿವ ಸಂಪುಟದ ವಿಸ್ತರಣೆ
ಬಹಳ ರುಚಿಕರವಾಗಿ ಅನ್ನ ಹುಳಿ ಸಾರು
ಭೋಜನಕೆ ಕುಳಿತವರು ಅರವತ್ತು ಮೂರು.

### ೩೯. ಅಧಿಕಾರ

ಅಧಿಕಾರವೆನ್ನುವುದು ಪಂಚಕಜ್ಜಾಯ.
ಇರುವೆಗಳು ಸಾಲಾಗಿ ಮುತ್ತಿದವು, ಜೀಯ.
ಅಧಿಕಾರದಲಿ ಮಳ್ಳವಾಗುವನು ಜಾಣ.
ಅಧಿಕಾರ ಇರುವನಕ ಅಬಲೆಗೂ ಪ್ರಾಣ.

### ೪೦. ಅಧಿಕಾರಿಗಳಿಗೆ

ಅಧಿಕಾರಿಗಳಿಗೆ ನೀಡುವ ಮೊದಲು ಬಡತಿ
ಸರಿಯಾಗಿ ತೆಗೆದುಕೊಳ್ಳಿರಿ ಅವನ ಝಡತಿ.
ಪ್ರತಿಯೊಂದು ಕಿಸೆಯೊಳಗೆ ಸರಿಯಾಗಿ ನೋಡಿ.
ಟೋಪಿಯಲ್ಲೂ ಹುಡುಕಿ, ಸಿಗಬಹುದು ರಾಡಿ.

## ೪೧. ಚವುಕಸಿಯ ನಡೆಸಿ

ಅಧಿಕಾರಿಗಳು ಕೊನೆಗೆ ಚವುಕಸಿಯ ನಡೆಸಿ
ಅಪವಾದಗಳನೆಲ್ಲ ಹಾಕಿದರು ಗುಡಿಸಿ,
ಇದಕೆ ಕಾರಣವೇನು ಗೊತ್ತಾಯ್ತೆ, ಗೆಳೆಯಾ ?
ದುಡ್ಡು ನುಂಗಿದ ಇಸಮು ಮಂತ್ರಿಗಳ ಅಳಿಯ.

## ೪೨. ಒಂದು ದಂತಕಥೆ

ಅನ್ನಮಂತ್ರಿಗೆ ಪ್ರಾಯ ಅರವತ್ತು + ಆರು
ಹಲ್ಲು ಬಿದ್ದರು ತಿನ್ನಲಿಕೆ ಬಹಳ ಜೋರು !
ಸಾಮಾನ್ಯವಲ್ಲ, ಮಗು, ಈತನ ಪ್ರತಾಪ
ಏನು ಕೊಟ್ಟರು ತೆಗೆದುಕೊಳ್ಳುವನು ಭೂಪ.

## ೪೩. ಮಂತ್ರಿಗಳ ಡಮರು

ಅನ್ನಾನ್ನಗತಿಕರಾದರು ಕೋಟಿ ಜನರು.
ಆದರೂ ಮುಗಿದಿಲ್ಲ ಮಂತ್ರಿಗಳ ಡಮರು.
ನಿತ್ಯವೂ ಕೇಳುತ್ತಿದೆ ಈ ಮಹಾ ಯುದ್ಧ
ಬಹಳ ಜೋರಾಗಿ ಬಿಟ್ಟಿದೆ ಈಗ್ಗೆ ಸದ್ಯ.

## ೪೪. ಅನುಕರಣೆಯಿಂದ

ಅನುಕರಣೆಯಿಂದ ಮೂಡುವುದಿಲ್ಲ ಕವನ,
ಅನುಕರಣೆ ಮಾಡಿದರೆ ತಕಧಿನ್ನ ತನನ,
ಅನುಭವದ ತಳಹದಿಯ ಮೇಲೆ ಕಟ್ಟಿದರೆ
ಅನವರತವಾಗಿ ಮಿಂಚುವುದು ನುಡಿ–ತಾರೆ.

## ೪೫. ಅನುಕೂಲವಾಗಲಿಕೆ

ಅನುಕೂಲವಾಗಲಿಕೆ ಕಳ್ಳ ಮಾರಾಟ
ಧರಿಸಿದರು ಬಿಳಿ ಟೋಪಿ ಕಿತ್ತೊಗೆದು ಪೇಟ
ಮಾಡಿಕೊಂಡರು ಮಂತ್ರಿಗಳ ದೋಸ್ತಿ ಮತ್ತೆ
ಇದುವರೆಗೆ ಈ ಯುಕುತಿ ನಿಮಗೆ ಗೊತ್ತಿತ್ತೆ ?

## ೪೬. ಅನುಕೂಲವೆನ್ನುವರು

ಅನುಕೂಲವೆನ್ನುವರು ಬಿಳಿ ಖಾದಿ
ದೇಶಸೇವಕನಾಗಿ ಮರೆಯುವನು ನುಂಗಿ.
ಅತ್ಯಲ್ಪ ಅಲ್ಲ ನುಂಗಿದ್ದು ಒಮ್ಮೊಮ್ಮೆ.
ಮೊಲವೊಂದು ಮೈಯುಬ್ಬಿ ಆದಂತೆ ಎಮ್ಮೆ.

## ೪೭. ಕಾವ್ಯದೇವಿಗೆ

ಅನುಭವದ ಅಭಿವ್ಯಕ್ತಿ ನೀನೆ ಬಿಕನಾಸಿ
ನೀ ಬಂದ ಲಾಗಾಯ್ತು ಚುಟುಕುಗಳ ರಾಸಿ
ಒಂದು ದಿನವೂ ಕೂಡ ಇಲ್ಲ ಪುರಸತ್ತು.
ನಿನ್ನ ಕರ್ಕರೆಯಿಂದ ಹೋದೆ ಬೇಸತ್ತು.

## ೪೮. ಸಾಹಿತ್ಯ

ಅನುಭವದ ಜೊತೆಗಿರಲಿ ಶಬ್ದ ಲಾಲಿತ್ಯ
ತನ್ನಾರೆ ತಾನೆ ಮಿಂಚುವುದು ಸಾಹಿತ್ಯ.
ಅನುಭವದ ಹೊರಗೆ ಬರೆದರೆ ಶಬ್ದ ಜಾಲ
ಬೆಳೆ ಬರದೆ ಕಾಗದದ ತುಂಬ ಬರಗಾಲ.

## ೪೯. ಕಾಲರಾಯನ ರೊಟ್ಟಿ

ಅನುಭವದ ಹೂರಣವ ಶಬ್ದದಲಿ ಕಟ್ಟಿ,
ಬೇಯಿಸಲು ಕಾಲರಾಯನಿಗಾಯ್ತು ರೊಟ್ಟಿ
ಈ ರೊಟ್ಟಿ ತಿಂದರೂ ಉಳಿಯುವುದು ಮತ್ತೆ!
ಇದಕೆನ್ನುವರು ಕವಿತೆ; ಆಯ್ತೇನು ಪತ್ತೆ?

## ೫೦. ನನ್ನ ಬರವಣಿಗೆ

ಅನುಭವದ ಹೊರಗೆ ನಾ ಬರೆಯಲಿಲ್ಲಣ್ಣ;
ಹಚ್ಚಲಿಲ್ಲವೋ ಮತ್ತೆ ಯಾವುದೂ ಬಣ್ಣ,
ಬರೆದದ್ದು ನುಡಿದದ್ದು ಎಲ್ಲವೂ ಸಾದಾ.
ಹೀಗಾಗಿ ಮನದೊಳಗೆ ಹೋಗುವುದು ಸೀದಾ.

## ೫೧. ಅನುಭವ

ಅನುಭವವ ಬರೆದಿಡಲು ಅನುದಿನವು ಬದುಕಿ
ಎಂದಿಗೂ ಆಗಲಾರದು ಬರಹ ಮುದುಕಿ.
ಶತಮಾನಗಳು ಕಳೆದರೂ ಬರದು ಮುಪ್ಪು.
ಯಾವಾಗಲೂ ಅವಳ ಮುಖಮುದ್ರೆ ಒಪ್ಪು.

## ೫೨. ಹೋರಾಟ

ಅನುಯಾಯಿಗಳಿಗೆ ಹೇಳಿದರು ಬಾಪೂಜಿ;
ಎಂದಿಗೂ ಮಾಡಬಾರದು ನಾವು ರಾಜಿ.
ಹೋರಾಟಗೊಳಗುಂಟು ದೇಶಾಭಿಮಾನ.
ರಾಜಿ ಎಂಬುದು ಸ್ವೀಕರಿಸಿದಂತೆ ದಾನ.

## ೫೩. ಸಚಿವರ ಸ್ಪಷ್ಟೀಕರಣ

ಅಪರಾಧಿ ನಾನಲ್ಲ, ನನ್ನ ಕಿಸೆ ಚೊಕ್ಕ.
ಎಂದಿಗೂ ನಾನು ತಿಂದವನಲ್ಲ ರೊಕ್ಕ.
ಗೊತ್ತಾಗುವುದು ನೋಡಿದರೆ ನನ್ನ ಜೇಬು.
ಇದುವರೆಗೆ ನಾನು ತಿಂದದ್ದು ಬರಿ ಸೇಬು.

## ೫೪. ಇವನ ಆಯುಷ್ಯ

ಅಪ್ರತಿಮವಾದದ್ದು ಇವನ ಆಯುಷ್ಯ.
ಸೇಕಡಾ ತೊಂಬತ್ತು ಮೂರು ಆಲಸ್ಯ.
ತಂದೆ ಮಾಡಿದ ದುಡ್ಡು ಈತನ ಖಜಾನೆ
ಯಾವಾಗಲೂ ಲೋಡು ಮತ್ತೆ ಜಮಖಾನೆ.

## ೫೫. ಈ ಕಾಲಮಾನ

ಅಪ್ರತಿಮವಾದದ್ದು ಈ ಕಾಲಮಾನ
ಇದಕೆಂದಿಗೂ ಇಲ್ಲ ಯಾವುದು ಸಮಾನ.
ಚಂದ್ರಲೋಕಕೆ ಹಾರಿ ತಂದರೂ ಬೆಣ್ಣೆ
ಮತ್ತಷ್ಟು ತುಟ್ಟಿಯಾಗಿದೆ ತೆಂಗಿನೆಣ್ಣೆ.

## ೫೬. ಜೋಗ ಜಲಪಾತ

ಅಪ್ರತಿಮವಾದದ್ದು ಜೋಗ ಜಲಪಾತ.
ಯಾರಿಗೂ ಮಾಡಲಿಲ್ಲವೋ ಯಾವ ಘಾತ.
ಜೋಗ ಜಲಪಾತವೆಂಬುದು ದಿವ್ಯ ಶಕ್ತಿ
ಅದರೊಳಗೆ ಮುಳುಗಿದರೆ ದೊರಕುವುದು ಮುಕ್ತಿ.

## ೫೭. ಈ ಲೋಕಶಾಹಿ

ಅಪ್ರತಿಮವಾದದ್ದು ಈ ಲೋಕಶಾಹಿ
ಮತ್ತಷ್ಟು ಅಗಲವಾಗಿದೆ ಇವರ ಬಾಯಿ.
ಸರಕಾರಿ ಪೇದೆಗಳಿಗೂ ಬಂತು ಪುಕ್ಕ.
ಕೊಡಬೇಕು ಅವರವರ ಯೋಗ್ಯತೆಗೆ ತಕ್ಕ.

## ೫೮. ಕೋರ್ಟು–ವ್ಯವಹಾರ

ಅಪ್ರತಿಮವಾದದ್ದು ಕೋರ್ಟು – ವ್ಯವಹಾರ
ಸಿಬ್ಬಂದಿಗಳಿಗೆ ಪ್ರತಿ ದಿವಸ ಆಹಾರ.
ಎರಡು ಕಡೆಯಿಂದಲೂ ತಿನ್ನಲು ವಕೀಲ.
ವಾದಿ ಪ್ರತಿವಾದಿಗಳು ಮಾಡಿದರು ಸಾಲ.

## ೫೯. ಔಟು

ಅಮೇರಿಕದ ಅಧ್ಯಕ್ಷನೂ ಕೊನೆಗೆ ಔಟು.
ಹೊರಗೆ ಹಾಕಿದರು, ಸಖಿ ಮೇಲೆತ್ತಿ ಸೌಟು.
ನಮ್ಮ ಭಾರತದಲ್ಲಿ ಹೀಗ್ಗೆ ಆಗಿಲ್ಲಾ
ತಿಂದರೂ ಕ್ಷಮಿಸುವುದು ಹರಿ ಮತ್ತೆ ಅಲ್ಲಾ.

## ೬೦. ಅಮೇರಿಕದ ನೆರವು

ಅಮೇರಿಕದ ನೆರವು ಆಗಿದೆಯಂತೆ ಬಂದು.
ನೆರವು ಬಂದಾಗ ಹೋಯಿತು ಪೂರ್ಣ ತಿಂದು.
ಹೀಗಾಗಿ ಪ್ರತಿಯೊಂದು ಖಾತೆಯಲ್ಲಿ ಖೋತಾ
ಭಾರತದ ಆದ್ಯಂತ ಅರ್ಧಾಂಗವಾತಾ.

### ೬೧. ಚುಂಬನದ ನೆನಪು

ಅರಗಳಿಗೆಯಲಿ ಮುತ್ತು ಹೋಗುವುದು ಸತ್ತು.
ಆದರೂ ಅದರ ಜ್ಞಾಪಕ ಇಡೀ ಹೊತ್ತು.
ತಿರುತಿರುಗಿ ಬೇಕೆಂದು ಅನಿಸುವುದು ಮತ್ತೆ.
ಈ ಬಯಕೆಯಿಂದಲೇ ನಾನಾದೆ ಕತ್ತೆ.

### ೬೨. ಹಾಲಕ್ಕಿಗಳ ಸ್ವಾಗತ ಪದ

ಅರಬೈಲು ದಾಟಿ ಬಂದಿರಿ ನಮ್ಮ ಮನೆಗೆ.
ಕೈಮುಗಿದು ಸ್ವಾಗತದ ಕೋರುವೆವು ನಿಮಗೆ.
ನಾವು ಬಡವರು ; ನಮ್ಮ ಮಡಕೆಯಲಿ ಗಂಜಿ.
ನಮ್ಮ ಹೃದಯದ ಬಣ್ಣ ಕೆಂಪು ಗುಲಗುಂಜಿ.

### ೬೩. ಅರವತ್ತು ಮುಗಿಸಿ

ಅರವತ್ತು ಮುಗಿಸಿ ನಾ ಮುದುಕಾದೆ, ಚೆನ್ನಿ.
ಮುದುಕಾದರೂ ನಿಮಗೆ ಹುರುಪುಂಟು ಅನ್ನಿ.
ಹೌದು ಸಖಿ, ಹುರುಪು ಇದ್ದರೆ ಮಾತ್ರ ಬಾಳು.
ಇಲ್ಲದಿದ್ದರೆ ಬಾಳು ಒಣ ಅವರೆ ಕಾಳು.

### ೬೪. ರಾಜಕಾರಣಿಗಳಿಗೆ ಸೂಚನೆ

ಅರವತ್ತು ವರ್ಷಗಳ ದಾಟಿದವರೆಲ್ಲ
ಕುರ್ಚಿಗಳ ಮೇಲೆ ಕೂಡ್ರುವುದು ಸರಿಯಲ್ಲ.
ಇವರೆಲ್ಲ ಜಮಾಖಾನೆ ಚಾಪೆಗಳ ಹಿಡಿದು
ಗೊರಕೆ ಹೊಡೆದರೆ ಲೇಸು ಮಜ್ಜಿಗೆಯ ಕುಡಿದು.

### ೬೫. ಗಾಂಧೀಜಿಯ ಆತ್ಮಕಥನ

ಅರವಿಂದ ಶಿಷ್ಯವೃಂದಕೆ ಪಾಂಡಿಚೇರಿ.
ನನಗೆ ಯಾವಾಗಲೂ ಹರಿಜನರ ಕೇರಿ.
ಹೊಲೆಯ ಚಮಗಾರ ಮಾದಿಗರ ನಡುಮಧ್ಯೆ
ನಿಂತು ದೇವರ ಜೊತೆಗೆ ಕಸ ಗುಡಿಸುತ್ತಿದ್ದೆ.

## ೬೬. ಅರಸುಗಳು

ಅರಸುಗಳು ಮಣ್ಣು ಮುಕ್ಕಿದರು ಅಲ್ಲಲ್ಲಿ.
ಇದ್ದ ಅರಸರಿಗಿಲ್ಲ ಕಿಮ್ಮತ್ತು ಬಿಲ್ಲಿ.
ಅರಸುಗಳ ಬದಲಾಗಿ ಮಂತ್ರಿಗಳು ಬಂದು.
ರಾಜ್ಯವಾಳಿದರು, ಸಖಿ, ಬೇಕಷ್ಟು ತಿಂದು.

## ೬೭. ಪ್ರಜಾರಾಜ್ಯದ ಹಕ್ಕು

ಅರೆ ಪಾವು ಗೋದಿ ತಂಬಿಗೆ ತುಂಬ ನೀರು,
ಪರಿಮಳಕೆ ಒಂದಿಷ್ಟು ಮೂಲಂಗಿ ಬೇರು.
ತುಪ್ಪ ಬೇಕಿಲ್ಲ! ಸಕ್ಕರೆ ಅರ್ಧ ಸ್ಪೂನು!
ಸ್ವಲ್ಪ ಬಿಸಿ ಮಾಡಿದರೆ ಆಗುವುದು ಜೇನು!

## ೬೮. ರಾಜಕೀಯ ಪುಢಾರಿ

ಅಲಲ! ಕೇಳೋ, ಮಗನೆ ಪೌರುಷದ ಸುದ್ದಿ.
ಎಷ್ಟು ಮಂದಿಗೆ ಉಂಟು ಈ ತರದ ಬುದ್ಧಿ?
ಹತ್ತು ವರುಷದ ಹಿಂದೆ ಇತ್ತ ಲಂಗೋಟಿ
ಈ ಹೊತ್ತು ನೋಡಿದರೆ ಬರಿ ಹತ್ತು ಕೋಟಿ.

## ೬೯. ಸರಕಾರಿ ಕಾಮಗಾರಿ

ಅಲ್ಲಲ್ಲಿ ನಡುನಡುವೆ ಹಾಕಿದರೆ ತರಕು.
ಹೀಗಾಗಿ ಆಣೆಕಟ್ಟಿಗೆ ಬಿತ್ತು ಬಿರುಕು.
ಈ ಬಿರುಕಿನಿಂದ, ಸಖಿ, ಕೋಟಿ ರೂಪಾಯಿ
ಹೊಳೆಯಲ್ಲಿ ಹರಿಹರಿದು ಹೋಯ್ತು ಬಡಪಾಯಿ.

## ೭೦. ಹಾಲು

ಅಲ್ಲದವರು ಹುಣ್ಣಿಮೆಯ ಪೂರ್ಣ ಶಶಿಬಿಂಬ.
ದೇವಲೋಕದ ಹಾಲು ಹರಿವಾಣ ತುಂಬ.
ನಲಿವಿನಿಂದ ಹಾಲ್ ಕುಡಿದು ವಿಶ್ರಮಿಸಲಿಕ್ಕೆ
ಸುತ್ತಲೂ ನಿಂತಿಹವು ದಶಕೋಟಿ ಚಿಕ್ಕೆ.

## ೭೧. ಸೀಟು ಸಿಗದಿದ್ದಾಗ

ಅಲ್ಲಿ ಹೋದರು ಪಾಪ ಸಿಗಲಿಲ್ಲ ಜಾಗ.
ಇದಕ್ಕೆನ್ನುವರು ಜನರು ವಿಪರೀತ ತ್ಯಾಗ.
ಈ ಕಡೆಗೆ ಆ ಕಡೆಗೆ ಅಲುಗಾಡಿ ಕೊನೆಗೆ
ಎರಡು ಕೈಗಳ ಬೀಸಿ ತೆರಳಿದನು ಮನೆಗೆ.

## ೭೨. ಕ್ರಾಂತಿಯ ವಾತಾವರಣ

ಅಲ್ಲೋಲ, ಕಲ್ಲೋಲ, ಲಾಠೀ ಪ್ರಹಾರ.
ಉರುಳಿ ಬೀಳುವುದೇನು ಮಲಿನ ಸರಕಾರ ?
ಹೋದ ಹೋದಲ್ಲಿ ವಿದ್ಯಾರ್ಥಿಗಳ ಗಲಭೆ.
ಸಂಜೆಯಾಗುವ ಮೊದಲೆ ಒದರಿದವು ಗೂಬೆ.

## ೭೩. ವಹಿವಾಟುಗಾರ

ಅವನು ಮುಂಬಯಿಯಲ್ಲಿ ಇವನು ಊರೊಳಗೆ.
ಅವನ ಪಾಲಿನ ಗೇಣಿ ಹಾಕಿದನು ಒಳಗೆ.
ಈ ರೀತಿ ಇವನು ನಡೆಸುವನು ವಹಿವಾಟು.
ಉಪರಾಟೆ ಮಾಡಿ ಧರಿಸುವನು ಹಳೆ ಕೋಟು.

## ೭೪. ಶಸ್ತ್ರಾಸ್ತ್ರಗಳು

ಅವರವರ ಕೈಯೊಳಗೆ ಅವರವರ ಶಸ್ತ್ರ
ನರ್ಸಮ್ಮನಿಗೆ ಬೇಕು ಬ್ಯಾಂಡೇಜು – ವಸ್ತ್ರ
ಸೈನಿಕನ ಕೈಯೊಳಗೆ ಝಳಪಳಿಸುವ ಕತ್ತಿ
ರಾಜಕಾರಣಿಯ ಕೈಯಲ್ಲಿ ಅಗರಬತ್ತಿ.

## ೭೫. ದೃಷ್ಟಿ

ಅವರವರ ಮನದಂತೆ ದೃಷ್ಟಿಯೂ ಬೇರೆ ;
ಕವಿಯ ಕಣ್ಣಿಗೆ ಚಂದ್ರ ಹೆಂಡತಿಯ ಮೋರೆ.
ಚಿಕ್ಕಮ್ಮಳಿಗೆ ಶಶಿ ಬಾಂದಳದ ಚೆಂಡು.
ವಿಜ್ಞಾನಿಗಳಿಗೆಲ್ಲ ಬರಿ ಕಲ್ಲುಗುಂಡು.

## ೭೬. ಅವರವರ ಪಾತ್ರ

ಅವರವರು ಸರಿಯಾಗಿ ಅವರವರ ಪಾತ್ರ
ವಹಿಸಿಕೊಂಡರೆ ಸಾಕು ; ಎಲ್ಲಾ ಸುಸೂತ್ರ,
ರಣರಂಗದಲಿ ಬೇಕು ಅಪ್ರತಿಮ ಧೀರ.
ಲೋಕಸಭೆಯಲಿ ಸಾಕು ವ್ಯಾಖ್ಯಾನಕಾರ.

## ೭೭. ಗೆಳತಿಗೆ

ಅವಲೋಕಿಸಲು, ಗೆಳತಿ, ನಿನ್ನ ಲಾವಣ್ಯ
ಮುಪ್ಪಿನಲ್ಲೂ ನನಗೆ ಬಂತು ತಾರುಣ್ಯ.
ಗೆಳತಿ ಅಂದಳು; ನಿಮ್ಮ ಮಾತಿನಲ್ಲಿ ಯುಕ್ತಿ
ಇದ್ದರೂ ನಿಮ್ಮ ಮೈಯೊಳಗಿಲ್ಲ ಶಕ್ತಿ.

## ೭೮. ಚುಟುಕ ಸಾಮ್ರಾಟ

ಅವರು ಎಂದರು ನನಗೆ ; ಚುಟುಕು ಸಾಮ್ರಾಟ.
ನಾನಾಂದೆ ; ಈ ರೀತಿ ಕೊಡಬೇಡಿ ಕಾಟ.
ಸಾಮ್ರಾಟರೆಲ್ಲರೂ ಮುಕ್ಕಿದರು ಮಣ್ಣು.
ಕೊನೆಗೆ ಉಳಿಯುವುದೊಂದೆ, ಕಬ್ಬಿಗನ ಕಣ್ಣು.

## ೭೯. ಸಚಿವ ಸಂಪುಟದಲ್ಲಿ ಬದಲಾವಣೆ

ಅವ ಹೋದ, ಇವ ಬಂದ, ನಾಟಕದ ರೀತಿ
ಯಾವಾಗಲೂ ಹುಡುಕುತ್ತಿದ್ದಾರೆ ಜಾತಿ.
ಯಾರು ನಡೆಸಿದರೇನು ಎಂಥ ಸರಕಾರ ?
ನಮಗೆ ಬೇಕಾದದ್ದು ದಾಹ ಪರಿಹಾರ.

## ೮೦. ಮನಶ್ಶಾಸ್ತ್ರ

ಅವಳ ಮೂಗಿನ ರೀತಿ ಹಸಿ ಗೇರುಬೀಜ
ಎಂದೊಡನೆ ಬಾಡಿಹೋಯಿತು ಮುಖದ ತೇಜ
ಅವಳ ಮೂಗಿನ ರೀತಿ ಸಂಪಗೆಯ ಜಾತಿ
ಎಂದೊಡನೆ ಅಗಲವಾಯಿತು ಅವಳ ಮೂತಿ.

### ೮೧. ಬಂಗಾರ

ಅಹುದಹುದು, ನನಗೆ ಬೇಕೆಂಬೆ ಬಂಗಾರ,
ಬಂಗಾರವೆನ್ನುವುದು ಅಲ್ಲ ಸಿಂಗಾರ.
ಬಂಗಾರವೆನ್ನುವುದು ಭಾವನೆಯ ಬರಹ.
ಇದರೊಳಗೆ ಕವಿತೆ ಎಂಬುದು ಒಂದು ತರಹ.

### ೮೨. ಹಣಕಾಸು ಮಂತ್ರಿ

ಅಳಿಯನಿಗೆ ಕೊಡಿಸಿ ಹಲವಾರು ಏಜನ್ಸಿ
ಧನ್ಯನಾದನು ನಮ್ಮ ಹಣಕಾಸು ಮಂತ್ರಿ
ಉದ್ಯೋಗಪತಿಗಳಿಗೆ ನೀಡಿ ಸವಲತ್ತು
ಬೆಣ್ಣೆ ನುಂಗುವ ರೀತಿ ಈತನಿಗೆ ಗೊತ್ತು.

### ೮೩. ದೀಪಾವಳಿಯಲ್ಲಿ

ಅಳಿಯ ದೇವನು ಅವಳ ನೋಡಿದನು ಕದ್ದು.
ಕಣ್‌ಸನ್ನೆಯಿಂದಲೇ ಮಾಡಿದನು ಮುದ್ದು.
ಅಡಗಿ ತಿಂದನು ಕೊನೆಗೆ ಚುಂಬನ ಮಿಠಾಯಿ
ಆದರೂ ಪೂರ್ಣ ಸವಿಯಾಗಿಲ್ಲ ಬಾಯಿ.

### ೮೪. ಆಳು

ಆಳು ಎನ್ನುವದು, ಮಗಳೆ, ಜೀವನದ ದುಃಖ
ಕೋಟಿ ಕಣ್ಣೀರುಗಳ ಹೊಳೆಯಾಯ್ತು ಅಕ್ಕ.
ಗರ್ಭಕೋಳಗಳಿಂದ ಹರಿಯುತಿದೆ ನೀರು.
ಸೊರಗಿಹೋಯಿತು ಒಣಗಿ ಜೀವನದ ಬೇರು.

### ೮೫. ಸ್ವಾವಲಂಬನೆ

ಅಂಕೋಲೆಗೆಂದಿಗೂ ಸಂಕೋಲೆಯಿಲ್ಲ.
ಸಕ್ಕರೆಗಿಂತ ಸವಿ ನಮ್ಮನೆಯ ಬೆಲ್ಲ
ಹೀಗೆಂದು ಹಾಡುತ್ತ ಹಾಲಕ್ಕಿ ಪುಟ್ಟ,
ತೆಳು ಬೆಲ್ಲ ಎಲೆಯಲ್ಲಿಯೇ ನೆಕ್ಕಿಬಿಟ್ಟ.

## ೮೬. ಕಾಲೇಜಿನ ಅವಶ್ಯಕತೆ

ಅಂಕೋಲೆಯಲಿ ನಮಗೆ ಬೇಕು ಕಾಲೇಜು.
ವಿದ್ಯೆಯಿಲ್ಲದ ಬಾಳು ನಿಷ್ಫಲ ಲಗೇಜು.
ಕಾಲೇಜಿಗಾಗಿ ನೀಡಿದ ನಿಧಿಯ ದುಡ್ಡು
ನಮ್ಮ ಮರಿಮಕ್ಕಳಿಗೆ ಜೀವನದ ಬ್ರೆಡ್ಡು.

## ೮೭. ಅಂಗಡಿಗೆ ಹೋದಾಗ

ಅಂಗಡಿಗೆ ಹೋದಾಗ ಕುಡಿಸಿದರು ಕಾಫಿ.
ಆಮೇಲೆ ನಿಮಿಷದಲಿ ಹಾಕಿದರು ಟೋಪಿ.
ಇದಕೆನ್ನುವರು ಇವರು ವ್ಯಾಪಾರಿ, ದಂಧೆ.
ಸಕ್ಕರೆಯ ನಡವಳಿಕೆ ಹಿತಕಾರಿ ಅಂದೆ.

## ೮೮. ಭಾರತದ ಅಂಚೆ ಖಾತೆ

ಅಂಚೆಖಾತೆಯ ವೇಗ ಅತ್ಯಂತ ಜೋರು
ಪತ್ರಗಳು ಮುಟ್ಟಲಿಕೆ ದಿವಸ ಹದಿನಾರು !
ಎಕ್ಸಪ್ರೆಸ್ಸು ಡಿಲಿವರಿಯ ಪತ್ರಗಳಿಗಿಂತ
ಹೆರಿಗೆ ಡಿಲಿವರಿ ಮೊದಲು ಕೇಳು, ಗುಣವಂತ !

## ೮೯. ಅಧಿಕಾರಿಗಳಿಗೆ

ಅಂಜಲೇಕೋ, ಮಗನೆ, ಅಧಿಕಾರಿಗಳಿಗೆ ?
ಜೇಬು ಬಿಸಿ ಮಾಡಿದರೆ ಒಂದು ಅರಗಳಿಗೆ.
ಎಲ್ಲವೂ ಸರಿ ಹೋಗುವುದು ನೋಡು, ದೇವ.
ಕಳ್ಳಪೇಟೆಯ ಗೈದು ನಲಿಯುವುದು ಜೀವ.

## ೯೦. ಅಂತರಿಕ್ಷದ ವೀರರಿಗೆ

ಅಂತರಿಕ್ಷದ ವೀರರಿಗೆ ಒಂದು ಮಾತು;
ಪರಿಶುದ್ಧವಾಗಿರಲಿ ಸಾಹಸದ ಹೇತು.
ಕುದಿದರೂ ಕೋಟಿ ಗ್ಯಾಲನು ಚಿಮಣಿ – ಎಣ್ಣೆ
ಜನಕೆ ಸಿಗಬಹುದೇನು ಚಂದಿರನ ಬೆಣ್ಣೆ ?

## ೯೧. ಗಗನಗಾಮಿ ಹೇಳಿದ್ದು

ಅಂತರಿಕ್ಷಕೆ ಹಾರಿ ನೋಡಿದವು ಕಣ್ಣು ;
ಚಂದಿರನ ಮೈ ಎನ್ನುವುದು ಜಿಗುಟು ಮಣ್ಣು !
ಅಪ್ಪಿಕೊಂಡರೆ ತೆಕ್ಕೆಯಲಿ ಬರೀ ಅಂಟು
ಕೋಟಿ ಖರ್ಚಾದರೂ ಸಿಗಲಿಲ್ಲ ಗಂಟು.

## ೯೨. ತಂದೆಯ ಉತ್ತರ

ಅಂತರಿಕ್ಷವನೇರುವುದು ಏಕೆ, ಅಪ್ಪ ?
ಶಶಿಯ ಬೆಣ್ಣೆಯ ಕಾಸಿ ಮಾಡುವರು ತುಪ್ಪ.
ದಶಕೋಟಿ ನಕ್ಷತ್ರಗಳ ಮಿಂಚಿನಿಂದ
ಬೀದಿ ಬೀದಿಗೆ ದೀಪ ಹಚ್ಚುವರು, ಕಂದ.

## ೯೩. ಬೇಂದ್ರೆಯವರ ಕವಿತೆ

ಅಂಬಿಕಾತನಯ ದತ್ತರ ಕವಿತೆಯನ್ನ
ಓದಿದರೆ ಯಾವಾಗಲೂ ನಮಗೆ ಅನ್ನ.
ಹೃದಯದಲಿ ಉರಿದೊಡನೆ ಅನುಭವದ ಕೆಂಡ
ಒಂದೊಂದು ಅಗಳಿಗೂ ಒಂದು ಬ್ರಹ್ಮಾಂಡ.

## ೯೪. ಭಾವನಾಲೋಕ

ಅಂಬಿಕಾತನಯ ದತ್ತರ ಕೃತಿಯ–ನೋಡು,
ಭಾವನಾಲೋಕದಲಿ ಅದು ಒಂದು ಜಾದು.
ಅರಗಳಿಗೆಯಲಿ ನೀನು ಮಂಗಳಕೆ ಹಾರಿ
ಕುಳಿತುಕೊಳ್ಳಬಹುದು ಬ್ರಹ್ಮಾಂಡಗಳನೇರಿ.

## ೯೫. ಬಹುಮಾನ

ಆ ಕಡೆಗೆ ಚೆಲ್ಲಿಬಿಡು ಬಂದ ಬಹುಮಾನ.
ಬಹುಮಾನದಿಂದ ಗುಲ್ಲಿಗೆ ಮಾತ್ರ ಸ್ಥಾನ.
ಎಷ್ಟು ದಿನ ಉಳಿಯುವುದು ಈ ಜಾಹಿರಾತು ?
ಬಹುಮಾನ ಪತ್ರಿಕೆಗೆ ಬೀಳುವವು ತೂತು.

## ೯೬. ಹಾರಾಟ

ಆ ಕಡೆಗೆ ಹಾರಿದನು ಈ ಪಕ್ಷ ಬಿಟ್ಟು.
ಸರಿಯಾಗಿ ಗೊತ್ತಾಯ್ತೆ ನಿನಗಿದರ ಗುಟ್ಟು?
ಅಹುದಹುದು, ಇದಕೆಂಬೆ ಕೋತಿಗಳ ರೀತಿ.
ಕೋತಿಯಲ್ಲೂ ಉಂಟು ತರತರದ ಜಾತಿ.

## ೯೭. ಅಬಲೆಯ ಪ್ರತಾಪ

ಆಕಳಿಗೆ ಅಂಜಿ ಜೋಡೆತ್ತುಗಳು ಪಾಪ
ಓಡಿಹೋದದ್ದು, ಸಖಿ, ಅಬಲೆಯ ಪ್ರತಾಪ.
ಆಕಳೇ ಗದ್ದೆ ಹೂಡುವುದು ಚೆನ್ನಾಗಿ.
ಮಳೆ ಬೀಳದಿದ್ದರೂ ಬೆಳೆಯುವುದು ರಾಗಿ.

## ೯೮. ಹಾರಾಟದ ಫಲಶ್ರುತಿ

ಆ ಕಡೆಗೆ ಹಾರಿಯೂ ಸಿಗಲಿಲ್ಲ ಜಾಗ.
ಇವನ ಮೋರೆಯ ನೋಡಿ ಹಾಕಿದರು ಬೀಗ.
ಈಗ್ಗೆ ಮನೆಯಲಿ ಕುಳಿತು ಸೇದುವನು ಬೀಡಿ.
ಈಗಿಲ್ಲ ಬೆಂಗಳೂರಿನ ರೈಲುಗಾಡಿ.

## ೯೯. ಬೆಲೆಯೇರಿಕೆ

ಆಕಾಶಕೇರಿದರೆ ಪೇಟೆಯ ಪ್ರಪಂಚ
ಬಡ ಜನರ ಗತಿಯೇನು? ಯೋಚಿಸಿರಿ ಕೊಂಚ.
ಅಕ್ಕಿಯಾಗಲು ಚುಕ್ಕೆ ನಭದೊಳಗೆ ಅಗಳು.
ಗರ್ಭಕೋಶದಲಿ ಒಣ ಗಂಟಲಿನ ಉಗುಳು.

## ೧೦೦. ಆಕಾಶ ಮಾರ್ಗದಲಿ

ಆಕಾಶ ಮಾರ್ಗದಲಿ ನಿತ್ಯ ಓಡಾಟ
ಆಕಾಶವಾಣಿಯಲಿ ಭರ್ತಿ ಒದರಾಟ.
ಹೀಗಾಗಿ ಕವಿಗೆ ತಪ್ಪುವುದಿಲ್ಲ ಕಾಟ.
ಸುಸ್ತಾಗಿ ಮಲಗಿದನು ತಿಂದು ದಮರೋಟಾ.

## ೧೦೧. ಆಕಾಶವಾಣಿ

ಆಕಾಶವಾಣಿಯಲಿ ಕೇಳಿ ಸಂಗೀತ
ನಿನ್ನಾಣೆ ನಾನಾದೆ ಜೀವಂತ ಪ್ರೇತ.
ಈ ವಾಣಿ ಆಕಾಶಕೇರಿದರೆ ಒಳಿತು.
ವಿಶ್ರಾಂತಿ ಹೊಂದುವೆನು ಧರೆಯೊಳಗೆ ಕುಳಿತು.

## ೧೦೨. ಆಕಾಶವಾಣಿಯಲಿ

ಆಕಾಶವಾಣಿಯಲಿ ಕೇಳಿದೆನು ಸುದ್ದಿ.
ಹೇಳಿದರು ಸರಕಾರಿ ಗಾಣದಲಿ ತಿದ್ದಿ.
ಪ್ರತಿ ದಿವಸವೂ ಕೇಳಿ ಹಾಳಾಯ್ತು ಬುದ್ಧಿ.
ಇದಕೆಂಬೆ ನರನ ಮಾನಸಿಕ ಅಭಿವೃದ್ಧಿ

## ೧೦೩. ಮಂತ್ರಿಗಳ ಭಾಷಣ

ಆಕಾಶವಾಣಿಯಲಿ ಭಾಷಣವ ಬಿಗಿದು
ಅಪಕೃತ್ಯಗಳನೆಲ್ಲ ಹಾಕಿಬಿಡು ಹುಗಿದು,
ಆಕಾಶವಾಣಿ ಸರಕಾರಿ ತಂಬೂರಿ.
ನಿತ್ಯವೂ ನುಡಿಯುವುದು ನಿಮ್ಮ ಶುಭಕೋರಿ.

## ೧೦೪. ಆಕಾಶವಾಣಿಯಲಿ

ಆಕಾಶವಾಣಿಯಲಿ ಸಂಗೀತ ಕೇಳಿ.
ಓಡಿ ಹೋಯಿತು ಸಾಗರದ ಕಡೆಗೆ ಗಾಳಿ.
ಕಡಲ ತೆರೆ ನೃತ್ಯ ಸಂಗೀತಗಳ ಸೊಲ್ಲು.
ಆಕಾಶವಾಣಿ ಬರಿ ಬೀದಿಗಳ ಗುಲ್ಲು.

## ೧೦೫. ಉದ್ಗ್ರಂಥ

ಆಕಾಶವೆನ್ನುವುದು ಹರಿಯ ಉದ್ಗ್ರಂಥ.
ಪತ್ತೆಯಾಗದು ಪುಸ್ತಕದ ಆದಿ ಅಂತ.
ಅಗಸದ ಬರವಣಿಗೆ ಹಲವಾರು ರೀತಿ.
ಪ್ರತಿಯೊಂದು ನಕ್ಷತ್ರ ಸರ್ವಜ್ಞ ತ್ರಿಪದಿ.

## ೧೦೬. ನಾ ಸಾಯಬೇಕು

ಆಕೆ ಎಂದಳು ; ಮೊದಲು ನಾ ಸಾಯಬೇಕು.
ನಾನೆಂದೆ ; ನೀನು ಬೀಳುವುದಿಲ್ಲ ಸೀಕು.
ಬಾವಿಯಲಿ ಗುದುಕಿ ಬಿಡು ಈ ಹೊತ್ತು ರಾತ್ರೆ.
ನಾಳೆ ಮುಂಜಾನೆ ನೆರೆಯುವುದಿಲ್ಲ ಜಾತ್ರೆ.

## ೧೦೭. ಆಕೆಯ ಘಾಟು

ಆಕೆಯಿದ್ದರೆ ಮಾತ್ರ ತುಳುಕುವುದು ಜಾತ್ರೆ.
ತುಂಬಿ ಉಕ್ಕೇರುವುದು ಗೌಳಿಗನ ಪಾತ್ರೆ.
ಆಕೆ ಸಂತೆಗೆ ಬರಲು ಸೇವಂತಿ ಜಾಜಿ,
ಮಲ್ಲಿಗೆಯ ದಂಡೆಗಳ ವ್ಯಾಪಾರ ತೇಜಿ.

## ೧೦೮. ಪ್ರಗತಿಯ ವೇಗ

ಆಗಬೇಕೆಂದು ಬಡ ಜನರ ಉದ್ಧಾರ.
ವೇಗದಿಂದೋಡುವುದು ನಮ್ಮ ಸರಕಾರ
ಮುಂದೆ ಸಾಗಿದ ಹಾಗೆ ಹಿಂದಿನ ಸಮಸ್ಯೆ.
ಮತ್ತಷ್ಟು ಬಿಗಿಯಾಗಿ ಬಂತು ಅಮವಾಸ್ಯೆ.

## ೧೦೯. ಹರಿಸೆಟ್ಟಿ

ಆಗಬೇಕೆಂದು ಹರಿಜನರ ಉದ್ಧಾರ
ಹರಿಸೆಟ್ಟಿ ಹರಿದು ಹಾಕಿದನು ಜನಿವಾರ
ಈ ಸುದ್ದಿ ಬಂತು "ನೂತನವಾಣಿ"ಯಲ್ಲಿ
ಹರಿಸೆಟ್ಟಿ ಖ್ಯಾತಿ ಗಳಿಸಿದನು ಕೂತಲ್ಲಿ.

## ೧೧೦. ಆಗಸಕೆ ಹಾರಿ

ಆಗಸಕೆ ಹಾರಿ ತೋರಿಸಿದರು ಪ್ರತಾಪ
ಶಶಿಯ ಬೆಣ್ಣೆಯ ಮುದ್ದೆ ಸಿಗಲಿಲ್ಲ ಪಾಪ !
ಚಂದಿರನ ಬೆಳ್ಳಿಯೆಂಬುದು ಕಣ್ಣು-ಕಟ್ಟು.
ಬೆಳದಿಂಗಳಿಗೆ ನಾವು ಕರೆದಂತೆ ಹಿಟ್ಟು.

### ೧೧೧. ಹತ್ತಿಯ ಬೆಳೆ

ಆಗಸದ ಹೊಲದೊಳಗೆ ಚಿಕ್ಕೆಗಳ ಬಿತ್ತಿ
ಮುಂಜಾನೆ ನೋಡಿದರೆ ಬಿಳಿ ಮುಗಿಲ ಹತ್ತಿ.
ಈ ಹತ್ತಿಯನು ಹಿಂಜಿದವರಾರು ನೀರೆ?
ಸೂರ್ಯನಲ್ಲದೆ, ಮತ್ತೆ ಯಾರಲ್ಲ ಬೇರೆ.

### ೧೧೨. ಗರಿಕೆ

ಅಗಸವ ಚುಂಬಿಸುವ ಹೆಬ್ಬಾಸೆ ಮರಕೆ.
ನೆಲವನಾಲಂಗಿಸುತ ನಲಿಯುವುದು ಗರಿಕೆ.
ಹಗುರಾಗಿ ಬಾಳುವುದು ಹಸುರಾದ ಹುಲ್ಲು
ಅದರ ಕಂಠದೊಳಿಲ್ಲ ಹಣ್ಣೆಂಬ ಕಲ್ಲು.

### ೧೧೩. ಸತ್ಯನಾರಾಯಣನ ಪೂಜೆ

ಆಗಾಗ್ಗೆ ಸತ್ಯನಾರಾಯಣನ ಪೂಜೆ
ಮರುದಿವಸ ಸುಳ್ಳು ನಾರಾಯಣನ ಹೂಜೆ.
ಸುಳ್ಳಿನಲಿ ಸತ್ಯ ತುಂಬುವ ಮಹಾ ಕಾರ್ಯ
ನೆರವೇರಿಸಲು ಬೇಕು ಅಪರಿಮಿತ ಧೈರ್ಯ.

### ೧೧೪. ಸಮ್ಮೇಳನದ ಗೋಷ್ಠಿಗಳು

ಆ ಗೋಷ್ಠಿ ಈ ಗೋಷ್ಠಿ. ಸೆರಿ ಹದಿನೆಂಟು.
ಪ್ರತಿಯೊಂದು ಗೋಷ್ಠಿಗೂ ಅಧ್ಯಕ್ಷನಂಟು.
ಮತ್ತೆ ಉದ್ಘಾಟನೆಗೆ ಬೇಕು ಇನ್ನೊಬ್ಬ.
ಹೀಗೆ ಎಲ್ಲಾ ಸೇರಿದರೆ ಒಂದು ಹಬ್ಬ.

### ೧೧೫. ಚುನಾವಣೆ

ಆ ಚುನಾವಣೆಯಲ್ಲಿ ಸರಕಾರಿ ಪಕ್ಷ
ವಿಪರೀತ ಹಣ ಚೆಲ್ಲಿ ಪಡೆದಿತ್ತು ಮೋಕ್ಷ
ಈ ಚುನಾವಣೆಯಲ್ಲಿ ಆಗಿ ಉಪರಾಟೆ,
ಮುರಿದು ಹೋಯಿತು, ಮಗನೆ, ಸರಕಾರಿ ಕೋಟೆ.

## ೧೧೬. ಚುನಾವಣೆ ಫಂಡು

ಆಡಳಿತ ಪಕ್ಷದ ಚುನಾವಣಾ ಫಂಡು
ಆಶ್ಚರ್ಯಚಕಿತನಾದನು ಬಾಪು ಕಂಡು.
ಸೇಕಡಾ ತೊಂಬತ್ತು ಶ್ರೀಮಂತರಿಂದ
ಟೇಬಲಿನ ಕೆಳಗೆ ಕೈಹಾಕಿ ಬಂತೆಂದ.

## ೧೧೭. ಅಜ್ಜಿಯ ಸೂಚನೆ

ಆಡಳಿತ ಪರಿಶುದ್ಧವಾಗುವುದು ಹೇಗೆ ?
ಎಂಬ ಮಾತಿಗೆ ಅಜ್ಜಿ ಹೇಳಿದಳು ಹೀಗೆ :
ಮಂತ್ರಿಗಳ ಸುತ್ತಲೂ ಧೂಪ ಕರ್ಪೂರ
ಹಚ್ಚಿದರೆ ಶುಚಿಯಾಗಬಹುದು ಸರಕಾರ.

## ೧೧೮. ವಂಕೀ ಸಂಸಾರ

ಆದರ್ಶಪ್ರಾಯ ವಂಕಿಗಳ ಸಂಸಾರ.
ಬಾಳು ಸವಿಯಾಗುವುದು ತಿಂದರೂ ಖಾರ.
ಬೆಲೆಯೇರಿ ಸಂಸಾರವಾದರೂ ತುಟ್ಟಿ,
ಮಕ್ಕಳಿಲ್ಲದ ಮನೆಗೆ ತಳಪಾಯ ಗಟ್ಟಿ.

## ೧೧೯. ಆದರ್ಶವಾದಿಗಳು

ಆದರ್ಶವಾದಿಗಳು ರಾಜ್ಯವನ್ನಾಳೆ
ಹಾದರವ ಬಿಟ್ಟು ಬಂದಳು ಊರ ಸೂಳೆ.
ಮನೆಹೆಂಗಸಿಗೆ ಮಾತ್ರ ಬರಲಿಲ್ಲ ಬುದ್ಧಿ !
ಈ ಮಾತು ನಿಜವಾಗಿಯೂ ದೊಡ್ಡ ಸುದ್ದಿ.

## ೧೨೦. ಆಧುನಿಕ

ಆಧುನಿಕ ಆಧುನಿಕ ಎಂದರೇನಪ್ಪ ?
ಆಧುನಿಕ ಎನ್ನುವುದು ಶೇಂಗಾದ ತುಪ್ಪ.
ಮತ್ತೆ ನಲ್ಲಿಯ ನೀರು ಬೆರತದ್ದರಿಂದ
ಪಟ್ಟಣದ ಹಾಲು ಸಹ ಆಧುನಿಕ, ಕಂದ.

### ೧೨೧. ಆಧುನಿಕ

ಆಧುನಿಕ ಇತಿಹಾಸ ಕೇಳು, ತನುಜಾತೆ
ಇವನ ಕೈಯೊಳಗಿತ್ತು ಹಣಕಾಸು ಖಾತೆ.
ಅರಮನೆಯ ಕಟ್ಟಿದನು ಬೆಂಗಳೂರಲ್ಲಿ.
ಲಕ್ಷಗಟ್ಟಲೆ ಮಾಡಿದನು ಬ್ಯಾಂಕಿನಲ್ಲಿ.

### ೧೨೨. ಆಧುನಿಕ ಕನಕದಾಸರು

ಆಧುನಿಕ ಕನಕದಾಸರು ಇಲ್ಲಿ ಉಂಟು.
ಹೊಸ ಭಜನೆಗಳ ಹಾಡಿ ಕಟ್ಟುವರು ಗಂಟು.
ಮಂತ್ರಿಗಳ ಮನೆ ಎಂಬುದೇ ಪುಣ್ಯಕ್ಷೇತ್ರ.
ಪ್ರತಿಯೊಂದು ಜಿಲ್ಲೆಯಲ್ಲೂ ಅನ್ನಛತ್ರ.

### ೧೨೩. ಆಧುನಿಕ ಕಾಲದಲಿ

ಆಧುನಿಕ ಕಾಲದಲಿ ಬೇಡ ತಾಂಬೂಲ.
ಇದಕಿಂತ ಲಿಪ್‌ಸ್ಟಿಕ್ಕು ಬಹಳ ಅನುಕೂಲ.
ಲಿಪಸ್ಟಿಕ್‌ನಿಂದ ಆಗುವುದಿಲ್ಲ ಕಜ್ಜಿ
ಎಂದು ಹೇಳಿದರು ನಂಬುವುದಿಲ್ಲ ಅಜ್ಜಿ.

### ೧೨೪. ಆಧುನಿಕ ಶಿಕ್ಷಣ

ಆಧುನಿಕ ಶಿಕ್ಷಣಕ್ಕೆ ಹೆಸರು ; ಕ್ಯಾಬೇಜು
ಓ ಮಗನೆ, ಈ ಮಾತು ಅಲ್ಲ ಬರಿ ಮೋಜು
ಎಲೆಯೊಳಗೆ ಎಲೆಯಿರಲು ಒಳಗಿಲ್ಲ ತಿರುಳು.
ತಿರುಳು ಎಂಬುದು ನರನ ಅನುಭವದ ಹರಳು.

### ೧೨೫. ಪಂಜೆ ಮಂಗೇಶರಾಯರು ಹೇಳಿದ್ದು

ಆ ಬದಿಗೆ ಈ ಬದಿಗೆ ಒಂದೊಂದು ಪ್ರಾಸ.
ಕಟ್ಟಿಕೊಂಡರು ಈಜುವೆನು ಅನಾಯಾಸ
ಈಜುವಾಗಲೆ ಸುಲಿದು ತಿಂಬೆ ರಸಬಾಳೆ.
ಮತ್ತೆ ನಡುನಡುವೆ ತಟ್ಟುವೆನು ಚಪ್ಪಾಳೆ.

## ೧೨೬. ಅನ್ನಮಂತ್ರಿಯ ಗಮನಕ್ಕೆ

ಆ ಮುದುಕಿ ರೇಷನ್ ಅಂಗಡಿಗೆ ಹೋದಾಗ
ಕಾಳು ಖರ್ಚಾಯ್ತೆಂದು ಹಾಕಿದರು ಬೀಗ.
ಮರುದಿವಸ ಹೋದರೂ ಸಿಗಲಿಲ್ಲ ಪಾಪ!
ಅನ್ನಮಂತ್ರಿಯ ಬೈದು ಹಾಕಿದಳು ಶಾಪ.

## ೧೨೭. ಕರ್ನಾಟಕ ಏಕೀಕರಣ

ಆಯ್ತು ಏಕೀಕರಣದಿಂದ ಒಕ್ಕಟ್ಟು
ಒಕ್ಕಟ್ಟಿನಿಂದ ಮತ್ತಷ್ಟು ಬಿಕ್ಕಟ್ಟು.
ಈ ಪರಿಸ್ಥಿತಿಗೆ ಕಾರಣವೇನು ಗೊತ್ತೆ?
ಒಂದೆಡೆಗೆ ಸೇರಿದರು ಸೊಸೆ ಮತ್ತೆ ಅತ್ತೆ.

## ೧೨೮. ಪರಿಚಯ ಭಾಷಣ

ಆರಂಭದಲಿ ಇವರು ಬರೆದರು ಪ್ರಬಂಧ.
ಆಮೇಲೆ ಹರಟೆಗಳು, ಅವು ಕೂಡ ಚಂದ.
ಸದ್ಯ ವೃದ್ಧಾಪ್ಯದಲ್ಲಿ ನಾಟಕದ ಗೀಳು.
ಹೀಗಾಗಿ ಶಾರದಾಂಬೆಗೆ ನಿತ್ಯ ಕೂಳು.

## ೧೨೯. ಅಧ್ಯಕ್ಷ

ಆರಂಭದಿಂದಲೂ ಇವನು ಅಧ್ಯಕ್ಷ.
ಅದರ ಉನ್ನತಿಗಾಗಿ ಕೊಡಲಿಲ್ಲ ಲಕ್ಷ.
ಕುರ್ಚಿ ಬಿಸಿ ಮಾಡಿದನು ಮೂವತ್ತು ವರುಷ.
ಈ ಮಹಾ ಸಾಧನೆಗೆ ಪಡೆಯುವನು ಹರುಷ.

## ೧೩೦. ಪ್ರಗತಿಯ ಹಂತಗಳು

ಆರಂಭದಲಿ ಹುಟ್ಟಿದನು ಜಾಂಬುವಂತ.
ಆಮೇಲೆ ಹುಟ್ಟಿದನು ದೇವ ಹನುಮಂತ.
ಮೂರನೆಯ ಹಂತದಲ್ಲಿ ಹುಟ್ಟಿದನು ಮನುಜ
ಈ ಮನುಜ ಅಗಸಕೆ ಹಾರುವುದು ಸಹಜ.

## ೧೩೧. ಮಂತ್ರಿಮಂಡಳದ ಆಕಾರ

ಆರು ಮಣ ಹೊರವುದಕೆ ಮೂರು ಜನ ಸಾಕು.
ಒಂದು ಹೆಣ ಹೊರುವುದಕೆ ನಾಕು ಜನ ಬೇಕು.
ಸರಕಾರ ಹೊರವುದಕೆ ಅರವತ್ತು ಜನರು
ಬೇಕೆಂದು ಹೇಳಿದರು. ಲಿಂಗಣ್ಣನವರು.

## ೧೩೧. ಆಲಸ್ಯ ಮತ್ತು ಚಟುವಟಿಕೆ

ಆಲಸ್ಯವೆನ್ನುವುದು ಭೂಭಾರ ಬೇನೆ.
ಚಟುವಟಿಕೆ ಎನ್ನುವುದು ಸುಳಿಗಾಳಿ ತಾನೆ.
ನೀನಾಗಬೇಕು, ಸಖಿ, ಸುಳಿಗಾಳಿಯಂತೆ.
ಮಣಿಮಣಿದು ಮುತ್ತಿಡಲು ನನಗಿಲ್ಲ ಚಿಂತೆ.

## ೧೩೨. ಬಡತನ

ಆಲಿಂಗನವ ಕೊಡಲು ಬಡತನದ ರಂಡೆ
ಕೆಂಡವನ್ನೇ ತಬ್ಬಿಕೊಳ್ಳುವುದು ಕಂಡೆ.
ಮುತ್ತು ಕೊಡುತಿರುವಾಗಲೇ ಅವಳ ಆತ್ಮ
ಸತ್ತು ಹೆಣವಾಗಿತ್ತು ಕೇಳು ಪರಮಾತ್ಮ.

## ೧೩೪. ವಿಮರ್ಶೆಯ ಮಾದರಿ

ಆ ವಿಮರ್ಶಕ ಮಹಾಗ್ರಂಥ ಬರೆದಾಗ
ಈ ಚುಟುಕ ಮರಿಗಳಿಗೆ ಸಿಗಲಿಲ್ಲ ಜಾಗ.
ಆದರೂ ಜನರ ನಾಲಿಗೆಯಲ್ಲಿ ತೇಲಿ,
ಹೋದಹೋದಲ್ಲಿ ಇವು ಮಾಡಿದವು ಗೇಲಿ.

## ೧೩೫. ಆ ಸಚಿವನಿಗೆ

ಆ ಸಚಿವನಿಗೆ ಹೆಂಗಸರ ಹುಚ್ಚು ಭರ್ತಿ.
ಇಲ್ಲಿಗೂ ಬಂದಾಗ ಗಳಿಸಿದನು ಕೀರ್ತಿ
ಅಮಲದಾರನು ವ್ಯವಸ್ಥೆಯ ಮಾಡಿದಂತೆ
ಆಕೆ ಬಂಗ್ಲೆಗೆ ಬರಲು ನೀಗಿದನು ಚಿಂತೆ.

### ೧೩೬. ಸಂಪು ಜೋರಾಗಿ

ಆಸ್ಪತ್ರೆ ಮುಚ್ಚಿದವು ಸಂಪು ಜೋರಾಗಿ
ಕಣ್ಣು ಮುಚ್ಚಿದರು, ಸಖಿ, ನೂರಾರು ರೋಗಿ.
ಇದು ನಾವು ಸಾಧಿಸಿದ ಪ್ರಗತಿಯ ವಿಕಾಸ.
ಹೀಗೆಂದು ಹಾಡಿದನು ತಂಬೂರಿ ದಾಸ.

### ೧೩೭. ಹೆಸರು

ಆಸಾಮದವನಲ್ಲ, ಇವನು ಆಸಾಮಿ.
ಅವನು ಬಂಗಾಲದವ, ಹೆಸರು ಗೋಸ್ವಾಮಿ.
ಈತ ಹುಬ್ಬಳ್ಳಿಯವ, ಕುಪ್ಪಸದ ಹೆಸರು
ಮಾತಿನಲ್ಲೂ ಉಂಟು, ಬೆಣ್ಣೆ ಕೆನೆ ಮೊಸರು.

### ೧೩೮. ಸೂರ್ಯನ ಅಸಹಾಯತೆ

ಆಹಾರ ಧಾನ್ಯಗಳ ಕಳ್ಳ ದಾಸ್ತಾನು
ತೆಗೆಯಲಾರನು ಹುಡುಕಿ ಅಗಸದ ಭಾನು.
ಸೂರ್ಯಪರಮಾತ್ಮನಿಗೆ ದಶಕೋಟಿ ಕಣ್ಣು
ಇದ್ದರೂ ವ್ಯರ್ಥವೆಂದನು ನಮ್ಮ ಸಣ್ಣು.

### ೧೩೯. ಗಣಪತಿಯ ಜಾಣತನ

ಆಹಾರ ಧಾನ್ಯಗಳ ಕೊರತೆಯಿರುವತನಕ
ಮೂಷಿಕನ ಬೆನ್ನೇರಿ ಕೂಡ್ರುವನು ಬೆನಕ.
ಇಲಿಯ ಸಹವಾಸದೊಳಗಿದ್ದ ಸೌಕರ್ಯ
ಮಾನವನ ಕಣಜದೊಳಗೂ ಇಲ್ಲವಯ್ಯ!

### ೧೪೦. ಆಹಾರ ಹಂಚಿಕೆ

ಆಹಾರ ಹಂಚಿಕೆಯ ನೂತನ ನಮೂನೆ.
ನಮ್ಮೂರ ಭತ್ತ ಹುಬ್ಬಳ್ಳಿಗೆ ರವಾನೆ.
ಹೊರಗಿಂದ ನಮ್ಮ ಹಳ್ಳಿಗೆ ಬಂತು ಗೋದಿ
ಪ್ರತಿಯೊಂದು ಚೀಲದಲಿ ಮಣಗಟ್ಲೆ ಬೂದಿ.

### ೧೪೧. ನಾಜೂಕು ಹುಡುಗಿ

ಆ ಹುಡುಗಿ ಜೇನುತುಪ್ಪದ ಹಾಗೆ ಮಧುರ
ಅವಳ ಸೀರೆಯ ಸೆರುಗು ಹೂವಿಗೂ ಹಗುರ.
ಹೀಗೆಂದು ಹಿಡಿದುಬಿಟ್ಟೆನು ಅವಳ ಹಾದಿ.
ಮದುವೆಯಾಗಲು ಕೊನೆಗೆ ಸಂಸಾರ ಬಾದಿ.

### ೧೪೨. ಆ ಹುಡುಗಿ

ಆ ಹುಡುಗಿ ನಿಜವಾಗಿ ಸುಗುಣ ಸಂಪನ್ನೆ.
ಆದರೂ ಓಡಿ ಹೋದಳು ಪಾಪ ನಿನ್ನೆ.
ಪ್ರಾಯ ಬಂದಾಗ ಸಖಿ, ಬೇಕಲ್ವೆ ಗಂಡ ?
ಜೀವನವು ಒಂಟಿಯಾದರೆ ಬಾಳು ಕೆಂಡ.

### ೧೪೩. ಹಾಕಿದಳು ಗಾಳ

ಆ ಹುಡುಗಿ ಬಲು ಚದುರೆ, ಹಾಕಿದಳು ಗಾಳ.
ಗಾಳದಲಿ ಸಿಕ್ಕಿದನು ನಮ್ಮ ಗೋಪಾಳ,
ತಾಯಿ ತಂದೆಗೆ ಇಲ್ಲ ಯಾವುದೂ ತಾಪ.
ಎಲ್ಲರೂ ಹೊಗಳುವರು ಹುಡುಗಿಯ ಪ್ರತಾಪ.

### ೧೪೪. ಬ್ಲೇಕ್ ಕವಿಗೆ

ಆಂಗ್ಲ ಕವಿ ಬ್ಲೇಕ್, ನೀನು ನನ್ನ ದೊಡ್ಡಣ್ಣ
ಹುಚ್ಚು ಹಿಡಿಸಿದೆ ನಿನ್ನ ಕವಿತೆಗಳ ಬಣ್ಣ
ಈ ಬಣ್ಣ ಯಾವುದೆಂಬುದು ನನಗೆ ತಿಳಿಯ
ಆದರೂ ಮನದೊಳಗೆ ಆನಂದ ಪ್ರಳಯ.

### ೧೪೫. ಕಡ್ಡಾಯದ ಫಲಶ್ರುತಿ

ಆಂಗ್ಲ ಭಾಷೆಯ ಜೊತೆಗೆ ಹಿಂದಿ ಕಡ್ಡಾಯ
ಶೀಘ್ರದಲಿ ಮಕ್ಕಳಿಗೆ ಬಂತು ಮುದಿ ಪ್ರಾಯ.
ಮುದಿ ಪ್ರಾಯ ಬಂದರೂ ನಿಮಗೇಕೆ ಚಿಂತೆ ?
ನಮಗೆ ಬೇಕಾದದ್ದು ಭಾಷೆಗಳ ಸಂತೆ.

## ೧೪೬. ಬೆಂಗಳೂರಿನ ಪ್ರಯಾಣ

ಇದಕಾಗಿ ಬೆಂಗಳೂರಿಗೆ ಹೋಗಿ ಬಂದ.
ಕಜ್ಜಾಯ ಸಿಗದೆ ತುಸು ನೆಲಗಡಲೆ ತಂದ.
ರಾಜಕಾರಣದಲ್ಲಿ ಇವನೊಂದು ರತ್ನ.
ಕಜ್ಜಾಯ ಗಳಿಸಲಿಕೆ ನಾನಾ ಪ್ರಯತ್ನ.

## ೧೪೭. ಪೆನ್‌ಸಿಲ್ಲು

ಇದಕೆ ನಾಲಗೆಯಿಲ್ಲ, ಮೂಕ ಪೆನ್‌ಸಿಲ್ಲು.
ಆದರೂ ಮಾಡುತಿದೆ ಸಾಕಷ್ಟು ಗುಲ್ಲು,
ಇದಕಿಲ್ಲ ಕೈಕಾಲು ; ಇದಕಿಲ್ಲ ಹೊಟ್ಟೆ,
ಆದರೂ ಈ ಪ್ರಾಣಿ ಹಾಕುತಿದೆ ಮೊಟ್ಟೆ.

## ೧೪೮. ಸೋಲಿನ ಫಲ

ಇದಕೆನ್ನುವರು ಜನರು ಅನುಕೂಲ ಕಾಲ.
ಕುಸ್ತಿಯಲಿ ಕೆಳಗೆ ಬಿದ್ದರೆ ರಾಜ್ಯಪಾಲ.
ಸೋಲಿನಲ್ಲೇ ರಾಜಕಾರಣದ ಗೆಲವು
ಹೀಗುಂಟು ನವಭಾರತದ ತತ್ವ, ಹಲವು.

## ೧೪೯. ಮೀನುಗಾರಿಕೆಯ ಕಾಲೇಜು

ಇದ ನೋಡು ಮೀನುಗಾರಿಕೆಯ ಕಾಲೇಜು.
ಡಿಗ್ರಿ ಪಡೆದವರೆಲ್ಲ ಬಹಳ ನಾಜೂಕು.
ಆಫೀಸಿನಲಿ ಇವರ ಕುರ್ಚಿಗಳು ಭದ್ರ.
ಇವರ ಮುಖ ನೋಡಿಲ್ಲ ಭೀಕರ ಸಮುದ್ರ.

## ೧೫೦. ಕಳುವು

ಇದ್ದ ಮೂರರ ಪೈಕಿ ಕದ್ದವರು ಯಾರು ?
ತಾನೆಂದು ಒಪ್ಪಿಕೊಂಡಿತು ಮರದ ಬೇರು.
ಭೂಮಿಯೊಳಗಿನ ಸತ್ವವನು ಹೀರಿಬಿಟ್ಟೆ.
ಹಣ್ಣು-ಹಂಪಲಗಳನು ಮನುಜನಿಗೆ ಕೊಟ್ಟೆ.

## ೧೫೧. ಕನ್ನಡಿಗನ ಕತೆ

ಇದ್ದರೂ ಜೊತೆಗೆ ಉತ್ತುಂಗ ಸಹ್ಯಾದ್ರಿ
ಯಾವ ವ್ಯಾಪಾರಿಯೂ ಕೊಡಲಿಲ್ಲ ಉದ್ರಿ.
ಇದ್ದರೂ ಮನೆಯೊಳಗೆ ತಾಯಿ ಕಾವೇರಿ
ಮದರಾಸಿಗೇ ಹೋಯ್ತು ನೀರೆಲ್ಲ ಜಾರಿ

## ೧೫೨. ಹೊಸ ಪಾಠಕ್ರಮ

ಇದು ಉಂಟು, ಅದು ಉಂಟು, ಹತ್ತು ಹದಿನೆಂಟು
ಬಿಡಿಸುವುದು ಬಲು ಕಷ್ಟ. ಈ ಬ್ರಹ್ಮಗಂಟು.
ಮತ್ತೆ ಬಂದಿದೆಯಲ್ಲ ಇನ್ನೊಂದು ವೇಷ.
ಪಠ್ಯಪುಸ್ತಕದೊಳಗೆ ವ್ಯಾಕರಣ ದೋಷ

## ೧೫೩. ಜೀರ್ಣಶಕ್ತಿ

ಇದು ನಮ್ಮ ದೇಶಭಕ್ತರ ಅಧಿಪತ್ಯ.
ನಾಯಕರು ಮಾಡಬೇಕಾಗಿಲ್ಲ ಪಥ್ಯ.
ಮಿತಿ ಮೀರಿ ತಿಂದರೂ ಆಗುವುದು ಜೀರ್ಣ.
ಹಿತಕಾರಿಯಾಗಿ ಆರೋಗ್ಯ ಪರಿಪೂರ್ಣ.

## ೧೫೪. ಆಲದ ಮರ

ಇದು ನಮ್ಮ ರಾಜಕಾರಣದ ವಟವೃಕ್ಷ.
ಇದಕೆನ್ನುವರು, ಮಗನೆ, ಆಡಳಿತ ಪಕ್ಷ.
ಬಲುದೊಡ್ಡದಾದರೂ ಮರದ ವಿಸ್ತಾರ
ಆಮಟೆಕಾಯಿಗು ಸಣ್ಣ ಹಣ್ಣಿನಾಕಾರ.

## ೧೫೫. ಮಹಾಕ್ಷೇತ್ರ

ಇದು ಮಹಾಕ್ಷೇತ್ರ, ಸಖಿ; ಹೆಸರಿದಕೆ ಕಾಶಿ.
ಇದರ ಜೋಳಿಗೆಯಲ್ಲಿ ಶಾಪಗಳ ರಾಶಿ.
ಪುಣ್ಯ ಗಳಿಸಲಿಕೆಂದು ಎಲ್ಲರೂ ಬಂದು
ಇಲ್ಲಿ ಹೇರಿದ್ದಾರೆ ಪಾಪಗಳ ತಂದು.

### ೧೫೬. ಜಾತ್ಯಾತೀತ ಭಾರತ

ಇದುವೆ ಜಾತ್ಯಾತೀತ ಭಾರತದ ಯುದ್ಧ.
ಹಿಂದು ಯೋಧನ ಜೊತೆಗೆ ಮುಸಲನೂ ಇದ್ದ.
ಶೀಖ ಫಾರಸಿ ಕ್ರಿಸ್ತಿಗಳ ನಡುವೆ ತಾನೆ.
ಸರ್ವ ಧರ್ಮದ ಸರ್ವ ವರ್ಣಗಳ ಸೇನೆ.

### ೧೫೭. ಸುಧಾರಿತ ಕೋಳಿ

ಇದು ಸುಧಾರಿತ ಕೋಳಿ, ಗಿಡ್ಡ ಕೈಕಾಲು,
ಮೈಕಟ್ಟು ದಪ್ಪವಾಗಿದ್ದು ಅದು ಗೋಲು.
ಈ ಹೇಟೆ ನಮ್ಮ ನೆರೆಮನೆಯ ನರಸಮ್ಮ
ಎಂದಿಗೂ ತತ್ತಿ ಹಾಕುವುದಿಲ್ಲ ತಮ್ಮ.

### ೧೫೮. ಅಜ್ಜನ ದೀಪಾವಳಿ

ಇನ್ನೆಷ್ಟು ದಿನ ನೋಡುವೆನೊ? ಯಾರು ಬಲ್ಲ ?
ಬನ್ನಿ! ಮಕ್ಕಳೆ, ತಿನ್ನಿ ಅವಲಕ್ಕಿ ಬೆಲ್ಲ,
ನನಗಾಯ್ತು ಎಂಬತ್ತು ಕರೆಯುತಿದೆ ಮಣ್ಣು!
ಮರಿಮಕ್ಕಳನು ನೋಡಿ ಮುಚ್ಚುವೆನು ಕಣ್ಣು.

### ೧೫೯. ಬಾಲ್ಯ

ಇನ್ನೊಮ್ಮೆ ನನಗೆ ಬರಬೇಕೆಂಬೆ ಬಾಲ್ಯ.
ಬಾಲ್ಯವೆನ್ನುವುದು, ಸಖಿ, ಬಹಳೇ ಅಮೂಲ್ಯ.
ಬಾಲ್ಯದಲ್ಲಿ ಟೊಂಗೆ ಒಡೆಯುವುದಿಲ್ಲ ಗಿಡಕೆ.
ಸಹಿಯಾಗಿ ಹಸಿಯಾಗಿ ಸಂತೋಷ ಮನಕೆ.

### ೧೬೦. ಯೋಜನೆಯ ಫಲಶ್ರುತಿ

ಇಪ್ಪತ್ತು ವರುಷ ಮಾಡಿದರು ಪ್ಲ್ಯಾನಿಂಗು
ಬಡ ಜನರ ಬಾಯೊಳಗೆ ಹಾಕಿದರು ಹಿಂಗು.
ಮಧ್ಯರಾತ್ರಿಯ ತನಕ ಕೊಚ್ಚಿದರು ಜಂಬ.
ಬೆಳಕು ಹರಿಯಲು ಎಲ್ಲವೂ ಅಗಡಬಂಬ.

### ೧೬೧. ನಾಯಕನ ಬದಲಾವಣೆ

ಇಪ್ಪತ್ತು ಶಾಸಕರು ಮಾಡಿ ದಸ್ಕತ್ತು
ಸಚಿವ ಸಂಪುಟಕೆ ತಿನಿಸದರು ಬಿಸ್ಕತ್ತು
ಅರೆ ನಿಮಿಷದಲಿ ಕೆಳಗೆ ಬಿದ್ದನು ಧುರೀಣ.
ಮಂತ್ರಿಮಂಡಲದೊಳಗೆ ಬಂತು ಹೊಸ ಕೋಣ.

### ೧೬೨. ಅಮೇರಿಕ ಮತ್ತು ರಶಿಯಾ

ಇಬ್ಬರೂ ಬಾಯ್ತುಂಬ ವೀಳ್ಯದೆಲೆ ಹಾಕಿ
ಮಾತಾಡಿದರೆ ಧರಿಸಬೇಕಿಲ್ಲ ಖಾಕಿ.
ಕಾರ್ಮೋಡವು ಚದುರಿ ಧರೆಗಿಲ್ಲ ತ್ರಾಸ.
ಡೊಂಕು ತಿದ್ದುವ ಕೊಂಕು ಗೆರೆ ಮಂದಹಾಸ.

### ೧೬೩. ಇಬ್ಬರೂ ಹೊರಡೋಣ

ಇಬ್ಬರೂ ಹೊರಡೋಣ ಚಂದ್ರಲೋಕಕ್ಕೆ
ಕೈಗೆ ಸಿಕ್ಕುವವು, ಸಖಿ, ಹಲವಾರು ಚಿಕ್ಕೆ,
ಚಿಕ್ಕೆ ಏತಕೆ ನನಗೆ ? ಯಾವ ಉದ್ಧಾರ ?
ನನಗೆ ಬೇಕಾದದ್ದು ಬೆಳ್ಳಿ ಬಂಗಾರ.

### ೧೬೪. ಆತ್ಮವಿಶ್ವಾಸ

ಇರಬೇಕು ಕವಿಗಳಿಗೆ ಆತ್ಮವಿಶ್ವಾಸ.
ಹೂವಾಗಿ ನಿತ್ಯ ಕಂಗೊಳಿಸುವುದು ಶ್ವಾಸ.
ಕಾವ್ಯಮಯವಾಗುವುದು ಪ್ರತಿಯೊಂದು ಸ್ನಾಯು.
ಸಂದೇಹ ಮೂಡಿದರೆ ಅರ್ಧಾಂಗವಾಯು.

### ೧೬೫. ಜನನ

ಇರುಳಬ್ಬೆ ಬೆಸಲಾಗೆ ಕೂಸು ಮುಂಜಾವು.
ಮುಗುಳುನಗೆ ಬೀರಿ ಸತ್ಕರಿಸಿದವು ಹೂವು.
ಗಿಡ್ಡಬಳ್ಳಿಗಳು ಹಾಡಿದವು ಮಧುರ ಕವನ.
ಬಾಲರವಿ ಹಣಹಣಕಿ ನೋಡಿದನು ಜನನ.

## ೧೬೬ ಕವನ

ಇರುಳು ಹಗಲಾಗುವುದು ಓದಿದರೆ ಕವನ,
ಈ ಹಗಲಿನಲಿ ಕಾಣುವುದು ಸಕಲ ಭುವನ
ನೋಡಲಿಕೆ ಮಾತ್ರ ಕಣ್ಣಿರಬೇಕು ಬೇರೆ,
ಹಗಲಿನಲ್ಲೂ ಕಾಣುವವು ಕೋಟಿ ತಾರೆ.

## ೧೬೭. ಇಲಿಗಳನು ಹಿಡಿಯುವಿರಿ

ಇಲಿಗಳನು ಹಿಡಿಯುವಿರಿ ಹೆಗ್ಗಣವ ಬಿಟ್ಟು,
ಹೀಗೆನಲು ಮಂತ್ರಿಗಳು ಮಾಡಿದರು ಸಿಟ್ಟು.
ಹೆಗ್ಗಣವು ಈ ಚುನಾವಣೆಗಾಗಿ ಫಂಡು
ನೀಡಲಿದೆ ಹೊಟ್ಟೆ ತುಂಬವ ತನಕ ಉಂಡು.

## ೧೬೮. ಮುರಕುಂಡಿ

ಇಲ್ಲಿದ್ದ ಮುರಕುಂಡಿಯೂ ಅಲ್ಲಿ ನಡೆದು
ಜಯಘೋಷ ಮಾಡಿದನು ಬಾವುಟವ ಹಿಡಿದು.
ಮುರಕುಂಡಿ ಈಗ್ಗೆ ನಮ್ಮೂರಿನ ಪುಢಾರಿ
ಮತ್ತೆ ಪ್ರತಿ ದಿವಸ ಕುಡಿಯುವನು ಮಿತಿ ಮೀರಿ.

## ೧೬೯. ಇವನ ಹಾರಾಟ

ಇಲ್ಲಿಂದ ಅಲ್ಲಿ ಹಾರಿದ್ದಾಯ್ತು ವ್ಯರ್ಥ.
ಶಾಸಕನ ನೆಲಸಿಗದೆ ಪೂರಾ ಅನರ್ಥ.
ತೆಳ್ಳಗಾದನು ಅಂತರಾಳದಲಿ ತೇಲಿ.
ಊರ ಮಕ್ಕಳು ನಿತ್ಯ ಮಾಡುವರು ಗೇಲಿ.

## ೧೭೦. ಇಲ್ಲಿಂದ ಅಲ್ಲಿ

ಇಲ್ಲಿಂದ ಅಲ್ಲಿ ಹಾರಿದ ಪ್ರಾಣಿ ಈತ.
ಕೊನೆಗೆ ನೋಡಿದರೆ ಮನೆಯಲ್ಲಿಯೇ ಕೂತ
ಹಾರಾಟದಿಂದ ಸಿಗಲಿಲ್ಲ ಬೇಕಾದ್ದು
ಮಲಗಿಕೊಂಡನು ಮತ್ತೆ ಮಾಡದಯೆ ಸದ್ದು.

### ೧೭೧. ಪಕ್ಷಾಂತರಿಯ ದುರ್ದಶೆ

ಇಲ್ಲಿಂದ ಅಲ್ಲಿ ಹಾರಿದ ಬಳಿಕ ಪಾಪ
ಚೆನ್ನಾಗಿ ಥಳಿಸಿ ಜನ ಹಾಕಿದರು ಶಾಪ.
ಅಲ್ಲಿಯೂ ಸಿಗಲಿಲ್ಲ ಪಂಜಕಜ್ಜಾಯ
ಕುಡಿ ಎಂದು ನೀಡಿದರು ಬೇವಿನ ಕಷಾಯ.

### ೧೭೨ ಇವನ ಹಾರಾಟ

ಇಲ್ಲಿಂದ ಅಲ್ಲಿ ಹಾರಿದ ಬಳಿಕ ಇವರು
ರಾಜಕೀಯಕೆ ಬಂತು ವಿಪರೀತ ಬೆವರು
ಭಾರತಾಂಬೆಗೆ ಪಾಪ ಜ್ವರ ಮತ್ತೆ ಕೆಮ್ಮು
ಬಾಪೂಜಿಯವರಿಗೂ ವಿಪರೀತ ದಮ್ಮು.

### ೧೭೩. ಈ ಭೂಪನಿಗೆ

ಇಲ್ಲಿಂದ ಅಲ್ಲಿ ಹಾರಿದ ಭೂಪ ಇವನು.
ಕೊನೆಯವರೆಗೂ ಪಾಪ ಸಿಗಲಿಲ್ಲ ಪವನು.
ಸಿಕ್ಕಿದ್ದು ಒಂದಿಷ್ಟು ತಾಮ್ರ ಹಿತ್ತಾಳಿ.
ಬೆಂಗಳೂರಿನ ರಾಜಮಾರ್ಗಗಳ ಗಾಳಿ.

### ೧೭೪. ಹಾರಾಟದ ಫಲಶ್ರುತಿ

ಇಲ್ಲಿಂದ ಅಲ್ಲಿ ಹಾರಿದ ಬಳಿಕ ಈತ
ಆಗಿಬಿಟ್ಟನು ರಾಜಕೀಯದಲ್ಲಿ ಪ್ರೇತ.
ಕುನ್ನಿಯೂ ಈಗ್ಗೆ ನೋಡುವದಿಲ್ಲ ಮೂಸಿ.
ಆಗಬಾರದು ಯಾರು ಇಂಥ ಪರದೇಶಿ.

### ೧೭೫. ಸೇರಿದನು ದಿಲ್ಲಿ

ಇಲ್ಲಿಂದ ಈ ಜಾಣ ಹಾರಿದನು ಅಲ್ಲಿ.
ಅಲ್ಲಿ ಸರ್ಕಸ್ಸು ಹೂಡಿ ಸೇರಿದನು ದಿಲ್ಲಿ.
ಇವನಂತೆ ಇನ್ನೊಬ್ಬ ಹಾರಿದ್ದು ವ್ಯರ್ಥ.
ನೆರವು ನೀಡಲೇ ಇಲ್ಲ ಆ ಸೃಷ್ಟಿಕರ್ತ.

## ೧೭೬. ಚಂದ್ರರೋಹಣ

ಇಲ್ಲಿಂದಲೇ ನೋಡಿ ನಲಿವುದನು ಬಿಟ್ಟು,
ಚಂದ್ರಲೋಕಕೆ ಹಾರಿದನು ನಮ್ಮ ಕಿಟ್ಟು.
ಖಿನ್ನನಾದನು ಶಶಿಯ ನಿಜ ರೂಪ ಕಂಡು;
ಕಾಣಿಸಿತು ಆತನಿಗೆ ಬರಿ ಕಲ್ಲು ಗುಂಡು.

## ೧೭೭. ಚುಟಕದೊಳಗೆ

ಇಲ್ಲಿಲ್ಲ ಕೊಡ ತುಂಬ ಕಾವ್ಯಸಂತುಷ್ಟಿ
ಚುಟಕದಲಿ ಹಿಡಿಯುವುದು ಬರಿ ಒಂದು ಮುಷ್ಟಿ
ಹೊಟ್ಟೆಬಾಕರಿಗಿಲ್ಲ ತಿಳಿಮಾತ್ರ ಜಾಗ.
ಜಾಸ್ತಿ ತಿಂದರೆ ಅಜೀರ್ಣದ ಹೊಲಸು ರೋಗ.

## ೧೭೮. ಹೊಸ ರಾಜಕೀಯ

ಇಲ್ಲುಂಟು ನಮ್ಮ ನಾಡಿನ ಆಗು–ಹೋಗು
ರಾಜಕಾರಣಿಗಳಿಗೆ ದಿನಕೊಂದು ಸೋಗು.
ದಿನಹೋದ ಹಾಗೆಲ್ಲ ಒಂದೊಂದು ವೇಷ.
ರಂಗಮಂಟಪದೊಳಗೆ ಬರಲಿ ಸಂತೋಷ.

## ೧೭೯. ನಾಡಿನ ಆಗು–ಹೋಗು

ಇಲ್ಲುಂಟು ನಮ್ಮ ನಾಡಿನ ಆಗು–ಹೋಗು
ರಾಜಕಾರಣಿಗಳಿಗೆ ದಿನಕೊಂದು ಸೋಗು.
ದಿನಹೋದ ಹಾಗೆಲ್ಲ ಒಂದೊಂದು ವೇಷ.
ರಂಗಮಂಟಪದೊಳಗೆ ಬರಲಿ ಸಂತೋಷ.

## ೧೮೦. ಅಣುಯುಗದ ಪ್ರಗತಿ

ಇಲ್ಲುಂಟು ನೋಡು ಸಖಿ, ಅಣುಯುಗದ ಕೆಂಡ
ಇದರಿಂದ ಭಸ್ಮವಾಗವುದು ಬ್ರಹ್ಮಾಂಡ
ಇದಕೆನ್ನುವರು ಮನುಜ ಸಾಧಿಸಿದ ಪ್ರಗತಿ
“ಹೇಸಿಗೆಯ ಕೆಲಸ” ಎಂದಳು ನನ್ನ ಗೆಳತಿ.

### ೧೮೧. ನಮ್ಮೂರ ಪುಢಾರಿ

ಇವನ ಕೈಯೊಳಗುಂಟು ಉತ್ಕರ್ಷ ಕೀಲಿ.
ಬೆಂಗಳೂರಿನ ತನಕ ಈತನ ವಶೀಲಿ
ಮುಖ್ಯಮಂತ್ರಿಗೆ ವೋಟುಗಳ ತರಿಸಿಕೊಟ್ಟು
ಹಿಡಿದುಬಿಟ್ಟನು ಸಚಿವ ಸಂಪುಟದ ಜುಟ್ಟು.

### ೧೮೨. ಮಾತು

ಇವನ ಬಾಯಿಂದ ಹೊರ ಬೀಳುವುದು ಕೆಂಡ.
ಈ ತರದ ಬಿಸಿ ಮಾತುಗಳು ಬ್ರಹ್ಮದಂಡ
ನಮಗೆ ಬೇಕಾದದ್ದು ಉರಿಯಲ್ಲ, ಹಣತೆ.
ಹಣತೆ ಮಿನುಗಿದರೇನೆ ಜೀವನಕೆ ಘನತೆ.

### ೧೮೩. ಹಾಲಕ್ಕಿ ಒಕ್ಕಲಿಗ

ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ.
ಆದರೂ ಈತನಿಗೆ ಹೆಸರು ಹಾಲಕ್ಕಿ!
ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ.
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ.

### ೧೮೪. ಇವನ ಕಾರು

ಇವನ ಹತ್ತಿರ ಉಂಟು ಒಂದು ಹಳೆ ಕಾರು.
ನಿಂತುಬಿಟ್ಟಿತು ನಡೆದು ಮೈಲು ಬರಿ ಮೂರು
ಕುಡಿಯಲಿಕೆ ಬೇಕು ಪೆಟ್ರೋಲು ವಿಪರೀತ.
ಎಣ್ಣೆ ಹಾಕಿದ ಬಳಿಕ ಮೂಗಿನಲಿ ನಾತಾ.

### ೧೮೫. ಅಂಕೋಲೆಯವ

ಇವನು ಅಂಕೋಲೆಯವ, ಮುದುಕಾಗಿ ಸತ್ತ
ಇವನ ಕೈಯೊಳಗಿತ್ತು ಚೌಪದಿಯ ಬೆತ್ತ.
ಹಾವಳಿಯನೆಬ್ಬಿಸಿದ ಈ ಬೆತ್ತದಿಂದ
ಕಹಿ ವಿಡಂಬನ ಗುಳಿಗೆ ಕನ್ನಡಕೆ ತಂದ.

## ೧೮೬. ರಂಗನ ಪರಾಕ್ರಮ

ಇವನಂತು ಏರಿದನು ಶಿಖರ ಉತ್ತುಂಗ.
ಒಂದೆ ನೆಗೆತಕೆ ಮೇಲೆ ಹಾರಿದನು ರಂಗ.
ಕೊನೆಯವರೆಗೂ ಇಲ್ಲ ಯಾವ ತಲೆಶೂಲಿ.
ಈ ಪರಾಕ್ರಮಕೆ ರಾಜ ಕಾರಣ ವಶೀಲಿ.

## ೧೮೭. ಮಾಡಿದ್ದು ಸೊನ್ನೆ

ಇವನು ಆರಿಸಿ ಬಂದು ಮಾಡಿದ್ದು ಸೊನ್ನೆ.
ಆದರೂ ಕುರ್ಚಿ ಬೇಕಂತೆ ಇನ್ನೊಮ್ಮೆ.
ಏನು ಪರವಾ ಇಲ್ಲ, ಕೊಟ್ಟು ಬಿಡಿ ಅಂದೆ.
ಸರಕಾರಿ ಪಕ್ಷ ಜನತೆಯ ತಾಯಿ ತಂದೆ.

## ೧೮೮. ಚುಟುಕುಗಳ ಬಾಣ

ಇವನಾರು ಗೊತ್ತಾಯ್ತೆ? ಆಧುನಿಕ ದ್ರೋಣ.
ಇವನ ಬತ್ತಳಿಕೆಯಲಿ ಚುಟಕುಗಳ ಬಾಣ.
ಪೆನ್ಸಿಲಿನ ತುದಿಯಿಂದ ಬಾಣಗಳ ಹೂಡಿ
ಹೊರಗೆ ಹಾಕಿದನು ನವಭಾರತದ ರಾಡಿ.

## ೧೮೯. ವಿದ್ವಾಂಸ

ಇವನಾರು ಗೊತ್ತಾಯ್ತೆ? ದೊಡ್ಡ ವಿದ್ವಾಂಸ.
ಕಾವ್ಯವನ್ನೂ ಸುಲಿದು ಮಾಡುವನು ಧ್ವಂಸ.
ಕವಿ ಮಾತನಾಡುವುದು ದೇವತೆಯ ಭಾಷೆ.
ಈ ಭಾಷೆಯೊಳಗುಂಟು ಮಾನವನ ಆಶೆ.

## ೧೯೦. ನಮ್ಮೂರ ಶಾಸ್ತ್ರಿ

ಇವನಾರು ಗೊತ್ತಾಯ್ತೆ? ನಮ್ಮೂರ ಶಾಸ್ತ್ರಿ
ಹೊಸ ಭವಿಷ್ಯವ ನುಡಿದು ಮಾಡುವನು ಇಸ್ತ್ರಿ
ಇಸ್ತ್ರಿ ಮಾಡಿದ ಮಾತು ಅತ್ಯಂತ ಚೊಕ್ಕ
ದಕ್ಷಿಣೆಯ ನೀಡುವರು ಯೋಗ್ಯತೆಗೆ ತಕ್ಕ.

### ೧೯೧. ಚಕ್ರಬಡ್ಡಿ

ಇವನಾರು ಗೊತ್ತಾಯ್ತೆ? ನಮ್ಮೂರ ಸೆಟ್ಟಿ
ಬರಗಾಲ ಬಂದರೂ ಮತ್ತಷ್ಟು ಗಟ್ಟಿ.
ಯಾವಾಗಲೂ ಇವನ ವ್ಯಾಪಾರ ರೋಕು.
ಸಾಲ ಕೊಟ್ಟರೆ ಚಕ್ರಬಡ್ಡಿಯೇ ಬೇಕು.

### ೧೯೨. ನೂತನ ಗುಮಾಸ್ತ

ಇವನಾರು ಗೊತ್ತಾಯ್ತೆ? ನೂತನ ಗುಮಾಸ್ತ.
ಸರಾರಿ ಸೌಧದೊಳಗಿನ ಒಬ್ಬ ಬೆಸ್ತ.
ಬಹಳ ನಿಪುಣತೆಯಿಂದ ಹಾಕುವನು ಗಾಳ.
ಎಂದೆಂದಿಗೂ ಮೀನಿಗಿಲ್ಲ ದುಷ್ಕಾಳ.

### ೧೯೩. ನೂತನ ಪುಢಾರಿ

ಇವನಾರು ಗೊತ್ತಾಯ್ತೆ? ನೂತನ ಪುಢಾರಿ.
ಎಂದಿಗೂ ಇವನು ಬೀಳುವುದಿಲ್ಲ ಜಾರಿ.
ಬೇಕಾದ ಹಾಗೆ, ಸಖಿ, ಹಾಕುವನು ಲಾಗ.
ಮಾಡಬೇಕಾಗಿಲ್ಲ ಯಾವುದೂ ತ್ಯಾಗ.

### ೧೯೪. ನೂತನ ಪುಢಾರಿ

ಇವನಾರು ಗೊತ್ತಾಯ್ತೆ? ನೂತನ ಪುಢಾರಿ.
ಈತನಿಗೆ ಅನ್ನುವರು ಹೊಸ ವೇಷಧಾರಿ.
ಇಸ್ತ್ರಿ ಮಾಡಿದ ಟೋಪಿ ಸಂಪೂರ್ಣ ಓರೆ.
ನಿತ್ಯವೂ ಸಂಜೆ ಕೆಂಪೇರುತಿದೆ ಮೋರೆ.

### ೧೯೫. ಆಸ್ಥಾನ ಕವಿ

ಇವನಾರು ಗೊತ್ತಾಯ್ತೆ? ಪೋಯಟ್-ಲಾರೆಟ್ಟು.
ಸಾಹಿತ್ಯ ಲೋಕದಲಿ ನೂತನ ರೊಕೆಟ್ಟು
ಇವನ ಕಾವ್ಯದ ಬಣ್ಣ ಆಕಾಶಕೇರಿ
ಮರುದಿವಸ ಪಾತಾಳದಲಿ ಬಿತ್ತು ಜಾರಿ.

### ೧೯೬. ಮಂತ್ರಿಯ ನೆಂಟ

ಇವನಾರು ಗೊತ್ತಾಯ್ತೆ? ಮಂತ್ರಿಗಳ ನೆಂಟ
ಮೇಲೇರಿದನು ರಾಜಕಾರಣದ ಗುಂಟ.
ಕಂತ್ರಾಟುಗಳ ಗಳಿಸಿ ಟೆಂಡರಿನ ಹೊರಗೆ
ನಿತ್ಯವೂ ನಮಿಸಿದನು ಕೊಟ್ಟ ನರಹರಿಗೆ.

### ೧೯೭. ಇವನೊಂದು ರತ್ನ

ಇವನಾರು ಗೊತ್ತಾಯ್ತೆ? ಇವನೊಂದು ರತ್ನ
ಬೆಂಗಳೂರಿಗೆ ಹೋಗಿ ನಾನಾ ಪ್ರಯತ್ನ.
ಸರಕಾರಿ ಸೌಧದಲಿ ಬರಿ ಒಂದು ದಿವಸ
ಪತ್ತೆಯಾಗದ ಹಾಗೆ ಮುಗಿಸಿದನು ಕೆಲಸ.

### ೧೯೮. ಉಪಮಂತ್ರಿ

ಇವನಾರು ಗೊತ್ತಾಯ್ತೆ? ಉಪಮಂತ್ರಿ ತಾನೆ.
ತುಂಬಿ ಹೋಯಿತು, ಇವನ ಖಾಸಗಿ ಖಜಾನೆ
ಪ್ರತಿಯೊಂದು ವಿಷಯದಲಿ ಅತ್ಯಂತ ಚುರುಕು.
ಇವನ ಯೋಜನೆಗೆ ಬೀಳುವುದಿಲ್ಲ ಬಿರುಕು.

### ೧೯೯. ಹಾಕುವನು ಗಾಳ

ಇವನಾರು ಗೊತ್ತಾಯ್ತೆ? ಮಂತ್ರಿಗಳ ನೆಂಟ.
ಹನ್ನೆರಡು ತಾಸು ಸಚಿವಾಲಯದ ಗುಂಟ.
ಭೇಟಿಗರು ಬಂದಾಗ ಹಾಕುವನು ಗಾಳ.
ಬರಗಾಲದಲ್ಲಿಯೂ ಇಲ್ಲ ದುಷ್ಕಾಳ.

### ೨೦೦. ರಗಳೆಯ ಮನುಷ್ಯ

ಇವನಾರು ಗೊತ್ತಾಯ್ತೆ? ರಗಳೆಯ ಮನುಷ್ಯ
ಮೂಗಿನಲಿ ಬೆರಳಿಟ್ಟು ಸೇದುವನು ನಸ್ಯ.
ಊರೆಲ್ಲ ಭಾನಗಡಿ, ತಕರಾರು ರಗಳೆ,
ಅವನ ಸುದ್ದಿಗೆ ಹೋಗಬೇಡ ನೀ ಮಗಳೆ.

### ೨೦೧. ವಿಘ್ನ ಸಂತೋಷಿ

ಇವನಾರು ಗೊತ್ತಾಯ್ತೆ? ವಿಘ್ನ ಸಂತೋಷಿ
ಉಳಿದವರು ದುಃಖಿಸಲು ಆನಂದ ರಾಶಿ.
ಗೆಳೆಯ ಮೇಲೆರಿದರೆ ಈತನಿಗೆ ದುಃಖ
ಈ ತರದ ಮನುಜ ನಿಮ್ಮೂರಲ್ಲಿ ಸಿಕ್ಕ.

### ೨೦೨. ರಂಗಪ್ಪ ವಾಲಿ

ಇವನಾರು ಗೊತ್ತಾಯ್ತೆ? ರಂಗಪ್ಪ ವಾಲಿ.
ಎಂದಿಗೂ ಇವನು ಬೀಳುವುದಿಲ್ಲ ಖಾಲಿ.
ಯಾವಾಗಲೂ ಮಂತ್ರಿಗಳ ಜೊತೆಗೆ ಇದ್ದು
ಕೆಲಸ ಒಳಗಿಂದೊಳಗೆ! ಹೊರಗಿಲ್ಲ ಸದ್ದು!

### ೨೦೩. ಹೊಸ ಪ್ರಿನ್ಸಿಪಾಲರು

ಇವನಾರು ಗೊತ್ತಾಯ್ತೆ? ಹೊಸ ಪ್ರಿನ್ಸಿಪಾಲ.
ತಾಸು ತಾಸಿಗೆ ಕುಡಿಯುವನು ಕೊಕ್ಕೊ-ಕೋಲಾ.
ಕುಡಿದಷ್ಟು ಮಾತಾಡಲಿಕೆ ಬಹಳ ಜೋರು.
ಅರ್ಥವಾಗದವ ಎಂದು ಬಂತು ತಕರಾರು.

### ೨೦೪. ನಮ್ಮೂರ ಅಳಿಯ

ಇವನಾರು ಗೊತ್ತೆ? ನಮ್ಮೂರ ಜಾಮಾತ
ಬುಷ್-ಕೋಟು ಧರಿಸಿಯೂ ತಲೆಬುರುಡೆ ಖೋತಾ.
ಪ್ರತಿದಿವಸವೂ ಕುಡಿಯಲಿಕೆ ಬೇಕು ಭರ್ತಿ.
ದೊಡ್ಡವರ ಅಳಿಯನೆಂಬುದೆ ಇವನ ಕೀರ್ತಿ.

### ೨೦೫. ಇವನಾರು ಗೊತ್ತೆ

ಇವನಾರು ಗೊತ್ತೆ? ಪೋಕರಿ ಪಾಂಡುರಂಗ.
ಹಳ್ಳಿಹಳ್ಳಿಗೆ ಹೋಗಿ ಕೊಳ್ಳುವನು ಶೇಂಗಾ.
ಶೇಂಗಾದ ದರ ಏರಿಸಿದನು ಈ ಜಾಣ.
ಆಮೇಲೆ ಹಣ ಕೊಡದೆ ಹಿಂಡಿದನು ಪ್ರಾಣ.

## ೨೦೬. ಮಾಜಿ ಮಂತ್ರಿಗಳು

ಇವನಾರು ಗೊತ್ತೆ? ರಾಜ್ಯದ ಮಾಜಿ ಮಂತ್ರಿ.
ಈತನಿಗೆ ಈಗಿಲ್ಲ ಬಾಜಾ ಭಜಂತ್ರಿ
ಪಾಪ! ಮನೆಯಲಿ ಕೂತು ಊದೂದಿ ಪೀಪಿ
ಗತವೈಭವ ನೆನೆದು ಕುಡಿಯುವನು ಕಾಫಿ.

## ೨೦೭. ಕೆನಡಿಯವರ ಮೃತ್ಯು

ಇವನಿಗೂ ಬಂತು ಗಾಂಧೀಜಿಯವರ ಸಾವು
ಕಳಚಿ ಹೋಯಿತು, ಮಗನೆ, ಇನ್ನೊಂದು ಹೂವು
ಬಡವಿಯಾದಳು ಪೃಥವಿ, ನರನ ಪ್ರಾರಬ್ಧ!
ವಿಶ್ವನೆಮ್ಮದಿ ಆಗದಿರಲಿ ನಿಶ್ಯಬ್ದ.

## ೨೦೮. ಇವನ ತತ್ವಜ್ಞಾನ

ಇವನು ತತ್ವಜ್ಞಾನದಲಿ ಮುಳುಗಿ ಕೊನೆಗೆ
ಲಕ್ಷಗಟ್ಟಲೆ ಕಳಿಸಿದನು ತನ್ನ ಮನೆಗೆ.
ಈತನಿಗೆ ತನ್ನ ಮನೆ ಎನ್ನುವುದೆ ದೇಶ.
ದೇಶ ಸೇವೆಯೆ ಇವನ ಮೂಲ ಉದ್ದೇಶ.

## ೨೦೯. ಚಂಡಿಕಾದತ್ತ

ಇವನಾರು ಗೊತ್ತಾಯ್ತೆ ? ಚಂಡಿಕಾದತ್ತ
ಬಂಗಾಲದಿಂದ ಬಂದಿದ್ದಾನೆ ಇತ್ತ.
ನಿಮಿಷ ನಿಮಿಷಕೆ ಬೇಕು ಹದಿನೈದು ಕವಳ.
ಆದರೂ ಅನ್ನುವನು; ಇದು ಅಲ್ಲ ಬಹಳ.

## ೨೧೦. ಬುರುಡೆ ಭೀಮಣ್ಣ

ಇವನಾರು ಗೊತ್ತಾಯ್ತೆ? ಬುರುಡೆ ಭೀಮಣ್ಣ
ಇವನು ಮಾಡುವ ಕಾರ್ಯಗಳು ಅಲ್ಲ ಸಣ್ಣ.
ಎಲ್ಲವೂ ಬಾಯಿ ಮಾತಿನ ದೊಡ್ಡ ಓಘ.
ಗುಡುಗು ಮಿಂಚಿನ ಜತೆಗೆ ಬಿದ್ದಂತೆ ಮೇಘ.

### ೨೧೧. ಬಗಲ ಬಚ್ಚಾ

ಇವನಾರು ಗೊತ್ತೆ? ಸಚಿವರ ಬಗಲ ಬಚ್ಚಾ.
ಬೇರೆ ಯಾರೂ ಇಲ್ಲ ಇವನಷ್ಟು ಲುಚ್ಚಾ.
ಇವನ ಮುಖ ನೋಡಿದರೆ ಬಹಳ ನಾಜೂಕು
ಈ ಪ್ರಜಾರಾಜ್ಯದಲ್ಲಿ ಇಂಥವರೆ ಬೇಕು.

### ೨೧೨. ದಿಲ್ಲಿಯ ಯಾತ್ರೆ

ಇವನು ದಿಲ್ಲಿಗೆ ಹೋಗಿ ಬಂದರೂ ಪಾಪ.
ಸೀಟು ಸಿಗಲಿಲ್ಲವೆನ್ನುವುದು ಅನುತಾಪ.
ಬೆಂಗಳೂರಿನ ಕುರ್ಚಿಯೂ ಸಿಗದೆ ಹೋಯ್ತು.
ಇಲ್ಲಿಂದ ಅಲ್ಲಿ ಜಿಗಿದುದು ವ್ಯರ್ಥವಾಯ್ತು.

### ೨೧೩. ನಮ್ಮ ಅಡಿಗೆ ಭಟ್ಟ

ಇವನು ಸರ್ವೋತ್ತಮನು ; ಅಲ್ಲ ಸಾಮಾನ್ಯ
ಇವನ ಕೈಯಲಿ ನೀವು ಕೊಡಬೇಕು ಧಾನ್ಯ.
ಸರಿಯಾಗಿ ಬೇಯಿಸದೆ ಮಾಡುವನು ಅಡಿಗೆ
ಪಾತ್ರೆ ತುಂಬುವ ತನಕ ಮಾತು ಅಡಿಗಡಿಗೆ.

### ೨೧೪. ಇವನು ಮಾಡಿದ್ದೇನು

ಇವನು ಮಾಡಿದ್ದೇನು ಆಯುಷ್ಯದಲ್ಲಿ ?
ಸಂಜೆಯಾಗಲು ಸುತ್ತಿದನು ಗಲ್ಲಿಗಲ್ಲಿ.
ತಂದೆ ಮಾಡಿದ ಆಸ್ತಿ ಕೈಯೊಳಗೆ ಬಂತು.
ಸುಮ್ಮನಿರುವುದು ಹೇಗೆ ಈ ಜೀವ ಜಂತು ?

### ೨೧೫. ಇವನ ಪೂಜೆ

ಇವನು ಮಾಡುವ ಪೂಜೆ ಎರಡೆರಡು ತಾಸು.
ಕಳ್ಳಪೇಟೆಯ ಒಳಗೆ ಗಳಿಸುವನು ಕಾಸು.
ಭಗವಂತ ಈತನಿಗೆ ನಿತ್ಯವು ಪ್ರಸನ್ನ.
ಬಂಗಾರದಂಗಡಿಯಲ್ಲಿ ನೀಡುವನು ಅನ್ನ.

## ೨೧೬. ಬಹಳ ಚಂದ

ಇವನು ಮಾಡುವುದೆಲ್ಲವೂ ಬಹಳ ಚಂದ.
ಪ್ರತಿಯೊಂದು ಕೆಲಸದಲ್ಲೂ ಸ್ವಲ್ಪ ತಿಂದ.
ಇದಕ್ಕನ್ನಬೇಕು ಕಳವಲ್ಲ, ಕಮಿಷನ್ನು.
ಹೇಳಿದ್ದನಂತೆ ಗುರು; ಮಿತಿಯೊಳಗೆ ತಿನ್ನು.

## ೨೧೭. ಇವನ ಮಾತು

ಇವನು ಮಾತಾಡುವುದು ಅಲ್ಲ ಬರಿ ಸುಳ್ಳು
ಬೆರಸುವನು ಭರ್ತಿ ಸಕ್ಕರೆ ಮತ್ತೆ ಎಳ್ಳು.
ಇವನ ಸುಳ್ಳಿಗೆ ಉಂಟು ಭರ್ತಿ ಲಾಲಿತ್ಯ.
ಈ ಪರಿಸ್ಥಿತಿಯೊಳಗೆ ಬೇಕೇನು ಸತ್ಯ ?

## ೨೧೮. ಇವನು ರಚಿಸಿದ ಕವಿತೆ

ಇವನು ರಚಿಸಿದ ಕವಿತೆ ಮೂರು ಮೊಳ ಉದ್ದ.
ಇಲ್ಲಿಂದ ಅಲ್ಲಿಂದ ಪಂಕ್ತಿಗಳ ಕದ್ದ
ಕೊನೆಯವರೆಗೆ ಇದ್ದರೂ ಇದರ ಶಾಯಿ.
ನಿಮಿಷದಲಿ ಹರಿದುಹೋಯಿತು ಈ ರಜಾಯಿ.

## ೨೧೯. ಇವರ ಕಿಸೆಯೊಳಗೆ

ಇವರ ಕಿಸೆಯೊಳಗಿತ್ತು ಕೇಂದ್ರ ಸರಕಾರ.
ಜೇಬುಗಳ ಬಿಸಿ ಮಾಡಿ ಹಾಕಿದರು ಹಾರ.
ಇದರ ಫಲವಾಗಿ ಗಳಿಸಿದರು ದಶಕೋಟಿ
ಹೀಗೆ ಹಾಕಿದರು ಜನಕೋಟಿಗಳ ಲೂಟಿ.

## ೨೨೦. ಅವಳಿ ಜವಳಿ

ಇವರ ಪ್ರೀತಿಯ ಮೊಗ್ಗು ಮಿತಿ ಮೀರಿ ಅರಳಿ.
ಬೆಳದಿಂಗಳಲಿ ಹುಟ್ಟಿದವು ಅವಳಿ ಜವಳಿ
ಹಾಲು ಸಕ್ಕರೆ ಕಾಳು ಎಲ್ಲವೂ ತುಟ್ಟಿ
ಈ ಅವಳಿ ಜವಳಿ ಆಗುವುದೆಂತು ಗಟ್ಟಿ.

## ೨೨೧. ಇವರ ಸಮತಾವಾದ

ಇವರ ಸಮತಾವಾದ ಕೃತಿಗಿಳಿದು ಮೊನ್ನೆ
ಸಾಮಾನ್ಯ ಜನರ ಪಾಲಿಗೆ ಬಂತು ಸೊನ್ನೆ
ಸರಕುಗಳ ಬೆಲೆಯೇರಿ ಬಂಡವಾಳ ಶಾಹಿ
ಮತ್ತಷ್ಟು ಅಗಲಗೊಳಿಸಿತು ತನ್ನ ಬಾಯಿ.

## ೨೨೨. ಗಾಳಿಯಲಿ ಘೋಷ

ಇವರ ಸಮತಾವಾದ ಗಾಳಿಯಲಿ ಘೋಷ.
ಈ ಘೋಷ ಕೇಳಿ ಬಡವರಿಗೆ ಸಂತೋಷ
ವೋಟು ಕೊಟ್ಟರು ಭರ್ತಿ ನಂಬಿ ವ್ಯಾಖ್ಯಾನ.
ಮುಂದೆ ಸಮತಾವಾದ ಆಯ್ತು ಆಖ್ಯಾನ.

## ೨೨೩. ಇವರ ಸರಕಾರ

ಇವರ ಸರಕಾರವಾಯಿತು ಒಂದು ದಂಧೆ.
ಬೆಂಗಳೂರಿಗೆ ಹೋಗಿ ನಾ ನೋಡಿ ಬಂದೆ.
ಇದಕೆ ಕಾರಣ ಗಟ್ಟಿಯಲ್ಲ ಪ್ರತಿ ಪಕ್ಷ.
ಕಟ್ಟದೆಯೆ ಜನರು ಮಾಡಿದರು ದುರ್ಲಕ್ಷ.

## ೨೨೪. ಅಪರಾತಫರ

ಇವರು ಅಪರಾತಫರ ಮಾಡಿ ಪ್ರತಿಯೊಂದು
ಎಲ್ಲವನ್ನೂ ಕೊನೆಗೆ ಹಾಕಿದರು ತಿಂದು.
ಸಿಕ್ಕಿ ಬೀಳದ ಹಾಗೆ ಎಲ್ಲಾ ವ್ಯವಸ್ಥೆ
ದಕ್ಕಿಸಲು ಕಂಡು ಹಿಡಿದರು ಬೇರೆ ರಸ್ತೆ.

## ೨೨೫. ಗಾಂಧೀ ಜಯಂತಿ

ಇವರು ಆಚರಿಸಿವುದು ಗಾಂಧೀ ಜಯಂತಿ
ಭಾಷಣವ ಬಿಗಿದು ಪತ್ರಿಕೆಗಳಿಗೆ ತಂತಿ.
ಮರುದಿವಸ ಮುಂಜಾನೆ ನಿತ್ಯ ವ್ಯವಹಾರ
ಜೇಬಿನಲಿ ತೂರಿದರು ಜನರ ಉದ್ಧಾರ.

### ೨೨೬. ಮಾಡಿ ಒಳಸಂಚು

ಇವರೆಲ್ಲರೂ ಸೇರಿ ಮಾಡಿ ಒಳಸಂಚು
ಹಾಕಿಕೊಂಡರು ತಮ್ಮ ಮನೆಗಳಿಗೆ ಹಂಚು.
ಪಂಚವಾರ್ಷಿಕ ಮಂದಿರವು ಕೊನೆಗೆ ಸೋರಿ
ಕೋಟಿಗಟ್ಟಲೆ ಹೋಯ್ತು ನೀರೊಳಗೆ ಜಾರಿ.

### ೨೨೭. ವ್ಯವಹಾರ ಜ್ಞಾನ

ಇವರು ಎಂ.ಎ. ಪಾಸು ಮಾಡಿದ್ದು ವ್ಯರ್ಥ.
ಎಮ್ಮೆಗಳು ಹಿಂಡಲಿಕೆ ತಿಳಿಯದೆ ಅನರ್ಥ.
ಮೊದಲು ಬೇಕಾದದ್ದು ವ್ಯವಹಾರ ಜ್ಞಾನ.
ಇದರಿಂದ ಧರೆಯೊಳಗೆ ಧನ ಮತ್ತು ಮಾನ.

### ೨೨೮. ಮಾತು

ಇವರೇನು ಮಾಡುವರು ಮಾತಾಡಿ ಬಹಳ?
ಮಾತಾಡಿದರೆ ಬಹಳ ದೊರಕುವುದೆ ಹವಳ?
ದೇಶ ಹಾಳಾಯ್ತು, ಸಖಿ, ಮಾತು ಹೆಚ್ಚಾಗಿ,
ನಮಗೆ ಬೇಕಾದದ್ದು ಕೃತಿ ಎಂಬ ರಾಗಿ.

### ೨೨೯. ರಾಜಕೀಯ ಪುಢಾರಿಗಳು

ಇವರು ಕೊಟ್ಟಿದ್ದು ಕಣ್ಣೀರ ಶರಬತ್ತು
ಬಡವರಿಗೆ ಸಿಗಲಿಲ್ಲ ಬಾಯ್ತುಂಬ ತುತ್ತು.
ಎಲೆಯೊಳಗೆ ಬಡಿಸಿದರು ಮಾತಿನ ಚಿರೋಟಿ
ಎಲೆ ನೆಕ್ಕಿ ನೋಡಿದರು ಜನ ಕೋಟಿ ಕೋಟಿ.

### ೨೩೦. ನಡೆಸಿದರು ಕಾರು

ಇವರು ಪೂಂ ಪೂಂ ಮಾಡಿ ನಡೆಸಿದರು ಕಾರು.
ಸ್ವಲ್ಪ ನಡೆದಾಗ ಕಾರಿಗೆ ಬಂತು ಬೇರು
ಮುಂದೆ ಸಾಗದೆ ಪಾಪ ಅಲ್ಲಿಯೇ ಇತ್ತು.
ಕೊನೆಗೆ ಏನಾಯ್ತೆನ್ನುವುದು ಇಲ್ಲ ಗೊತ್ತು.

### ೨೩೧. ಕಾವ್ಯದ ಪ್ರಭೇದಗಳು

ಇವರು ಬರೆಯುವ ಕವಿತೆ ಗೊಬ್ಬರದ ಗುಂಡಿ.
ಅವರ ಕೃತಿ ರಚನೆ ಹಳಿ ತಪ್ಪಿರುವ ಬಂಡಿ.
ಕವಿಪುಂಗವನ ಮಹಾಕಾವ್ಯ ತಲೆಬೇನೆ.
ನವ್ಯ ಕಾವ್ಯದಲುಂಟು ಮೂರು ನಮೂನೆ.

### ೨೩೨. ಬಿಳಿ ಟೋಪಿ

ಇವರು ಬಿಳಿ ಟೋಪಿ ಧರಿಸುವುದೇಕೆ, ಅಣ್ಣ?
ಕರ್ರಗಲ್ಲವೆ ತಲೆಯ ಕೂದಲಿನ ಬಣ್ಣ.
ಬಿಳಿಯಿಂದ ಕಪ್ಪೆಲ್ಲವೂ ಮುಚ್ಚಿಹೋಗಿ
ತೋಳಗುವುದು ಅಮವಾಸ್ಯೆ ಬೆಳಗಿಂದಳಾಗಿ.

### ೨೩೩. ಕಾನೂನು

ಇವರು ಮಾಡಿದರು ದಿನಕೊಂದು ಕಾನೂನು.
ಕಾನೂನುಗಳ ಮೇಲೆ ಹಾರಿತು ಬಲೂನು.
ಕಾನೂನು ಹೆಚ್ಚಾಗಿ ಅಧಿಕಾರಿಗಳಿಗೆ
ಪ್ರತಿ ದಿವಸವೂ ಉಂಟು ಭರ್ತಿ ಕಿಸೆಯೊಳಗೆ.

### ೨೩೪. ಮಂತ್ರಿಗಳು

ಇವರು ಮಾಡುವುದು ಉದ್ಘಾಟನೆಯ ಕೆಲಸ.
ತಿಂಗಳಿಗೆ ಸಂಚಾರ ಹದಿನೆಂಟು ದಿವಸ.
ಉಳಿದ ಹನ್ನೆರಡು ದಿನ ಸತ್ಕಾರ ಸುಗ್ಗಿ.
ವ್ಯಾಪಾರಿಗಳು ಬಂದು ಬಡಿಸುವುದು ಹುಗ್ಗಿ.

### ೨೩೫. ಇವರ ಕೃತಿ

ಇವರು ಮಾಡುವದೆಲ್ಲವೂ ಆಗಡಬಂಬ.
ಗಾಳಿಯಲ್ಲೇ ಇವರು ನಿಲಿಸಿದರು ಕಂಭ.
ಜೋರು ಜೋರಾಗಿಯೇ ಹೊಡೆದರು ನಗಾರಿ.
ಮರಳಿದರು ಪ್ರಗತಿಯಾಯ್ತೆಂಬುದನು ಸಾರಿ.

## ೨೩೬. ಇವರ ಹೇಳಿಕೆ

ಇವರು ಹೇಳುವುದು ಒಂದಲ್ಲ, ನೂರಾರು.
ಕೊನೆಗೆ ನೋಡಿದರೆ ಕೃತಿ ಬರಿ ಪಾವು ಸೇರು,
ಈ ಪಾವು ಸೇರಿನಲಿ ನೀರು ಮುಕ್ಕಾಲು.
ಉಳಿದದ್ದು ಮಾತ್ರ ಆಗಿರಬಹುದು ಹಾಲು.

## ೨೩೭. ಇವರ ನಡತೆ

ಇವರು ಹೇಳುವುದೊಂದು ಮಾಡುವುದು ಬೇರೆ.
ಮುಂದುವರಿದರೆ ಹೀಗೆ ಪ್ರತಿಯೊಂದು ಸಾರೆ.
ಇಂಥ ಜನರಿಗೆ ಹೊಂಡದಲಿ ಹುಗಿಯಬೇಕು.
ಮೇಲೆ ಗೊಬ್ಬರ ಹಾಕಿ ಮುಚ್ಚಿದರೆ ಸಾಕು.

## ೨೩೮. ಇವರು ಹೇಳುವುದು

ಇವರು ಹೇಳುವುದು ಪೂರಾ ಮಾತು ಸುಳ್ಳು.
ಮತ್ತೆ ಕೇಳುವ ಜನಕೆ ಸಂಪೂರ್ಣ ಮಳ್ಳು.
ಈ ಮಳ್ಳು ಜನ ಸುಳ್ಳು ಮಾತುಗಳ ಕೇಳಿ
ವೋಟು ಕೊಟ್ಟರೆ ನಮ್ಮ ರಾಜ್ಯದ ದಿವಾಳಿ.

## ೨೩೯. ನಮ್ಮೂರ ಕೋಳಿ

ಇವಳ್ಯಾರು ಗೊತ್ತಾಯ್ತೆ? ನಮ್ಮೂರ ಕೋಳಿ.
ದಿನ ಹೋದ ಹಾಗೆ ಬಿಗಿಯಾಗುತಿದೆ ಜೋಳಿ.
ಆದರೂ ಇವಳ ಓಡಾಟ ಬಲು ಜೋರು.
ಪ್ರತಿ ದಿವಸವೂ ಉಂಟು ಅವರಿವರ ಕಾರು.

## ೨೪೦. ನಮ್ಮ ಸುಬ್ಬಕ್ಕ

ಇವಳ್ಯಾರು ಗೊತ್ತಾಯ್ತೆ? ನಮ್ಮ ಸುಬ್ಬಕ್ಕ
ಯಾವುದನು ಕೈಕೊಂಡರೂ ಬಹಳ ಚೊಕ್ಕ
ಮಂತ್ರಿಗಳು ಬಂದಾಗ ಹಿಡಿದು ಕಸಬರಿಗೆ
ಹೇಳಿದಳು; ಕಡಿಮೆಯಾಗಲಿ ಮೊದಲು ತೆರಿಗೆ.

### ೨೪೧. ಮುನ್ನಡೆವ ಮಹಿಳೆ

ಇವಳ್ಯಾರು ಗೊತ್ತುಂಟೆ? ಮುನ್ನಡೆವ ಮಹಿಳೆ.
ತುಟಿಗೆ ಲಿಪ್‌ಸ್ಟಿಕ್ ಹಚ್ಚಿ ಊದಿದಳು ಕಹಳೆ.
ಕಾಲೇಜು ಹುಡುಗರೆಲ್ಲಾ ಇವಳ ಸುತ್ತು
ಆದರೂ ಒಬ್ಬನಿಗೂ ಸಿಗಲಿಲ್ಲ ಮುತ್ತು.

### ೨೪೨. ಸಚಿವರ ಪತಾಕೆ

ಇವಳ್ಯಾರು ಗೊತ್ತುಂಟೆ? ಸಚಿವರ ಪತಾಕೆ
ಯಾವಾಗಲೂ ಅವರ ಕಾರಿನಲಿ ಈಕೆ.
ಸರಕಾರ ನೇಮಿಸಿತು ಮಹಿಳಾ ಕಮೀಟಿ.
ಅಧ್ಯಕ್ಷ ಪೀಠದಲಿ ಈ ಮಧುರ, ಬೇಟಿ

### ೨೪೩. ಉಳ್ಳಾಗಡ್ಡಿ

ಇವಳು ಉಳ್ಳಾಗಡ್ಡಿ, ಜೀವನ ವಿಚಿತ್ರ.
ಇವಳ ಮೈ ಎನ್ನುವುದು ಪತ್ರದಲಿ ಪತ್ರ.
ಇವಳು ನೊಂದರೆ ನಮ್ಮ ಕಣ್ಣಿನಲಿ ನೀರು.
ಇವಳು ಬೆಂದರೆ ಇಲ್ಲ ಯಾವ ತಕರಾರು.

### ೨೪೪. ಇವಳು ನೀಡುವ ಹಾಲು

ಇವಳು ನೀಡುವ ಹಾಲು ಅಗ್ಗ, ಗೊತ್ತಾಯ್ತೆ?
ಅಹುದಹುದು, ನಿಮಗೆ ಆಗುವುದಿಲ್ಲ ಪತ್ತೆ.
ಇವಳ ಹಾಲಿಗೆ ಬೆಣ್ಣೆಯೇ ಬರುವುದಿಲ್ಲಾ
ತಿಂದು ಹಾಕಿರಬೇಕು ಹಂಡೆಗಳ ದೆವ್ವ.

### ೨೪೫. ಪಾತರಗಿತ್ತಿ ಮತ್ತು ಗೂಬೆ

ಇವಳು ಪಾತರಗಿತ್ತಿ ಅವನು ಮುದಿಗೂಬೆ.
ಉಂಟೇನು ಇಂಥ ದಾಂಪತ್ಯದಲಿ ಶೋಭೆ?
ಶೋಭೆ ಇರದಿದ್ದರೂ ಮುದುಕನಿಗೆ ಆಟ.
ಮತ್ತೆ ಆಕೆಗೆ ಪಾಪ ಅಂಗಜನ ಕಾಟ.

## ೨೪೬. ಉಳಿತಾಯ ಯೋಜನೆ

ಇವು ನನ್ನ ಹರಕು ಶರ್ಟಿನ ಮೂರು ಗುಂಡಿ
ಇವುಗಳಷ್ಟೇ ನನ್ನ ಜೀವಿತದ ಹುಂಡಿ.
ಪ್ರತಿ ತಿಂಗಳಿಗೆ ನಾನು ಮಾಡಿ ಉಳಿತಾಯ.
ಕಟ್ಟಬೇಕಂತೆ ಜೀವನದ ತಳಪಾಯ!

## ೨೪೭. ಹರಿಜನರು

ಇಷ್ಟು ದಿನ ಬ್ರಾಹ್ಮಣರಿಗಾಗಿತ್ತು ಸ್ವರ್ಗ.
ಈಗ್ಗೆ ದೇವರ ಜೊತೆಗೆ ಹರಿಜನರ ವರ್ಗ.
ಹರಿಯ ಜೊತೆಗಿದ್ದರೂ ಹರಕು ಲಂಗೋಟಿ
ನರಕದೊಳಗಿದ್ದವರು ಗಳಿಸಿದರು ಕೋಟಿ.

## ೨೪೮. ವೈಕುಂಠದ ಸಾಮೀಪ್ಯ

ಇಷ್ಟು ದಿನ ವೈಕುಂಠವಿತ್ತು ಬಲು ದೂರ.
ಈಗ್ಗೆ ಬರಿ ಮುಕ್ಕಾಲು ಫರ್ಲಾಂಗು, ಬೀರಾ,
ಈ ಮಾತು ಸುಳ್ಳಲ್ಲ; ಬೇಡ ಅನುಮಾನ.
ವೈಕುಂಠ ನಗರ ಸಭೆಯವರ ಉದ್ಯಾನ.

## ೨೪೯. ಗಂಗಾವತರಣ

ಇಳಿದು ಬಾ ತಾಯಿ ನೀ ಆದಷ್ಟು ಬೇಗ.
ಇಲ್ಲದಿದ್ದರೆ ಪೂರ್ಣ ಹರಡುವುದು ರೋಗ.
ಪ್ರತಿಯೊಂದು ಜಿಲ್ಲೆಯಲಿ ಚಲಿಸಿ ಬಾ ತಾಯಿ.
ಹೊಲಸು ಮಾಡಿದೆ ರಾಜಕಾರಣದ ನಾಯಿ.

## ೨೫೦. ಪ್ರಧಾನಿಯ ಸ್ಪಷ್ಟೀಕರಣ

ಇಳಿಸಿದರೆ ಸಚಿವ ಸಂಪುಟದ ಆಕಾರ.
ಸಂಪೂರ್ಣ ಸಡಿಲಾಗುವುದು ರಾಜ್ಯಭಾರ.
ಮಂತ್ರಿ ಮಂತ್ರಿಗಳಲ್ಲಿ ನಡೆದು ಹೋರಾಟ.
ಕೈಯೊಳಗೆ ಹಿಡಿಯಬೇಕಾದೀತು ಸೋಟಾ.

### ೨೫೧. ಕವಿಯ ತಿದ್ದುಪಡಿ

ಇಂದ್ರಚಾಪವ ಕಡಲ ನೊರೆಯೊಳಗೆ ತಿದ್ದಿ.
ಸಪ್ತ ರಾಗಗಳಿಂದ ತಾರೆಗಳ ತಿದ್ದಿ
ಚಿತ್ರಿಸಲು ಬ್ರಹ್ಮನೂ ಉಲ್ಲಾಸದಿಂದ
ಹಾಡಿದನು ; ಈ ತಿದ್ದುಪಡಿ ಬಹಳ ಚಂದ.

### ೨೫೨. ಇಂದ್ರದೇವನು

ಇಂದ್ರದೇವನು ಮೊನ್ನೆ ಮಾಡಿ ಟೆಲಿಫೋನು
ಕೇಳಿದನು ; ದೇಸಾಯಿ ಹೇಗಿದ್ದಿ ನೀನು ?
ನನ್ನ ರಂಭೆಗೆ ನಿನ್ನ ಚುಟುಗಳ ಹುಚ್ಚು.
ಪ್ರತಿ ಕಳಿಸಿ ಅದು ನನ್ನ ಲೆಕ್ಕಕ್ಕೆ ಹಚ್ಚು.

### ೨೫೩. ಇಂದ್ರಲೋಕ

ಇಂದ್ರಲೋಕವ ನೋಡಬೇಕೆಂಬ ಆಸೆ.
ಅಲ್ಲಿ ಹೋದರೆ ಸಿಗುವುದೇ ಇಡ್ಲಿ ದೋಸೆ ?
ಗೆಳೆಯನಂದನು ಅಲ್ಲಿ ಭರ್ತಿ ರಸುಗುಲ್ಲಾ.
ನಾನು ಹೋದಾಗ ದೋಸೆಗಳು ಸಿಗಲಿಲ್ಲಾ.

### ೨೫೪. ಇಂದಿನ ಪರಿಸ್ಥಿತಿ

ಇಂದಿನ ಪರಿಸ್ಥಿತಿಗೆ ಸರಿ ಹೋಗುವಂತೆ
ಸರ್ವಜ್ಞ ಹಾಡಿದನು ಈ ಕೆಳಗಿನಂತೆ :
ಪ್ರತಿಯೊಬ್ಬ ಯೋಧನಿಗೆ ಶೌರ್ಯದ ಲಡಾಯಿ
ರಾಜಕಾರಣಿಗೆ ಬರಿ ಮಾತಿನ ಬಡಾಯಿ.

### ೨೫೫. ಬಂತು ವೋಟು

ಇಂದಿರಮ್ಮನ ಹೆಸರಿನಲಿ ಬಂತು ವೋಟು.
ಇಂದ್ರದೇವನಿಗಿಂತ ಮಿಗಿಲಾಯ್ತು ಥಾಟು.
ರಂಭೆಯೊಂದಿಗೆ ಬೆಂಗಳೂರಿನ ನಿವಾಸ.
ನಿತ್ಯವೂ ಉಂಟು ಬಾಟ್ಲಿಗಳ ಹವ್ಯಾಸ.

## ೨೫೬. ಗುಡುಗುಡು ಗುಮ್ಮ

ಇಂದೆ ಗುಡುಗುಡು ಗುಮ್ಮ ಜೋರಾಗಿ ಬಿಟ್ಟ
ಒದರಾಡಿ ಒದರಾಡಿ ಹತ್ತಿದನು ಬೆಟ್ಟ.
ಈ ವಿಚಿತ್ರವ ಕಂಡು ಆಕಾಶ ನಗಲು.
ನಿಮಿಷ ನಿಮಿಷಕೆ ಬಂತು ರಾತ್ರಿಯಲಿ ಹಗಲು.

## ೨೫೭. ಸಚಿವರ ಕಾರ್ಯಕ್ರಮ

ಇಂದೆ ಮಧ್ಯಾನ್ಹ ಉದ್ಘಾಟನೆಯ ಕೆಲಸ.
ನಾಳೆ ಟೀ–ಪಾರ್ಟಿಗಳ ಸಂಭ್ರಮದ ದಿವಸ.
ನಾಡದ್ದು ಮಹಿಳೆಯರ ಸತ್ಕಾರ ಕೂಟ.
ಆಚೆನಾಡದ್ದು ನಗರಸಭೆಯರ ಊಟ.

## ೨೫೮. ಮಾಡಿ ಕಸರತ್ತು

ಈ ಕಡೆಗೆ ಆ ಕಡೆಗೆ ಮಾಡಿ ಕಸರತ್ತು
ಕಿಸೆಯೊಳಗೆ ಹಾಕುವುದು ಈತನಿಗೆ ಗೊತ್ತು
ನೋಡಲಿಕೆ ಬಹಳ ಸಂಭಾವಿತರ ಪೈಕಿ
ಕಳ್ಳನೂ ಕೊನೆಗೆ ಧರಿಸಿದ ಹಾಗೆ ಖಾಕಿ.

## ೨೫೯. ವಿಧಾನ ಸೌಧದಲಿ

ಈ ಕಡೆಗೆ ನೋಡಿದರೆ ಮಂತ್ರಿಗಳ ಟೋಪಿ
ಆ ಕಡೆಗೆ ನೋಡಿದರೆ ಪೇದೆಗೂ ಕಾಫಿ.
ನಡುಮಧ್ಯದಲಿ, ಮಗನೆ ವರ್ತಕರ ಭೇಟಿ.
ಮಂತ್ರಿಪದ ಮುಗಿದಾಗ ಹಣ ಕೋಟಿ ಕೋಟಿ.

## ೨೬೦. ರೂಪಾಯಿ ಚೆಲ್ಲಿ

ಈ ಕಡೆಗೆ ಆ ಕಡೆಗೆ ರೂಪಾಯ ಚೆಲ್ಲಿ
ನಾಚಿಕೆಯ ಬದಿಗಿಟ್ಟು ಸುತ್ತುವರು ಗಲ್ಲಿ.
ವೋಟುಗಳ ಕೊಡಿರೆಂದು ಚೆಲ್ಲುವರು ನೋಟು.
ಕಪ್ಪಗಾಗಿದೆ ಒಳಗೆ ಇವರ ಬಿಳಿ ಕೋಟು.

### ೨೬೧. ಈ ಕಾಲ

ಈ ಕಾಲವೇ ಲೇಸು, ಆಮೇಲೆ ಸಿಗದು.
ಕಿಸಿಯೊಳಗೆ ಹಾಕಿಬಿಡಿ ಆದಷ್ಟು ನಗದು.
ಮುಂದೆ ಬಲ್ಲವರಾರು ? ಇಂದಾಯ್ತು ಶಾಂತಿ.
ಇದಕೆನ್ನುವರು, ಮಗನೆ, ಆಧುನಿಕ ಕ್ರಾಂತಿ.

### ೨೬೨. ಆದರ್ಶ ಗೃಹಿಣಿ

ಈ ಕಾಲವೇ ಹೀಗೆ; ಎಲ್ಲಾ ದುಬಾರಿ.
ಹೆಂಗಸರು ದುಡಿಯದಿದ್ದರೆ ಹೇಗೆ, ನಾರಿ ?
ನೌಕರಿಯ ಹಿಡಿದಾಕೆ ಆದರ್ಶ ಗೃಹಿಣಿ.
ಶೀಘ್ರದಲಿ ಮುದುಕಿಯಾಗುವಳು ಈ ತರುಣಿ.

### ೨೬೩. ನೆಹರು ಹೇಳಿದ್ದು

ಈ ಕುರ್ಚಿಯಲಿ ಕೂತು ಕೂತು ಬೇಜಾರು
ಕುರ್ಚಿ ಬಿಟ್ಟರೆ ಅಂಟಿಕೊಳ್ಳುವುದು ಕಾರು.
ಕಾರು ಬೇಡೆಂದಾಗ ಕೂಡಲೆ ವಿಮಾನು.
ನಾನು ನನ್ನವನಾಗುವುದು ಇಲ್ಲವೇನು ?

### ೨೬೪. ಈಕೆ, ಆಕೆ

ಈಕೆ ಕೊಟ್ಟಳು ಮುತ್ತು, ಒಂದಲ್ಲ ಹತ್ತು.
ನೆಲದಿಂದ ಮೇಲೇರಿದೆನು ಸ್ವಲ್ಪ ಹೊತ್ತು.
ಆಕೆ ಕೊಡದಿದ್ದರೂ ಚುಂಬನವನೊಂದ
ಅವಳ ಕಣ್ಣೊಳಗಿತ್ತು ತ್ರಿಭುವನದ ಛಂದ.

### ೨೬೫. ಕಾರಕೂನ ಹೇಳಿದ್ದು

ಆ ಕೆಲಸ ಆಗಬೇಕಲ್ವೆ ಅರ್ಜೆಂಟು ?
ಮೇಲಿನವರಿಗೆ ಕೊಡುವ ರೂಢಿಯೂ ಉಂಟು.
ಇದಕಾಗಿ ನಿಮ್ಮ ಜೇಬನು ಮೊದಲು ಬಿಚ್ಚಿ
ಆಮೇಲೆ ಕೆಲಸವಾಗುವುದು ಮನಮೆಚ್ಚಿ.

### ೨೬೬. ಪಲ್ಲಕ್ಕಿ

ಈಗಲೂ ಉಂಟು ದೇವರಿಗೆ ಪಲ್ಲಕ್ಕಿ
ಭಟ್ಟರಿಗೆ ಮಾತ್ರ ದೊರಕುವುದಿಲ್ಲ ಅಕ್ಕಿ.
ಭಟ್ಟರೆಂದರು : ಇದುವೆ ನರನ ಇತಿಹಾಸ
ಪೂಜೆ ಮಾಡಿದರು ತಪ್ಪುವುದಿಲ್ಲ ತ್ರಾಸ.

### ೨೬೭. ರಾಜಕಾರಣಿಗಳ ಗಮನಕ್ಕೆ

ಈಗಿದ್ದ ಸರಕಾರ ಇಂದಿಗೆ ಸುಭದ್ರ
ಒಂದು ದಿನ ಮುಂಜಾನೆ ಬೀಳುವುದು ಛಿದ್ರ.
ಆ ತನಕ ಸರಿಯಾಗಿ ತುಂಬಿಕೊಳಿ ಚೀಲ.
ಮುಂದೆಂದಿಗೂ ಸಿಗದು ಈ ತರದ ಕಾಲ.

### ೨೬೮. ಹೊಸ ಪಕ್ಷ

ಈಗಿಲ್ಲ ಹಳೆ ಪಕ್ಷ, ಆಗಿ ನಿರ್ನಾಮ
ಹೊಸ ಪಕ್ಷ ಉದಯಿಸಿತು; ಕೈವಲ್ಯಧಾಮ.
ಎಲ್ಲರೂ ಕೈತಟ್ಟಿ ಮಾಡಿದರು ಭಜನೆ
ಕೊನೆಗೆ ನೋಡಿದರೆ ಜೀವನವಾಯ್ತು ಬದನೆ.

### ೨೬೯. ಇನ್ನೊಂದು ವಾದ್ಯ

ಈಗ್ಗೆ ಶುರು ಮಾಡಿದರು ಇನ್ನೊಂದು ವಾದ್ಯ.
ಮರುಳಾಗಿ ಜನ ವೋಟು ಹಾಕಿದರು ಸಧ್ಯ.
ಕೊನೆಗೆ ನೋಡಿದರೆ ಸಖಿ, ಅದು ಬರೀ ಪುಂಗಿ.
ಜನರೆಲ್ಲ ಸುತ್ತಿಕೊಂಡರು ಹಳೆಯ ಲುಂಗಿ.

### ೨೭೦. ಹೊಸ ರಕ್ತ

ಈಗ್ಗೆ ಸರಕಾರದಲಿ ಬೇಕು ಹೊಸ ರಕ್ತ
ಇದಕಾಗಿ ಕ್ರಮ ತೆಗೆದುಕೊಳ್ಳುವುದು ಸೂಕ್ತ
ಮುದಿ ಪುಢಾರಿಯ ಅಳಿಯನಿಗೆ ಸಿಗಲಿ ಜಾಗ
ಇಷ್ಟು ದಿನ ಮಾಡಲಿಲ್ಲವೆ ದೊಡ್ಡ ತ್ಯಾಗ ?

### ೨೭೧. ಈ ಚುಟುಕದೊಳಗೆ

ಈ ಚುಟುಕದೊಳಗೆ ಬೆಳ್ಳಿ ಬಂಗಾರ.
ಚಿನ್ನವಿರದಿದ್ದರೂ ಉಂಟು ಸರಕಾರ.
ಕಳ್ಳಭಟ್ಟಿಯ ಬೆಲ್ಲವೂ ಉಂಟು ಮತ್ತೆ
ಚುಟುಕದಲಿ ಮೇಯುವವು ತರತರದ ಕತ್ತೆ.

### ೨೭೨. ಬರಿ ತಮಾಷೆ

ಈ ಚುಟುಕದೊಳಗಿಲ್ಲ ಸ್ಫೂರ್ತಿ ಆವೇಶ.
ಇಲ್ಲಿ ಕಾಣುವುದು ಬಗೆ ಬಗೆ ಹಗಲು ವೇಷ
ಇದು ಗೀತವಲ್ಲ, ಮಗು, ಕಂದನ ತಮಾಷೆ.
ನಲಿದಾಡಿದಂತೆ ಅಜ್ಜಿಗೆ ಹಚ್ಚಿ ಮೀಸೆ.

### ೨೭೩. ಈ ಚುನಾವಣೆಯಲ್ಲಿ

ಈ ಚುನಾವಣೆಯಲ್ಲಿ ಆನೆಗಳು ಬಿದ್ದು,
ವೃತ್ತಪತ್ರಿಕೆಯಲ್ಲಿ ವಿಪರೀತ ಸದ್ದು.
ಕೆಲವು ಕಡೆ ಕತ್ತೆಗಳಿಗೂ ಬಂತು ಗೆಲವು.
ಮತ್ತೆ ನರಿಗಳ ಜೊತೆಗೆ ಕರಡಿಗಳು ಹಲವು.

### ೨೭೪. ಈ ಚುನಾವಣೆಯಲ್ಲಿ

ಈ ಚುನಾವಣೆಯಲ್ಲಿ ನಾಯಿಗೇ ವೋಟು.
ಕಳೆದುಕೊಂಡಿತು ಬೆಕ್ಕು ತನ್ನ ಹಳೆ ಸೀಟು.
ಕತ್ತೆಗಳಿಗೂ ಸಿಕ್ಕಿ ಹಲವಾರು ಜಾಗ.
ಏನು ಆಗುವುದೆಂದು ಹೇಳಲಿಕ್ಕಾಗ.

### ೨೭೫. ಸೋಲು

ಈ ಚುನಾವಣೆಯಲಿ ಹೋರಾಡಿ ಬಿದ್ದೆ
ಬಿದ್ದರೂ ಜೀವನದ ಗುರಿಯಲ್ಲಿ ಗೆದ್ದೆ
ಸೋಲಿನಲಿ ಜಯ ಕಂಡು ಊರೆಲ್ಲ ಸುತ್ತಿ
ಹೆಜ್ಜೆ ಹೆಜ್ಜೆಗೆ ಹಚ್ಚಿದೆನು ಮೇಣಬತ್ತಿ.

### ೨೭೬. ಈ ಚುನಾವಣೆ

ಈ ಚುನಾವಣೆಯೊಂದು ಭಾರಿ ವ್ಯಾಪಾರ.
ಮಾರಲಿಕೆ ತೆಗೆದಿಟ್ಟ ಸರಕು ಸರಕಾರ.
ಯಾರು ಬೇಕಾದವರು ಕೊಳ್ಳಬಹುದಂತೆ
ಐದು ವರುಷಕ್ಕೊಮ್ಮೆ ನೆರೆಯುತಿದೆ ಸಂತೆ.

### ೨೭೭. ಈ ಜಗತ್ತಿಗೆ

ಈ ಜಗತ್ತಿಗೆ ನಾನು ಹೇಳಿದೆನು ನಿನ್ನೆ.
ನೀನು ಮಾಡದ್ದೇನು ? ನೀನೊಂದು ಸೊನ್ನೆ.
ರೇಗಿದ ಜಗತ್ತು ನುಡಿಯಿತು ; ಏನು ಪೋರಾ.
ಅಣುಬಾಂಬು ಮಾಡಿಸಿದ್ದೇನೆ, ನಾ ಧೀರಾ !

### ೨೭೮. ಜಗತ್ತಿನ ಡೊಂಕು

ಈ ಜಗತ್ತಿನ ಡೊಂಕ ತಿದ್ದಬೇಕೆಂದು
ಕವಿತೆ ಬರೆದರೆ ಒರಲೆ ಹಾಕುವುದು ತಿಂದು.
ಕಾವ್ಯವಾಗುವುದಿಲ್ಲ ಕಲಿಸಿದರೆ ನೀತಿ
ವರ್ಣನಾತೀತವಾಗಿದೆ ಅದರ ರೀತಿ.

### ೨೭೯. ಈ ಜಗತ್ತು

ಈ ಜಗದ ಮೇಲೆನಗೆ ವಿಪರೀತ ಒಲವು.
ಸ್ವರ್ಗದಲ್ಲೂ ಕಾಣಸಿಗದು ಈ ನೆಲವು
ತರತರದ ಗಿಡಬಳ್ಳಿ ಹೂಕಾಯಿ ಹಣ್ಣು
ಸ್ವರ್ಗದೊಳಗುಂಟೇನು ಈ ತರದ ಮಣ್ಣು ?

### ೨೮೦. ಜಗದಂಬೆಗೆ

ಈ ಜಗವ ಬಿಟ್ಟು ಹೋಗುವುದು ಬೇಡೆಂಬೆ.
ಇದರ ಸುಖ ಸ್ವರ್ಗದೊಳಗಿಲ್ಲ, ಜಗದಂಬೆ.
ಸ್ವರ್ಗದೊಳಗುಂಟೇನು ಹೂ ಕಾಯಿ ಹಣ್ಣು ?
ಮತ್ತು ಕನ್ನಡ ನೆಲದ ಕದಿರು ಕೆಮ್ಮಣ್ಣು ?

### ೨೮೧. ಸರಕಾರಿ ಭೂಮಿಯ ಮಾರಾಟ

ಈ ಜಮೀನಿಗೆ ಅರ್ಧ ಲಕ್ಷ ಕಿಮ್ಮತ್ತು.
ಸಚಿವ ನೀಡಿದ್ದು ರೂಪಾಯಿ ಮೂವತ್ತು
ಇದು ಕಟ್ಟುಕತೆಯಲ್ಲ; ಹುಸಿ ಎನ್ನಬೇಡ.
ಇದಕೆನ್ನುವರು ಜನರು ಮಂತ್ರಿಯ ಪವಾಡ.

### ೨೮೨. ಈ ಜಾಣ

ಈ ಜಾಣ ನುಡಿಯುವುದು ಬಲು ದೊಡ್ಡ ಮಾತು.
ಎಲ್ಲರೂ ಕೇಳುವರು ಸುತ್ತಲೂ ಕೂತು.
ಕೊನೆಗೆ ನೋಡಿದರೆ ಎಲ್ಲ ಮೂಡ ಗಾಳಿ.
ಹಾಳಾಗಬೇಡಿ ಎಂದೆನು ಮಾತು ಕೇಳಿ.

### ೨೮೩. ತತ್ವ

ಈ ತತ್ವ ಆ ತತ್ವ ಎನ್ನುವರು ಪಾಪ.
ತತ್ವಚಿಂತನೆ ಎನ್ನುವುದು ಒಂದು ಶಾಪ.
ಹಣ ಗಳಿಸುವುದೆ ಮಾತ್ರ ನಿಜವಾದ ತತ್ವ
ಕಡಿಮೆಯಾಗುವುದಿಲ್ಲ ದುಡ್ಡಿನ ಮಹತ್ವ

### ೨೮೪. ಸರಕಾರಿ ವೆಚ್ಚ

ಈ ತನಕ ಖರ್ಚಾದ ಸರಕಾರಿ ವೆಚ್ಚ
ವ್ಯರ್ಥವಾಯ್ತೆಂದು ಟೀಕಿಸಬೇಡ, ಹುಚ್ಚ
ಈ ಖರ್ಚಿನೊಳಗುಂಟು ಲೋಕ ಕಲ್ಯಾಣ.
ಕಂತ್ರಾಟುದಾರರಿಗೆ ಬಂತು ಹೊಸ ತ್ರಾಣ.

### ೨೮೫. ರಗಳೆಯ ಮನುಷ್ಯ

ಈತನಿಗೆ ಅನ್ನುವರು ರಗಳೆಯ ಮನುಷ್ಯ.
ಯಾವಾಗಲೂ ಹಾಕುವನು ಭರ್ತಿ ನಸ್ಯ
ತರತರದ ಭಾನಗಡಿ ಘೋಟಾಳೆ ಮಾಡಿ,
ಪಚನಗೊಳಿಸುವುದುಂಟು ನಾನಾ ಲಬಾಡಿ.

## ೨೮೬. ದೊಡ್ಡ ಕಂಪನಿಯಲ್ಲಿ

ಈತನಿಗೆ ದೊಡ್ಡ ಕಂಪನಿಯಲ್ಲಿ ಹುದ್ದೆ.
ಕುರ್ಚಿಯಲ್ಲಿ ಕುಳಿತಾಗ ಮಾಡಿದನು ನಿದ್ದೆ.
ಮಂತ್ರಿಗಳ ಮಗನೆಂದು ಕೊಟ್ಟರು ಪಗಾರ,
ರಾಜಕಾರಣದಲ್ಲಿ ನಾನಾ ಪ್ರಕಾರ.

## ೨೮೭. ನಮ್ಮ ರಾಜ್ಯದ ರೀತಿ

ಈತನಿಗೆ ಹೆಚ್ಚು ಬೇಕಾಗಿಲ್ಲ, ಕೊಂಚ.
ಪ್ರತಿಯೊಂದು ಸಲ ಮಾತ್ರ ಕೊಡಬೇಕು ಲಂಚ.
ಒಮ್ಮೊಮ್ಮೆ ನಗದು, ಒಮ್ಮೊಮ್ಮೆ ರಸಬಾಳೆ.
ರಸಬಾಳೆ ನಡೆಯದಿದ್ದರೆ ಕೊನೆಗೆ ಸೂಳೆ.

## ೨೮೮. ವಿಮರ್ಶಕ ಹೇಳಿದ್ದು

ಈ ತರದ ಚುಟಕ ಬರೆಯುವನೊಬ್ಬ ಬೇಕು.
ಐತಿಹಾಸಿಕ ಸತ್ಯವಿದು, ಅಲ್ಲ ಜೋಕು.
ಈ ಜೋಕಿನೊಳಗುಂಟು ಚೂಪಾದ ಧಾರೆ.
ಈ ಶಸ್ತ್ರ ಒಂದಿರಲು ಬೇಕಿಲ್ಲ ಬೇರೆ.

## ೨೮೯. ತುಟ್ಟಿ ಕಾಲ

ಈ ತುಟ್ಟಿ ಕಾಲದಲಿ ನೂರೆಂಟು ರಗಳೆ.
ಹೆಂಗಸರ ಸೀರೆಯೂ ಸಣ್ಣಾಯ್ತು ಮಗಳೆ,
ಈ ರಗಳೆ ಮುಂದುವರಿದರೆ ಮಿತಿಯ ಧಾಟಿ.
ಸೀರೆಗಳ ಬದಲು ಬರಬಹುದು ಲಂಗೋಟಿ.

## ೨೯೦. ದೇಶಭಕ್ತನ ಮಹಿಮೆ

ಈ ದೇಶಭಕ್ತರನು ನಂಬಬೇಡೆಂದ.
ಹೋದ ಹೋದಲ್ಲಿ ಮಾಡುವರು ದುರ್ಗಂಧ.
ಬೇರೆ ಯಾರೂ ಇಲ್ಲ ಇಷ್ಟು ಅಡನಾಡಿ.
ಸರಕಾರಿ ಸೌಧದಲ್ಲೂ ಹೊಲಸು ರಾಡಿ.

### ೨೯೧. ವಿಜ್ಞಾನಿಯ ಆಶ್ವಾಸನೆ

ಈ ಧರೆಗೆ ಬಂದು ಬಿಟ್ಟರೆ ಕೆಟ್ಟ ಕಾಲ
ಪಾರಾಗಲಿಕೆ ನಮಗೆ ಉಂಟು ಅನುಕೂಲ.
ಎಲ್ಲರೂ ಶಶಿಯ ಬೆನ್ನೇರುವುದು ಸಾಧ್ಯ.
ಮನುಕುಲಕೆ ಕಿಂಚಿತ್ತು ಭಯವಿಲ್ಲ ಸಧ್ಯ.

### ೨೯೨. ಸ್ಮಶಾನದ ಧೂಳು

ಈ ಧೂಳು ಕಸವಲ್ಲ; ನಿಶ್ಚಿಂತ ಬಾಳು.
ಚೀರಾಡಿ ಹೋರಾಡಿ ನಿದ್ರಿಸಿದ ಆಳು.
ಇದು ಅಮ್ಮ ಇದು ತಮ್ಮ ಇದು ಗಂಡು ಹೆಣ್ಣು.
ಕೆಂದುಟಿಯ ಮುಂಗುರುಳು ಮುಗುಳುನಗೆ ಮಣ್ಣು.

### ೨೯೩. ಪಕ್ಷಗಳು

ಈ ಪಕ್ಷ, ಆ ಪಕ್ಷ, ಅಲ್ಲ ಒಂದೆರಡು
ಕೊನೆಗೆ ನೋಡಿದರೆ, ಸಖಿ, ಎಲ್ಲವೂ ಬರಡು.
ಬಡವರಿಗೆ ತಪ್ಪಿಲ್ಲ ಉಪವಾಸ ತಾನೆ.
ಇದಕ್ಕೆನ್ನುವರು ರಾಜಕಾರಣದ ಬೇನೆ.

### ೨೯೪. ಪಕ್ಷಾಂತರ

ಈ ಪಕ್ಷದಿಂದ ಆ ಪಕ್ಷಕ್ಕೆ ಹಾರಿ.
ಸಚಿವ ಸಂಪುಟ ಕೆಡವಿ ಹೊಡೆದರು ನಗಾರಿ.
ಹಾರಿದವನಿಗೆ ಕಟ್ಟಿದರು ಮಂತ್ರಿ ಪದವಿ.
ರಾಜಕಾರಣವಾಯ್ತು, ಸೂಳೆಯರ ಮದುವಿ.

### ೨೯೫. ಪಕ್ಷಾಂತರ

ಈ ಪಕ್ಷ ಬಿಟ್ಟು, ಆ ಕಡೆ ಹಾರಿಬಿಟ್ಟೆ
ಜನರೆಲ್ಲ ಸೇರಿ ಒಗೆದರು ಕೋಳಿಮೊಟ್ಟೆ
ಅಲ್ಲಿಯೂ ಸಿಗಲಿಲ್ಲ ಪಕ್ಷದ ತಿಕೇಟು
ನಿಸ್ಪ್ರಯೋಜನವಾಯ್ತು ಬದಲಿಸಿದ ಕೋಟು.

## ೨೯೬. ಸದ್ಯದ ಪರಿಸ್ಥಿತಿ

ಈ ಪರಿಸ್ಥಿತಿಯಳಗೆ ಜೇನ್ನೊಣವು ಕೂಡಾ.
ಮಕರಂದವನು ಸರ್ವಥಾ ಮೂಸಿ ನೋಡಾ.
ಪ್ರತಿಯೊಂದು ಹೂವ ಪಕಳೆಯ ನಡುವೆ ಮಧ್ಯ.
ಸಿಕ್ಕಿದರೆ ಆಶ್ಚರ್ಯವೇನಿಲ್ಲ ಸಧ್ಯ.

## ೨೯೭. ಈ ಪೃಥಿವಿ

ಈ ಪೃಥಿವಿ ಎನ್ನುವುದು ಬರಿ ಒಂದು ಓಣಿ.
ಸೂರ್ಯದೇವನಿಗೆ ನೀಡಿದ ಮೂಲಗೇಣಿ
ಅಖಿಲ ಬ್ರಹ್ಮಾಂಡ ನೋಡಿದರೆ ಈ ಮಾತು
ಸತ್ಯವೆಂಬುದು ನಿಮಗೆ ಪೂರ್ಣ ತಿಳಿದೀತು.

## ೨೯೮. ಪೃಥಿವಿಯ ಇತಿಹಾಸ

ಈ ಪೃಥಿವಿಯೆನ್ನುವುದು ಬರಿ ಕಲ್ಲುಗುಂಡು.
ದೇವರಿಗು ಸುಖವಿಲ್ಲ ಅದ ಕಟ್ಟಿಕೊಂಡು.
ಕೋಟಿ ವರುಷದ ಹಿಂದೆ ಜ್ವಾಲೆಯಾಗಿತ್ತು.
ಮತ್ತೆ ಉರಿಯಾಗಲಿಕೆ ಬಂದಿಹುದು ಹೊತ್ತು.

## ೨೯೯. ಜಗದಂಬೆಗೆ

ಈ ಪೃಥಿವಿ ನಿನ್ನ ಆಟದ ಒಂದು ಗೊಂಬೆ.
ಹಾಳಾದರೇನಂತೆ ? ಹೇಳು ಜಗದಂಬೆ.
ಹಸಿವೆ ಸಂಕಟ ದುಃಖ ನೋವು ತಲೆಬೇನೆ
ನೋಡಬೇಕೇ ನಾವು ನಿತ್ಯ ಮುಂಜಾನೆ?

## ೩೦೦. ಒಂದು ವಿಮರ್ಶೆ

ಈ ಪಂಕ್ತಿಯೊಳಗುಂಟು ಬೇಕಷ್ಟು ಯುಕ್ತಿ
ಆದರೂ ಕಾಣಲಾರದು ಯಾವ ಶಕ್ತಿ
ಕಣ್ಣು, ಕಿವಿ, ಮೂಗು, ಎಲ್ಲಾ ಉಂಟು ಚಂದ.
ಆದರೂ ಮುಖದೊಳಗೆ ಕಳೆಯಿಲ್ಲ ಕಂದ.

## ೩೦೧. ಈ ಪ್ರಜಾರಾಜ್ಯದಲಿ

ಈ ಪ್ರಜಾರಾಜ್ಯದಲಿ ಎಲ್ಲವೂ ತುಟ್ಟಿ.
ಆದರೂ ಸಚಿವರಾದರು ಬಹಳ ಗಟ್ಟಿ.
ಇದಕೆ ಕಾರಣವು ಜನತೆಯ ಬುದ್ಧಿಮತ್ತೆ
ಸಚಿವರಿಗೆ ಮತ ಹಾಕಿ ಗಳಿಸಿದರು ಲತ್ತೆ.

## ೩೦೨. ಪ್ರಜಾರಾಜ್ಯದ ಮಿಂಚುಹುಳು

ಈ ಪ್ರಜಾರಾಜ್ಯದಲಿ ಚೈತನ್ಯಶಾಲಿ.
ಎಲ್ಲಿಯೂ ಜಾಗವಿಲ್ಲದೆ ಪೂರ್ಣ ಖಾಲಿ.
ಮಿಂಚುಹುಳು ಶಶಿಯಂತೆ ಬೆಳಗುತಿದೆ ಜೋರು.
ಈ ಪರಿಸ್ಥಿತಿ ನಿಮಗೆ ಗೊತ್ತುಂಟೆ, ನೆಹರು ?

## ೩೦೩. ಈ ಪ್ರಜಾರಾಜ್ಯದಲಿ

ಈ ಪ್ರಜಾರಾಜ್ಯದಲಿ ತರತರದ ಆಟ.
ನೂರು ಸಲ ಹೋದರೂ ಸಿಗಲಿಲ್ಲ ಕೋಟಾ.
ಆಮೇಲೆ ಒಂದು ದಿನ ನೀಡಿದರು ಕಾಳು.
ಮನೆಗೊಯ್ದು ನೋಡಿದರೆ ಸಂಪೂರ್ಣ ಹಾಳು.

## ೩೦೪. ಸ್ಟಂಟು

ಈ ಪ್ರಜಾರಾಜ್ಯದಲಿ ತರತರದ ಸ್ಟಂಟು
ಆಮರಣ ಉಪವಾಸವೂ ಕೊನೆಗೆ ಉಂಟು
ನಡುಮಧ್ಯೆ ನಿಂಬೆಹಣ್ಣಿನ ರಸವ ಕುಡಿದು,
ಉಪವಾಸ ಮುರಿಯುವುದು ಡಂಗುರವ ಹೊಡೆದು.

## ೩೦೫. ನಾನಾ ತಮಾಷೆ

ಈ ಪ್ರಜಾರಾಜ್ಯದಲಿ ನಾನಾ ತಮಾಷೆ
ರಾಜಕೀಯಕೆ ಬಂತು ಹೊಸ ಗಲ್ಲ ಮೀಸೆ.
ಖಾದಿ ಧರಿಸಿದ ಬಳಿಕ ಕಳ್ಳ ವ್ಯಾಪಾರಿ.
ಅಖಿಲ ಕರ್ನಾಟಕಕೆ ಆದನು ಪುಢಾರಿ.

### ೩೦೬. ನಾನಾ ತಮಾಷೆ

ಈ ಪ್ರಜಾರಾಜ್ಯದಲಿ ಪ್ರಾಮುಖ್ಯ ರೊಕ್ಕ.
ರೊಕ್ಕದಿಂದಲೆ ನಷ್ಟವಾಗುವುದು ದುಃಖ
ರೊಕ್ಕವೇ ನಕ್ಕು ನಗಿಸುವ ದೇವದಾಸಿ.
ಠಕ್ಕತನವಿದ್ದರಂತೂ ರೊಕ್ಕ ರಾಶಿ ರಾಶಿ.

### ೩೦೭. ಭ್ರಷ್ಟಾಚಾರಿಗಳಿಗೆ ಸೂಚನೆ

ಈ ಪ್ರಜಾರಾಜ್ಯದಲಿ ಬೇಕಷ್ಟು ಶಾಯಿ
ಕುಡಿದರೂ ಕಪ್ಪು ಆಗುವುದಿಲ್ಲ ಬಾಯಿ !
ಇದುವೆ ಬ್ಲಾಟಿಂಗ್ ಪೇಪರಿನ ಕೆಲಸ
ದವಡೆಯಲಿ ಇಟ್ಟುಕೊಳಿ ಪ್ರತಿಯೊಂದು ದಿವಸ.

### ೩೦೮. ಮಂತ್ರಿಗಳ ಕುದುರೆ

ಈ ಪ್ರಜಾರಾಜ್ಯದಲಿ ಮಂತ್ರಿಗಳ ತಂಡ
ಆಗಾಗ್ಗೆ ಸಂಚರಿಸಿ ಪ್ರಜೆಗಳಿಗೆ ದಂಡ
ಬೆಂಗಳೂರಲಿ ಕುಳಿತು ಕೆಲಸ ಮಾಡಿದರೆ
ಓಡಾಡಬೇಕಾಗಿಲ್ಲ ಮಂತ್ರಿಗಳ ಕುದುರೆ.

### ೩೦೯. ಈ ಪ್ರಜಾರಾಜ್ಯದಲಿ

ಈ ಪ್ರಜಾರಾಜ್ಯದಲಿ ಮೊದಲನೆ ಸ್ಥಾನ
ಯಾಗಿರಬೇಕೆಂದು ಬಂತು ಅನುಮಾನ
ಮುದುಕಿಯೊಬ್ಬಳು ಬಂದು ಅರುಹಿದಳು ಕೊನೆಗೆ ;
ಈ ಪ್ರಥಮ ಸ್ಥಾನ ಸಿಗಬೇಕು ಅಗಸನಿಗೆ.

### ೩೧೦. ನ್ಯಾಯಮೂರ್ತಿಗಳ ತೀರ್ಪು

ಈ ಪ್ರಜಾರಾಜ್ಯದಲಿ ಯಾರು ಪಾಪಿಷ್ಠ
ಎಂದು ನಿರ್ಧರಿಸುವುದು ಅತ್ಯಂತ ಕಷ್ಟ
ಮಂತ್ರಿಯೊ ? ಉಪಮಂತ್ರಿಯೊ ? ಅವನ ಅಳಿಯ ?
ಯಾರೆನ್ನುವುದು ನಮಗೆ ಸರಿಯಾಗಿ ತಿಳಿಯಾ.

### ೩೧೧. ಸರಕಾರಿ ಪ್ರಕಟನೆ

ಈ ಪ್ರಜಾರಾಜ್ಯದಲಿ ಲಂಚ-ರುಷುವತ್ತು
ಅಪರಾಧವೆನ್ನುವುವುದು ನಿಮಗಿರಲಿ ಗೊತ್ತು.
ಬರಬಹುದು ಆಗಾಗ್ಗೆ ಕಷ್ಟಗಳು ಕೊಂಚ.
ಉಪವಾಸ ಬಿದ್ದರೂ ಕೊಡಬೇಡಿ ಲಂಚ.

### ೩೧೨. ಕಾನೂನು

ಈ ಪ್ರಜಾರಾಜ್ಯದಲಿ ಯಾವ ಸಾಮಾನೂ
ಬೇಕೆನಿಸಿದರೆ ಅದಕೆ ಉಂಟು ಕಾನೂನು
ಲೈಸನ್ಸು, ಪರ್ಮಿಟುಗಳ ಹೊರತು ಅರ್ಜಿ.
ಮತ್ತೆ ಬೇಕಾದದ್ದು ಮಂತ್ರಿಗಳ ಮರ್ಜಿ.

### ೩೧೩. ಈ ಪ್ರಜಾರಾಜ್ಯದಲಿ

ಈ ಪ್ರಜಾರಾಜ್ಯದಲಿ ಸಂಪೂರ್ಣ ಸೋತೆ.
ದೇವನೂ ಬರಲಿಲ್ಲ ಹಾಡಿಯೂ ಗೀತೆ.
ಮಂತ್ರಿಗಳು ಬಂದು ಹೋದರು ಹತ್ತು ಸಾರೆ.
ಆದರೂ ಮುಗಿದಿಲ್ಲ ದುಗುಡುಗಳ ಧಾರೆ.

### ೩೧೪. ನಮ್ಮೂರ ದಲ್ಲಾಳಿ

ಈ ಪ್ರಜಾರಾಜ್ಯದಲಿ ಸುಖವಾಗಿ ಬಾಳಿ
ಸತ್ತವರ ಪೈಕಿ ನಮ್ಮೂರ ದಲ್ಲಾಳಿ
ಇವನ ಕೈಯೊಳಗಿತ್ತು ಸಗಟು ವ್ಯಾಪಾರ
ಮತ್ತೆ ಕಿಸೆಯೊಳಗಿತ್ತು ರಾಜ್ಯ ಸರಕಾರ.

### ೩೧೫. ಹಣವೆಲ್ಲ ನೀರು

ಈ ಪ್ರಜಾರಾಜ್ಯದಲ್ಲಿ ಹಣವೆಲ್ಲ ನೀರು
ಸೋರಿ ಹೋಯಿತು ಕೆಳಗೆ, ಪೂರ್ಣ ಇಳಿಜಾರು.
ಇಳಿಜಾರಿನಲ್ಲಿ ಕುಳಿತು ಕುಡಿದವರು ಉಂಟು
ಹೊಟ್ಟೆಯುಬ್ಬುವ ತನಕ ಕಟ್ಟಿದರು ಗಂಟು.

### ೩೧೬. ಈ ಪುಢಾರಿಗೆ

ಈ ಪುಢಾರಿಗೆ ಬೇಕು ಪುನಹಾ ತೀಕೆಟು
ಸಿಕ್ಕಿದರೆ ಹೆಚ್ಚಾಗುವುದು ಇವನ ರೇಟು.
ಆಮೇಲೆ ಈತನಿಗೆ ಇಲ್ಲ ಬರಗಾಲ
ಮಳೆ ಬೀಳದಿದ್ದರೂ ಉಂಟು ಅನುಕೂಲ.

### ೩೧೭. ಮೊನ್ನೆ ಕೇಳಿದ್ದು

ಈ ಪುಢಾರಿಯ ಮೇಲೆ ವಿಶ್ವಾಸವಿಟ್ಟು
ವೋಟು ಕೊಟ್ಟರೆ ಕುದುರೆಯಾಗುವುದು ತಟ್ಟು.
ಇಷ್ಟು ದಿನ ಕೊಟ್ಟಿದ್ದು ಸಾಕು, ಮಾರಾಯ,
ಚೆನ್ನಾಗಿ ಕುಡಿಸಿದರು ಬೇವಿನ ಕಷಾಯ.

### ೩೧೮. ಗಾಂಧೀ ಜಯಂತಿ

ಈ ಪುಣ್ಯಭೂಮಿಯಲಿ ಹುಟ್ಟಿದನು ಗಾಂಧಿ.
ಹೀಗೆಂದು ಊರೆಲ್ಲ ಹಂಚಿದರು ಬೂಂದಿ.
ಮರುದಿವಸ ಮುಂಜಾನೆ ಬೀದಿಯಲಿ ಖೂನಿ.
ಹೊಸದಿಲ್ಲಿಯಲಿ ಭಕ್ಷಕರ ಮೇಜವಾನಿ.

### ೩೧೯. ಬ್ಯಾಂಕಿನ ಜಾಹಿರಾತು

ಈ ಬ್ಯಾಂಕಿನೊಳಗೆ ಇಟ್ಟರೆ ಠೇವಣಾತಿ
ಹೆಂಡತಿಗೆ ತನ್ನ ಗಂಡನ ಮೇಲೆ ಪ್ರೀತಿ.
ಪ್ರತಿವರುಷ ಮರಿ ಹಾಕುವುದು ಇಟ್ಟ ಕಾಸು
ಈ ಕಾಸಿನಿಂದ ಹೆಂಡತಿಗೆ ನೆಕ್‌ಲೇಸು.

### ೩೨೦. ಈ ಭೂಪ

ಈ ಭೂಪ ಇಲ್ಲಿಂದ ಹಾರಿದನು ಅಲ್ಲಿ.
ಆದರೂ ಸಾಧ್ಯವಾಗದೆ ಹೋಯ್ತು ದಿಲ್ಲಿ.
ಬೆಂಗಳೂರಿನ ಗಾಡಿಯೂ ಹೋಯ್ತು ತಪ್ಪಿ
ಕುಳಿತುಕೊಂಡನು ಮನೆಯ ತಲೆದಿಂಬನಪ್ಪಿ.

### ೩೨೧. ಇಂದಿನ ರಾಜಕಾರಣ

ಈ ಭೂಪನಿಗೆ ಪಾಪ ದಿನಕೊಂದು ಸೋಗು.
ಹೀಗಾಗಿ ಉದುರಿಹೋಯಿತು ಇದ್ದ ಮೂಗು.
ಇಂಥವರ ಸಂಖ್ಯೆಯೇ ಹೆಚ್ಚಾಗಿ ಸದ್ಯ
ರಾಜಕಾರಣದಲ್ಲಿ ಇಲ್ಲ ವೈವಿಧ್ಯ.

### ೩೨೨. ಈ ಭೂಪ

ಈ ಭೂಪ ಮಂತ್ರಿಯಾಗಿದ್ದ ಅರಗಳಿಗೆ.
ಆಮೇಲೆ ಈತನಿಗೆ ತಿನಿಸಿದರು ಗುಳಿಗೆ
ಯಾವುದೋ ಪೇಚಾಟದಲಿ ಸಿಕ್ಕಿ ಬಿದ್ದ.
ಸಿಕ್ಕಿ ಬೀಳದ ನರಿಗೆ ಅನ್ನುವರು ಶುದ್ಧ.

### ೩೨೩. ಪಕ್ಷಾಂತರ ಭೂಪ

ಈ ಭೂಪನಿಗೆ ಮೂಡಿ ಬರಲು ಅತ್ಯಾಶೆ
ಹೊಸ ಪಕ್ಷ ಸೇರಿ ಹುರಿಗೊಳಿಸಿದನು ಮೀಸೆ.
ಕೊನೆಗೆ ನೋಡಿದರೆ, ಸಖಿ, ಸಿಗಲಿಲ್ಲ ಸೀಟು.
ವ್ಯರ್ಥವಾಯಿತು ಇವನ ಮೀಸೆಯ ಗಿಲೀಟು.

### ೩೨೪. ಕಾಂಗ್ರೆಸ್ಸಿನ ಐಕ್ಯ

ಈ ಮಡಕೆ ಒಡೆದರೂ ಅದಕ್ಕಿಲ್ಲ ತೂತು.
ವೀಳ್ಯದೆಲೆ ಹಾಕಿದರು ಒಂದೆಡೆಗೆ ಕೂತು.
ಒಬ್ಬರೊಬ್ಬರ ಮೇಲೆ ಉಗುಳಿ ಆಮೇಲೆ.
ಮೈತೊಳದುಕೊಂಡಾಗ ವ್ಯಾಜ್ಯಾದ ನಿಕಾಲೆ.

### ೩೨೫. ಸೋಜಿಗದ ಬೆಲ್ಲ

ಈ ಮಡಕೆಯೊಳಗುಂಟು ಸೋಜಿಗದ ಬೆಲ್ಲ
ಎಷ್ಟು ತಿಂದರು ಮುಗಿಸುವುದು ಸಾಧ್ಯವಿಲ್ಲ.
ತಿಂದಷ್ಟು ಸವಿ ಹೆಚ್ಚು; ರುಚಿ ನೋಡು, ಕಂದ.
ಸೂಸಿ ಬರುವುದು ಹೊರಗೆ ಕವಿ ಹೃದಯದಿಂದ.

## ೩೨೬. ನಮ್ಮೂರ ಗೊಮ್ಮಟ

ಈ ಮಹಾ ಗೊಮ್ಮಟನ ಪೂರ್ಣ ಆಯುಷ್ಯ
ಎನ್ನುವುದು, ಓ ಮಗನೆ, ದೀರ್ಘ ಆಲಸ್ಯ,
ನಿತ್ಯ ಪಾಯಸ ತಿನ್ನಲಿಕೆ ಅಗ್ರಗಣ್ಯ.
ತಂದೆ ಮಾಡಿದ ಆಸ್ತಿಯೊಳಗುಂಟು ಪುಣ್ಯ.

## ೩೨೭. ಹುಟ್ಟುಹಬ್ಬದ ದಿನ

ಈ ಮಹಾಮಹಿಮನಿಗೆ ವರುಷ ಎಪ್ಪತ್ತು
ಪೂರ್ಣ ಬದುಕಿದ್ದಾನೆ ಮೂರು ಸಲ ಸತ್ತು,
ಒಮ್ಮೆ ಡಿಸ್‌ಮಿಸ್ ಆಯ್ತು; ಆದರೂ ಕೊನೆಗೆ
ಮಂತ್ರಿಮಂಡಳ ಸೇರಿ ಮರಳಿದನು ಮನೆಗೆ.

## ೩೨೮. ರಾಜ್ಯಪಾಲ

ಈ ಮಹಾರಾಯ ಆದನು ರಾಜ್ಯಪಾಲ.
ಈ ಪ್ರಜಾರಾಜ್ಯದಲಿ ಇವನೆ ಘನಲೋಲ.
ಕೆಲಸವಿಲ್ಲಾದರೂ ಬಲು ದೊಡ್ಡ ಹುದ್ದೆ.
ಪ್ರತಿ ದಿವಸ ಮಧ್ಯಾನ್ಹ ಕಣ್ತುಂಬ ನಿದ್ದೆ.

## ೩೨೯. ನಮ್ಮ ಪ್ರತಿನಿಧಿ

ಈ ಮಹಾರಾಯ ಆರಿಸಿ ಕೊನೆಗೆ ಬಂದ.
ಲೋಕಸಭೆಯಲಿ ಹೋಗಿ ಎಲೆಅಡಿಕೆ ತಿಂದ
ಮಂತ್ರಿ ಹೇಳಿದ ಹಾಗೆ ಕೈ ಮೇಲಕೆತ್ತಿ
ತೆಗೆದುಕೊಂಡನು ಭತ್ಯ. ನಮಗಿಲ್ಲ ಬುತ್ತಿ.

## ೩೩೦. ಹೊಸ ಪಕ್ಷ

ಈ ಮಹಾರಾಯ ಕಟ್ಟಿದನು ಹೊಸ ಪಕ್ಷ
ಎಂಬತ್ತು ಕಳೆದ ಬಿಳಿಕೋಟು ಅಧ್ಯಕ್ಷ
ನುಂಗಲಿಕೆ ಇಲ್ಲಿ ಸಿಗದಿದ್ದವರು ಅಲ್ಲಿ.
ಯಾವಾಗ ಇವರು ಮುಟ್ಟುವರು ಹೊಸದಿಲ್ಲಿ ?

### ೩೩೧. ಈ ಮಹಾರಾಯ

ಈ ಮಹಾರಾಯ ಮಾತಾಡುವುದು ಮುತ್ತು
ನಡವಳಿಕೆ ನೋಡಿದರೆ ಒರಲೆಗಳ ಹುತ್ತು.
ಈ ಹುತ್ತಿನೊಳಗಿಂದ ಹಾವು ಬುಸುಗುಟ್ಟಿ
ಬರಬಹುದು ಎಂದು ಹೇಳಿದನು, ಆ ಸೆಟ್ಟಿ

### ೩೩೨. ಕೋರಮ್ಮಿನ ರಹಸ್ಯ

ಈ ಮಹಾರಾಯನಿಗೆ ಹೆಚ್ಚಾಗಿ ಕೆಮ್ಮು
ಶಾಸಕರ ಸಭೆಯೊಳಗೆ ಇಲ್ಲ ಕೋರಮ್ಮು
ಗಂಟೆ ಬಾರಿಸಿದರೂ ಬರಲಿಲ್ಲ ಯಾರೂ,
ಲೋಕಶಾಹಿಗೆ ಇವರು ಕುಡಿಸಿದರು ನೀರು.

### ೩೩೨. ಈ ಮಹಾರಾಯ

ಈ ಮಹಾರಾಯ, ಸಖಿ, ಬಹಳೇ ಚಲಾಕಿ,
ಏರಿದನು ಎಲ್ಲರನ್ನೂ ಕೆಳಗೆ ನೂಕಿ.
ಎಲ್ಲ ಸಾಹೇಬರೂ ಇವನ ಕಿಸೆಯೊಳಗೆ
ಎಲ್ಲ ಕಾರಸ್ಥಾನ ಒಳಗಿಂದ ಒಳಗೆ.

### ೩೩೩. ತಹಶೀಲದಾರನ ನಿವೃತ್ತಿ

ಈ ಮಹಾರಾಯ ಹೊಂದಿದನು ನಿವೃತ್ತಿ
ಆದರೂ ಬಿಡಲಿಲ್ಲ ಹಳೆಯ ಪ್ರವೃತ್ತಿ
ರಾಜಕಾರಣ ಸೇರಿ ತಿನ್ನುವ ಪ್ರಯತ್ನ
ಉದ್ದೇಶ ಹಳತಾದರೂ ರೀತಿ ನೂತ್ನ.

### ೩೩೪. ಮಂತ್ರಿಯ ಬರಖಾಸ್ತು

ಈ ಮಹಾಶಯ ಕೊನೆಗೆ ಮಂತ್ರಿಪದದಿಂದ
ಬರಖಾಸ್ತು ಆಗಿ ಊರಿಗೆ ಮರಳಿ ಬಂದ.
ಆ ತನಕ ಒಳಗೊಳಗೆ ಲೈಸನ್ಸು ನೀಡಿ
ಸರಕಾರಿ ಸೌಧದಲಿ ಮಾಡಿದನು ರಾಡಿ.

### ೩೩೬. ಜಿಲ್ಲಾ ಪುಢಾರಿ

ಈ ಮಹಾಶಯ ನಮ್ಮ ಜಿಲ್ಲಾ ಪುಢಾರಿ.
ಸಂಚಾರದಲಿ ಗಂಟುಬೀಳುವಳು ನಾರಿ.
ಹೀಗಾಗಿ ಅಲ್ಲಲ್ಲಿ ಹಂಗಾಮಿ ಮದವಿ
ಈ ಮದವಿಗಳ ಜೊತೆಗೆ ಅಧ್ಯಕ್ಷ ಪದವಿ.

### ೩೩೭. ಈ ಮಹಾಶಯ

ಈ ಮಹಾಶಯ ಮುಖ್ಯ ಮಂತ್ರಿಯಾಗಿದ್ದ.
ಕುರ್ಚಿಯಲಿ ಕುಳಿತೊಡನೆ ಕಿಸೆಯಾಯ್ತು ಉದ್ದ.
ಇಂಥವರು ಇದ್ದರೇನೇ ನಮ್ಮ ದೇಶ
ಇಡಿ ಜಗತ್ತಿಗೆ ನೀಡಬಹುದು ಸಂದೇಶ.

### ೩೩೮. ಪ್ರಜಾರಾಜ್ಯದ ಸೋರುಗುಂಡಿ

ಈ ಮಹಾಶಯರು ಕಾರಿನ ಮೇಲೆ ಕೂತು
ಸರಕಾರಿ ಬೊಕ್ಕಸಕೆ ಮಾಡಿದರು ತೂತು.
ಈ ತೂತಿನಿಂದ ಸೋರುವುದೇನು ಗೊತ್ತೆ?
ನೀರಲ್ಲ, ನವಭಾರತದ ಪ್ರಜಾಸತ್ತೆ.

### ೩೩೯. ಈ ಮಹಾಶಯ

ಈ ಮಹಾಶಯರು ಜನರಿಗೆ ಹಾಕಿ ಟೋಪಿ
ಸರಕಾರಿ ಸೌಧದಲಿ ಕುಡಿಯುವುರು ಕಾಫಿ.
ಯಾವಾಗಲೂ ಇವರ ಕೆಲಸ ಅರ್ಜಂಟು
ಇವರ್‍ಯಾರು ಗೊತ್ತೆ? ಮಂತ್ರಿಗಳ ಏಜಂಟು.

### ೩೪೦. ಸರಕಾರಿ ಪಕ್ಷದ ಸಭೆ

ಈ ಮಹಾಸಭೆಯಿಂದ ಏನಾಯ್ತು ಶಕ್ಯ?
ಮಾತಾಡಿ ಮಾತಾಡಿ ಹುಟ್ಟಿದವು ವಾಕ್ಯ.
ಒಂದೊಂದು ವಾಕ್ಯವೆಂಬುದು ಒಂದು ಮುತ್ತು
ಹೆಕ್ಕಿಕೊಂಡರೆ ನಿಮಗೆ ಸಿಗಬಹುದು ತುತ್ತು.

### ೩೪೧. ಬದಲಾವಣೆ

ಈ ಮಂತ್ರಿ ಆ ಕಡೆಗೆ, ಆ ಮಂತ್ರಿ ಇಲ್ಲಿ.
ಆದರೂ ಮೊದಲಿನಂತೆಯೆ ಉಂಟು ದಿಲ್ಲಿ
ನಮ್ಮ ಜೀವನದಲ್ಲಿ ಏನಿಲ್ಲ ಫರಕು
ಪ್ರತಿಯೊಂದು ಕಡೆಗೆ ಬಿದ್ದಿದೆ ಭರ್ತಿ ತರಕು.

### ೩೪೨. ಕಟ್ಟಿದರು ಒಡ್ಡು

ಈ ಮಹಾನದಿಗಿವರು ಕಟ್ಟಿದರು ಒಡ್ಡು
ಕಿಸೆಯೊಳಗೆ ಹಾಕಿದರು ಮಣಗಟ್ಲೆ ದುಡ್ಡು
ಇದಕಾಗಿ ಜನರಿಂದ ಎತ್ತಿದರು ಸೆಸ್ಸು
ಮೂರು ವರುಷದ ಮೇಲೆ ಒಡ್ಡ ಓಮ್–ಫಸ್ಸು.

### ೩೪೩. ಸರಕಾರಿ ಸಭೆಗಳು

ಈ ಮಾತು ಆ ಮಾತು ಎಲ್ಲರೂ ಕೂತು,
ನಿರ್ಣಯಿಸಬೇಕೆಂದು ಹೇಳಿದನು, ಸಾತು,
ಕೊನೆಗೆ ನೋಡಿದರೆ, ಸಖಿ, ಎಲ್ಲರೂ ಇವರು
ಬೇರೆ ಯಾರಲ್ಲ ಸಾತುವಿನ ಮನೆಯವರು.

### ೩೪೪. ಹೆಸರು

ಈ ಮಾತು ಸ್ವಲ್ಪ ಲಾಲಿಸು, ನನ್ನ ಲಲಿತಾ.
ಈ ಹೊತ್ತಿನಿಂದ ಕರೆಯುವೆ ನಿನಗೆ ಕವಿತಾ.
ಯಾವ ಹೆಸರಾದರೂ ನಿಮ್ಮವಳು ನಾನು.
ನಮ್ಮ ಸಂಸಾರವಾಗಲಿ ಎಂಬೆ ಜೇನು.

### ೩೪೫. ಮಾನವನ ಪ್ರಗತಿ

ಈ ಯಂತ್ರಯುಗದೊಳಗೆ ಪ್ರಗತಿಯ ಪ್ರಮಾಣ
ಬೆರಗುಗೊಳಿಸುವದೆಂದು ಹೇಳಿದನು ಜಾಣ
ಮಾನವನ ಪ್ರಗತಿಯೆಂಬುದು ಒಂದು ಚಕ್ರ
ಏನೇನು ಮಾಡಿದರು ಎಂದಿಗೂ ವಕ್ರ.

### ೩೪೬. ನಟರಾಜರು

ಈ ರಾಜ್ಯದೊಳಗೆ ನಟರಾಜರೇ ಜಾಸ್ತಿ
ಕುಣಿದಾಡಿ ಕುಣಿದಾಡಿ ಮಾಡಿದರು ಆಸ್ತಿ.
ಇವರ ಕುಣಿತದ ಜಾಗ ಸರಕಾರಿ ಸೌಧ.
ಗೆಜ್ಜೆ ಕಟ್ಟದೆ ಹೆಜ್ಜೆ ಹಾಕುವರು; ಹೌದಾ ?

### ೩೪೭. ಈ ರಾಜ್ಯದೊಳಗೆ

ಈ ರಾಜ್ಯದೊಳಗೆ ನರಿಯಾಗಬೇಕಂತೆ
ಕುರಿಯಾದರೂ ಇಲ್ಲ ತಿಳಮಾತ್ರ ಚಿಂತೆ
ಬಿಳಿ ಕರಡಿಯಾದರಂತೂ ದೊಡ್ಡ ಜಾಗ
ಮನುಜನಾದರೆ ಮಾತ್ರ ಹಿಡಿಯುವುದು ರೋಗ.

### ೩೪೮. ಈ ರಾಮರಾಜ್ಯದಲಿ

ಈ ರಾಮರಾಜ್ಯದಲಿ ಎಲ್ಲಾ ವಿಚಿತ್ರ
ಸರಕಾರಿ ಸೌಧವೆಂಬುದು ಅನ್ನಛತ್ರ
ಸೆಟ್ಟರೂ ಸಚಿವರೂ ಮಾಡಿದರು ಊಟ
ಕಂತ್ರಾಟುದಾರರಿಗೆ ಅವರವರ ಕೋಟಾ.

### ೩೪೯. ಸಕ್ಕರೆಯ ಕೋಟಾ

ಈ ರಾಮರಾಜ್ಯದಲಿ ತರತರದ ಆಟ
ಈ ಆಟದೊಳಗುಂಟು ಸಕ್ಕರೆಯ ಕೋಟಾ
ಶಹರದಲಿ ಹುಟ್ಟಿದವರಿಗೆ ಅರ್ಧ ಹೊಟ್ಟೆ
ಹಳ್ಳಿಯಲಿ ಬದುಕಿದವರಿಗೆ ಸ್ವಲ್ಪ ಕೊಟ್ಟೆ.

### ೩೫೦. ಜೂಜಿನ ಮಹಿಮೆ

ಈ ರಾಮರಾಜ್ಯದಲಿ ದಿನಕೊಂದು ಮೋಜು
ಜನರ ಕಲ್ಯಾಣಕ್ಕೆ ಬೇಕಂತೆ ಜೂಜು !
ಲಾಟರಿಯ ಹೊರತಾಗಿ ಅಭಿವೃದ್ಧಿ ಕಾರ್ಯ
ನೆರವೇರಿಸಲು ಮಂತ್ರಿಗಳಿಗಿಲ್ಲ ಧೈರ್ಯ.

### ೩೫೧. ಮೊನ್ನೆ ಕೇಳಿದ್ದು

ಈ ರೀತಿ ಸಿಟ್ಟಾಗಬೇಡ, ಮಾರಾಯ್ತಿ.
ಪಾಪ ! ಈ ಸಚಿವರನು ಹೀಗ್ಯಾಕೆ ಬಯ್ತಿ ?
ನಾವೆಲ್ಲರೂ ವೋಟು ಕೊಟ್ಟಿದ್ದೆ ತಪ್ಪು
ಸಕ್ಕರೆಯ ಬದಲಾಗಿ ತಿನ್ನೋಣ ಉಪ್ಪು.

### ೩೫೨. ಅವನು ಹೇಳಿದ್ದು

ಈ ರೀತಿ ಹಗಲಿರುಳು ಕೊಡಬೇಡಿ ಕಾಟ,
ನನ್ನ ವರ್ಣನೆ ಸಾಕು, ನಿಲ್ಲಿಸಿಬಿಡಿ ಆಟ
ಮದರಂಗಿ, ಜಗದಂಬೆ ಏನೇನೊ ಕರೆದು
ಕವಿತೆ ಬರೆದರೆ ನಾನು ಹಾಕುವೆನು ಹರಿದು.

### ೩೫೩. ಗಂಡ ಹೇಳಿದ್ದು

ಈ ರೀತಿ ಹಣ ಖರ್ಚು ಮಾಡಿದರೆ ಜಾಸ್ತಿ
ಒಂದು ದಿನ ನಮ್ಮ ಮನೆಯಾಗುವುದು ಜಪ್ತಿ
ಆ ಮೇಲೆ ನೀನು ಕುಣಿಯುವೆ ಕಾಳಿಯಂತೆ
ಜಾಗರೂಕತೆ ವಹಿಸಬೇಕು, ಗುಣವಂತೆ.

### ೩೫೪. ಈ ಲಫಂಗರ ಪೈಕಿ

ಈ ಲಫಂಗರ ಪೈಕಿ ಏಳೆಂಟು ಮಂದಿ
ಹೊಸ ಪಕ್ಷ ಸೇರಿ ನುಂಗಿದರು ಬಾಸುಂದಿ
ಉಳಿದವರು ಪಾಪ ಕುಂಬಳಕಾಯಿ ತಿಂದು
ತೃಪ್ತಿಪಡಬೇಕಾಯ್ತು, ಹೇ ಕರುಣಸಿಂಧು.

### ೩೫೫. ಚುನಾವಣೆಯಲ್ಲಿ ಕೇಳಿದ್ದು

ಈ ಲಫಂಗರಿಗಿಲ್ಲ ಯಾವ ಮರಿಯಾದೆ.
ಸರಕಾರಿ ಹಣ ತಿಂದು ಜನರಿಗೆ ತಗಾದೆ
ಆದರೂ ಈ ಮಹಿಮರಿಗೆ ಬೇಕು ವೋಟು
ಮತ್ತಷ್ಟು ಬಿಗಿಯಾಗಬೇಕಂತೆ ಕೋಟು.

## ೩೫೬. ಮಂತ್ರಿಪದ ಸಿಕ್ಕಿ

ಈ ಲಫಂಗರಿಗೆಲ್ಲ ಮಂತ್ರಿಪದ ಸಿಕ್ಕಿ
ಲೋಕಶಾಹಿಯ ಸಮುದ್ರವು ಬಂತು ಉಕ್ಕಿ,
ಸುಳ್ಳು ಹೇಳುವುದಿಲ್ಲ, ನೋಡಲಿಕೆ ತೆರಳಿ.
ಮತ್ತೆ ಫೋಟೋ ತೆಗೆಸಿ ತೋಷದಲಿ ಮರಳಿ.

## ೩೫೭. ಈ ಲಫಂಗರು

ಈ ಲಫಂಗರು ಮೊನ್ನೆ ಧರಿಸಿ ಬಿಳಿ ಟೋಪಿ
ಬೆಂಗಳೂರಿಗೆ ನಡೆದು ಕುಡಿಸಿದರು ಕಾಫಿ.
ಮತ್ತೆ ಕಾಫಿಯ ಜೊತೆಗೆ ಬಡಿಸಿದರು ದುಡ್ಡು
ಹೈನಾಯ್ತು ಅರೆನಿಮಿಷದಲಿ ಎಮ್ಮೆ ಗೊಡ್ಡು.

## ೩೫೮. ಭಾರತದ ವೈಶಿಷ್ಟ್ಯ

ಈ ಲೋಕದಲಿ ನಾಲಗೆಯ ಶ್ರೇಷ್ಠವೆಂದು
ತಜ್ಞ ಹೇಳಿದನಂತೆ ಭಾರತಕೆ ಬಂದು.
ಹೀಗಾಗಿ ನಾಲಗೆಗೆ ಇಲ್ಲ ಪುರುಸತ್ತು.
ಯಾವಾಗಲೂ ಮಾತು ಕೆರೆ ತುಂಬುವಷ್ಟು.

## ೩೫೯. ನನ್ನ ಉಪ್ಪಿನಕಾಯಿ

ಈ ಲೋಕದೊಳಗುಂಟು ನಾನಾ ತಮಾಷೆ
ಇದನೆಲ್ಲ ಸಂಗ್ರಹಿಸಬೇಕೆಂಬ ಆಸೆ
ಚೆನ್ನಾಗಿ ತೊಳೆದು ತುಸು ಖಾರಪುಡಿ ಹಚ್ಚಿ
ಚುಟಕದಲಿ ತುಂಬುವೆನು ನುಡಿಯಿಂದ ಮುಚ್ಚಿ.

## ೩೬೦. ಜೀವನಯಾತ್ರೆ

ಈ ಲೋಕ ಮನೆಯಲ್ಲ; ದೊಡ್ಡ ಹಾಟೆಲ್ಲು
ಒಂದೆರಡು ದಿನವಿದ್ದು ಮಾಡುವೆವು ಗುಲ್ಲು
ಆಮೇಲೆ ಮನೆಯ ನೆನಪಾಗುವುದು, ದೇವ.
ಹಿಂದಿರುಗುವೆವು ಇಲ್ಲಿಯೇ ಬಿಟ್ಟು ಜೀವ.

### ೩೬೧. ಈ ಲೋಕ

ಈ ಲೋಕವೆನ್ನುವುದು ಕಳ್ಳ ಬಾಜಾರ
ರಾಜ್ಯವಾಳುವ ಶಕ್ತಿ ಸುಳ್ಳು ಸರಕಾರ
ಕಳ್ಳರಿಗೆ, ಸುಳ್ಳರಿಗೆ ವಿಪರೀತ ದೋಸ್ತಿ
ಜನಕೋಟಿಗಳ ಸುಲಿದು ಮಾಡಿದರು ಆಸ್ತಿ.

### ೩೬೨. ಈ ಲೋಕವೇ ಸಾಕು

ಈ ಲೋಕವೇ ಸಾಕು, ನನಗೇಕೆ ಸ್ವರ್ಗ ?
ಸ್ವರ್ಗದೊಳಗುಂಟೇನು ಭೂಮಿಯ ನಿಸರ್ಗ ?
ಸ್ವರ್ಗದಲಿ ಮೀನ ಪಳದಿಗೆ ಜಾಗವಿಲ್ಲಾ
ತಿನಬೇಕು ಮಧುರ ಅಮೃತ ಮತ್ತೆ ಬೆಲ್ಲ.

### ೩೬೩. ಈ ವಕೀಲರು

ಈ ವಕೀಲರು ಕೊನೆಗೆ ಆಗಿ ಬೇಕಾರು
ಸಚಿವ ಸಂಪುಟ ಸೇರಿಕೊಳ್ಳುವರು ಕಾರು.
ರಾಜಕಾರಣದಿಂದ ಮಾಡಿದರೆ ದಂಧೆ.
ದೇಶಸೇವಕರಾಗಿ ಮೆರೆಯುವರು ಮುಂದೆ.

### ೩೬೪. ಗಣಪತಿಗೆ

ಈ ವರುಷ ಗಣಪತಿಗೆ ಯಾವುದೂ ರೊಟ್ಟಿ
ಕೊಡಬಾರದೆಂದು ನಿರ್ಧರಿಸಿದನು ಸೆಟ್ಟಿ
ಈ ವರುಷ ಕಳ್ಳಬಾಜಾರದಲಿ ಪಾಪ
ಸಿಗಲಿಲ್ಲವೆಂದು ಸೆಟ್ಟಿಗೆ ಬಂತು ಕೋಪ.

### ೩೬೫. ನೆರೆಮನೆಯ ಹುಡುಗ

ಈ ವರುಷ ನೆರೆಮನೆಯ ಹುಡುಗ ನಪಾಸು
ಆತನಿಗೆ ಅಜ್ಜಿ ಅಂದಳು; ರಾಗಿ ಬೀಸು
ಅಮ್ಮ ಎಂದಳು; ಅದೂ ಕೂಡ ಕಲಿತಿಲ್ಲ
ತಾಸು ತಾಸಿಗೆ ಮಾತ್ರ ತಿನ್ನುವನು ಬೆಲ್ಲ.

### ೩೬೬. ಈ ವರುಷ

ಈ ವರುಷ ಬರ ಬಿದ್ದು ಬೆಳೆಯೆಲ್ಲ ಹಾಳು.
ನೆರೆ ಬಂದು ಕಳೆದ ವರುಷಕೆ ಇಲ್ಲ ಕಾಳು;
ಮೂರನೆಯ ವರುಷ ಹಬ್ಬಿತು ಮಹಾ ಪಿಡುಗು
ನಾಲ್ಕನೆಯ ವರುಷ ಹೊಸ ಮಂತ್ರಿಗಳ ಗುಡುಗು.

### ೩೬೭. ಭಾಷಣವೆ ಹೆಚ್ಚು

ಈ ವರುಷ ಬೆಳೆ ಕಡಿಮೆ, ಭಾಷಣವೆ ಹೆಚ್ಚು
ಸಾಕು ಮಾತಾಡಿದ್ದು, ನೀ ಬಾಯಿ ಮುಚ್ಚು.
ಹೋದಹೋದಲ್ಲಿ ಪರಿಷತ್ತುಗಳ ಕೂಟ.
ಮನೆಗೆ ಮರಳಿದ ಬಳಿಕ ಸಿಗಲಿಲ್ಲ ಊಟ.

### ೩೬೮. ನಮ್ಮೂರ ಸೆಟ್ಟಿ

ಈ ವರುಷ ಮಳೆಯಿಲ್ಲ, ಬೆಳೆ ಪೂರ್ಣ ಬಾದು
ನಮ್ಮೂರ ಸೆಟ್ಟರಿಗೆ ಬಹಳೇ ಚಲೋದು.
ಕಾಳು ಕಡಿ ದವಸ ಧಾನ್ಯಗಳೆಲ್ಲ ತುಟ್ಟಿ
ಸೆಟ್ಟಿಯಾದನು ಕೊನೆಗೆ ಮತ್ತಷ್ಟು ಗಟ್ಟಿ.

### ೩೬೯. ಮಳೆರಾಯ

ಈ ವರ್ಷ ಮಳೆರಾಯನಿಗೆ ಹುಚ್ಚು ಭರ್ತಿ.
ನೆರೆ ತರಿಸಿ ಬೆಳೆ ಕೆಡಿಸಿ ಗಳಿಸಿದನು ಕೀರ್ತಿ.
ಕಳೆದ ವರುಷಕೆ ಭೂಪ ಅಡಗಿಕೊಂಡಿದ್ದ
ಬರ ತರಿಸಿ, ಈ ವರುಷ ಜೋರಾಗಿ ಎದ್ದ.

### ೩೭೦. ಇತಿಹಾಸದ ಪುಟಗಳು

ಈ ವರುಷ ಮಳೆ ಹೆಚ್ಚು; ಬೆಳೆಯಲ್ಲ ಹಾಳು
ಹೋದ ಸಲ ಬರಗಾಲ; ಸಿಗಲಿಲ್ಲ ಕಾಳು.
ಎರಡು ವರುಷದ ಹಿಂದೆ ಎದ್ದು ಬಿರುಗಾಳಿ
ಮನೆಗಳೆಲ್ಲಾ ಬಿದ್ದು ಬಡವರ ದಿವಾಳಿ.

## ೩೭೧. ಈ ವರುಷದ ದೀಪಾವಳಿ

ಈ ವರುಷ ಹೇಗುಂಟು ದೀವಳಿಗೆ ಹಬ್ಬ?
ಏನು ಹೇಳಲಿ ಅದರ ಶೌರ್ಯ! ಅಬ್ಬಬ್ಬ!
ಅಳಿಯದೇವರ ಎಲೆಯ ಮುಂದೆ ರಂಗೋಲಿ
ಬೆಳೆಗಳೆಲ್ಲಾ ಏರಿ ಮಾವನ ದಿವಾಳಿ.

## ೩೭೨. ವಿಧಾನಸಭೆಯಲ್ಲಿ

ಈ ವರೆಗೆ ಮುಖ್ಯಮಂತ್ರಿಗಳ ಕೈಯಿಂದ
ನಡೆದ ಉದ್ಘಾಟನೆಯ ವಿವರ ತಿಳಿಸೆಂದ
ಪ್ರತಿಯೊಂದು ಉದ್ಘಾಟನೆಗೆ ಹಿಡಿದ ವೆಚ್ಚ
ಎಷ್ಟೆಂದು ಕೇಳುವುದು ಸರಿಯಲ್ಲ ಹುಚ್ಚ.

## ೩೭೩. ಈ ವ್ಯಕ್ತಿ

ಈ ವ್ಯಕ್ತಿ ನೋಡಲಿಕ ಅತ್ಯಂತ ಸಾದಾ.
ನಡತೆ ನೋಡಿದರೆ ಯಾವುದು ಇಲ್ಲ ಸೀದಾ.
ಮೊನ್ನೆಯೇ ಆ ಬಡವನಿಗೆ ದಗಾ ಕೊಟ್ಟು
ಎರಡು ಕೈಯಿಂದಲೂ ಹಚ್ಚಿದನು ಬೊಟ್ಟು.

## ೩೭೪. ಮಿಸ್ ಪ್ರಿಂಟು

ಈ ಶ್ರೇಷ್ಠ ಗ್ರಂಥಕ್ಕೆ ಅಧ್ಯಾಯ ಮೂರು
ಮಿಸ್ ಪ್ರಿಂಟುಗಳ ಸಂಖ್ಯೆ ಭರ್ತಿ ಮುನ್ನೂರು
ಇದಕೆನ್ನುವರು ಆಧುನಿಕ ಛಾಪಖಾನೆ
ಅಖಿಲ ಕರ್ನಾಟಕದ ದೊಡ್ಡ ತಲೆಬೇನೆ.

## ೩೭೫. ಈಶ್ವರನ ಉಮೇದು

ಈಶ್ವರನಿಗೂ ಬಂತು ನೂತನ ಉಮೇದು
ಪಾರ್ವತಿಗೆ ಹೇಳಿದನು, ಮಾಡುವೆನು ಜಾದು,
ಮಾನವರು ಈ ಕಲ್ಲಿಗೆನ್ನುವರು ಲಿಂಗ
ಲಿಂಗದರ್ಶನಕಾಗಿ ಹರಿಯುವಳು ಗಂಗಾ.

### ೩೭೬. ನನ್ನ ಮರಣದ ವಾರ್ತೆ

ಈ ಸುದ್ದಿ ಕೇಳಿದೆನು ನಾನು ಸತ್ತಾಗ;
ಈ ಹೊತ್ತು ಕವಿಯ ಬಾಯಿಗೆ ಬಿತ್ತು ಬೀಗ
ಮರೆಯಾಯ್ತು ಚುಟಕ ಬರೆಯುವ ಮಹಾವ್ಯಾಧಿ.
ಜನರ ನಾಲಗೆಯಲ್ಲಿ ಪಡೆದನು ಸಮಾಧಿ.

### ೩೭೭. ಲೇಖನಿಯ ತುರಿಕೆ

ಈ ಹಾಳು ಲೇಖನಿಗೆ ಮೈತುಂಬ ತುರಿಕೆ
ಓ ಮಗನೆ, ಇದು ಕೂಡ ದೇವರದೆ ಹರಕೆ
ಚುಟಕ ಹುಟ್ಟಿದ ರೀತಿ ಗೊತ್ತುಂಟೆ ರಾಮ ?
ನಿತ್ಯವೂ ಮೈ ತುರಿಸಿಕೊಂಡ ಪರಿಣಾಮ.

### ೩೭೮. ಗಂಡು–ಹೆಣ್ಣು

ಈ ಹುಚ್ಚಿನಿಂದ ನೀವಾಗುವಿರಿ ಬೆಂಡು.
ಹೌದು ಸಖಿ, ಹೌದು ಸಖಿ, ನಾನಲ್ವೆ ಗಂಡು ?
ಯಾವಾಗಲೂ ಹುಚ್ಚು ಗಂಡಿಗೇ ಜಾಸ್ತಿ
ಮತ್ತೆ ಹೆಣ್ಣಿಗೆ ಬೇಕು ಬಂಗಾರದಾಸ್ತಿ.

### ೩೭೯. ಈ ಹೆಗ್ಗಣ

ಈ ಹೆಗ್ಗಣದ ಬಣ್ಣವೇ ಬೇರೆ ತಾನೆ ?
ಇದಕ್ಕೆನ್ನುವರು ಜನರ ನೂತನ ನಮೂನೆ.
ಬಿಳಿ ಕೋಳಿಮೊಟ್ಟೆಯಂತೆಯೆ ಇದರ ಬಣ್ಣ
ತಿಂದು ಹಾಕುವ ರಾಶಿಗಳು ಅಲ್ಲ ಸಣ್ಣ.

### ೩೮೦. ಸೀಸೆಗಳ ಜಪ್ತಿ

ಈ ಹೊತ್ತು ಇಪ್ಪತ್ತು ಸೀಸೆಗಳ ಜಪ್ತಿ,
ಈ ಜಪ್ತಿಯಿಂದ ಪೋಲಿಸರಿಗೆ ತೃಪ್ತಿ
ತೃಪ್ತಿಯಷ್ಟೇ ಅಲ್ಲ; ಪ್ರಾಪ್ತಿಯೂ ಉಂಟು.
ಇಂಥ ನಾಟಕ ವರುಷದೊಳಗೆ ಏಳೆಂಟು.

### ೩೮೧. ನಡುದಾರಿಯಲ್ಲಿ

ಈ ಹೊತ್ತು ಇಷ್ಟು ತಡವಾಯ್ತೇಕೆ ಹೇಳಿ ?
ನಡುದಾರಿಯಲ್ಲಿ ಸಿಕ್ಕಿದಳು ಮಂಕಾಳಿ,
ಆಗಾಗ್ಗೆ ಸಿಗಲು ಕಾರಣವೇನು ಅಂದೆ ?
ಹೀಗೆ ಸಂಶಯ ತಾಳಬಾರದು, ಸುನಂದೆ.

### ೩೮೨. ರಾಜಕಾರಣದ ಗುಟ್ಟು

ಈ ಹೊತ್ತು ಈ ಕಡೆಗೆ ನಾಳೆ ಆ ಬದಿಗೆ
ತೇಲಿಬಿಟ್ಟನು ನೀರು ಬಂದಂತೆ ನದಿಗೆ,
ಭದ್ರದೋಣಿಯನೇರಿ ಹಾಕಿದನು ಹುಟ್ಟು
ಇದಕೆನ್ನುವರು ರಾಜಕಾರಣದ ಗುಟ್ಟು.

### ೩೮೩. ಈ ಹೊತ್ತು

ಈ ಹೊತ್ತು ಈ ಕಡೆಗೆ, ನಾಳೆ ಆ ಬದಿಗೆ,
ನೇತಾಡುತಿದೆ ಇವನ ಕುರ್ಚಿ ಅಡಿಗಡಿಗೆ
ಕುಳಿತುಕೊಳ್ಳುವನು, ಸಖಿ, ಸಿಕ್ಕಿದೆಡೆ ಜಾಗ.
ಇದಕೆನ್ನುವರು ರಾಕಾರಣದ ತ್ಯಾಗ.

### ೩೮೪. ಕವಿಯ ಮದ್ಯ

ಈ ಹೊತ್ತು ಕುಡಿಯಲಿಲ್ಲವೊ ನಾನು ಮಧ್ಯ.
ಹೀಗಾಗಿ ಹುಟ್ಟಲಿಲ್ಲವೋ ಯಾವ ಪದ್ಯ.
ಕವಿಗಳಿಗೆ ಮೊದಲು ಬೇಕಾದದ್ದು ಕಳ್ಳು,
ಕುಡಿಕುಡಿದು ಹಿಡಿಯಬೇಕೆನ್ನುವೆನು ಮಳ್ಳು.

### ೩೮೫. ಈ ಹೊತ್ತು

ಈ ಹೊತ್ತು ಕೈಗೆ ಸಿಕ್ಕಿದ್ದಷ್ಟು ಸತ್ಯ.
ನಾಳೆಯನು ನಂಬಿ ಕುಳಿತರೆ ಆತ್ಮಹತ್ಯ.
ನಾಳೆ ಬಲ್ಲವರಾರು ಈ ಲೋಕದೊಳಗೆ ?
ಆದಷ್ಟು ಹಾಕಿಕೊಳಿ ಈ ಹೊತ್ತು ಒಳಗೆ.

### ೩೮೬. ಚುಟಕ ಮೂವತ್ತು

ಈ ಹೊತ್ತು ಗೀಚಿದೆನು ಚುಟಕ ಮೂವತ್ತು
ನನ್ನಾಕೆ ಹೇಳಿದಳು; ಹೋಗುವವು ಸತ್ತು,
ಈ ಮಾತು ಸುಳ್ಳಲ್ಲ ಮಿತಿ ಬೇಕು ತಾನೆ?
ಕೂಸು ಹುಟ್ಟುವ ಮೊದಲು ಬರಬೇಕು ಬೇನೆ.

### ೩೮೭. ಮನದನ್ನೆಗೆ

ಈ ಹೊತ್ತು ಚಳಿ ಬಹಳ, ಸನಿಯದಲಿ ಬಾರೆ.
ತಂದೆ ನೀಡಿದ ರೇಶಿಮೆಯ ಶಾಲು ತಾರೆ.
ಹಾಯಾಗಿ ಇಬ್ಬರೂ ಮಲಗೋಣ ಜೊತೆಗೆ.
ಮನದೆನ್ನೆ, ಹೋಗುವುದು ಬೇಡ ಹರಿಕತೆಗೆ.

### ೩೮೮. ಉಪವಾಸ

ಈ ಹೊತ್ತು ನನ್ನ ಹೆಂಡತಿಗೆ ಉಪವಾಸ.
ಊಟ ಮಾಡುವುದಿಲ್ಲ, ಹೇ ಶ್ರೀನಿವಾಸ.
ಮಣಗಟ್ಲೆ ತಿಂದುಬಿಡುವಳು ಫಲಹಾರ.
ಈ ತರದ ಉಪವಾಸದಿಂದ ಉದ್ಧಾರ.

### ೩೮೯. ಹುಟ್ಟಿದ ದಿವಸ

ಈ ಹೊತ್ತು ನಾನು ಹುಟ್ಟಿದ ದಿವಸ, ಗೆಳತಿ
ನೀನಾಗಬೇಕು ಸಿಂಗರಿಸಿ ಮದುವಳತಿ.
ಈ ದಿವಸ ತಿನಿಸು ತರತರದ ಕಜ್ಜಾಯ
ನೂರು ವರುಷದ ತನಕ ಹಬ್ಬುವುದು ಪ್ರಾಯ.

### ೩೯೦. ಗಾಂಧೀ ಜಯಂತಿ

ಈ ಹೊತ್ತು ಪುಣ್ಯದಿನ ಗಾಂಧೀ ಜಯಂತಿ!
ಆಚರಿಸಬೇಕೆಂದು ಮಾಡಿದರು ತಂತಿ.
ಇಂದಾದರೂ ನೀವು ಸರಿಯಾಗಿ ನಡೆದು,
ನಾಳೆ ದಾಂದಲೆ ಹಾಕಿ ಬೇಕಷ್ಟು ಕುಡಿದು.

## ೩೯೧. ಹೊಸ ಸುಗ್ಗಿ ಮೇಳ

ಈ ಹೊತ್ತು ಬಂದದ್ದು ಹೊಸ ಸುಗ್ಗಿ ಮೇಳ.
ಜೊತೆಗೆ ಕರಡಿಯ ಬದಲು ಐದಾರು ತೋಳ
ಈ ಪ್ರಜಾರಾಜ್ಯದಲಿ ತೋಳಗಳ ಸಂಖ್ಯೆ
ಹೆಚ್ಚಾದ ಸ್ಥಿತಿ ನಿನಗೆ ಗೊತ್ತಿಲ್ವೆ, ಮಂಕೆ ?

## ೩೯೨. ನರನ ಜೀವನ

ಈ ಹೊತ್ತು ಮುಂಜಾನೆ ಬಂತು ಬಿಕನಾಸಿ
ಮತ್ತೆ ಸಂಜೆಗೆ ಬಂತು ರೂಪಾಯಿ ರಾಶಿ
ಮಧ್ಯರಾತ್ರಿಗೆ ತಂತಿ ಅತ್ತೆ ಮನೆಯಿಂದ
ಏಳನೆಯ ಮಗು ಹುಟ್ಟಿ ಭರ್ತಿ ಆನಂದ.

## ೩೯೩. ಹೊಸ ಸುದ್ದಿ

ಈ ಹೊತ್ತು ಮುಂಜಾನೆ ಬಂತು ಹೊಸ ಸುದ್ದಿ ;
ಹೋರಾಡಿದರು ತಮ್ಮ ತಮ್ಮೊಳಗೆ ಗುದ್ದಿ.
ಸರಕಾರ ವಹಿಸಿಕೊಂಡನು ರಾಜ್ಯಪಾಲ
ಎಲ್ಲವೂ ನಿನ್ನದೇ ಆಟ, ಘನಲೋಲ.

## ೩೯೪. ಶಾಸ್ತ್ರಿಗಳು ಹೇಳಿದ್ದು

ಈ ಹೊತ್ತು ಮುಂಜಾನೆ ಶಾಸ್ತ್ರಿಗಳು ಬಂದು
ಹೇಳಿದರು ಚಂದ್ರನೂ ಗತಿಗೆಟ್ಟನೆಂದು
ಕೆಲವು ಮ್ಲೇಚ್ಛರು ಚಂದ್ರಲೋಕವನ್ನೇರಿ
ಭ್ರಷ್ಟಗೊಳಿಸಿದರಂತೆ ಮೈಮೇಲೆ ಹಾರಿ.

## ೩೯೫. ರಣರಂಗದ ಸುದ್ದಿ

ಈ ಹೊತ್ತು ರಣರಂಗದಲಿ ಏನು ಸುದ್ದಿ ?
ನಮ್ಮ ವೈಮಾನಿಕರು ಕಲಿಸಿದರು ಬುದ್ಧಿ.
ಪಾಕು ಹಾರಿಸಿಬಿಟ್ಟ ನೂರಾರು ಜೆಟ್ಟು
ನಮ್ಮ ಆಕಾಶದಲಿ ಹುಡಿಯಾಗಿ ಹಿಟ್ಟು.

## ೩೯೬. ಆಕೆಯನು ಕಂಡೆ

ಈ ಹೊತ್ತು ಸಂಜೆಯಲಿ ಆಕೆಯನು ಕಂಡೆ.
ಅವಳ ಜಡೆಯೊಳಗಿತ್ತು ಮಲ್ಲಿಗೆಯ ದಂಡೆ
ಅವಳ ಕಣ್ಣೊಳಗಿತ್ತು ಕಾಡಿಗೆಯ ಕಪ್ಪು.
ಹುಚ್ಚನಾದರೆ ನಾನು ಆಗುವುದೆ ತಪ್ಪು?

## ೩೯೭. ಸ್ವಾತಂತ್ರ್ಯ ದಿನದ ಪ್ರತಿಜ್ಞೆ

ಈ ಹೊತ್ತು ಸ್ವಾತಂತ್ರ್ಯ ದಿನದ ಆಚರಣೆ
ಪ್ರತಿಯೊಬ್ಬನೂ ತೆಗೆದುಕೊಳ್ಳಲಿ ಪ್ರತಿಜ್ಞೆ,
"ಮೈಮುರಿದು ದುಡಿಯುವೆನು ನನ್ನ ಸಲುವಾಗಿ"
ದುಡಿದಂತೆ ಆಗುವುದು ಇಡಿ ದೇಶಕಾಗಿ.

## ೩೯೮. ಈ ಹೊತ್ತು

ಈ ಹೊತ್ತು ಹಿಡಿಯಲಿಲ್ಲವೋ ನನಗೆ ಮಳ್ಳು
ಹೀಗಾಗಿ ಬರೆದದ್ದು ಸಂಪೂರ್ಣ ಪೊಳ್ಳು.
ಮಳ್ಳಿನೊಳಗುಂಟು ಕವಿತೆಗಳ ಒಳಗುಟ್ಟು
ಇಲ್ಲದಿದ್ದರೆ ಕವಿಗೆ ಬರಬೇಕು ಸಿಟ್ಟು.

## ೩೯೯. ಲೋಹಗಳು

ಉಕ್ಕು ಎಂಬುದು ಸೊಕ್ಕು, ಮೋಹ ಬಂಗಾರ
ತಾಮ್ರ ಹಿತ್ತಾಳಿ ಎನ್ನುವುದು ಸಂಸಾರ.
ಬೆಳ್ಳಿ ಎಂಬುದು ಮನಸು, ಟಿನ್ನು ಒಣರಗಳೆ.
ಹೃದಯ ಸ್ಟೇನ್‌ಲೆಸ್ ಆಗಿ ಬದುಕು ನೀ, ಮಗಳೆ.

## ೪೦೦. ಇತಿಹಾಸದ ಪುಟ

ಉಗ್ರ ಭಾಷಣ ಬಿಗಿದ ಈ ಕ್ರಾಂತಿಕಾರ
ಜೈಲು ಭೋಗಿಸುವಾಗ ಪೂರ್ಣ ಲಾಚಾರ.
ದಮ್ಮಯ್ಯ! ನನಗೊಮ್ಮೆ ಬಿಟ್ಟು ಬಿಡಿ, ಸ್ವಾಮಿ.
ಸಾಮ್ರಾಜ್ಯದೊಳಗಿರಲಿ ಈ ಭರತ ಭೂಮಿ.

### ೪೦೧. ಮಂತ್ರಿಗಳ ಸ್ಪಷ್ಟೀಕರಣ

ಉತ್ತರಿಸಿದರು ಮಂತ್ರಿ ಈ ರೀತಿಯಾಗಿ;
ರಸ್ತೆ ಮಾಡುವ ಖಾತೆ ಲೋಕೋಪಯೋಗಿ
ಒಡೆದು ಹೋದರೂ ಪೂರ್ಣ ರಸ್ತೆಯ ಸಿಮೆಂಟು
ಸಾರಿಗೆಯ ಸೌಕರ್ಯ ಸರಿಯಾಗಿ ಉಂಟು.

### ೪೦೨. ಕವಿಯ ಗಮನಕ್ಕೆ

ಉದ್ದಾಮ ಕವಿಯಾಗಲೆಂದು ಮುದ್ದಾಮು
ಕಾವ್ಯ ಬರೆದರೆ ಕವಿಯ ನೆತ್ತಿಗೆ ಮುಲಾಮು.
ಗಳಿಸಬೇಕೆಂದ ಸರಕಾರದ ಪ್ರಶಸ್ತಿ
ಕವನ ಬೆರೆದರೆ ಕಾವ್ಯವಾಗುವುದು ಕುಸ್ತಿ.

### ೪೦೩. ಕ್ರಾಂತಿಕಾರ

ಉದ್ಯಾನದೊಳಗಿದ್ದ ಹೂವುಗಳನೆಲ್ಲಾ
ಹಿಂಡಿದರೆ ಫಲವೇನು ? ಹೊರಡುವುದೆ ಬೆಲ್ಲ ?
ಹೀಗೆಂದು ಕ್ರಾಂತಿಕಾರನು ಕೋಪಗೊಂಡು
ಹೂವುಗಳ ಸಂಹರಿಸಿದನು ತುಂಡು ತುಂಡು.

### ೪೦೪. ಉರುಳಿ ಬೀಳಲು

ಉರುಳಿ ಬೀಳಲು ಕೆಟ್ಟ ಸರಕಾರ ಕೊನೆಗೆ
ಹಚ್ಚಿದರು ಹರುಷ–ಪಟಗಳನು ಮನೆಮನೆಗೆ
ಪ್ರತಿಪಕ್ಷ ವಹಿಸಿಕೊಂಡಾಗ ಅಧಿಕಾರ
ಅಸ್ತಿತ್ವದಲಿ ಬಂತು ಭ್ರಷ್ಟ ಸರಕಾರ.

### ೪೦೫. ನಾನೇ ಹುಷಾರು

ಉಳಿದವರಿಗಿಂತಲೂ ನಾನೇ ಹುಷಾರು
ಆದರೂ ನನಗಿವರು ಕುಡಿಸಿದರು ಸಾರು.
ಅವನ ನೇಮಿಸಿ ನನಗೆ ಕೊಡಲಿಲ್ಲ ಜಾಗ.
ಆ ಕೆಲಸ ಅವನಿಂದ ಸರಿಯಾಗಿ ಆಗ.

### ೪೦೬. ಚಂದ್ರನಿಗೆ ಸಲಹೆ

ಉಳಿಸಿಕೊಳಲಿಕೆ, ಚಂದ್ರ, ನಿನ್ನ ಕುಲಗೋತ್ರ
ನೀನಾಗಬೇಕಯ್ಯ ಒಂದು ನಕ್ಷತ್ರ
ಮತ್ತೆ ಚಿಕ್ಕೆಯ ಹಾಗೆ ಬಲು ದೂರ ಹೋಗು.
ಇಲ್ಲದಿದ್ದರೆ, ಹಿಡಿಯುವರು ನಿನ್ನ ಮೂಗು.

### ೪೦೭. ಗೇಣಿ ಪದ್ಧತಿ

ಉಳುವವನು ಜಠರದಲಿ ಉರಿಗಾಳಿ ಬೀಸಿ
ಕನ್ನಡ ಕರಾವಳಿಗೆ ಬಂತು ಬಿಕನಾಸಿ
ಗದ್ದೆಯಲಿ ಬೆಳೆದದ್ದು ಕೊಳಗ ಇಪ್ಪತ್ತು
ಗೇಣಿ ಹಾಕಿದ ಬಳಿಕ ಊಟ ಒಪ್ಪತ್ತು.

### ೪೦೮. ಮಂತ್ರಿಪದದ ಗ್ಯಾರಂಟಿ

ಉಂಟೇನು ಈ ಮಂತ್ರಿಪದದ ಗ್ಯಾರಂಟಿ ?
ಕೊನೆಯವರೆಗೂ ಕುಳಿತು ಕೊಳಬಹುದೆ ಅಂಟಿ ?
ಈ ಸಾರೆ ವಿಪರೀತ ಬಿರುಗಾಳಿ ಎದ್ದು
ಆ ಬದಿಗೆ ಈ ಬದಿಗೆ ಹೋಗುವರು ಬಿದ್ದು.

### ೪೦೯. ಬಾಳೆ ಎಲೆ

ಊಟಕ್ಕೆ ಬಾಳೆ ಎಲೆ, ಆ ಮೇಲೆ ಏನು ?
ಆಮೇಲೆ ವೀಳ್ಯದೆಲೆ, ಗೊತ್ತಿಲ್ಲವೇನು ?
ಎಲೆಯಾಗಿ ಕಾಯಾಗಿ ಆಮೇಲೆ ಹಣ್ಣು
ಕೂಸಾಗಿ ಪ್ರಾಯ ಬಂದಾಗ ಅದು ಹೆಣ್ಣು.

### ೪೧೦. ಅಜ್ಜಿ ಹೇಳಿದ್ದು

ಊಟಕ್ಕೆ ಬಾಳೆ ಎಲೆ ಶ್ರೇಷ್ಠವಾದದ್ದು
ಇಡ್ಲಿ ದೋಸೆಗೆ ಶ್ರೇಷ್ಠವಾದದ್ದು ಉದ್ದು.
ಕಿಡಿಗೇಡಿ ಮಕ್ಕಳಿಗೆ ಕೊಡಬೇಕು ಗುದ್ದು.
ಹೆಂಡತಿಗೆ ಮಾಡಬಾರದು ಹೆಚ್ಚು ಮುದ್ದು.

## ೪೧೧. ತಿನ್ನಿ ಯಾಲಕ್ಕಿ

ಊಟಕ್ಕೆ ಸಿಗಲಿಲ್ಲ ಸಾಕಷ್ಟು ಅಕ್ಕಿ
ಏನು ಪರವಾ ಇಲ್ಲ; ತಿನ್ನಿ ಯಾಲಕ್ಕಿ
ಬಾಯಿ ತುಂಬಾ ಭರ್ತಿ ಪರಿಮಳದ ಸುಗ್ಗಿ.
ಮುತ್ತು ಕೊಡುವಳು ಆಕೆ ಮನವಾರೆ ಹಿಗ್ಗಿ.

## ೪೧೨. ಭಿಕ್ಷೆ

ಊರೆಲ್ಲ ತಿರುಗಿದೆನು ಜೋಳಿಗೆಯ ಹಾಕಿ.
ಎಲ್ಲರೂ ನೀಡಿದರು ಇಡಲಿಲ್ಲ ಬಾಕಿ.
ಪ್ರತಿಯೊಂದು ಗಿಡಬಳ್ಳಿ ಕೊಟ್ಟ ಹನಿಯಿಂದ
ಕೋಟಿ ಜೇನ್ನೊಣಗಳಿಗೆ ಹೂವ ಮಕರಂದ.

## ೪೧೩. ತನ್ನರಿವು

ಊರ ಸೂಳೆಗೆ ಗೊತ್ತು ತನ್ನ ಕಿಮ್ಮತ್ತು
ಮಾರಾಟ ಮಾಡುವಳು ಒಂದು ಮತ್ತು
ಕೊಳ್ಳುವವನಿಗೆ ಮಾತ್ರ ಹಣದ ಒಣ ಜಂಬ.
ನೋಡಿಕೊಳ್ಳಲಿ ಆತ ತನ್ನ ಪ್ರತಿಬಿಂಬ.

## ೪೧೪. ಎಚ್ಚರಾದೊಡನೆ

ಎಚ್ಚರಾದೊಡನೆ ಜನತಾ ಕುಂಭಕರ್ಣ
ಸಂಪೂರ್ಣ ಬದಲಾಯ್ತು ಭಾರತದ ಬಣ್ಣ
ರಾಜಕೀಯದ ವಿಧಿಗೆ ಮೂಡಿ ಹೊಸ ಕಣ್ಣು
ಅತಿರಥರು ಮಹಾರಥರು ಮುಕ್ಕಿದರು ಮಣ್ಣು

## ೪೧೫. ಒಂದು ಜಾಹೀರಾತು

ಎದ್ದ ಕೂಡಲೆ ನೀವು ತಿನ್ನಬೇಕು ಬ್ರೆಡ್ಡು
ಪತ್ತೆಯಾಗದು ನೀವು ತಿಂದರೂ ದುಡ್ಡು
ತಿಂದದ್ದು ಅರಗಳಿಗೆಯಲ್ಲಿ ಕರಗಿ ಗ್ಯಾಸು
ಯಾರಿಗೂ ಪತ್ತೆಯಾಗದೆ ಬಾಳು ಲೇಸು.

### ೪೧೬. ದೊಡ್ಡ ಕೆಲಸ

ಎದ್ದ ಕೂಡಲೆ ಮೊಟ್ಟಮೊದಲು ಪ್ರತಿ ದಿವಸ
ವೃತ್ತ ಪತ್ರಿಕೆ ಓದುವುದು ದೊಡ್ಡ ಕೆಲಸ
ಭೂಪ್ರದಕ್ಷಿಣೆಯ ಈ ಸಂಚಾರದಿಂದ,
ನಿತ್ಯವೂ ತಲೆ ಕೆಟ್ಟುಹೋಗುವುದು, ಕಂದ.

### ೪೧೭. ಎದ್ದೇಳು

ಎದ್ದೇಳು, ಎದ್ದೇಳು ಮಲಗಬೇಡಯ್ಯಾ
ಅಲ್ಲಲ್ಲಿ ನಡೆಯುತಿದೆ ತಕಧಿನ್ನ ಥೈಯ್ಯಾ
ಅವರ ಜೊತೆಯಲಿ ನಾವು ಹಾಕೋಣ ಹೆಜ್ಜೆ
ನಮ್ಮ ಕಾಲಿಗೆ ಅವರು ಕಟ್ಟುವರು ಗೆಜ್ಜೆ.

### ೪೧೮. ಎರಡು ಜಾತ್ರೆ

ಎರಡು ಕಡೆಗೂ ಸೇರಿದವು ಎರಡು ಜಾತ್ರೆ
ತುಂಬಿಹೋದವು ಗೊತ್ತುವಳಿಯಿಂದ ಪಾತ್ರೆ
ಎಲ್ಲರೂ ಚಪ್ಪಾಳೆ ತಟ್ಟಿದರು ಜೋರು.
ಇಣುಕಿ ನೋಡಲು ಪಾತ್ರೆಯಲಿ ಬರೀ ನೀರು.

### ೪೧೯. ಸಚಿವರಿಗೆ ಹೇಳಿದ್ದು

ಎರಡು ಕೈಯಿಂದ ಮಾಡುವೆ ನಮಸ್ಕಾರ
ನಮ್ಮಿಂದ ಆದಷ್ಟು ಕೊಡಿ ಪುರಸ್ಕಾರ
ನನಗೆ ಸಿಕ್ಕಿದ ಲಾಭದಲಿ ಸ್ವಲ್ಪ ನಿಮಗೆ
ಯಾರಿಗೂ ಪತ್ತೆಯಾಗದೆ ಕೊಡುವೆ ಕೊನೆಗೆ.

### ೪೨೦. ಸರಕಾರಿ ಪಕ್ಷ

ಎರಡು ಕೈಯಿಂದಲೂ ನುಂಗಲಿಕೆ ಭಕ್ಷ್ಯ.
ಎಲ್ಲರೂ ಸೇರಿದರು ಸರಕಾರಿ ಪಕ್ಷ
ಶೇಕಡಾ ತೊಂಬತ್ತರಿಗೆ ಇಲ್ಲ ಸೀಟು
ವ್ಯರ್ಥವಾಯಿತು ಇವರು ಹಚ್ಚಿದ ಗಿಲೀಟು.

## ೪೨೧. ತವರಿಂದ ಮರಳಿದಾಗ

ಎರಡು ತಿಂಗಳ ಮೇಲೆ ನೀನಿಂದು ಬಂದೆ.
ನನ್ನ ಸಲುವಾಗಿ, ಸಖಿ ಏನೇನು ತಂದೆ?
ಆಕೆ ಅಂದಳು: ಕೋಡಬಳೆ ಮತ್ತು ಲಾಡು
ನನಗೆ ಎರಡೂ ಬೇಡ, ಸವಿ ಮುತ್ತು ನೀಡು.

## ೪೨೨. ತಟಸ್ಥ ಧೋರಣೆ

ಎರಡು ತೋಳಗಳ ನಡುಮಧ್ಯದಲಿ ಕೂತು
ಮುಗುಳುನಗೆ ಬೀರಿ ಆಡೋಣ ಸವಿಮಾತು
ನಮಗೆ ವೈರಿಗಳಿಲ್ಲ; ಬೇಡ ಬಂದೂಕು
ಕೈಯೊಳಗೆ ಸಣ್ಣ ಕೋಲಿದ್ದರೂ ಸಾಕು.

## ೪೨೩. ಮಕ್ಕಳು

ಎರಡು ಮಕ್ಕಳು ಹುಟ್ಟಿದರೆ ಬಾಳು ಹಸಿರು.
ಹನ್ನೆರಡು ಹುಟ್ಟಿದರೆ ಸಂಪೂರ್ಣ ಕೆಸರು
ಹದಿನಾರು ಹುಟ್ಟಿದರೆ ಸಂಸಾರ ಬೆಂಕಿ.
ಸರಿಯಾಗಿ ತೊಟ್ಟುಕೊಳ್ಳಲಿ ಮಡದಿ ವಂಕಿ.

## ೪೨೪. ವಕೌಟುಗಳು

ಎರಡು ವಾರಗಳಲ್ಲಿ ಮೂರು ವಾಕೌಟು.
ಇದಕೆನ್ನುವರು ರಾಜಕಾರಣದ ಸೌಟು
ಅನ್ನ ಬಡಿಸುವುದಿಲ್ಲ ಈ ಸೌಟಿನಿಂದ
ಮುಂದಿನ ಚುನಾವಣೆಗೆ ಅನುಕೂಲ, ಕಂದ.

## ೪೨೫. ಚುನಾವಣೆಯಲ್ಲಿ

ಎರಡು ಸಲ ಬಿದ್ದೆ ನಾ ಒಂದು ಸಲ ಗೆದ್ದು,
ಬಿದ್ದಾಗಲೂ ಮಾಡಿದೆನು ಭರ್ತಿ ಸದ್ದು.
ನನ್ನ ಸದ್ದಿಗೆ ಅಂಜಿ ಓಡಿದವು ಗೂಬೆ.
ಮತ್ತೆ ಕಾಂ ಕಾಂ ಎಂದು ಒದರಿದವು ಕಾಗೆ.

## ೪೨೬. ಎರಡು ಹುಟ್ಟಿದ ಬಳಿಕ

ಎರಡು ಹುಟ್ಟಿದ ಬಳಿಕ ಇನ್ನು ಸಾಕೆಂದು
ನಿತ್ಯವೂ ನುಂಗಿದರು ಗುಳಿಗೆಗಳ ತಂದು
ಮುಂದೆ ಏನಾಯ್ತು ಗೊತ್ತುಂಟೆ, ಮಂಕಾಳಿ ?
ಮೂರನೆಯ ಸರ್ತಿ ಹುಟ್ಟಿತು ಅವಳಿಜವಳಿ.

## ೪೨೭. ಜಿಲ್ಲಾ ಕಛೇರಿ

ಎಲ್ಲ ಕಡೆಗೂ ಈಗ್ಗೆ ನಡೆದಿದೆ ರಿಪೇರಿ.
ಇದಕೊಂದೆ ಅಪವಾದ ಜಿಲ್ಲಾ ಕಛೇರಿ.
ಸಂಪೂರ್ಣ ಕಿತ್ತೊಗೆದು ಹೊಸದಾಗಿ ಬೇರೆ
ಕಟ್ಟಿದರೆ ಮಾತ್ರವೇ ಸುಖವುಂಟು, ನೀರೆ.

## ೪೨೮. ಡೊಂಬರಾಟ

ಎಲ್ಲ ಕಡೆಗೂ ನಡೆಯುತಿದೆ ಡೊಂಬರಾಟ.
ಈ ಪ್ರಜಾರಾಜ್ಯದಲಿ ಇದಕಿಲ್ಲ ತೋಟಾ.
ಡೋಲು ಮುಗಿಯಲು ಕೋಲು ಹಿಡಿಯುವರು ಉದ್ದ.
ಡೊಂಬರಾಟವ ಮೆಚ್ಚಿ ಮರಳಿದನು ಪೆದ್ದ.

## ೪೨೯. ಕೊರತೆ

ಎಲ್ಲದಕ್ಕೂ ಕೊರತೆ ಈ ದೇಶದೊಳಗೆ
ಸಿಕ್ಕುವುದು ಕೈ ಹಾಕಿದರೆ ಒಳಗೆ ಒಳಗೆ
ಪಾತಾಳದಿಂದ, ಸಖಿ, ಏಳುವುದು ಮೇಲೆ,
ಇದಕೆನ್ನುವರು ವರ್ತಕರ ಮಹಾಲೀಲೆ.

## ೪೩೦. ಶೂನ್ಯ

ಎಲ್ಲದಕ್ಕೂ ಮುಖ್ಯವಾದದ್ದು ಶೂನ್ಯ.
ನಮ್ಮ ಸರಕಾರಕ್ಕೆ ಇದು ಪೂರ್ಣ ಮಾನ್ಯ
ಒಮ್ಮೊಮ್ಮೆ ಈ ಶೂನ್ಯ ಬಲಬದಿಗೆ ಸೇರಿ
ಸರಕಾರಿ ನವಿಲುಗಳು ಹೊಡೆಯುತಿವೆ ಭೇರಿ.

### ೪೩೧. ಕಾಗೆ

ಎಲ್ಲ ಪಕ್ಷಿಗಳಲ್ಲಿ ಕಾಗೆಯೇ ಜಾಣ.
ಸತ್ತ ಜನರಿಗೆ ಕಾಗೆಯಿಂದ ನಿರ್ವಾಣ.
ಶ್ರಾದ್ಧದಿನ ಸುತ್ತಾಡಿ ಆಕಾಶವನ್ನ
ಸತ್ತವರ ಬಾಯೊಳಗೆ ಹಾಕುವುದು ಅನ್ನ.

### ೪೩೨. ಎಲ್ಲ ಪಕ್ಷಿಗಳಲ್ಲಿ

ಎಲ್ಲ ಪಕ್ಷಿಗಳಲ್ಲಿ ಕಾಗೆಯೇ ಶ್ರೇಷ್ಠ
ಕಾಗೆ ಎಂದರೆ ಸತ್ತ ಜನರಿಗೂ ಇಷ್ಟ.
ಕಾಗೆ ಇದ್ದರೆ ಮಾತ್ರ ಸತ್ತವರು ಬದುಕಿ
ಊಟ ಮಾಡುವರೆಂದು ಹೇಳಿದರು ಮುದುಕಿ.

### ೪೩೩. ಮಾನವನ ಉಡ್ಡಾಣ

ಎಲ್ಲ ಪ್ರಾಣಿಗಳಲ್ಲಿ ಮನುಜನೇ ಜಾಣ.
ಚಂದ್ರಲೋಕಕ್ಕೆ ಮಾಡಿದನು ಉಡ್ಡಾಣ
ಜೊತೆಗೆ ತಂದದ್ದೇನು ? ಬರಿ ಕಲ್ಲುಗುಂಡು
ಹತ್ತಲಿಲ್ಲವೊ ಕೈಗೆ ಚಂದಿರನ ಚಂಡು.

### ೪೩೪. ಎಲ್ಲಮ್ಮನ ಜಾತ್ರೆ

ಎಲ್ಲಮ್ಮನಿಗೆ ಗೊತ್ತು ಕನ್ನಡ ಮರಾಠಿ.
ಪ್ರತಿ ವರುಷ ನೆರೆಯುತಿದೆ ಜನ ಕೋಟಿ ಕೋಟಿ.
ಎಲ್ಲ ಭಕ್ತರಿಗಾಗಿ ಉಂಟು ಈ ಗುಡ್ಡ
ಯಾರು ಮಾತಾಡಬಾರದು ಅಡ್ಡ-ತಿಡ್ಡ.

### ೪೩೫. ಮುಳ್ಳು

ಎಲ್ಲರೂ ಉತ್ತಮರು ಎನ್ನುವುದು ಸುಳ್ಳು.
ಈ ಕೆಟ್ಟ ಜಗದೊಳಗೆ ಇರಬೇಕು ಮುಳ್ಳು.
ಹೀಗೆಂದು ಕಳ್ಳಿಗಿಡ ಪದ ಹಾಡಲಾಗಿ
ಅಹುದೆಂದು ತಲೆದೂಗಿದಳು ಹೂ ಗುಲಾಬಿ.

## ೪೩೬. ಅಜ್ಜ ಹೇಳಿದ್ದ

ಎಲ್ಲರೂ ಕುಳಿತುಕೊಳ್ಳಿರಿ ಇಲ್ಲಿ ಬಂದು.
ಅಜ್ಜ ನೀಡಿದ ಪಂಚಕಜ್ಜಾಯ ತಿಂದು,
ನಿಮ್ಮ ತಿಳಿಮೋರೆ ನೋಡುವೆನು ಸರಿಯಾಗಿ
ಶೀಘ್ರದಲಿ ಹೊರಡುವೆನು ವಿಶ್ರಾಂತಿಗಾಗಿ.

## ೪೩೭. ಉಪಯುಕ್ತ ಸೂಚನೆ

ಎಲ್ಲರೂ ಕೂಗಿಬಿಡಿ ಒಕ್ಕೊರಲಿನಿಂದ,
ಇಂದ್ರಲೋಕದವರೆಗೆ ಕೇಳುವುದು, ಕಂದ.
ನಿದ್ದೆಯಿಂದೇಳುವುದು ಕೇಂದ್ರ ಸರಕಾರ,
ದೊಡ್ಡ ಬಂದರಾಗುವುದು ಕಾರವಾರ.

## ೪೩೮. ಸಚಿವರ ಭಾಷಣ

ಎಲ್ಲರೂ ಚಪ್ಪಾಳೆ ತಟ್ಟಿ ಜೋರಾಗಿ
ಮರಳಿದರು ಬಂದ ಸಚಿವರಿಗೆ ತಲೆಬಾಗಿ
ಮೂರು ದಿವಸದ ಮೇಲೆ ಬಂತು ಹೊಸ ಸುದ್ದಿ
ಮತ್ತಷ್ಟು ತುಟ್ಟಿಯಾಯಿತು ಅಕ್ಕಿ ಗೋದಿ.

## ೪೩೯. ಸೆಟ್ಟಿಯ ಆತ್ಮವಿಶ್ವಾಸ

ಎಲ್ಲರೂ ಚಂದ್ರಲೋಕಕೆ ಹೋಗಿಬಿಟ್ರೆ
ನಿಮ್ಮ ಗತಿಯೇನಾಗುವುದು ಇಲ್ಲಿ, ಸೆಟ್ರೆ?
ನನಗಿಲ್ಲ ಪೇಚಾಟ; ಪಾತಾಳ ಉಂಟು.
ಸುಡುಗಾಡಿ ಗಟ್ಟಿದರು ಗಳಿಸುವೆನು ಗಂಟು.

## ೪೪೦. ಮುಂದಿನ ನಿರೀಕ್ಷೆ

ಎಲ್ಲರೂ ಚಂದ್ರಲೋಕಕೆ ಹೋದ ಮೇಲೆ
ಸುರಲೋಕವಾಗುವದು ನಮ್ಮ ಅಂಕೋಲೆ
ಕೂಡಲೆ ಅಗ್ಗವಾಗುವುದಿಲ್ಲ ಅಕ್ಕಿ
ಬಡವರೂ ತಿಂದು ತೇಗುವರು ಮೈ ಸೊಕ್ಕಿ.

### ೪೪೧ ಬಾರಿಸಿರಿ ತಾಳ

ಎಲ್ಲರೂ ಜೋರಾಗಿ ಬಾರಿಸಿರಿ ತಾಳ.
ನಿಮಿಷದಲಿ ಓಡಿ ಹೋಗುವನು ಬೇತಾಳ.
ಅಗ್ಗವಾಗುವುದು ಸಕ್ಕರೆ ಮತ್ತೆ ಬೆಲ್ಲ.
ಸಚಿವರಿಗೆ ಅರ್ಜಿ ಹಾಕಿದರೆ ಫಲವಿಲ್ಲ.

### ೪೪೨. ಕವಿಯ ಮಾತು

ಎಲ್ಲರೂ ಮಾತನಾಡುವ ರೀತಿ ಒಂದು ;
ಕವಿ ಮಾತ್ರ ಮಾತನಾಡುವುದು ಇನ್ನೊಂದು
ಎಲ್ಲರೂ ಮಾತನಾಡುವುದು ವ್ಯವಹಾರ
ಕವಿ ಮಾತನಾಡುವುದು ಮುತ್ತುಗಳ ಹಾರ.

### ೪೪೩. ಭೂದೇವಿಯ ಅನುಭವ

ಎಲ್ಲರೂ ಲಾಲಿಸಿರಿ ಎಂದಳು ಧರಿತ್ರಿ ;
ಸಾಮ್ರಾಜ್ಯವೆನ್ನುವುದು ರೇಶಿಮೆಯ ಛತ್ರಿ
ಬಿರುಗಾಳಿ ಬರುವತನಕ ನೋಡಲಿಕೆ ಚೆಂದ.
ಆ ಮೇಲೆ ರೇಶಿಮೆಯ ಛತ್ರಿ ಗೋವಿಂದ !

### ೪೪೪ ಶಿಸ್ತು

ಎಲ್ಲರೂ ಸಾಲಾಗಿ ನಿಲ್ಲಬೇಕೆನಲು
ತೋಟದೊಳಗಿನ ಚಿಟ್ಟೆ ಕೋಪಿಸಿತು ಮೊದಲು
ಆ ಮೇಲೆ ಕವಿವರ್ಯನೂ ಸಿಟ್ಟಿಗೆದ್ದು
ರಾಜಕಾರಣಿ ಮಾತ್ರ ತಲೆದೂಗುತ್ತಿದ್ದ.

### ೪೪೫. ಹೊಸ ಪಕ್ಷ

ಎಲ್ಲರೂ ಸೇರಿದರು ಹೊಸ ಪಕ್ಷ, ತಂಗಿ.
ಬಿಡಲಿಲ್ಲ ನಾನೊಬ್ಬನೇ ಹಳೆಯ ಅಂಗಿ.
ನನಗೆ ಬೇಕಾಗಿಲ್ಲ ಹೊಸ ಹಗಲುವೇಷ
ವೇಷಧಾರಿಗಳಿಂದ ಹಾಳಾಯ್ತು ದೇಶ.

### ೪೪೬. ಪೆದ್ದರಾಯನ ಕಥೆ

ಎಲ್ಲರೂ ಹೇಳುತ್ತಿದ್ದರು ; ಇವನು ಪೆದ್ದ
ಕೊನೆಗೆ ನೋಡಿದರೆ ಈ ಪೆದ್ದನೇ ಗೆದ್ದ.
ಈತನಿಗೆ ಸರಕಾರಿ ಸೌಧದಲಿ ಹುದ್ದೆ
ಭರ್ತಿ ಸಂಬಳ ತಿಂದು ಮಾಡುವನು ನಿದ್ದೆ.

### ೪೪೭. ಹೊಗಳಿಕೆ

ಎಲ್ಲರೂ ಹೊಗಳಿದರು ಕವಿಯೆಂದು ನನ್ನ
ಬಹುಮಾನ ನೀಡಿದರು ಉಂಗುರದ ಚಿನ್ನ
ಉಪಕಾರ ಸ್ಮರಿಸಲಿಕೆ ಹಾಡಿದೆನು ಮತ್ತೆ
ಅಜ್ಜಿಯೆಂದಳು; ನೀನು ಕವಿಯಲ್ಲ ಕತ್ತೆ.

### ೪೪೮. ದೇವನ ಪಲಾಯನ

ಎಲ್ಲವನ್ನೂ ನರನ ಕೈಯೊಳಗೆ ಕೊಟ್ಟು
ದೇವನೂ ಓಡಿಹೋದನು ಗುಡಿಯ ಬಿಟ್ಟು
ಆ ಮೇಲೆ ನರನು ದೇವರ ಗೊಂಬೆ ತರಿಸಿ
ಮಾಡಿದನು ಪೂಜೆ ಪೀತಾಂಬರವ ಧರಿಸಿ.

### ೪೪೯. ಖಿಚಡಿ

ಎಲ್ಲವನ್ನೂ ಹಾಕಿ ಮಾಡಿದರು ಖಿಚಡಿ.
ನಾನು ಖಿಚಡಿಯ ಬದಲು ಮಾಡಿದೆನು ಪಚಡಿ
ಕನ್ನಡತಿ ಹೇಳಿದಳು : ಪಚಡಿ ಬಲು ಖಾರ.
ಖಿಚಡಿ ಎನ್ನುವುದು ಸಕಲರಿಗೆ ಆಹಾರ.

### ೪೫೦. ಅರ್ಜಂಟು

ಎಲ್ಲವೂ ನಮ್ಮ ಕಾಲದಲಿ ಅರ್ಜಂಟು.
ಅರಗಳಿಗೆಯಲಿ ಕಟ್ಟಿದರು ದೊಡ್ಡ ಗಂಟು
ಆರು ವರುಷದ ಒಳಗೆ ಮೂರು ದಶಕೋಟಿ
ಕಾಯಿದೆಯ ಅನುಸಾರ ಹಾಕಿದರು ಲೂಟಿ.

### ೪೫೧. ದೈವ

ಎಲ್ಲವೂ ನಮ್ಮ ದೈವದ ಮೇಲೆ ಉಂಟು.
ಬೀಳಲಿಲ್ಲವೆ ಶಾಮುನಿಗೆ ಅವಳು ಗಂಟು ?
ಅಳಿಯನಿಗೆ ಮಾವ ನೀಡಿದ ಒಂದು ಲಕ್ಷ
ನೋಡಿದರೆ ನಮ್ಮ ಬಾಳೆನಿಸುವುದು ರುಕ್ಷ.

### ೪೫೨. ಸ್ಪಷ್ಟೀಕರಣ

ಎಲ್ಲವೂ ಮುಚ್ಚಿಹೋಗಲಿ ಎಂದು, ತಂಗಿ.
ಸನ್ಯಾಸಿ ಧರಿಸಿದನು ಉದ್ದ ನಿಲುವಂಗಿ
ಆಗಬಾರದು ಎಂದು ಚುಂಬನದ ಆಸೆ
ಬೆಳೆಸಿಕೊಂಡನು ಉದ್ದಕೂ ಗಡ್ಡಮೀಸೆ.

### ೪೫೩. ರಾಷ್ಟ್ರೀಕರಣ

ಎಲ್ಲವೂ ಸರಕಾರದವರ ತಾಬೀನು
ಇದ್ದುಬಿಟ್ಟರೆ ನಮ್ಮ ಸಂಸಾರ ಜೇನು.
ಯಾವುದರ ಬಗ್ಗೆಯೂ ನಮಗಿಲ್ಲ ಚಿಂತೆ.
ಸರಕಾರವೇ ತಂದೆ ತಾಯಿಯಾದಂತೆ.

### ೪೫೪. ಆದಿ ಪಂಪನಿಗೆ

ಎಲ್ಲ ಸಾಮ್ರಾಜ್ಯಗಳು ಉರುಳಿದರು, ನಿನ್ನಾ
ಕಾವ್ಯಲಕ್ಷ್ಮೀಗೆ ಕುಂದು ಬರಲಿಲ್ಲವಣ್ಣಾ
ಕನ್ನಡದ ನುಡಿವೆಣ್ಣು ಬದುಕಿರುವವರೆಗೆ
ಆದಿಪಂಪನ ದಿವ್ಯ ಸಂದೇಶ ಧರೆಗೆ.

### ೪೫೫. ಆಕೆ ಬರ್‍ತಾಳೆ

ಎಲ್ಲಾ ವ್ಯವಸ್ಥೆ ಮಾಡಿದ್ದೇನೆ ಸ್ವಾಮಿ.
ಆಕೆ ಬರುತಾಳೆ, ಆಕೆಯ ಹೆಸರು ಸೋಮಿ,
ಏನೇನು ತರಬೇಕು ಎಂಬುದನು ತಿಳಿಸಿ,
ಆಕೆಯನು ಮನವಾರೆ ಖುಷಿಮಾಡಿ ಕಳಿಸಿ.

### ೪೫೬. ಹೇ ಪಾಂಡುರಂಗ

ಎಲ್ಲಿರುವೆ ನೀನೀಗ ಹೇ ಪಾಂಡುರಂಗ
ಎರಡು ಕೈಯಿಂದಲೂ ಬಾರಿಸು ಮೃದಂಗ
ಮರಳಿದನು ಮನುಜ ಚಂದಿರನ ಬೆನ್ನೇರಿ,
ಆದರೂ ನರಳುತಿದೆ ಬಡ ಜನರ ಕೇರಿ.

### ೪೫೭. ಸೋಜಿಗದ ಕೋಳಿ

ಎಲುಬು ಎಲ್ಲದ ಕೋಳಿ ತೋರಿಸಲೆ ನಿನಗೆ ?
ನೋಡಬೇಕೆನಿಸಿದರೆ ಬಾ ನನ್ನ ಮನೆಗೆ.
ಹೀಗೆನಲು ಆ ಹುಡುಗ ನೋಡಲಿಕೆ ಬಂದ.
ಕೋಳಿಮೊಟ್ಟೆಯ ತಂದು ತೋರಿಸಿದೆ ಕಂದ.

### ೪೫೮. ಕಲ್ಯಾಣ ಕೇಂದ್ರ

ಎಲ್ಲುಂಟು ನಿಮ್ಮೂರ ಕಲ್ಯಾಣ ಕೇಂದ್ರ ?
ಎಂದು ಚೌಕಸಿ ಮಾಡಿದರು ರಾಮಚಂದ್ರ.
ಕೇಂದ್ರವೇ ಇಲ್ಲೆಂದು ಹೇಳಿದನು ಭಟ್ಟ.
ಸರಕಾರಿ ಗ್ರ್ಯಾಂಟು ಕಬಳಿಸಿ ದಗಾ ಕೊಟ್ಟ!

### ೪೫೯. ಸಾಮ್ರಾಜ್ಯ ಮತ್ತು ಸಾಹಿತ್ಯ

ಎಲ್ಲುಂಟು ವಿಜಯನಗರದ ಜಯೋತ್ಕರ್ಷ ?
ಪ್ರತಿಯೊಂದು ಸಾಮ್ರಾಜ್ಯ ಒಂದೆರಡು ವರ್ಷ.
ಮಣ್ಣುಗೂಡಿತು ಹಂಪೆಯೊಳಗಿದ್ದ ಗಂಟು
ಸರ್ವಜ್ಞ ತ್ರಿಪದಿಗಳು ಇಂದಿಗೂ ಉಂಟು.

### ೪೬೦. ಗೆಳತಿಗೆ

ಎಲೆ ಅಡಿಕೆ ಹಾಕಿ ನೀ ಮಾತಾಡುವಾಗ
ಸುಮ್ಮನಿರುವುದು, ಗೆಳತಿ ನನ್ನಿಂದ ಆಗ,
ನಿನ್ನ ಕೆನ್ನೆಯ ಚಿವುಟಬೇಕೆಂಬ ಆಸೆ,
ಮತ್ತೆ ಮನದೊಳಗೆ ಏನೇನೋ ಅಭಿಲಾಷೆ.

### ೪೬೧. ಕವಿತೆಗೆ

ಎಲೆ ಕವಿತೆ, ನಿನಗೇಕೆ ಉದ್ದುದ್ದ ಮಾತು.
ಮುದ್ದಾಗಿ ಮಾತಾಡು ಹೃದಯದಲಿ ಕೂತು
ಆ ಶೈಲಿ ಈ ಶೈಲಿ ಅನ್ನುವರು, ಮಗಳೆ.
ಶೈಲಿಗಳ ಬೆನ್ನು ಹತ್ತಿದರೆ ಒಣ ರಗಳೆ.

### ೪೬೨. ಅನುಕರಣೆ

ಎಲೆ ಕವಿಯೆ, ಎಂದಿಗೂ ಬೇಡ ಅನುಕರಣೆ.
ಅನುಕರಣೆಯೊಳಗಿಲ್ಲ ಯಾವ ಸೀಕರಣೆ.
ಬರೆದದ್ದು ಕಹಿಯಾದರೂ ಇಲ್ಲ ಚಿಂತೆ
ಅದರೊಳಗೆ ಇರಬೇಕು ಅನುಭವದ ಮೆಂತೆ.

### ೪೬೩. ಕವಿಗೆ

ಎಲೆ ಕವಿಯೆ, ನಿನಗೇಕೆ ನರನ ಬಹುಮಾನ ?
ಕಾಲರಾಯನು ಕೇಳುವನು ನಿನ್ನ ಗಾನ
ಮೆಡಲು ಸಿಗಬೇಕೆಂದು ಕೈಮುಗಿಯ ಬೇಡ.
ತಲೆಬಾಗಿಸಿದರೆ ಕವಿ, ಕವಿಯುವುದು ಮೋಡ.

### ೪೬೪. ಅಡಿಟ್ ವರದಿ

ಎಲೆ ಕವಿಯೆ, ನಿನ್ನ ಪದ್ಯಗಳ ಬೆಲೆಯೆಷ್ಟು ?
ಹೇಳುವುದು ಕಷ್ಟ! ಆಗಿಲ್ಲ ಆಡಿಟ್ಟು!
ಈ ಕೆಲಸ ಮುಗಿಯಲಿಕೆ ಬೇಕು ಶತಮಾನ.
ಆಮೇಲೆ ಗೊತ್ತಾಗುವುದು ನನ್ನ ಸ್ಥಾನ.

### ೪೬೫. ಮಾತಿನ ಮೇಣ

ಎಲೆ ಕವಿಯೆ, ಮಾತು ಕರಗಿಸಿ ಮಾಡು ಮೇಣ
ಮೇಣದಲಿ ತುಂಬಿ ತುಳುಕಾಡುವುದು ಪ್ರಾಣ.
ಈ ರೀತಿ ತರತರದ ಗೊಂಬೆಗಳ ಮಾಡು.
ಆಟವಾಡುವ ಮಕ್ಕಳಿಗೆ ಇಲ್ಲ, ಕೇಡು.

೪೬೬. ಕವಿಗೆ

ಎಲೆ ಕವಿಯೆ, ಸುಡು ನಿನ್ನ ಕವನಗಳ ಕೀರ್ತಿ
ತಿಳಿಬಾನು, ಗಿರಿಕಾನುಗಳೆ ನಿನ್ನ ಸ್ಫೂರ್ತಿ
ಕೇರಿ ಕೇರಿಗಳಲ್ಲಿ ಉರಿದರೂ ಜ್ವಾಲೆ
ಕವನ ಕಟ್ಟುವೆ ನೀನು ಮಲ್ಲಿಗೆಯ ಮೇಲೆ.

೪೬೭. ಶರಾವತಿ

ಎಲೆ ಶರಾವತಿ, ನಿನ್ನ ಸಡಗರದ ಕುಣಿತ
ಮುಗಿಯಲಾರದ ನೃತ್ಯ ಅದುವೆ ಅನವರತ,
ಈ ಕುಣಿತದಿಂದ ನೀ ವಿಪರೀತ್ ಬೆಳಕು
ಬೀರಿದಾಗಲೆ ಹೋಯ್ತು ಕತ್ತಲೆಯ ಕೊಳಕು.

೪೬೮. ನರನ ಔದಾರ್ಯ

ಎಲೆ ಕೋಳಿ, ವೃದ್ಧಿಯಾಗಲಿ ನಿನ್ನ ಬಾಳು.
ಹೊಟ್ಟೆ ತುಂಬುವ ತನಕ ತಿನ್ನು, ಈ ಕಾಳು.
ಇದು ನಿನಗೆ ನಾನು ಬಡಿಸುವ ಮೇಜವಾನಿ
ಆಮೇಲೆ ಒಂದು ದಿನ ನನಗೆ ಬಿರಿಯಾನಿ

೪೬೯. ಉಪಕಾರ ಸ್ಮರಣೆ

ಎಲೆ ಗಣಪ, ನಿನಗೆ ಮಾಡುವೆ ನಮಸ್ಕಾರ
ಎಂದಿಗೂ ನೀನು ತಿನ್ನುವುದಿಲ್ಲ ಖಾರ
ಭರ್ತಿ ಸೀ ತಿಂದು ಸಕ್ಕರೆಯಾಯ್ತು ತುಟ್ಟಿ
ಉಪಕಾರ ಸ್ಮರಿಸುವನು ನಮ್ಮೂರ ಸೆಟ್ಟಿ.

೪೭೦. ಗಣಪತಿಯ ಗಮನಕ್ಕೆ

ಎಲೆ ಗಣಪ, ನಿನ್ನಿಂದ ಆಹಾರ ಧಾನ್ಯ.
ಕಡಿಮೆಯಾಯ್ತೆಂದು ನುಡಿದನು ಮಂತ್ರಿ ಮಾನ್ಯ.
ನೀನು ಸಾಕಿರುವ ಮೂಷಿಕಸೇನೆ ನಿತ್ಯ
ಲಕ್ಷಗಟ್ಟಲೆ ಚೀಲ ತಿನ್ನುವುದು ಸತ್ಯ.

## ೪೭೧. ಸಾಹಿತ್ಯ ಪರಿಷತ್ತು

ಎಲೆಗಳೇ ಹೆಚ್ಚಾಗಿ, ಹೂವುಗಳು ಕಡಿಮೆ
ಇದು ನಮ್ಮ ಸಾಹಿತ್ಯ ಸಂಭ್ರಮದ ಮಹಿಮೆ
ಸಾಹಿತ್ಯಕ್ಕಿಂತಲೂ ಮುಖ್ಯ ಪರಿಷತ್ತು
ಮೆರವಣಿಗೆಯಲ್ಲಿಯೇ ಎಲ್ಲ ಮುಗಿದಿತ್ತು.

## ೪೭೨. ವೃಕ್ಷ

ಎಲೆಗಳೊಂದೊಂದಾಗಿ ನಿತ್ಯ ಉದುರಿದರೂ
ಯಾವಾಗಲೂ ವೃಕ್ಷ ಸಂಪೂರ್ಣ ಹಸಿರು
ಮುಪ್ಪಿನಲ್ಲೂ ಮರಕೆ ಒನಪು ವಯ್ಯಾರ.
ವ್ಯರ್ಥವಲ್ಲವೆ, ಗೆಳತಿ ನಿನ್ನ ಬಂಗಾರ ?

## ೪೭೩. ಕುನ್ನಿ

ಎಲೆ ದೇವ, ನಾನೊಂದು ಕುನ್ನಿಮರಿಯಾಗಿ
ಜೀವಿಸಿದರೇ ನನ್ನ ಮನಕಿಲ್ಲ ವ್ಯಾಧಿ.
ಯಾವಾಗಲೂ ಕಾವಲಿಡುವಂಥ ಶ್ವಾನ
ಆಗಿಬಿಟ್ಟರೆ ನನಗೆ ತುಂಬ ಅಭಿಮಾನ.

## ೪೭೪. ಪಾದರಕ್ಷೆ ತೂರಾಟ

ಎಲೆ ಪಾದರಕ್ಷೆಯೇ, ನಿನಗೆ ಅಪಮಾನ
ತೂರಿಬಿಟ್ಟರು ಕೆಟ್ಟ ಕೆಲಸಕ್ಕೆ ನಿನ್ನ,
ನಿನ್ನ ಸೇವಾಭಾವ ಮಾನವನಿಗಿಲ್ಲ.
ರಾಜಕಾರಣಿಯಂತು ಮಾನವನೆ ಅಲ್ಲ.

## ೪೭೫. ಬಾಳೆ ಮತ್ತು ತೆಂಗು

ಎಲೆ ಬಾಳೆ, ನಿನ್ನ ಮೈಸುತ್ತಲೂ ಬಳಗ.
ಮನೆಯೊಳಗೆ ತುಂಬಿರಲಿ ಬೆಣತಕ್ಕಿ ಕೊಳಗ
ಎಲೆ ತೆಂಗೆ, ನೀನೆಂದಿಗೂ ಒಂಟಿ ದೆವ್ವ
ಸಂನ್ಯಾಸಿಯಾಗೆಂದು ಶಪಿಸಿದರೆ ಅವ್ವ ?

## ೪೭೬. ಎಲೆ ಮಾನವಾ

ಎಲೆ ಮಾನವಾ, ನೀನು ಇದ್ದೆ ಬಲು ಸಣ್ಣ
ಈಗ ಆಕಾಶಕೇರಿದೆ ನಿನ್ನ ಬಣ್ಣ
ಮತ್ತಷ್ಟು ಮೇಲೆರಿದರೆ ನಿನ್ನ ಗ್ಲೋರಿ
ನಕ್ಷತ್ರಗಳು ಕೆಳಗೆ ಬೀಳುವವು ಜಾರಿ.

## ೪೭೭. ಕವಿಗೆ

ಎಲೆ ಮಾನವಾ, ನೀನು ಪಡಬೇಡ ಹೆಮ್ಮೆ
ನಿನಗಿಂತಲೂ ಶ್ರೇಷ್ಠವಾದದ್ದು ಎಮ್ಮೆ
ಮನುಕುಲಕೆ ಹಾಲು ನೀಡುವ ಪ್ರಾಣಿ ಧನ್ಯ.
ಸೆಗಣಿ ಗೊಬ್ಬರದಿಂದ ಆಹಾರ ಧಾನ್ಯ.

## ೪೭೮. ಪ್ರಜಾರಾಜ್ಯದ ಭಜನೆ

ಎಲೆ ಮಾನವಾ, ಬೇಡ ಸತಿ ಸುತರ ಮೋಹ
ಈಗ್ಗೆ ಬೇಕಾದದ್ದು ಮಂತ್ರಿಗಳ ಸ್ನೇಹ
ತುಟಿಯೊಳಗೆ ಗಾಂಧೀಜಿಯವರ ದಿವ್ಯ ನಾಮ
ಕಂತ್ರಾಟು ಸಿಕ್ಕಿದರೆ ಕೈವಲ್ಯಧಾಮ !

## ೪೭೯. ರಮಣಿಗೆ

ಎಲೆ ರಮಣಿ, ನಿನಗೇಕೆ ಬಸ್ಸಿನ ತಿಕೇಟು ?
ಕಂಡಕ್ಟರನು ನೋಡಿದರೆ ನಿನ್ನ ಥಾಟು
ಕೈ ಹಿಡಿದು ಕುಳ್ಳಿರಿಸಿಕೊಳ್ಳುವನು ಜೊತೆಗೆ.
ಇಂಥ ಅನುಕೂಲ ದೊರೆಯದು ನಿನ್ನ ಪತಿಗೆ.

## ೪೮೦. ಯಮಧರ್ಮ ಹೇಳಿದ್ದು

ಎಲೆ ಸಚಿವನೇ, ಹೇಳು ನೀನೆಷ್ಟು ತಿಂದೆ ?
ತಿಂದಿದ್ದರಿಂದಲೇ ನೀನಿಲ್ಲಿ ಬಂದೆ.
ತಿನ್ನದಿದ್ದರೆ ನೀನು ಸ್ವರ್ಗವನ್ನೇರಿ
ಹರಿಯ ಜತೆಗಿರುತಿದ್ದೆ ಹೊಡೆದು ಜಯಭೇರಿ.

### ೪೮೧. ಹೂವು

ಎಲೆ ಹೂವೆ, ಎಲೆ ಹೂವೆ, ನಿನಗಿಲ್ಲ ಜಂಬ
ನಸುನಗುವೆ ಭೂಮಿಗಿಳಿಯಲು ಸೂರ್ಯಬಿಂಬ.
ಹೆಂಗಸರ ಮುಡಿಯೊಳಗೆ ನಿನಗುಂಟು ಸ್ಥಾನ.
ಇದಕ್ಕೆನ್ನುವೆನು ನಾನು ದೊಡ್ಡ ಸನ್ಮಾನ.

### ೪೮೨. ಬ್ರಹ್ಮಚರ್ಯೆ

ಎಲೆ ಹೂವೆ, ಮೈನೆರೆಯದೇ ನೀನು ಇದ್ದೆ
ಕೊನೆಯವರೆಗೂ ನನಗೆ ಬರಲಿಲ್ಲ ನಿದ್ದೆ
ಹೀಗೆಂದು ಬ್ರಹ್ಮಚಾರಿಯ ಮುಂದೆ ಕುಣಿದು
ನಿದ್ದೆ ಹೋಯಿತು ಚಿಟ್ಟೆ, ಮಕರಂದ ಕುಡಿದು.

### ೪೮೩. ಎಲೆ ಹೆಣ್ಣೆ

ಎಲೆ ಹೆಣ್ಣೆ, ನಿನ್ನ ನೋಡಿದರೆ ಆನಂದ
ಇದಕೆ ಕಾರಣ ನಿನ್ನ ಸೀರೆ ಬಲು ಚೆಂದ
ಅದರ ಬಣ್ಣಗಳಲ್ಲಿ ಉಂಟು ಉತ್ಸಾಹ
ಅವುಗಳನು ನೋಡಿದರೆ ಆರುತಿದೆ ದಾಹ.

### ೪೮೪. ಉಪವಾಸ

ಎಷ್ಟಾಯ್ತು ಉಪವಾಸ ಸತ್ತವರ ಸಂಖ್ಯೆ ?
ಯಮದೇವನಿಗೆ ಕೂಡ ಗೊತ್ತಿಲ್ಲ ಅಂಕೆ.
ಪ್ರತಿ ದಿವಸವೂ ಕುಳಿತು ಮಾಡಿದನು ಲೆಕ್ಕ
ಅಳಿಯಲಾಗುವುದಿಲ್ಲ ಮಾನವನ ದುಃಖ

### ೪೮೫. ಎಷ್ಟೊಂದು ನಗಲೊ

ಎಷ್ಟೊಂದು ನಗಲೊ ? ಹೇ ದೇವ, ನೀ ಹೇಳು,
ಏನಾಯ್ತು ಗದ್ದೆಯಲಿ ಬೆಳೆದ ಆ ಕಾಳು ?
ಇದು ನಿನ್ನ ನಾಟಕದ ಲೀಲೆಯ ಪ್ರತಾಪ !
ಸಚಿವರಾದರು ಏನು ಮಾಡುವರು ? ಪಾಪ !

### ೪೮೬. ತಂದೆ ಗಳಿಸಿದ್ದು

ಎಷ್ಟು ದಿನ ಉಳಿಯುವುದು ತಂದೆ ಗಳಿಸಿದ್ದು ?
ಇಡ್ಲಿ ಮಾಡಲಿಕೆ ಸಾಕಾಗ ಆ ಉದ್ದು
ಮತ್ತೆ ಅನ್ನದ ಜೊತೆಗೆ ಬೇಕು ತಿಳಿಸಾರು
ದುಡಿಯದಿದ್ದರೆ ಕುಡಿಯಬೇಕು ಬರಿ ನೀರು.

### ೪೮೭. ಎಷ್ಟು ಮಕ್ಕಳ ತಾಯಿ

ಎಷ್ಟು ಮಕ್ಕಳ ತಾಯಿ ಆಗಬೇಕಂತಿ
ಆಗಬೇಕೇನು ನವ ಭಾರತದ ಕುಂತಿ ?
ಹೆಣ್ಣು ಬೇಡವೇ ನಿಮಗೆ ? ಹೀಗೇಕೆ ಮಾತು ?
ರಾತ್ರಿ ನಿರ್ಧರಿಸೋಣ ಎಬ್ಬರೂ ಕೂತು.

### ೪೮೮. ಬೇರೀಜು

ಎಷ್ಟು ಮಾಡಿದರೇನು ನೀವು ಬೇರೀಜು
ಪತ್ತೆಯಾಗುವುದಿಲ್ಲ ತಿಂದ ಅಂದಾಜು,
ಪತ್ತೆಯಾಗುವದಿಲ್ಲ ಎಲ್ಲವೂ ಅಡಗಿ.
ದೊಳ್ಳು ಕಾಣುವುದಿಲ್ಲ, ಒಳಗೊಳಗೆ ಮಡಗಿ.

### ೪೮೯. ಮುಗಿಯದ ಚಾಕಲೇಟು

ಎಷ್ಟು ಸವಿದರು ಮುಗಿಯದಂಥ ಚೊಕಲೇಟು
ನಿನ್ನ ತುಟಿಯೊಳಗುಂಟು ! ಏನಿದರ ರೇಟು ?
ಇದರ ಬೆಲೆ ವಿಪರೀತ, ಕೇಳೋ, ಗಿರಾಕಿ;
ಎಷ್ಟು ತೆತ್ತರು ಮತ್ತೆ ಉಳಿಯುವುದು ಬಾಕಿ.

### ೪೯೦. ತೆರಿಗೆಯ ಭಾರ

ಎಷ್ಟು ಹೇರಿದರೇನು ತೆರಿಗೆಗಳ ಭಾರ.
ಜನರ ಸಲುವಾಗಿಯೇ ಉಂಟು ಸರಕಾರ,
ಭಾರವಾದರೆ ತಲೆಯ ಮೇಲಿರುವ ವಜ್ಜೆ
ಮೆಲ್ಲಮೆಲ್ಲನೆ ನಡೆದು ಹಾಕೋಣ ಹೆಜ್ಜೆ.

## ೪೯೧. ಬ್ರಹ್ಮಚಾರಿ

ಎಂದಿಗೂ ಆಗಬಾರದು ಬ್ರಹ್ಮಚಾರಿ
ಜೀವನದ ಸಂತೋಷ ಹೋಗುವುದು ಜಾರಿ.
ಕಾವಿ ಧೋತರದಲ್ಲಿ ಜೀವನದ ಕಾವು.
ನರನ ಆಯುಷ್ಯವಾಗುವುದು ಕಹಿಬೇವು.

## ೪೯೨. ತಿಂದಿಲ್ಲ ಜೇನು

ಎಂದೆಂದಿಗೂ ಇವನು ತಿಂದಿಲ್ಲ ಜೇನು.
ಇವನಷ್ಟು ಕಹಿ ಮನುಜ ನೋಡಿಲ್ಲ ನಾನು.
ಆದರೂ ಈತನಿಗೆ ಬಲು ದೊಡ್ಡ ಹೆಸರು.
ಈ ಭೂಮಿಯೊಳಗುಂಟು ತರತರದ ಕೆಸರು.

## ೪೯೩. ಕವಿಗೆ

ಎಂದೆಂದಿಗೂ ಕವಿಗೆ ಬರದಿರಲಿ ಬೇರು.
ಬೇರು ಬಂದರೆ ನಾಶವಾಗುವುದು ಜೋರು.
ಯಾವಾಗಲೂ ಕವಿಗೆ ಇರಲಿ ಹಾರಾಟ
ಮತ್ತೆ ಕುಳಿತಲ್ಲಿಯೇ ಮನದ ಹೋರಾಟ.

## ೪೯೪. ರಾಷ್ಟ್ರಪತಿಗಳ ಗಮನಕ್ಕೆ

ಎಂದೆಂದಿಗೂ ಕೊನೆಗೆ ಜಯಿಸುವುದು ಸತ್ಯ.
ಆದರೂ ಈ ಮಾತು ನಿಜವಲ್ಲ ನಿತ್ಯ.
ದುಡ್ಡು ಮೇಲಕೆ ಬಂದು ತಲೆಕೆಳಗೆ ತತ್ವ
ಈ ಪ್ರಜಾರಾಜ್ಯದಲಿ ಸುಳ್ಳಿಗೆ ಮಹತ್ವ.

## ೪೯೫. ಕೋಪ

ಎಂದಿಗೂ ಏಳಲಾರನು ಹೊಂಡದಿಂದ.
ಹೀಗೆಂದು ಗುಬ್ಬಚ್ಚಿ ಕೆಣಕಿಸಲು, ಕಂದ.
ಕಡಲರಾಯನ ಲವಣಪಿತ್ತ ತಲೆಗೇರಿ
ಮುನ್ನುಗ್ಗಿ ಅಪ್ಪಳಿಸಿದನು ನೊರೆಯ ಕಾರಿ.

### ೪೯೬. ವ್ಯಕ್ತಿತ್ವ

ಎಂದಿಗೂ ಕವಿತೆಯಾಗದು ನೀತಿ ತತ್ವ
ಕಾವ್ಯ ರಮಣಿಗೆ ಬೇಕು ಅವಳ ವ್ಯಕ್ತಿತ್ವ
ನೂರು ಹೆಂಗಸರಲ್ಲಿ ಅವಳ ಸೌಂದರ್ಯ
ಎದ್ದು ಕಂಡರೆ ಅಮರವಾಗುವುದು ಕಾವ್ಯ.

### ೪೯೭. ನನ್ನ ಆಹಾರ

ಎಂದಿಗೂ ನಾನು ತಿನ್ನುವುದಿಲ್ಲ ಪೇಡೆ.
ಹೀಗಾಗಿ ನನಗಿಲ್ಲ ಯಾರದೂ ಭೀಡೆ.
ನಾನು ತಿನ್ನುವುದು, ಸಖಿ, ಹುಳಿ ಮತ್ತೆ ಖಾರ.
ಇದಕೆನ್ನುವರು ಜನರು ಚುಟುಕುದಾಹಾರ.

### ೪೯೮. ನನ್ನ ರಾಜಕಾರಣ

ಎಂದಿಗೂ ಸೇರಿಲ್ಲ ಸರಕಾರಿ ಪಕ್ಷ.
ನೀರೆರೆದು ಬೆಳೆಸಿದನು ಲೋಕಹಿತ ವೃಕ್ಷ
ಹೋರಾಟದಲಿ ಹೋಯ್ತು ಜೀವನದ ಹಗಲು
ವಿಶ್ರಾಂತಿ ಹೊಂದುವೆನು ಯಮ ಕೊಡಲು ಹೆಗಲು.

### ೪೯೯. ಮನಸ್ತಾಪ

ಎಂದಿಗೂ ಹಿಡಿಯಬಾರದು ಮನಸ್ತಾಪ.
ಕುದಿಯಬಾರದು ಹೃದಯ ಪಾತ್ರೆಯಲಿ ಕೋಪ
ಕೋಪವಿದ್ದರೆ ಒಮ್ಮೆ ಬೈದುಬಿಡು ಭರ್ತಿ
ಆ ಮೇಲೆ ಮರೆತುಬಿಡು ಪ್ರತಿಯೊಂದು ಸರ್ತಿ.

### ೫೦೦. ಉಸ್ಮಾನ್ ಸಾಬಿ

ಎಂದಿಗೋ ನಿರ್ನಾಮವಾಯ್ತು ಮೊಗಲಾಯಿ
ಈಗ ಉಳಿದದ್ದು ಬರಿ ಪಾತ್ರೆಯ ಕಲಾಯಿ.
ಆದರೂ ನಮ್ಮೂರ ಸಾಬಿ ಉಸ್ಮಾನಾ
ಮೊಗಲಾಯಿ ನಡೆಸಬೇಕೆನ್ನುವನು ಪುನಾಃ

### ೫೦೧. ಕನಕದಾಸರ ಗಮನಕ್ಕೆ

ಏನು ಇಲ್ಲದ ಎರಡು ದಿನದ ಸಂಸಾರ
ಎಂಬ ಕೀರ್ತನೆಗಿಲ್ಲ ಯಾವ ಆಧಾರ.
ಎಲ್ಲವೂ ಉಂಟು ಈ ಸಂಸಾರದೊಳಗೆ.
ಬೆಲ್ಲವೂ ಸುಧೆಯಾಗುತಿದೆ ಬೀದಿಯೊಳಗೆ.

### ೫೦೨. ಮಂತ್ರಿಗಳು ಬಂದು

ಏನೇನು ಮಾಡಿದರು ಮಂತ್ರಿಗಳು ಬಂದು ?
ಹೊರಟು ಹೋದರು ಬಂಗ್ಲೆಯಲಿ ಕೋಳಿ ತಿಂದು,
ಕಂತ್ರಾಟುದಾರನಿಗೆ ಭರವಸೆಯ ನೀಡಿ
ಭಕ್ಷೀಸು ಪಡೆದುಕೊಂಡರು ಒಂದು ಗಾಡಿ.

### ೫೦೩. ಏನೇನೋ ಭಾನಗಡಿ

ಏನೇನೊ ಭಾನಗಡಿ ಘೋಟಾಳೆ ಮಾಡಿ
ಹೋದ ಹೋದಲ್ಲಿ, ಸಖಿ, ವಿಪರೀತ ರಾಡಿ,
ಮಾರಿದನು ಮನೆಯ ದಾಗೀನುಗಳ ಕದ್ದು
ವ್ಯಸನಿಯಾದನು ಕೆಟ್ಟ ಸಂಗತಿಗೆ ಬಿದ್ದು.

### ೫೦೪. ಅಯ್ಯೋ ಜಗತ್ತು !

ಏನು ಕತೆ ! ಏನು ಗತಿ ! ಅಯ್ಯೋ ಜಗತ್ತೆ !
ಕೊನೆಗೆ ನೀನೂ ಆಗಬೇಕೇನು ಕತ್ತೆ ?
ವಿಜ್ಞಾನ ವಿಜ್ಞಾನವೆಂದು ಹಾರಾಡಿ
ಕೊನೆಗೆ ನೋಡಿದರೆ ಅಣುಬಾಂಬುಗಳ ರಾಡಿ !

### ೫೦೫. ನನ್ನ ಸೋಲು

ಏನು ಪರವಾ ಇಲ್ಲ ಬಿದ್ದರೂ ನಾನು.
ಜನರ ಕಲ್ಯಾಣವಾದರೆ ತಿಂಬೆ ಜೇನು.
ಯಾವ ವ್ಯಕ್ತಿಯ ಗೆಲವು ಅಲ್ಲ ಉದ್ದೇಶ.
ಅಶ್ವಗತಿಯಲಿ ಮುಂದುವರಿಯಲೀ ದೇಶ.

## ೫೦೬. ಸಂಶಯ

ಏನು ಹುಟ್ಟಿದೆ ? ಗಂಡೊ ? ಹೆಣ್ಣೊ ? ಯಾ ಜಾತಿ ?
ಹೇಳಬೇಕೇ ಸ್ವಾಮಿ ? ಎಲ್ಲಾ ಫಜೀತಿ;
ಸಂದೇಹಿ ಎಂಬಾಕೆ ಹಾಕಿದಳು ಪುಗಡಿ
ಗಂಡಲ್ಲ, ಹೆಣ್ಣಲ್ಲ; ಹುಟ್ಟಿದ್ದು ಹಿಜಡಿ !

## ೫೦೭. ಹೇಳುವ ರೀತಿ

ಏನು ಹೇಳಿದರೇನು ? ಕವಿಯಾಗಿ ಹೇಳು
ಇಲ್ಲದಿದ್ದರೆ, ಮಗನೆ, ಕಡಿಯುವುದು ಚೇಳು.
ಕವಿಯಾಗಿ ಹೇಳಿದರೆ ನುಡಿಗಿಲ್ಲ ಸಾವು
ಬೆಲ್ಲವಾಗುವದು, ಮಗು, ಕವಿ ತಿಂದ ಬೇವು.

## ೫೦೮. ಏನು ಹೇಳಲಿ

ಏನು ಹೇಳಲಿ ಅವಳ ಬೆಡಗು ಬಿನ್ನಾಣ !
ಕಾಮರಾಜನ ಹಾಗೆ ಎಸೆಯುವಳು ಬಾಣ.
ಆ ಬಾಣ ತಗುಲಿದರೆ ತಡೆಯಲಿಕ್ಕಾಗ
ಹೃದಯ ಭೇದಿಸಿ ಒಳಗೆ ಸೇರುವುದು ಬೇಗ.

## ೫೦೯. ಬಿದ್ದಾಳೆ ಗಂಟು

ಏನು ಹೇಳಲಿ ? ಅವಳು ಬಿದ್ದಾಳೆ ಗಂಟು
ಹೀಗಾಗಿ ಅವನು ಆಗಿದ್ದಾನೆ ದಂಟು
ಚಿಗುರು ಎಲೆ ಹೂ ಆಯಿ ಎಲ್ಲವೂ ಉದುರಿ
ಅವನು ಆಗಿದ್ದಾನೆ ಬರಿ ಖಾಲೆ ಬೊಗರಿ.

## ೫೧೦. ಒಂದು ಸಲಹೆ

ಏನು ಹೇಳಲಿ, ಗೆಳತಿ ಹೇಟೆಗಳು ಸತ್ತು
ಕೋಳಿಯ ಪಲಾವಿಗೂ ಬಂತು ಆಪತ್ತು
ಪೂರ್ತಿ ನಿಲ್ಲಿಸಲಿಕ್ಕೆ ಕೋಳಿಗಳ ರೋಗ
ಸರಕಾರ ನೇಮಿಸಲಿ ಒಂದು ಆಯೋಗ.

### ೫೧೧. ಕಡಿದರೂ ಹಾವು

ಏನು ಹೇಳಲಿ ನಾನು ? ಕಡಿದರೂ ಹಾವು.
ಈ ಮಹಾಪುರುಷನಿಗೆ ಬರಲಿಲ್ಲ ಸಾವು
ಹಾವಿಗಿಂತಲೂ ಇವನ ವಿಷ ಬಹಳ ಉಗ್ರ
ನಿಮಿಷದಲಿ ಹಾವು ಸತ್ತಿತು, ಮಹಾರುದ್ರ!

### ೫೧೨. ದೀವಳಿಗೆ

ಏನು ಹೇಳಲಿ ನಾನು ? ಸಪ್ಪೆ ಈ ವರುಷ
ದೀವಳಿಗೆಗೂ ಇಲ್ಲ ಸ್ವಲ್ಪವೂ ಹರುಷ.
ಸಕ್ಕರೆಗೆ ಬರಗಾಲ, ಸವಿ ತಿಂಡಿ ಲೇದು
ದೊರಕಿಸಲು ಮಾಡಬೇಕಾದೀತು ಜಾದು.

### ೫೧೩. ಇವರ ಹಣೆಬರಹ

ಏನು ಹೇಳಲಿ, ಮಗನೆ, ಇವರ ಹಣೆಬರಹ
ಗಾಳಿ ಬೀಸಿದ ಹಾಗೆ ದಿನಕೊಂದು ತರಹ
ಈ ಹೊತ್ತು ಈ ಪಕ್ಷ, ನಾಳೆ ಮುಂಜಾನೆ
ಅಲ್ಲಿ ಆ ಕಡೆ ಜಾರಿ, ದಿಲ್ಲಿಗೆ ರವಾನೆ.

### ೫೧೪. ನಾನಾ ನಮೂನೆ

ಏನು ಹೇಳಲಿ, ಮಗನೆ, ನಾನಾ ನಮೂನೆ.
ಸರಕಾರಿ ಸೌಧದಲಿ ಹದಿನೆಂಟು ಆನೆ.
ಆ ಆನೆಗಳಿಗೆಲ್ಲ ಹಾಕಲಿಕೆ ಹಿಂಡಿ
ರಾಜ್ಯದೊಳಗಿನ ಜನರು ಕಟ್ಟಿದರು ಬಂಡಿ.

### ೫೧೫. ನಮ್ಮ ಹಣೆಬರಹ

ಏನು ಹೇಳಲಿ ಮಗನೆ, ನಮ್ಮ ಹಣೆಬರಹ !
ಸರಕಾರಿ ಸೌಧದಲಿ ಮಾಡಿದರು ಸ್ವಾಹಾ.
ಬಿಸಿ ಕಾಫಿ ಕುಡಿದು ಸೇದಿದರು ಸಿಗರೇಟು.
ತೃಪ್ತಿ ಹೊಂದದೆ ಕೊನೆಗೆ ಹುಡುಕಿದರು ಕೋಟು

### ೫೧೬. ಶಾಸಕರು

ಏನು ಹೇಳಲಿ, ಮಗನೆ, ಇವರ ಹಣೆಬರಹ !
ಗಾಳಿ ಬೀಸಿದ ಹಾಗೆ ದಿನಕೊಂದು ತರಹ,
ಈ ಹೊತ್ತು ಸಿಂಡಿಕೇಟ್, ನಾಳೆ ಜನಸಂಘ,
ಮರದಿಂದ ಮರಕೆ ಹಾರಿದ ರೀತಿ ಮಂಗ.

### ೫೧೭. ಗಾಂಧೀಜಿ ಹೇಳಿದ್ದು

ಏನು ಹೇಳಲಿ, ಮಗನೆ ! ವ್ಯರ್ಥ ಈ ಬಾಳು !
ನಿತ್ಯವೂ ನನ್ನ ಹೆಸರಿಗೆ ಕೆಟ್ಟ ಧೂಳು
ಭಾರತದ ಆದ್ಯಂತ ಪೌರ ಸಭೆಯವರು
ರಸ್ತೆ ರಸ್ತೆಗೆ ಹಚ್ಚಿದರು ನನ್ನ ಹೆಸರು.

### ೫೧೮. ವಿದೇಶಿಯ ಸಹಾಯ

ಏನೇನು ಬೇಕೆಂದು ಮಾಡಿದರು ಲಿಸ್ಟು
ಅಮೇರಿಕದ ಕಡೆಯಿಂದ ಬಂತು ಒಂದಿಷ್ಟು
ರಷ್ಯನ್ನರ ಕಡೆಯಿಂದ ಚಿಮಟಿ ಇನ್ನೊಂದು
ನಿಮಿಷದಲಿ ಮುಗಿಸಿದರು ಭಾರತಕೆ ಬಂದು.

### ೫೧೯. ಪ್ರಜಾರಾಜ್ಯದ ಏಣಿ

ಏರಲಿಕೆ ಸರಿಯಾಗಿ ಸಿಕ್ಕಿದರೆ ಏಣಿ
ದಡ್ಡನೂ ಗಳಿಸಿಕೊಂಬನು ಪ್ರಥಮ ಶ್ರೇಣಿ
ಈ ಪ್ರಜಾರಾಜ್ಯದಲಿ ಏಣಿಗಳ ಸಂಖ್ಯೆ
ಹೆಚ್ಚಾಗುತಿದೆ ಎಂಬುದಕೆ ಬೇಡ ಶಂಕೆ.

### ೫೨೦. ಪೇಟೆಯ ಪ್ರಪಂಚ

ಏರು ಮುಖವಾದೊಡನೆ ಅಕ್ಕಿ, ರವೆ, ಗೋದಿ
ಒರೆಯಾಯಿತು ಮೋರೆ ಆಗದೆ ಖರೀದಿ
ಮುಂದೆ ಸರಿಯಲು ಮತ್ತೆ ತೊಗರಿ ಅಲಸಂದಿ
ಹಿಂದೆ ಸರಿದರು, ಮಗನೆ, ನನ್ನಂಥ ಮಂದಿ.

## ೫೨೧. ಏಶಿಯಾ ಖಂಡ

ಏಶಿಯಾ ಖಂಡದಲಿ ಜನಿಸಿದನು ಬುದ್ಧ.
ಸಂಸ್ಕೃತಿಯ ಇತಿಹಾಸವೂ ಬಹಳ ಉದ್ದ
ಅಂತೆಯೇ ಬಾಪೂಜಿ ಶಿರ ಕಳೆದುಕೊಂಡ
ಶತಮಾನಗಳ ಬೆಳಕು ಬರಿ ಬ್ರಹ್ಮದಂಡ.

## ೫೨೨. ಕಲಬೆರೆಕೆ

ಏಳು ಮಕ್ಕಳು ನಿನ್ನೆ ತಿಂದು ಬಿಸ್ಕತ್ತು
ಆಸ್ಪತ್ರೆಯಲಿ ಹೋದರು ಪಾಪ ಸತ್ತು,
ಮತ್ತೆ ಸೇಂಗಾ ಎಣ್ಣೆಯೊಳಗಿತ್ತು ಚೇಳು
ಓ ಮಗನೆ, ಇದಕೆಂಬೆ ರಸಭರಿತ ಕೂಳು.

## ೫೨೩. ಚಾವುಂಡರಾಯ

ಐತಿಹಾಸಿಕ ಪುರುಷ ಚಾವುಂಡರಾಯ
ಈತನಿಗೆ ಒಂದು ಸಾವಿರ ವರುಷ ಪ್ರಾಯ
ಆದರೂ ಮುಪ್ಪಿಲ್ಲ! ಇದು ಹೇಗೆ ಹೇಳು?
ಶ್ರವಣಬೆಳ್ಗೊಳದ ಗೊಮ್ಮಟನನ್ನು ಕೇಳು.

## ೫೨೪. ಮಂತ್ರಿ ಪದವಿಯ ಅವಧಿ

ಐದು ವರುಷದ ಅವಧಿ ಸಾಕು ಕೆಲವರಿಗೆ
ಸರಿಯಾಗಿ ಗುಡಿಸುವರು ಹಿಡಿದು ಕಸಬರಿಗೆ
ಹಾಕುವರು ರಾಶಿ ಗುಡಿಗುಡಿಸಿ ಅಲ್ಲಲ್ಲಿ
ಕೊನೆಯವರೆಗೂ ನುಂಗಬಹುದು ಕೂತಲ್ಲಿ.

## ೫೨೫. ರಾಜಕಾರಣದ ವಿದ್ಯೆ

ಐದು ವರುಷಕ್ಕೊಮ್ಮೆ ಜನ ಕೋಟಿ ಕೋಟಿ
ಒಂದು ಪೆಟ್ಟಿಗೆಯೊಳಗೆ ಹಾಕುವರು ಚೀಟಿ
ಆಮೇಲೆ ಪ್ರತಿದಿವಸವೂ ಗಾಢ ನಿದ್ದೆ
ಇದಕೆನ್ನುವರು ರಾಜಕಾರಣದ ವಿದ್ಯೆ.

### ೫೨೬. ಈ ಹೆರಿಗೆ

ಐದು ವರುಷದ ಮೇಲೆ ಆಗಿ ಈ ಹೆರಿಗೆ
ಹೊಟ್ಟೆಯುಬ್ಬಿದ ಪರಾಕ್ರಮ ಬಂತು ಹೊರಗೆ.
ಒಳಗೆ ಹಾಕಿದ ರಕಮು ಏಳೆಂಟು ಲಕ್ಷ
ಇಂಥವರಿಗೆನ್ನುವುದು ಕರ್ತವ್ಯ ದಕ್ಷ.

### ೫೨೭. ಐನೂರು ಪುಟದೊಳಗೆ

ಐನೂರು ಪುಟದೊಳಗೆ ಎಲ್ಲವೂ ಹಾಳು
ಕೊನೆಗೆ ಉಳಿದದ್ದು ಬರಿ ಒಂದೆರೆಡು ಹೋಳು.
ಈ ಹೋಳುಗಳು ಮಾತ್ರ ಚೊಕ್ಕ ಬಂಗಾರ
ನಮ್ಮ ಕನ್ನಡ ನುಡಿಗೆ ತಕ್ಕ ಸಿಂಗಾರ.

### ೫೨೮. ನನ್ನ ಸಂಪತ್ತು

ಐಶ್ವರ್ಯವೆನಗಿಲ್ಲ, ಒಂದಿಷ್ಟು ಭೂಮಿ
ನನಗಿಂತ ಶ್ರೀಮಂತರಾರಿಲ್ಲ, ಸ್ವಾಮಿ
ಧನವಿಲ್ಲದಿದ್ದರೂ ಇದೆ ಹವಳ ಮುತ್ತು
ಕವನಗಳ ಪದಕಸರ ನನ್ನ ಸಂಪತ್ತು.

### ೫೨೯. ಒಣ ಭಾನಗಡಿ

ಒಣ ಭಾನಗಡಿಯಿಂದ ಫಲವಿಲ್ಲ ತುಸುವು.
ಭಾನಗಡಿಗೂ ಬೇಕು ಒಂದಿಷ್ಟು ಕಸುವು.
ಕಸುವು ಇದ್ದರೆ ಮಾತ್ರ ಸಿಗಬಹುದು ಅರ್ಥ
ಇಲ್ಲದಿದ್ದರೆ ಗೈದ ಭಾನಗಡಿ ವ್ಯರ್ಥ.

### ೫೩೦. ಒತ್ತಾಯದ ಮದುವೆ

ಒತ್ತಾಯದಿಂದ ಕಟ್ಟಿದರೆ ಬಾಸಿಂಗ
ಸಂಸಾರದೊಳಗೆ ಭೀಕರ ಶಾಂತಿ ಭಂಗ.
ಗಂಡಹೆಂಡಿರ ಜಗಳ ವಿಪರೀತಕೇರಿ
ಒಂದು ದಿನ ಅಲುಗಾಡುವುದು ಇಡೀ ಕೇರಿ.

## ೫೩೧. ಸೋಂಕು ರೋಗ

ಒಬ್ಬನಿಗೆ ಅಂಟಿಕೊಂಡರೆ ಕೆಟ್ಟ ವ್ಯಾಧಿ
ನೆರೆಹೊರೆಯ ನೂರಾರು ಜನರ ತಲೆ ಬಾದಿ
ಶಬ್ದಗಳಿಗೂ ಉಂಟು ಇಂಥಾ ಅನರ್ಥ
ಒಂದು ಪದ ಕೆಟ್ಟುಹೋದರೆ ಕವನ ವ್ಯರ್ಥ.

## ೫೩೨. ಒಬ್ಬನೇ ಕುಳಿತುಕೊಳ್ಳಲು

ಒಬ್ಬನೇ ಕುಳಿತುಕೊಳ್ಳಲು ಒಂದು ಬದಿಗೆ
ಚುಟುಕುಗಳು ಓಡಿಬಂದವು ನನ್ನ ಕಡೆಗೆ
ನಾನಂದೆ; ಹೀಗೆ ಗಡಿಬಿಡಿ ಮಾಡಬೇಡಿ
ಎಲ್ಲವೂ ಹೊಲಸಾಗಿ ಆಗುವುದು ರಾಡಿ.

## ೫೩೩. ದೇವರ ಉತ್ಸವ

ಒಬ್ಬ ಮಂತ್ರಿಯ ಹಿಂದೆ ಹದಿನೆಂಟು ಮಂದಿ
ಇವರಿಗೂ ಸಿಗಲಿ ದೇಶಾಟನೆಯ ಸಂಧಿ
ದೇವರುತ್ಸವಕೆ ಈ ಮೆರವಣಿಗೆ ಬೇಕು,
ಭೂತಗಣಕೆಲ್ಲ ಆರಾಧನೆಯ ಷೋಕು.

## ೫೩೪. ಮಂದಾನಿಲ ಹೇಳಿದ್ದು

ಒಬ್ಬಳನ್ನೇ ಚುಂಬಿಸಿದರೆ ಬೇಜಾರು
ಉದ್ಯಾನದೊಳಗಿರಲಿ ಹೂವು ನೂರಾರು
ಜಾಜಿ ಮಲ್ಲಿಗೆ ಬಕುಲ ಸುರಗಿ ಸುರಹೊನ್ನೆ
ಮುತ್ತಿಡಲು ಕೆಂಪೇರುವುದು ನನ್ನ ಕೆನ್ನೆ.

## ೫೩೫. ಸಿಕ್ಕಾಪಟ್ಟೆ ಬರೆದು

ಒಮ್ಮೊಮ್ಮೆ ನಾನು ಸಿಕ್ಕಾಪಟ್ಟೆ ಬರೆದು,
ಹಳೆ ಸಂಪ್ರದಾಯಗಳ ಹಾಕಿದೆನು ಹರಿದು
ತಾಯಿ ಎಂದಳು ! ಮಗನೆ, ನೀನೊಬ್ಬ ತುಂಟ
ಕವಿಯಲ್ಲ ಮಾರಾಯ, ನೀ ಜಗಳಗಂಟ

### ೫೩೬ ರಾಜಕಾರಣ

ಒಮ್ಮೊಮ್ಮೆ ರಾಜಕಾರಣ ಮಹಾಭಾಗ್ಯ
ಗಳಿಸುವನು, ಅವನಲ್ಲದಿದ್ದರೂ ಯೋಗ್ಯ
ಸೇಕಡಾ ಎಪ್ಪತ್ತು ಜನರು ಹೀಗುಂಟು.
ಸರಕಾರಿ ಸೌಧದಲಿ ಬೀಳುವರು ಗಂಟು.

### ೫೩೭. ವ್ಯತ್ಯಾಸ

ಒಮ್ಮೆ ಕೊಟ್ಟರೆ ಮುತ್ತು ಸಾಕೆಂದಳಾಕೆ
ನೂರು ಸಲ ಕೊಟ್ಟರೂ ಬೇಕೆಂದಳೀಕೆ
ಆಕೆಗೆನಿಸಿತು; ನನ್ನ ಮುತ್ತು ಬರಿ ಗದ್ಯ
ಈಕೆಗೆನಿಸಿರಬೇಕು ; ಕಾವ್ಯಮಯ ಪದ್ಯ.

### ೫೩೮. ದೇವದಾಸಿ ಹೇಳಿದ್ದು

ಒಮ್ಮೆ ಮಾರಾಟವಾದರೆ ಕುರಿಯ ತೊಗಲು
ನಿತ್ಯವೂ ಮಾರಾಟ ನನ್ನ ಮೈದೊಗಲು !
ನಾನು ದೇವರ ಮಗಳು, ನನಗಿಲ್ಲ ತಂದೆ !
ಪುಣ್ಯವಂತರ ಹೊಟ್ಟೆಯಲಿ ಹುಟ್ಟಿ ಬಂದೆ.

### ೫೩೯. ರಾಜಕಾರಣದಲ್ಲಿ

ಒಳಗೊಳಗೆ ಒಬ್ಬರೊಬ್ಬರ ಮೇಲೆ ಉಗುಳಿ
ಹೊರಗಡೆಗೆ ಬಂದಾಗ ನಟಿಸಿದರು ಹೊಗಳಿ
ಆಮೇಲೆ ಮರುದಿವಸ ಎತ್ತಿದರು ಸೋಟಾ
ಇದಕ್ಕೆನ್ನುವರು ರಾಜಕಾರಣದ ಆಟ.

### ೫೪೦. ಪಟ್ಟಣ ಸೆಟ್ಟಿ ಹೇಳಿದ್ದು

ಒಳಗೊಳಗೆ ಮುರಿದುಬಿಟ್ಟರೆ ಹಾಳು ಕಾಯ್ದೆ
ಈ ಪ್ರಜಾರಾಜ್ಯದಲಿ ವಿಪರೀತ ಫಾಯ್ದೆ
ಕಿಸೆ ಸ್ವಲ್ಪ ಬಿಸಿ ಮಾಡಿದರೆ ಸಾಕು, ಮಗನೆ,
ಸಕಲ ಜನಗಳಿಗೆ ತೋರಿಸಬಹುದು ಬದನೆ.

### ೫೪೧. ಮಾಡಿದರು ರಾಡಿ

ಒಳಗೊಳಗೆ ಲೈಸನ್ಸು ಪರ್ಮಿಟ್ಟು ನೀಡಿ
ಸರಕಾರಿ ಸೌಧದಲಿ ಮಾಡಿದರು ರಾಡಿ
ಈ ರಾಡಿ ತೊಳೆಯಲಿಕೆ ಬೇಕು ಬಿಸಿ ನೀರು
ಕಸಬರಿಗೆಯಿಂದ ಝಾಡಿಸಬೇಕು ಜೋರು.

### ೫೪೨. ಜನಸೇವೆ

ಒಳಿತು ಮಾಡಿದರೆ ಅದು ಪುಣ್ಯಗಳ ರಾಶಿ
ಕೆಡಕು ಮಾಡಿದರೆ ಅದು ಪಾಪ ಬಿಕನಾಸಿ
ಯಾವ ದೇವರ ಪೂಜೆ ಮಾಡಿದರು ವ್ಯರ್ಥ
ಜನಸೇವೆಯೇ ಪೂಜೆ, ಇದುವೆ ಪುರುಷಾರ್ಥ.

### ೫೪೩. ಒಂದಲ್ಲ ಎರಡಲ್ಲ

ಒಂದಲ್ಲ ಎರಡಲ್ಲ ಮೂರಲ್ಲ ನಾಕು
ಐದಲ್ಲ ಆರಲ್ಲ ಆದರೂ ಬೇಕು
ಲೆಕ್ಕ ಹೆಚ್ಚಾದಂತೆ ಸುಖವಿಲ್ಲ ಇಳೆಗೆ
ನೆತ್ತಿಗೇರಲು ದುಡ್ಡು ತಲೆಯಾಯ್ತು ಕೆಳಗೆ.

### ೫೪೪. ಅಂಕೆಗಳ ಮಹತ್ವ

ಒಂದಲ್ಲ ಎರಡಲ್ಲ ಮೂರಲ್ಲ ನಾಕು
ಐನೂರು ಕೊಟ್ಟರೂ ರಾಯರಿಗೆ ಬೇಕು.
ಹೆಚ್ಚು ಕೊಟ್ಟರೆ, ಮಗನೆ, ದೊಡ್ಡ ಕಂತ್ರಾಟು
ಕಡಿಮೆ ಕೊಟ್ಟರೆ ವ್ಯರ್ಥವಾಗುವುದು ನೋಟು.

### ೫೪೫ ಅಂಕೆಗಳು

ಒಂದಲ್ಲ ಎರಡಲ್ಲ ಮೂರಲ್ಲ ನಾಕು
ನೂರು ಸಲ ಕೊಟ್ಟರೂ ಇನ್ನೊಮ್ಮೆ ಬೇಕು.
ಇದಕೆನ್ನುವರು ಗೆಳತಿ, ನೀನಿಡುವ ಮುತ್ತು
ಕತ್ತಲಲ್ಲಿ ಕೊಟ್ಟರೂ ಹೋಗುವುದು ಹೊತ್ತು.

## ೫೪೬. ಭಗವಂತನಿಗೆ ಮೊರೆ

ಒಂದಲ್ಲ ಎರಡಲ್ಲ ಮೂರಲ್ಲ ನಾಕು
ಹೀಗಾಗಿ ಬಂದುಬಿಟ್ಟಿತು ಬಹಳ ಪೀಕು
ಇಷ್ಟರಲ್ಲೇ ಸಾಕುಮಾಡು, ಭಗವಂತ
ಹೀಗೆಂದು ಹತ್ತು ಸಲ ಕೈ ಮುಗಿದು ನಿಂತ.

## ೫೪೭. ಧಾನ್ಯದ ಹಂಚಿಕೆ

ಒಂದಲ್ಲ, ಎರಡಲ್ಲ ಮೂರು ಮಧ್ಯಾಹ್ನ
ಕ್ಯೂ ಹಿಡಿದು ನಿಂತರೂ ಸಿಗಲಿಲ್ಲ ಧಾನ್ಯ
ಮುಂಜಾನೆ ಬಾ ಎಂದು ಹೇಳಿದರು ಮತ್ತೆ.
ಮುಂಜಾನೆ ಹೋದಾಗ ಕಾಳು ನಾಪತ್ತೆ.

## ೫೪೮. ಒಂದಲ್ಲ ಎರಡಲ್ಲ

ಒಂದಲ್ಲ ಎರಡಲ್ಲ, ರಗಳೆ ನೂರಾರು.
ಪ್ರತಿಯೊಬ್ಬ ಅಳಿಯನಿಗೆ ಬೇಕು ಹೊಸ ಕಾರು
ಮತ್ತೆ ಕಾರಿನ ಜೊತೆಗೆ ಇರಲಿಕ್ಕೆ ಜಾಗ
ಬರಿ ಹೆಣ್ಣು ಸಿಕ್ಕಿದರೆ ಕಸುವು ಸಾಕಾಗ.

## ೫೪೯. ಮಕ್ಕಳು

ಒಂದು ಮಗು ಹುಟ್ಟಿದರೆ ಬೆಂಡು ಬತ್ತಾಸು.
ಎರಡು ಹುಟ್ಟಿದರೆ ಹಾಲಿಗೆ ಇಲ್ಲ ಕಾಸು.
ಮೂರು ಹುಟ್ಟಿದರೆ, ಸಖಿ, ತಂದೆಯ ದಿವಾಳಿ
ನಾಲ್ಕು ಹುಟ್ಟಿದರೆ ಅವು ತಿನಬೇಕು ಗಾಳಿ.

## ೫೫೦. ಸಹಿ ಆಗಲಿಕೆ

ಒಂದು ಸಹಿ ಆಗಲಿಕೆ ದಿವಸ ಹದಿನೆಂಟು
ಆ ತನಕ ನಿಂತುಕೊಳ್ಳಿರಿ ಹಿಡಿದು ದಂಟು
ಇದಕೆನ್ನುವರು, ಮಗನೆ, ಸರಕಾರಿ ಕೆಲಸ
ಹಣ್ಣಾಗಲಿಕೆ ಬೇಕು ನೂರಾರು ದಿವಸ.

## ೫೫೧. ಮೇಘರಾಜನ ನಡತೆ

ಒಂದೆಡೆಗೆ ಅತಿವೃಷ್ಟಿ, ಒಂದೆಡೆಗೆ ಕ್ಷಾಮ
ಮೇಘರಾಜನು ನಮಗೆ ಹಚ್ಚಿದನು ನಾಮ.
ಪ್ರತಿ ವರುಷವೂ ಉಂಟು ಭಾರತದ ಹಸಿವೆ.
ಈಶ್ವರನಿಗೂ ಇಲ್ಲ ಮಾನವನ ಪರಿವೆ.

## ೫೫೨. ಅಣುಯುಗದ ಜಗತ್ತು

ಒಂದೆಡೆಗೆ ಒಂದಿಷ್ಟು ಒಡೆದರೂ ಮುತ್ತು
ಚೂರು ಚೂರಾಗುವುದು ಇಂದಿನ ಜಗತ್ತು
ಆಮೇಲೆ ಆ ಬ್ರಹ್ಮದೇವನ ಸವಾರಿ
ಧರೆಗಿಳಿದರೂ ವ್ಯರ್ಥ ! ಆಗದು ರಿಪೇರಿ.

## ೫೫೩. ಚುಟುಕ

ಒಂದೊಂದು ಚುಟುಕದಲಿ ಬರಿ ನಾಕು ಸಾಲು.
ಆದರೂ ಉದ್ದವಾಗಿದೆ ಇದರ ಕೋಲು.
ಪ್ರತಿಯೊಂದು ಪಂಕ್ತಿಯಲಿ ಭಾವನೆಯ ಮಿಂಚು
ಮಿಂಚು ಹರಿದಾಡುವುದು ದಶಕೋಟಿ ಇಂಚು.

## ೫೫೪. ಶಾಲಾನಿಧಿ

ಒಂದೊಂದು ಹಳ್ಳಿಗೂ ಒಂದೊಂದು ಶಾಲೆ
ಕಟ್ಟಬೇಕೆನಲು ಸಖಿ, ಹಾಕಿದರು ಮಾಲೆ
ಪ್ರತಿಯೊಬ್ಬನೂ ನಿಧಿಗೆ ಒಂದೊಂದು ಆಣೆ
ನೀಡಬೇಕೆಂದೆನಲು ಒಬ್ಬರನು ಕಾಣೆ.

## ೫೫೫. ಬಂದ ಮಳೆರಾಯ

ಒಂದು ತಿಂಗಳು ತಡೆದು ಬಂದ ಮಳೆರಾಯ
ನಿಂತ ಕದರಿಗೆ ತಂದ ಯೌವನದ ಪ್ರಾಯ.
ಕಣ್ಣುಮುಚ್ಚಾಲೆ ಎಂಬುದು ಹೀಗೆ ತಾನೆ ?
ಮಣ್ಣು ಹಸಿ ಮಾಡಿದನು ಸಿಂಪಡಿಸಿ ಸೋನೆ.

## ೫೫೬. ಆಲೂರು ವೆಂಕಟರಾಯರು ಹೇಳಿದ್ದು

ಒಂದು ತಂಬಿಗೆಯೊಳಗೆ ತಣ್ಣೀರು ಹಾಕಿ
ಮೈಮೇಲೆ ಸಿಂಪಡಿಸಿ ಇಡಲಿಲ್ಲ ಬಾಕಿ
ಕೂಡಲೇ ಎಚ್ಚರಾದರು ಇವರು, ಪಾಪ!
ಉದುರಿ ಹೋಯಿತು ಕನ್ನಡಕೆ ಹಿಡಿದ ಶಾಪ.

## ೫೫೭. ಬರೆದೆ

ಒಂದು ದಿನ ಬರೆದೆ ಅನುಭವದ ಬದಿಗಿಟ್ಟು
ಕನ್ನಡಾಂಬೆಗೆ ಬಂತು ವಿಪರೀತ ಸಿಟ್ಟು
ನನ್ನ ಹೆಸರನು ಕೆಡಿಸುತ್ತಿದ್ದಿಯಾ, ಪೋರಾ?
ನನ್ನ ಕೊರಳಿಗೆ ಬೇಡ ನೀ ಕೊಟ್ಟ ಹಾರ.

## ೫೫೮. ವಿಚಿತ್ರ ರೋಗ

ಒಂದು ದಿನವೂ ಬಿಡದೆ ನನಗೆ ತಲೆನೋವು
ಪಿತ್ತವೇರಿದ ಹಾಗೆ; ನೆತ್ತಿಯಲಿ ಕಾವು.
ವೈದ್ಯ ನುಡಿದನು ಕಾರಣವ ಕೇಳಿದಾಗ,
ಕೀರ್ತಿ ಕಳಸದ ಭಾರದಿಂದ ಈ ರೋಗ.

## ೫೫೯. ಕವಿಯ ಕೂಸು

ಒಂದು ದಿವಸಕ್ಕೆ ಬರೆದರೆ ನೂರು ಸಾಲು
ಸಂಪೂರ್ಣ ತಣ್ಣಗಾಗುವುದು ಕೈಕಾಲು
ಮೂರು ತಿಂಗಳಿಗೆ ಬರೆದರೆ ಒಂದು ಪದ್ಯ
ಕೊನೆಯವರೆಗೂ ಕೂಸು ಬದುಕುವುದು ಸಾಧ್ಯ.

## ೫೬೦. ನಿರುದ್ಯೋಗ

ಒಂದು ನೌಕರಿಗಾಗಿ ನೂರಾರು ಅರ್ಜಿ.
ಹಿಡಿಯಲಾಯಿತು ಕಂಡಕಂಡವರ ಮರ್ಜಿ
ಆದರೂ ಸಿಗಲಿಲ್ಲ ಯಾವುದೂ ಜಾಗ.
ಉದ್ಯೋಗ ಮಂದಿರಕೆ ಹಾಕಿದರು ಬೀಗ.

### ೫೬೧. ರಾಜಕಾರಣಿಗಳು

ಒಂದು ಪಕ್ಷದಲಿ ಎಲ್ಲಾ ತಿಂಡಿ ನುಂಗಿ
ಧರಿಸಿದರು ಅನ್ಯ ಪಕ್ಷದ ಬೇರೆ ಲುಂಗಿ
ಬಿಳಿ ಧೋತರದ ಒಳಗೆ ಕಪ್ಪು ಲಂಗೋಟಿ
ಹಚ್ಚಿಕೊಂಡರು ಹಣೆಗೆ ಪ್ರಗತಿಪರ ಚೀಟಿ.

### ೫೬೨. ನನ್ನ ಜಿಲ್ಲೆ

ಒಂದು ಬದಿ ಸಹ್ಯಾದ್ರಿ, ಒಂದು ಬದಿ ಕಡಲು
ನಡು ಮಧ್ಯದಲಿ ಅಡಕೆ ತೆಂಗುಗಳ ಮಡಲು.
ಸಿರಿಗನ್ನಡದ ಚಪ್ಪರವೆ ನನ್ನ ಜಿಲ್ಲೆ
ಇಲ್ಲಿಯೇ ಇನ್ನೊಮ್ಮೆ ಹುಟ್ಟುವೆನು, ನಲ್ಲೆ.

### ೫೬೩. ಸವಿ ಒಗ್ಗರಣೆ

ಒಂದು ಮುತ್ತಿಗೆ ಏನು ಕೊಡಬೇಕು, ನೀರೆ ?
ಹಣಬೇಡ, ಕೊಡಿ ಒಂದು ರೇಶಿಮೆಯ ಸೀರೆ.
ಅತ್ಯಂತ ತುಟ್ಟಿಯಾಯಿತು ನಿನ್ನ ಮುತ್ತು
ಇದರ ಸವಿ ಒಗ್ಗರಣೆ ನಿಮಗೇನು ಗೊತ್ತು ?

### ೫೬೪. ರಾಗಿಯ ಕಾಳು

ಒಂದು ರಾಗಿಯ ಕಾಳಿನಲ್ಲೆ ಬ್ರಹ್ಮಾಂಡ
ಹುಡುಕಿದರೆ ಮಾತ್ರವೇ ತ್ರಿಭುವನ ಪ್ರಚಂಡ
ಒಂದು ಹೂವಿನ ಪಕಳೆಯಲಿ ಸ್ವರ್ಗಲೋಕ
ನೋಡಿ ನಲಿದಾಡಿದರೆ ನಮಗಿಲ್ಲ ನರಕ.

### ೫೬೫. ಚುನಾವಣೆಯಲ್ಲಿ ಸೋಲು

ಒಂದು ಸಲ ಗೆದ್ದೆ, ಎರಡು ಸಲ ಬಿದ್ದೆ.
ಬಿದ್ದರೂ ನಾನಾಗಲಿಲ್ಲ ಹಸಿ ಮುದ್ದೆ.
ಬಡವರಿಗೆ ಸಿಗಲೆಂದು ಜೀವನದ ರಾಗಿ
ಉರಿಸಿದೆನು ಹೋರಾಟ ಒಣ ಸೌಧೆಯಾಗಿ.

### ೫೬೬. ದೆವ್ವ ಹಿಡಿದದ್ದು

ಒಂದು ಸಾವಿರ ಚುಟಕ ಬರೆದೊಡನೆ, ಅವ್ವಾ
ಬಿಟ್ಟು ಹೋಗುವುದೆಂದು ತಿಳಿದಿದ್ದೆ ದೆವ್ವ
ಆದರೂ ಬಿಟ್ಟು ಹೋಗಲಿಲ್ಲ ಈ ಭೂತ
ಇದಕಂಜಿ ಓಡಿಹೋಯಿತು ಭಾವಗೀತ.

### ೫೬೭. ಹಣತೆ

ಒಂದು ಹಣತೆ ಹಚ್ಚಿ ಕುಳಿತುಕೊಂಡಾಗ
ಮಿಂಚು ದೀಪವ ತಂದು ವಹಿಸಿದರ ಭಾಗ
ನಾನೆಂದೆ; ಈ ಹಣತೆಯೇ ನನಗೆ ಲೇಸು
ಈ ಹಣತೆಯೇ ನನ್ನ ಕವಿತೆಗಳ ಕೂಸು.

### ೫೬೮. ಕೋಡು

ಓ ಗೆಳೆಯ, ನನಗಿನ್ನು ಬರಲಿಲ್ಲ ಕೋಡು !
ನೆರೆಮನೆಯ ಆಡಿಗೂ ಕೋಡುಂಟು ನೋಡು
ನನ್ನದೇ ದುರದೃಷ್ಟ ಮಾಡುವುದು ಏನು ?
ಈ ಚುನಾವಣೆಯಲ್ಲಿ ಸೋತವನು ನಾನು.

### ೫೬೯. ನಾಣ್ಯ

ವೋಟುಗಳ ಪಡೆಯಲಿಕೆ ಗಾಂಧೀಜಿ ನಾಣ್ಯ
ಅವನ ಹೆಸರೊಂದಿರಲು ಪಾಪಿಗೂ ಪುಣ್ಯ
ಅಧಿಕಾರ ದೊರೆಯುವುದು ಹಾರೈಸಿದಂತೆ
ಐದು ವರುಷಕ್ಕೊಮ್ಮೆ ನೆರೆಯುತಿದೆ ಸಂತೆ.

### ೫೭೦. ಓಡಿ ಹೋದಳು

ಓಡಿ ಹೋದಳು ಆಕೆ ಗಂಡನನು ಬಿಟ್ಟು
ಉಪಯೋಗವಿಲ್ಲ, ಸಖಿ, ಮಾಡಿದರೆ ಸಿಟ್ಟು
ಎಲ್ಲವೂ ಅವರವರ ಪ್ರಾರಬ್ಧದಂತೆ
ಕೆಲವರಿಗೆ ಸಂಭೋಗ, ಕೆಲವರಿಗೆ ಚಿಂತೆ.

## ೫೭೧. ಮನದನ್ನೆಗೆ

ಓ ನನ್ನ ಮನದನ್ನೆ, ನಿನಗೇನು ಗೊತ್ತು ?
ನಿನ್ನ ಕಂಬನಿ, ಕಣ್ಣ ನೀರಲ್ಲ, ಮುತ್ತು
ಈ ಮುತ್ತಿನಿಂದಲೇ ಪೋಣಿಸಲು ಹಾರ.
ನಿನ್ನ ಕೊರಳಿಗೆ ಮತ್ತೆ ಬೇಕೆ ಬಂಗಾರ ?

## ೫೭೨. ಆಧುನಿಕ ಸಾವಿತ್ರಿ

ಓ ನಾಗಿ, ಇವಳು ಆಧುನಿಕ ಸಾವಿತ್ರಿ
ಬಿಸಿಲೊಳಗೆ ಗಂಡನಿಗೆ ಹಿಡಿಯುವಳು ಛತ್ರಿ
ಯಮ ಬಂದರೂ ಗಂಡನಿಗೆ ಇಲ್ಲ ಭೀತಿ
ಎಲ್ಲ ಹೆಂಗಸರು ಇರಬೇಕು ಈ ರೀತಿ.

## ೫೭೩. ಕಾರಖಾನೆಯ ಬಾಂಬು

ಓ ಮಗನೆ, ಅಲ್ಲವದು ಕಬ್ಬಿಣದ ಗೂಠ
ಕಾರಖಾನೆಯ ದೆವ್ವ ಸೇದುವ ಚಿರೂಟ
ಯಾವಾಗಲೂ ನಡೆಯುತಿದೆ ಧೂಮ್ರಪಾನ
ಆಕಾಶ ಮಸಕಾಗಿ ರವಿಗೆ ಅಪಮಾನ.

## ೫೭೪. ಜೀವನದ ಸಂಜೆ

ಓ ಮಗನೆ, ಇದು ನನ್ನ ಜೀವನದ ಸಂಜೆ.
ಉಳಿದ ಮುದುಕರ ಹಾಗೆ ನಾನಾದೆ ಬಂಜೆ.
ನಾ ಬಂಜೆಯಾದರೂ ನನ್ನ ಪೆನ್ಸಿಲ್ಲು
ಚುಟುಕುಮರಿಗಳ ಹಾಕಿ ಉಜ್ಜುತಿದೆ ಹಲ್ಲು.

## ೫೭೫. ಬಂತು ಎಲ್ಲಿಂದ ?

ಓ ಮಗನೆ, ಈ ದುಡ್ಡು ಬಂತು ಎಲ್ಲಿಂದ ?
ಈ ತರದ ಪ್ರಶ್ನೆಗಳ ಕೇಳಬೇಡೆಂದ.
ಹಣದ ಸಂಚಾರಕ್ಕೆ ನೂರಾರು ದಾರಿ
ಪಾತಾಳದಿಂದಲೂ ಬರಬಹುದು ಹಾರಿ.

## ೫೭೬. ಪ್ರಜಾರಾಜ್ಯದ ತೆರಿಗೆ

ಓ ಮಗನೆ, ಈ ಪ್ರಜಾರಾಜ್ಯದಲಿ ತೆರಿಗೆ
ಎನ್ನುವುದು ಕಂದಾಯವಲ್ಲ, ಕಸಬರಿಗೆ,
ಹಣವನೆಲ್ಲಾ ಹೋಗುವುದು ಗುಡಿಸಿಕೊಂಡು
ಕೇಳಿದರೆ ಹೇಳುವರು, ಯೋಜನೆಗೆ ಫಂಡು.

## ೫೭೭. ಓ ಮಗನೆ

ಓ ಮಗನೆ, ನನಗಿಲ್ಲ ಯಾರಾದೂ ಪರಿವೆ.
ಮಾಡಬೇಕೆನ್ನುವೆನು ಆದಷ್ಟು ಸೇವೆ
ಸೇವೆ ಎನ್ನುವುದು ಮಾನವನ ಕರ್ತವ್ಯ.
ಪ್ರತಿಯೊಬ್ಬನೂ ಗಳಿಸಬೇಕಾದ ದ್ರವ್ಯ.

## ೫೭೮. ಜೀವನದ ಸಂಜೆ

ಓ ಮಗನೆ, ನನಗೀಗ ಜೀವನದ ಸಂಜೆ.
ಆಗಬಾರದು ನನ್ನ ವೃಧ್ಯಾಪ್ಯ ಬಂಜೆ
ಸಂಜೆಯಲ್ಲೂ ಬೆಳೆಯಬೇಕು ಸಂಸಾರ
ಮತ್ತಷ್ಟು ಹೊರಬೇಕು ಜನಹಿತದ ಭಾರ.

## ೫೭೯. ಕನ್ನಡದ ಪ್ರಾಚೀನತೆ

ಓ ಮಗನೆ, ನಮ್ಮ ನುಡಿ ಬಹಳ ಪ್ರಾಚೀನ.
ಹೀಗಾಗಿ ಅದಕಿಲ್ಲ ಮನೆಯೊಳಗೆ ಸ್ಥಾನ
ಮನೆಯೊಳಗೆ ಮಾಯವಾಗಿದೆ 'ಅಮ್ಮ' 'ಅಪ್ಪಾ'
ಬದಲಾಗಿ ಬಂದುಬಿಟ್ಟಿದೆ 'ಮಮ್ಮಿ' 'ಪಪ್ಪಾ'

## ೫೮೦. ಓ ಮಗನೆ

ಓ ಮಗನೆ, ನಾನಲ್ಲ ಚುಟಕ ಸಾಮ್ರಾಟ
ನನ್ನ ಕೂದಲಿಗಿಲ್ಲ ಚಿನ್ನದ ಕಿರೀಟ
ಯಾವಾಗಲೂ ಖಾಲಿ ನನ್ನ ತಲೆಬೋಡು
ಸುಳ್ಳು ಹೇಳುವುದಿಲ್ಲ! ನನಗಿಲ್ಲ ಕೋಡು!

### ೫೮೧. ನನ್ನ ಕನಸು

ಓ ಮಗನೆ, ನಾನೊಂದು ಅದ್ಭುತವ ಕಂಡೆ
ಹಾಲಿನೈಸ್ಕ್ರಿಮ್ ಆಗಿ ಕರಗಿದವು ಬಂಡೆ
ಮರಭೂಮಿ ಬೆಸನಾಗಿ ಕಾಂಚನದ ಕಾಳು
ಅರಳಿ ಹೂವಾಗಿತ್ತು ಪ್ರತಿಯೊಂದು ಬಾಳು.

### ೫೮೨. ಚುನಾವಣೆಯಲ್ಲಿ ಸೋಲು

ಓ ಮಗನೆ, ನಾನು ಸರಕಾರದ ವಿರುದ್ಧ
ಬಡ ಜನರ ಸಲುವಾಗಿ ಹೂಡಿದೆನು ಯುದ್ಧ
ಆದರೂ ಬಡ ಜನರು ಕೆಡವಿದರು ನನ್ನ
ಇದಕೆಂಬೆ ರಾಜಕೀಯದ ತಕಡಧಿನ್ನ!

### ೫೮೩. ಚುನಾವಣೆಯಲ್ಲಿ ಸೋಲು

ಓ ಮಗನೆ, ಬಿದ್ದರೂ ನನಗಿಲ್ಲ ಸೋಲು
ಭೂಮಿಯಲಿ ಭದ್ರವಾಗಿದೆ ನನ್ನ ಕಾಲು
ನೆಲದ ಮೇಲೆಯೆ ಕುಳಿತು ಜನಸೇವೆಗೈದು
ಶಾಲೆಗಳ ಕಟ್ಟುವೆನು ಮತ್ತೆ ಹದಿನೈದು

### ೫೮೪. ರಾಜಕೀಯ ಉದ್ದೇಶ

ಓ ಮಗನೆ, ರಾಜ್ಯವಾಳುವ ಪಕ್ಷ ಸೇರಿ
ಯಶ ಗಳಿಸಲಿಕೆ ಹಿಡಿಯಬೇಕು ತಂಬೂರಿ
ಪ್ರತಿಪಕ್ಷ ಸೇರಿ ಗೈಯಲಿಕೆ ಜನಸೇವೆ
ಸಿಡಿಲೊಳಗೆ ಬಿಡಬೇಕು ಕೆಚ್ಚೆದೆಯ ನಾವೆ.

### ೫೮೫. ವಿಡಂಬನ ಕಾವ್ಯ

ಓ ವಿಡಂಬನ ಕಾವ್ಯ, ಓ ಮುಳ್ಳುಗಳ್ಳಿ
ಘನ ಪಂಡಿತರು ನಿನ್ನ ಹಾಕಿದರು ತಳ್ಳಿ
ಆದರೂ ಬೇರೂರಿ ತಲೆಯೆತ್ತಿ ನಿಂದೆ
ನೀರಿಲ್ಲದಿದ್ದರೂ ಹಸುರಾಗಿ ಬಂದೆ.

## ೫೮೬. ತಿಪಟೂರಿನ ಆಸ್ಪತ್ರೆ

ಕಟ್ಟಡಕೆ ಉಪಯೋಗಿಸಿದ್ದ ಕಾಂಕ್ರೀಟು
ಉತ್ಕೃಷ್ಟವೆಂದಿತ್ತು ಸರ್ಟಿಫಿಕೇಟು
ಮರುದಿವಸವೇ ಮಾಡು ಸಂಪೂರ್ಣ ಸೋರಿ
ಮತ್ತೊಮ್ಮೆ ಮಾಡಬೇಕೆಂದರು ರಿಪೇರಿ.

## ೫೮೭. ನಾಗರಿಕತೆ

ಕಟ್ಟಡವಿಯಲಿ ವೃಕ್ಷ ಬಿದಿರು ಗಿಡಗಂಟಿ
ಒಂದಕೊಂದನು ತಬ್ಬಿಕೊಳ್ಳುತಿವೆ ಅಂಟಿ
ರಾಜಮಾರ್ಗದ ವೃಕ್ಷಗಳ ರೀತಿ ಬೇರೆ
ಕಾಲಾಳುಗಳ ಹಾಗೆ ನಿಂತಿಹವು, ನೀರೆ.

## ೫೮೮. ಕಟ್ಟಬೇಕೆಂದು

ಕಟ್ಟಬೇಕೆಂದು ಇನ್ನೂ ದೊಡ್ಡ ಗಂಟು
ಕುರ್ಚಿಗಳಿಗೂ ಇವರು ಹಚ್ಚಿದರು ಅಂಟು
ಹಿಡಿದ ಆಸನ ಬಿಡುವುದೆಕೆ ಇಲ್ಲ ಮನಸು
ಕೊನೆಯವರೆಗೂ ನುಂಗಬೇಕೆಂಬ ಕನಸು.

## ೫೮೯. ಅಡಿಗಲ್ಲು

ಕಟ್ಟಬೇಕೆಂದು ಹಾಕಿದರು ಅಡಿಗಲ್ಲು
ಅಡಿಗಲ್ಲ ಮೇಲೆ ಹುಟ್ಟಿದೆ ಭರ್ತಿ ಹುಲ್ಲು
ದನಗಳಿಗೆ ಮೇಯಲಿಕೆ ಬಹಳ ಅನುಕೂಲ
ಕೊಳಲನೂದುತ ಬಾರೊ ವೇಣುಗೋಪಾಲ.

## ೫೯೦. ರಾಷ್ಟ್ರಸಂಘ

ಕಟ್ಟಿಕೊಂಡಿದ್ದಾರೆ, ರಾಷ್ಟ್ರಗಳ ಸಂಘ
ಮಾತಾಡಿ ಮಾತಾಡಿ ಶಾಂತತೆಯ ಭಂಗ
ಆದರೂ ಮಾತು ಮುಗಿಯುವುದಿಲ್ಲ ಕೊನೆಗೆ.
ಮರಳುವರು ಭೋಜನವ ಮುಗಿಸಿ ಮನೆಯೊಳಗೆ.

### ೫೯೧. ಅನುಭವದ ತಳಹದಿ

ಕಟ್ಟಿದರೆ ಅನುಭವದ ತಳಹದಿಯ ಮೇಲೆ
ಕೊನೆಯವರೆಗೂ ನಿಲ್ಲುವುದು ಕವಿಯ ಲೀಲೆ.
ಇಟ್ಟಂಗಿಯಾಗಿರಲಿ ಮಾತು ಪ್ರತಿಯೊಂದು
ಸರಿಯಾದ ಜಾಗದೊಳಗಿರಲಿ ಒಂದೊಂದು

### ೫೯೨. ಜೀವನ

ಕಡಿಮೆ ಇದ್ದರೆ ನೀರು ಅವಾಜು ಜೋರು
ಜೋರು ಅತಿಯಾಗುವುದು ಇರಲು ಇಳಿಜಾರು
ಸಾಗರದ ಮಧ್ಯದಲಿ ನೀರು ಆಳ
ಆಳದಲಿ ಯಾರು ಹಾಕುವುದಿಲ್ಲ ಗಾಳ.

### ೫೯೩. ಮೌನ

ಕಡಲ ಗರ್ಜನೆ ಕೇಳಿ ಬೇಸತ್ತ ಮೀನು
ಮೌನ ವ್ರತ ತಾಳಿದರ ಆಶ್ಚರ್ಯವೇನು ?
ಯಾವಾಗಲೂ ಮೌನಳೆಂದು ನೆಲತಾಯಿ,
ಮಾನವನಿಗೆಂದಿಗೂ ಬಹಳುದ್ದ ಬಾಯಿ.

### ೫೯೪. ಸಖಿಗೆ

ಕಡಲಿನಲಿ ಮೀನು ಬದುಕುವುದು ಆಶ್ಚರ್ಯ !
ಆಶ್ಚರ್ಯವೇನಿಲ್ಲ; ಅತಿ ಸುಲಭ ಕಾರ್ಯ
ಭೂಮಿಯಲಿ ಮನುಜ ಬದುಕುವ ಹಾಗೆ ತಾನೆ
ದೊಡ್ಡವರು ಚಿಕ್ಕವರ ನುಂಗುವುದು ಕಾಣೆ.

### ೫೯೫. ಕಾಳು ಮತ್ತು ಹುಲ್ಲು

ಕಡಿಮೆಯಾಗಲು ಕಾಳು ಹೆಚ್ಚಾಯ್ತು ಹುಲ್ಲು
ಇದಕೆಂಬೆ ಪಂಚವಾರ್ಷಿಕದ ಸ್ಟ್ಯಾಂಪಲ್ಲು
ಮೂರು ಯೋಜನೆ ಮುಗಿಸಿ ಕೊನೆಗೆ ಬರಗಾಲ
ಹುಟ್ಟುವಳಿಗಿಂತಲೂ ಹೆಚ್ಚಾಯ್ತು ಸಾಲ.

### ೫೯೬. ಸಚಿವರ ಸೂಚನೆ

ಕಡಿಮೆಯಾದರೆ ಕಾಳು–ಕಡಿಯ ಉತ್ಪತ್ತಿ
ಪ್ರತಿಯೊಬ್ಬ ನಾಗರಿಕ ತಿನಬಹುದು ತತ್ತಿ,
ತುಟ್ಟಿಯಾದರೆ ತತ್ತಿ ಮನೆಯಲ್ಲಿ ಹೇಟೆ
ಸಾಕಿದರೆ ನಿಂತುಬಿಡುವುದು ಕಳ್ಳಪೇಟೆ.

### ೫೯೭. ಕವಿಗೆ

ಕಡಿಮೆಯೆಂದರೆ ಕಳೆಯಬೇಕು ಶತಮಾನ
ಆಮೇಲೆ ತಿಳಿಯುವುದು ನಿಜವಾದ ಸ್ಥಾನ
ಇದನರಿತು, ಎಲೆ ಕವಿಯೆ, ಪಡಬೇಡ ಹೆಮ್ಮೆ.
ಕಾವ್ಯ ಬೊಬ್ಬುಳಿಯಾಗಬಹುದು ಒಮ್ಮೊಮ್ಮೆ.

### ೫೯೮. ಕಣಕೆ ಕಣ

ಕಣಕೆ ಕಣ ಹಚ್ಚಿದರೆ ಹುಟ್ಟುವುದು ತುತ್ತು.
ತುಟಿಗೆ ತುಟಿ ಹಚ್ಚಿದರೆ ಹುಟ್ಟುವುದು ಮುತ್ತು.
ಹನಿಗೆ ಹನಿ ಕೂಡಿದರೆ ಹುಟ್ಟುವುದು ಹಳ್ಳ.
ನಿನ್ನ ಜೊತೆಗೂಡಿ, ಸಖಿ, ನಾನಾದೆ ಮಳ್ಳ.

### ೫೯೯. ಜೀವನದ ಆಧಾರ

ಕಣ್ಣುಗಳು ಕೂಡಿದರೆ ಪ್ರೀತಿಗೆ ಬುನಾದಿ.
ತುಟಿಗೆ ತುಟಿ ಕೂಡಿದರೆ ಚುಂಬನಕೆ ಆದಿ
ಆಮೇಲೆ ಸುಲಭ ಹೂಡುವುದು ಸಂಸಾರ.
ಪ್ರೀತಿ ಎನ್ನುವುದು ಜೀವನದ ಆಧಾರ.

### ೬೦೦. ನಿನ್ನ ಲಾವಣ್ಯ

ಕಣ್ ತುಂಭ ಗಮನಿಸಲು ನಿನ್ನ ಲಾವಣ್ಯ
ವೃದ್ಧ್ಯಾಪ್ಯದಲಿ ನನಗೆ ಬಂತು ತಾರುಣ್ಯ.
ಸುಳ್ಳು ಹೇಳುವುದಿಲ್ಲ ನಿನ್ನಾಣೆ! ಗೆಳತಿ!
ಮುಪ್ಪಿನಲ್ಲೂ ನೀನು ನನ್ನ ಮದವಳತಿ.

### ೬೦೧. ಕಾಣುವುದಿಲ್ಲ ಮೋರೆ

ಕಣ್ಣು ಮಂದಾಗಿ ಕಾಣುವುದಿಲ್ಲ ಮೋರೆ
ನನ್ನ ಜೀವನದ ಗೆಳತಿ ಹತ್ತಿರಕೆ ಬಾರೆ.
ನಿನ್ನ ಮುಖ ನೋಡಿದರೆ ಹಸುರಾಗಿ ಮನಸು
ಮುಪ್ಪಿನಲ್ಲೂ ನನಗೆ ಬೀಳುವವು ಕನಸು.

### ೬೦೨. ಕಣ್ಣು ಮಂದಾಗಿ

ಕಣ್ಣು ಮಂದಾಗಿ, ಸಖಿ, ಕಷ್ಟದಲಿ ಬಿದ್ದೆ.
ಮರೆಯಾಯ್ತು ಗಿಡಬಳ್ಳಿ ಹೂ ಹಸಿರು ಗದ್ದೆ
ಹಸಿರು ಗದ್ದೆಯ ನೋಡಬೇಕೆಂಬ ಆಸೆ.
ಕದಿರುಗಳ ಕುಣಿತವನೆ ನೋಡುವ ಪಿಪಾಸೆ.

### ೬೦೩. ಸಣ್ಣವರು

ಕಣ್ಣು ಸಣ್ಣಾದರೂ ಹುಡುಕುತಿದೆ ಲೋಕ
ಜಿವ್ಹೆ ಸಣ್ಣಾದರೂ ನುಡಿಯುತಿದೆ ಶ್ಲೋಕ
ಬಾಯಿ ಸಣ್ಣಾದರೂ ಮಣಗಟ್ಲೆ ನುಂಗಿ
ಮೈತುಂಬವೂ ಧರಿಸುತಿದೆ ಶುಭ್ರ ಅಂಗಿ.

### ೬೦೪. ಕತ್ತಲೆಯ ಹೂವು

ಕತ್ತಲೆಗೆ ಕೂಡ ಅರಳುವುದುಂಟು ಹೂವು !
ಕವಿಯಂತೆ ನಿಂತು ನೋಡುವುದಿಲ್ಲ ನಾವು
ನಿಮಿಷದಲಿ ತೋರಿಸುವೆ, ಅಂಗಳಕೆ ಬಾರೆ.
ಕತ್ತಲೆಯ ಹೂವೆನ್ನುವುದು ಗಗನ ತಾರೆ.

### ೬೦೫. ಕವಿಯ ಸೂಚನೆ

ಕತ್ತಿಗಿಂತಲೂ ಹರಿತ ಲೇಖನಿಯ ಧಾರೆ
ಎಂಬುದನು ಹೇಳಬೇಕೇ ಹತ್ತು ಸಾರೆ ?
ಈ ಮಾತು ಸುಳ್ಳಲ್ಲ, ನೋಡಿ ಕೃತಿಗಿಳಿಸಿ
ಕಾರಕೂನರನೆಲ್ಲ ಯುದ್ಧಕ್ಕೆ ಕಳಿಸಿ.

## ೬೦೬. ವ್ಯಾಪಾರಿ ಹೇಳಿದ್ದು

ಕತ್ತೆ ಗದ್ದುಗೆಯೇರಿ ಕುಳಿತರೂ ಕೂಡ.
ವ್ಯರ್ಥ ಗದ್ದಲ ಮಾಡಿ ಹಾಳಾಗಬೇಡ
ಒಮ್ಮೊಮ್ಮೆ ಕುದುರೆಗಿಂತಲು ಕತ್ತೆ ಮೇಲು
ಸರಿಯಾಗಿ ಹಿಂಡಿದರೆ ಕೊಡಬಹುದು ಹಾಲು.

## ೬೦೭. ಜಳ್ಳು

ಕದಿರಿನೊಳಗಿದ್ದ ಜಳ್ಳನು ಬೇರೆ ತೆಗೆದು
ಸಪ್ತ ಸಾಗರಾದಾಚೆ ಬಿಡಬೇಕು ಒಗೆದು.
ಕಿರಿದಾದರೇನಂತೆ ಕಣಜದಾಕಾರ ?
ಪ್ರತಿಯೊಂದು ಭತ್ತದೊಳಗಿರಲಿ ಬಂಗಾರ.

## ೬೦೮. ಕೈ ಮುಗಿದೆ

ಕನ್ನಡ ಕರಾವಳಿಯ ಕೈ ಮುಗಿದೆ ಶಬ್ದ.
ಓ ಮಗನೆ, ಬೇರಡೆಗೆ ಇಲ್ಲ ಉಪಲಬ್ಧ
ಬೇರೆಡೆಗೆ ಜನ ಹೇಳುವರು ; ನಮಸ್ಕಾರ
ನಮಗೆಂದಿಗೂ ತಿಳಿಯದೀ ಚಮತ್ಕಾರ.

## ೬೦೯. ವಿದ್ವಾಂಸರ ಸಂಶೋಧನೆ

ಕನ್ನಡ ಕರಾವಳಿಯ ಹಾಲಕ್ಕಿ ಜನರು
ಹಾಲಿನಲ್ಲಿ ಅಕ್ಕಿ ಬೇಯಿಸಿ ತಿನ್ನುವರು
ಹೀಗಾಗಿ ಈ ಜನಕೆ ಪಾಯಸದ ಹುಚ್ಚು
ಸದ್ಯಕ್ಕೆ ಇವರು ತಿನ್ನುವರು ಬರಿ ನುಚ್ಚು.

## ೬೧೦. ಕನ್ನಡದ ನಾಲಗೆಗೆ

ಕನ್ನಡದ ನಾಲಿಗೆಗೆ ಬಿಗಿ ದೇವ ಭಾಷೆ.
ಅಚ್ಚಗನ್ನಡದೆನ್ನುವುದೆ ನಮ್ಮ ಆಸೆ.
ನಮಗೇಕೆ ದೇವಲೋಕದ ದೊಡ್ಡ ಸುದ್ದಿ ?
ಸಾಕೆಂಬೆ ಭೂತಲದ ಜನರ ಅಭಿವೃದ್ಧಿ.

### ೬೧೧. ಭಾಷೆಗಳು

ಕನ್ನಡ ಮರಾಠಿ ತುಳು ಪ್ರತಿಯೊಂದು ಭಾಷೆ
ಪಂಜಾಬಿ ಬಂಗಾಲಿ ಮಾನವನ ಆಸೆ.
ಎಲ್ಲ ಭಾಷೆಗಳೊಂದು, ಮನುಕುಲದ ಮಾತು.
ಬೇರೆ ಎಂದೆಣಿಸಿದರೆ ಬೀಳುವುದು ತೂತು.

### ೬೧೨. ಬರವಣಿಗೆ

ಕಪ್ಪು ಮಸಿಯಿಂದ ಬರೆದಿಟ್ಟರೂ ಪೆನ್ನು
ಆಗಬೇಕೆನ್ನುವೆನು ಬರವಣಿಗೆ ಹೊನ್ನು
ಹೊನ್ನಾಗದಿದ್ದಾಗ ಅದು ಆಗಿ ಮುತ್ತು
ಕನ್ನಡಾಂಬೆಯ ಮೂಗಿನೊಳಗಿರಲಿ ನತ್ತು.

### ೬೧೩. ಅವರ ಸಂಸಾರ

ಕಪ್ಪು ಹೆಂಡತಿಗೆ, ಸಖಿ, ಮೈತುಂಬ ಮಮತೆ.
ಗಂಡ ಕಪ್ಪಾಗಿರಲು ಮನೆಯೊಳಗೆ ಸಮತೆ
ಕಪ್ಪು ಎನ್ನುವುದು ಯಾವಾಗಲೂ ಗಟ್ಟಿ
ಅವರ ಸಂಸಾರವಾಗುವುದಿಲ್ಲ ತುಟ್ಟಿ.

### ೬೧೪. ಕಬ್ಬಿಗನ ಸಾಮ್ರಾಜ್ಯ

ಕಬ್ಬಿಗನ ಸಾಮ್ರಾಜ್ಯದೊಳಗಿಲ್ಲ ಸೇನೆ.
ಯಾವಾಗಲೂ ಉಂಟು ಲೇಖನಿಯ ಬೇನೆ.
ತೀವ್ರವಾಗಲು ಬೇನೆ ಹುಟ್ಟುವುದು ಕೂಸು.
ನೋಡಿದವರೆಲ್ಲರೂ ಹೇಳುವರು; ಲೇಸು.

### ೬೧೫. ಕಬ್ಬು ತಿಂದರೆ

ಕಬ್ಬು ತಿಂದರೆ, ಗೆಳತಿ ಹಬ್ಬುವುದು ಪ್ರೀತಿ
ಮುತ್ತುಗಳ ಕೊಟ್ಟಾಗ ಸವಿ ಬೇರೆ ರೀತಿ.
ಈ ರೀತಿಯೊಳಗುಂಟು ಮಾನಸಿಕ ಮಾಟ
ಪ್ರೀತಿಯೊಳಗಿರಬೇಕು ತರತರದ ಆಟ.

## ೬೧೬. ಅಧಿಕಾರಿ ಹೇಳಿದ್ದು

ಕಬ್ಬು ತಿನ್ನುವ ರೀತಿ ಗೊತ್ತುಂಟೆ ಕುರಿಗೆ?
ಮೇಲಿನೆಲೆಗಳ ಮೇದು ಮರಳುವವು ಮನೆಗೆ
ಕುರಿಯಂತೆ ಆಗಬಾರದು ನಾವು ಅಂದೆ.
ಅದಕಾಗಿಯೇ ನಾನು, ಸರಿಯಾಗಿ ತಿಂದೆ.

## ೬೧೭. ಧಾರವಾಡದಲ್ಲಿ ಪೇಶವಾಯಿ

ಕನ್ನಡದ ಹೃದಯ ಜಿಲ್ಲಾ ಧಾರವಾಡ.
ಇಲ್ಲಿ ನಡೆಯಿತು ಮರಾಠಿಯ ಲಾಗವಾಡ.
ಈ ಪರಿಸ್ಥಿತಿಗೆ ಎಂಬರು ಪೇಶವಾಯಿ
ಜನರ ಬಾಯಲಿ ಹಾಕಿದರು ಹುಣಸೆಕಾಯಿ.

## ೬೧೮. ಕನ್ನಡಾಂಬೆಗೆ

ಕನ್ನಡಾಂಬೆಗೆ ಇವರು ಹಾಕುವರು ಹಾರ
ಆಂಗ್ಲ ನುಡಿಯಲ್ಲಿ ನಡೆಸುವರು ಸರಕಾರ
ಕೇಳಿದರೆ ಹೇಳುವರು; ಒಂದು ದಿನ ತಾಳಿ.
ಆ ಮೇಲೆ ಕೂಗಲಿದೆ ಕನ್ನಡದ ಕೋಳಿ.

## ೬೧೯. ನಮ್ಮ ಮೀನುಗಾರರು

ಕನ್ನಡ ಕರಾವಳಿಯ ಬಂಗೆಡೆಯ ಮೀನು.
ಇದಕೆಂಬೆ ಕಡಲ ತೀರದ ಕಾಮಧೇನು
ಆದರೂ ಮೀನುಗಾರರಿಗೆ ಅರೆಹೊಟ್ಟೆ
ಹರಕು ಬಾಲೆಯನ್ನುವುದೆ ಇವರ ಮೈ ಬಟ್ಟೆ.

## ೬೨೦. ಕನ್ನಡ ಕಾವ್ಯ

ಕನ್ನಡದ ಕಾವ್ಯಕ್ಕೆ ಬಾಂದಳದ ನೆತ್ತಿ
ಕೈಯೊಳಗೆ ಝುಳಪಿಸಲಿ ಕೋಲ್‌ಮಿಂಚುಗತ್ತಿ
ಹಿಂದಿರುಗಿ ಬಂದರೂ ತ್ರಿಭುವನವ ಸುತ್ತಿ
ಎಂದಿಗೂ ಇರಲೆಂಬೆ ತಾಯ್ನಾಡ ಬುತ್ತಿ.

## ೬೨೧. ಇಂಗ್ಲೀಷಿನ ಮಹತ್ವ

ಕನ್ನಡದ ನಡು ನಡುವೆ ಆಂಗ್ಲ ಒಗ್ಗರಣೆ
ಹಾಕಿ ಮಾತಾಡಿದರೆ ಆ ಹುಡುಗಿ ಜಾಣೆ
ಇಂಥ ಹುಡುಗಿಗೆ ಬೇಗ ಸಿಗಬಹುದು ಗಂಡ.
ಅಚ್ಚಗನ್ನಡ ಮಾತು ಬರಿ ಬ್ರಹ್ಮದಂಡ.

## ೬೨೨. ಅರ್ಭಕ

ಕನ್ನಡಿಯ ಮುಂದೆ ನೀ ನಿಂತು ನಯದಿಂದ
ಕೂದಲನು ಬಾಚಿಕೊಳ್ಳುವುದೊಂದು ಚಂದ.
ಕೂದಲಿಲ್ಲದ ಅರ್ಭಕನ ಪರಿಯ ಬೇರೆ
ಹೃದಯವನ್ನೇ ಬಾಚಿಕೊಳ್ಳುವನು, ನೀರೆ.

## ೬೨೩. ಸ್ಫೂರ್ತಿ

ಕನಸಿನಲಿ ಕಾಣುವಳು ಭಾವನೆಯ ತರುಣಿ
ಎಚ್ಚರಾಗಲು ಕಾಣುವಳು ನನ್ನ ರಮಣಿ
ಇಬ್ಬರೂ ಸವಿ ಸ್ಫೂರ್ತಿ ನೀಡಿದ್ದರಿಂದ
ಬಾವಿಯೊಳಗೆ ನಾನೊಬ್ಬ ಕವಿಯಾದೆ, ಕಂದ.

## ೬೨೪. ಕನಸು

ಕನಸಿನಲಿ ಶ್ರದ್ಧೆಯಿದ್ದರೆ ಮನಸು ಗಟ್ಟಿ
ಕನಸು ಬೀಳದ ಮನುಜನಿಗೆ ಬಾಳು ತುಟ್ಟಿ
ಮಧ್ಯರಾತ್ರಿಯ ಕನಸುಗಳಿಗೆ ಮುಂಜಾನೆ
ಕೂಳು ಬಡಿಸಿದರೆ ಮೂಲವಾಗುವುದು ಆನೆ.

## ೬೨೫. ಕನಸಿನಲಿ

ಕನಸಿನಲಿ ಸ್ವರ್ಗಲೋಕಕೆ ಹೋಗಿ ಬಂದೆ
ಅಲ್ಲಿಯೂ ನಡೆದಿತ್ತು ಸೂಳೆಯರ ದಂಧೆ.
ರಂಭೆ ಎಂದಳು : ನಿಮಗೆ ಬೇಕೆನು ಮುತ್ತು ?
ನಾನೆಂದೆ : ನನಗೆ ಉಪವಾಸ ಈ ಹೊತ್ತು

## ೬೨೬. ಕನಸು

ಕನಸು ಬಿದ್ದರೆ ಕಲ್ಪನೆಗೆ ಭರ್ತಿ ಕೂಳು.
ಬೀಳದಿದ್ದರೆ ಪಾಪ ಹತ್ತುವದು ಧೂಳು.
ಮೂಡಿ ಬಂದರೆ ಕನಸು ಹಿಗ್ಗುವದು ಮನಸು
ದೊಡ್ಡವರ ಕೃತಿಗೆ ಮೂಲಾಧಾರ ಕನಸು.

## ೬೨೭. ಬರವಣಿಗೆ

ಕಬ್ಬಿಗನ ಬರವಣಿಗೆ ಆಗಲಿ ವಿಶಾಲ
ಪೂರ್ವ ಕಬ್ಬಿಗರಿಯಿಂದ ತರಬೇಕ ಸಾಲ
ಇದನು ತೀರಿಸಬೇಕು ಕಾಲಕ್ರಮೇಣ
ಬಡ್ಡಿ ಸಹ ನೀಡಲಿಕೆ ಬರಬೇಕು ತ್ರಾಣ.

## ೬೨೮. ಕುಲಗೆಟ್ಟ ಜಾತಿ

ಕಬ್ಬಿಣಕೆ ಕಬ್ಬಿಣಕೆ ಹಿಡಿದಿತ್ತು ತಂಟೆ.
ನಾನೆಂದೆ : ನಿಮ್ಮೊಳಗೆ ಜಾತಿಗಳು ಉಂಟೆ ?
ಕುಳದ ಸ್ಪಷ್ಟೀಕರಣ ಇತ್ತು ಈ ರೀತಿ.
ಕೋವಿಯೊಳಗಿನ ಉಕ್ಕು ಕುಲಗೆಟ್ಟ ಜಾತಿ.

## ೬೨೯. ಕೆಂದಾವರೆ

ಕಮಲದೊಳಗೂ ಉಂಟು ಹಲವಾರು ಜಾತಿ
ನನಗೆ ಕೆಂದಾವರೆಯ ಮೇಲೆ ಬಲು ಪ್ರೀತಿ
ತುಟಿಗೆ ಲಿಪ್‌ಸ್ಟಿಕ್ ಹಚ್ಚಿದರೆ ನಿನ್ನ ಮೋರೆ
ಕೆಂಪು ತಾವರೆಯಾಗಿ ಅರಳುವುದು ನೀರೆ.

## ೬೩೦. ಕಮಲಮುಖಿಗೆ

ಕಮಲಮುಖಿ, ನೀ ನನ್ನ ತಾವರೆಯ ದಂಟು
ಕೆರೆಯ ಕಡೆ ಹೋದಾಗ ನೀ ಬಿದ್ದೆ ಗಂಟು
ತಾವರೆಯ ಗಂಟಿನಂದದಿ ನೀನು ಉದ್ದ
ಕೆಸರಿನಲಿ ಹುಟ್ಟಿಯೂ ನೀ ಬಹಳ ಶುದ್ಧ.

## ೬೩೧. ಬಿಳಿ ಕರಡಿ

ಕರಡಿಯಲ್ಲೂ ಉಂಟು ನಾನಾ ನಮೂನೆ,
ಬೆಟ್ಟದೊಳಗಿನ ಕರಡಿಗಳು ಕಪ್ಪು ತಾನೆ ?
ರಾಜಕಾರಣದ ಆ ಪ್ರಾಣಿಯೇ ಬೇರೆ,
ಬಿಳಿಕೂದಲಿನ ಕರಡಿ, ಸುಳ್ಳಲ್ಲ ನೀರೆ.

## ೬೩೨. ಕರಭಾರ ನಾಟಕ

ಕರಭಾರ ನಾಟಕಕೆ ಬರಿ ಮೂರು ಅಂಕ.
ಪ್ರಥಮ ಅಂಕದ ಕೊನೆಗೆ ಆರೋಗ್ಯ ಸುಂಕ.
ವಿವಿಧ ಕರಗಳು ಬಳಿಕ ತೋರಿಸಲು ಮೋರೆ,
ಮೂರನೆಯ ಅಂಕದಲಿ ಸರಚಾರ್ಜು ಬೇರೆ.

## ೬೩೩. ಕರ ಭಾರ

ಕರಭಾರ ಹೆಚ್ಚಾಗಿ ಬಗ್ಗಿದೆವು ನಾವು.
ಮತ್ತಷ್ಟು ತೀವ್ರವಾಗಿದೆ ತಲೆಯ ನೋವು.
ಕರಭಾರವೆನ್ನುವುದು ಕಾಯದೆಯ ಲೂಟಿ.
ಭರಭರನೆ ಭರಭರನೆ ನಿಮಿಷದಲಿ ಕೋಟಿ.

## ೬೩೪. ಕರ್ನಾಟಕ

ಕರ್ನಾಟಕವು ನಾಟಕವು ಆಗದಿರಲಿ.
ಅತ್ಯಂತ ಶೀಘ್ರದಲ್ಲಿಯೆ ಮುಂದೆ ಬರಲಿ
ಪ್ರತಿಯೊಬ್ಬನಿಗೆ ಸಿಗಲಿ ಮಾನವನ ಹಕ್ಕು.
ತೆರೆದುಬಿಡಬೇಕಯ್ಯ ಪ್ರತಿಯೊಂದು ದಿಕ್ಕು.

## ೬೩೫. ಕರಿಯಪ್ಪ ಸೆಟ್ಟರಿಗೆ

ಕರಿಯಪ್ಪ ಸೆಟ್ಟರಿಗೆ ಬಿಳಿಯಾಕೆ ಸಿಕ್ಕಿ
ಪ್ರತಿ ದಿವಸವೂ ಭರ್ತಿ ನೊರೆ ಬಂತು ಉಕ್ಕಿ
ಏನು ಪರವಾ ಇಲ್ಲ ಇಂಥಾ ಉಮೇದು
ಸರಿಯಾಗಿ ಆಕೆ ಮಾಡಿರಬಹುದು ಜಾದು.

## ೬೩೬. ಕವಿಕುಲದ ಕವಿ

ಕರುಣಾಳು, ನೀ ಬರೆದ ಕವಿತೆಯೂ ವ್ಯರ್ಥ.
ನಮಗೆ ಬೇಕಾದದ್ದು ಕಿಸೆಯೊಳಗೆ ಅರ್ಥ.
ಅರ್ಥವೆಂದರೆ ದುಡ್ಡು; ತಿಳಿಯತೇ, ದೇವ!
ದುಡ್ಡಿನಿಂದಲೇ ಬದುಕು! ದೇವನಿಂದಲ್ಲ!

## ೬೩೭. ರಾಜಕೀಯ

ಕರಣಾಳು, ಬಾ, ಬೆಳಕೆ, ಕಣ್ದೆರೆದು ನೋಡು;
ಎಲ್ಲಿ ಸಾಗಿದೆ ಎನ್ನುವುದು ನಮ್ಮ ನಾಡು.
ಮೂಡಿದರೆ ನಿಜವಾಗಿ ನಿನ್ನೊಳಗೆ ಕರುಣೆ.
ಬೇಡಯ್ಯ ಮಂತ್ರಿಮಂಡಳದ ವಿಸ್ತರಣೆ.

## ೬೩೮. ಕರುಣಾಳು ಬಾ ಬೆಳಕೆ

ಕರುಣಾಳು ಬಾ ಬೆಳಕೆ, ಪಿಡಿಯೆನ್ನಕೈಯ್ಯ.
ಹಗಲುಗತ್ತಲೆಗೆ ಅಂಜುವೆನು, ದಮ್ಮಯ್ಯ!
ಶ್ರೀ ಪುರಂದರ ವಿಠಲ, ನೀ ಹೇಳಿದಂತೆ
ದೂರಾಗುವುದು ನಿಜವೆ ಈ ಕಾಳಸಂತೆ?

## ೬೩೯. ಕಾವ್ಯ ಸುಂದರಿಗೆ

ಕರೆದಾಗ ಬರಲಿಲ್ಲ, ಈಗೇಕೆ ಬಂದೆ?
ಹೀಗೆ ಕಾಡುವುದುಂಟೆ? ಇದು ಎಂಥ ದಂಥೆ?
ಕರೆದಾಗ ಯಾವಾಗಲೂ ಸೊಟ್ಟ ಮೋರೆ.
ನೀನಾಗಿ ಬಂದಾಗ ರೂಪವೇ ಬೇರೆ.

## ೬೪೦. ರಾಡಿ

ಕಲ್ಪನೆಯ ಹೊರಗೆ ಮಾಡಿದ್ದಾರೆ ರಾಡಿ.
ಎಷ್ಟು ಎಂಬುದನು ನೀವೇ ಬಂದು ನೋಡಿ.
ಇದನು ತೊಳೆಯುವನಾರು? ಈಗಿಲ್ಲ ಬಾಪು
ಉಪಯೋಗ ಬೀಳಲಾರದು ಯಾವ ಸೋಪು.

## ೬೪೧. ಕಲ್ಯಾಣ ಕೇಂದ್ರ

ಕಲ್ಯಾಣ ಕೇಂದ್ರವೆಂಬುದು ಜೀಪು ಮಾತ್ರ
ಕೇಂದ್ರ ನಡೆಸುವ ಕೆಲಸ ಜಾನಕಿಯ ಹತ್ರ
ಇವಳು ಜೀಪಿನ ಮೇಲೆ ಕೂತು ಊರೂರು
ತಿರುಗಾಡಿದರೆ ಕೆಲಸ ಮತ್ತಷ್ಟು ಜೋರು.

## ೬೪೨. ಆದರ್ಶ

ಕಲ್ಲಿಗೂ ದೃಢವಾಗಿ ಮನುಜ ಸಂಕಲ್ಪ
ಹೂವಾಗಿ ಅರಳಿದರೆ ಗೊಮ್ಮಟನ ಶಿಲ್ಪ
ಉಕ್ಕಿಗೂ ಬಿರುಸಾಗಿ ಮಾನವನ ಹೃದಯ
ಬೆಣ್ಣೆಯೊಲು ಕರಗಿದರೆ ಗೌತಮನ ಉದಯ.

## ೬೪೩. ಕ್ರಾಂತಿ

ಕಲ್ಲಿಗೂ ಬರಬೇಕು ರೆಕ್ಕೆ ಕೈ ಕಾಲು
ಹಲ್ ಕಿಸಿದು ನಗಬೇಕು ಪ್ರತಿಯೊಂದು ಕೋಲು
ನವಿಲು ಪಾತರಗಿತ್ತಿಗಳ ನೃತ್ಯ ಸಾಕು
ಸತ್ತ ಹೆಣ ಕುಣಿಯಲಿಕೆ ಎದ್ದು ನಿಲಬೇಕು.

## ೬೪೪. ಬನವಾಸಿಯ ಕಲ್ಲು ಮಂಟಪ

ಕಲ್ಲು ಮಂಟಪದೊಳಗೆ ಕೂತಿದ್ದ ದೇವ
ಕಲ್ಲಾಗಿ ಬಿದ್ದುಕೊಂಡನು ಹೋಗಿ ಜೀವ
ಆದರೂ ಮಂಟಪಕೆ ಬರಲಿಲ್ಲ ಕೇಡು
ಲಲಿತಕಲೆಗೆಂದಿಗೂ ಸಾವಿಲ್ಲ ನೋಡು.

## ೬೪೫. ಕನಕದಾಸರ ಕೀರ್ತನೆ

ಕಲ್ಲೊಳಗೆ ಪುಟ್ಟಿ ಕೂಗುವ ಕಪ್ಪೆಗೆಲ್ಲಾ
ಪ್ರತಿಯೊಂದು ಮೂಲೆಯಲಿ ಸಾಕಷ್ಟು ಬೆಲ್ಲ
ಎಲ್ಲರನು ಸಲಹುವನು ಈ ಮುಖ್ಯಮಂತ್ರಿ
ಇದಕೆ ಸಂಶಯವಿಲ್ಲ! ಕೇಳು, ಧನ್ವಂತ್ರಿ

೬೪೬. ಕವನ

ಕವನವೆಂಬುದು ಅಲ್ಲ ಶಬ್ದಗಳ ಪ್ರಾಸ
ಉಸುರಾಡುತಿರಬೇಕು ಅನುಭವದ ಶ್ವಾಸ
ಕಂಡದ್ದು ಮಾತ್ರ ಆಗುವುದುಂಟು ಕೆಂಡ.
ಕಾಣದಿದ್ದುದು ಕವಿತೆಯಲಿ ಬ್ರಹ್ಮದಂಡ.

೬೪೭. ಜಳ್ಳಿನ ಪ್ರಮಾಣ

ಕವನ ಸ್ಂಗ್ರಹದಲ್ಲಿ ತೊಂಬತ್ತು ಜುಳ್ಳು.
ಉಳಿದ ಹತ್ತರ ಪೈಕಿ ಏಳೆಂಟು ಸುಳ್ಳು.
ಐನೂರು ಪುಟದಲ್ಲಿ ಐವತ್ತು ಬಾಳಿ
ಚೆನ್ನವಾದರೆ ಸಾಕು; ಉಳಿದದ್ದು ಗಾಳಿ.

೬೪೮. ಕವಿಗಳ ಜಾತಿ

ಕವಿಗಳಲ್ಲೂ ಉಂಟು ತರತರದ ಜಾತಿ
ನಾ ಕುಣಿಸುವುದು ವಿಡಂಬನವೆಂಬ ಕೋತಿ
ಕೆಲವು ಕವಿಪುಂಗವರ ಕಾವ್ಯ ನಾಜೂಕು
ಯಾರಿಗೂ ಅರ್ಥವಾಗದ ದೊಡ್ಡ ಜೋಕು.

೬೪೯. ಶೈಲಿ

ಕವಿಗೆಂದಿಗೂ ಬೇಡ ಯಾವ ಕಸರತ್ತು
ಕಸರತ್ತು ಮಾಡಿದರೆ ಒಡೆಯುವುದು ಮುತ್ತು
ಬರೆದದ್ದು ಯಾವಾಗಲೂ ಇರಲಿ ಸಾದಾ.
ಈ ಶೈಲಿಯಿಂದ ಹೊರ ಬೀಳಲಿ ಆಗಾಧ.

೬೫೦. ಸರಕಾರದ ಪ್ರಶಸ್ತಿ

ಕವಿಗೆ ದೊರೆತಾಗ ಸರಕಾರದ ಪ್ರಶಸ್ತಿ
ಯೋಗ್ಯತೆಗಿಂತಲೂ ರೂಪಾಯಿ ಜಾಸ್ತಿ
ಈ ಪರ್ವಕಾಲದಲಿ ಬಹಳ ಅನುಕೂಲ
ಕವಿವರ್ಯ ತೀರಿಸಲಿ ಅಂಗಡಿಯ ಸಾಲ.

## ೬೫೧. ಕವಿತೆ

ಕವಿತೆ ಉಪ್ಪಿನಕಾಯಿ, ಭರಣಿಯಲಿ ತುಂಬಿ
ಆಗಾಗ್ಗೆ ರುಚಿ ನೋಡುವುದು ಕಾಲದುಂಬಿ.
ತಿಂದರೂ ಖರ್ಚಾಗದಿರಲು ತಿಳಿಮಾತ್ರ
ಕಾಲರಾಯನು ನೀಡುವನು ಮಾನಪತ್ರ.

## ೬೫೨. ನವ್ಯ ಕವಿ ಹೇಳಿದ್ದು

ಕವಿತೆ ಎಂಬುದು ನನ್ನ ಖಾಸಗೀ ಆಸ್ತಿ
ಸಾರ್ವಜನಿಕರಿಗೇಕೆ ಇದರ ಮುತುವರ್ಜಿ ?
ನಾನು ಬರೆದದ್ದು ನನಗೊಬ್ಬನಿಗೆ ಮಾತ್ರ
ಅರ್ಥವಾದರೆ ಸಾಕು; ಧನ್ಯ ಕುಲಗೋತ್ರ.

## ೬೫೩. ಕವಿತೆ

ಕವಿತೆ ಎಂಬುದು, ಮಗನೆ, ಕವಿಯ ಕೈಗೊಂಬೆ,
ರಸಬಾಳೆ, ದ್ರಾಕ್ಷಿ, ದಾಳಿಂಬೆ, ಹುಳಿನಿಂಬೆ,
ಮತ್ತೆ ಹಾಗಲಕಾಯಿಯಾಗಿ ಒಮ್ಮೊಮ್ಮೆ
ಕಹಿ ರಸವ ಹಿಂಡಿದರೆ ಕವಿಗೆ ಅದು ಹೆಮ್ಮೆ.

## ೬೫೪. ಅನುಭವದ ಸಾರು.

ಕವಿತೆ ಎಂಬುದು, ಮಗಳೆ, ಜೀವನದ ಜೇನು
ಈ ಜೇನು ಕೊಟ್ಟವನು ಭಾವನೆಯ ಭಾನು.
ಇದರ ಸವಿ ಅನುಭವಿಸಿದವರಿಗೇ ಗೊತ್ತು
ಉಲ್ಲಾಸದಲಿ ಹೋಗುವುದು ಇಡೀ ಹೊತ್ತು.

## ೬೫೫. ಜೀವನದ ಜೇನು

ಕವಿತೆ ಎಂಬುದು, ಮಗಳೆ, ಜೀವನದ ಜೇನು
ಈ ಜೇನು ಕೊಟ್ಟವನು ಭಾವನೆಯ ಭಾನು.
ಇದರ ಸವಿ ಅನುಭವಿಸಿದವರಿಗೇ ಗೊತ್ತು
ಉಲ್ಲಾಸದಲಿ ಹೋಗುವುದು ಇಡೀ ಹೊತ್ತು.

## ೬೫೬. ರೇಶಿಮೆ ಬೇಡ

ಕವಿತೆ ಎನ್ನುವುದು, ಸಖಿ, ರೇಶಿಮೆಯ ಸೀರೆ,
ಉಟ್ಟುಕೊಳಲಿಕೆ ಬೇಕು ಭಾವನೆಯ ನೀರೆ.
ಆಕೆ ಎಂದಳು; ಆಕೆಗೇ ಇದನು ತೊಡಿಸಿ
ನನಗೆ ರೇಶಿಮೆ ಬೇಡ, ನೈಲಾನು ಉಡಿಸಿ.

## ೬೫೭. ಕವಿತೆ

ಕವಿತೆ ಎಂಬುದು ಕಬ್ಬು ; ಇನ್ನೊಮ್ಮೆ ಮೆಣಸು.
ಮತ್ತೆ ಆಗಾಗ್ಗೆ ಆಗುವುದುಂಟು ಗೆಣಸು
ಕವಿತೆ ಕಹಿಯಾದರೂ ಅದರ ರುಚಿ ಬೇರೆ.
ನಾವು ಹಾಗಲಕಾಯಿ ತಿನ್ನುವೆವು, ನೀರೆ.

## ೬೫೮. ತಕರಾರು

ಕವಿತೆಗಳ ಬರೆಬರೆದು ನಾನಾದೆ ಮುದುಕ.
ಆದರೂ ಇದುವರೆಗೆ ಸಿಗಲಿಲ್ಲ ಪದಕ
ಹೀಗೆಂದು ಶಾಸ್ತ್ರೀಜಿ ಮಾಡಿ ತಕರಾರು
ರಸ್ತೆಯಲಿ ನಿಲಿಸಿದನು ಮಂತ್ರಿಗಳ ಕಾರು.

## ೬೫೯. ತುಟ್ಟಿ ಕಾಲದಲ್ಲಿ

ಕವಿತೆಗಿಂತಲು, ಮಗನೆ, ಕಾಗದವು ತುಟ್ಟಿ
ಈ ವಿಚಿತ್ರವ ಕಂಡು ನೀರಾಯ್ತು ಗಟ್ಟಿ
ಸೆಟ್ಟಿ ಎಂದನು ತನಗೆ ಬಹಳ ಅನುಕೂಲ
ಎಂದಿಗೂ ಬರಲಿಲ್ಲ ಈ ತರದ ಕಾಲ.

## ೬೬೦. ಕವಿತೆ ನಕ್ಕರೆ

ಕವಿತೆ ನಕ್ಕರೆ ಜೊತೆಗೆ ಮಕ್ಕಳೂ ನಕ್ಕಿ
ಅರಗಳಿಗೆಯಲಿ ಶಬ್ದವಾಗುವದು ಹಕ್ಕಿ.
ಒಲೆಯ ಮೇಲಿನ ಅಕ್ಕಿ ಅಗುಳಾಗಿ ಅನ್ನ
ಹಾಸ್ಯರಸದಿಂದ ಜೀವನವಾಯ್ತು ಧನ್ಯ.

## ೬೬೧. ಕವಿತೆ

ಕವಿತೆಯೆನ್ನುವುದು ಶಬ್ದದ ಚಮತ್ಕಾರ.
ಭಾವನೆಯ ಗಣಿಯಿಂದ ತೆಗೆದ ಬಂಗಾರ
ಅನುಭವದ ಕುಲುಮೆ ಕರಗಿಸಿದ ಆಭರಣ
ಶಾರದಾಂಬೆಗೆ ತೊಡಿಸಿ ನಮಿಸಿದೆನು ಚರಣ.

## ೬೬೨. ಕಾವ್ಯಪುಷ್ಪ

ಕವಿಯ ಜೀವನವಾಗಬೇಕು ಕಾಸಾರ
ಕಾಸಾರದೊಳಗಿಂದ ಬರಲಿ ಮಂದಾರ
ಒಂದು ದಿನ ಬಿರಿದರೂ ಸಾಕು ಈ ಹೂವು
ಈ ಹೂವು ತಂದಂಥ ಕವಿಗಿಲ್ಲ ಸಾವು.

## ೬೬೩. ಕವಿಯ ಭಾವನೆ

ಕವಿಯ ಭಾವನೆ ಹೊಲಿದು ಮಾಡಿದರೆ ಅಂಗಿ
ಸಹೃದಯಿಗಳು ಉಟ್ಟುಕೊಳ್ಳುವರು ಲುಂಗಿ
ಪ್ರಾಸಗಳ ಸಲುವಾಗಿ ಹಾಕಿದರೆ ದಾರ
ತೇಪೆ ಕೆಲಸದ ಹಾಗೆ ಕವಿಯ ಸಂಸಾರ.

## ೬೬೪. ನಾನು

ಕವಿಯಲ್ಲ ಮಾರಾಯ! ನಾನೊಬ್ಬ ಭಂಗಿ.
ಮಡಿವಾಳನೂ ಹೌದು; ತೊಳೆಯುವನು ಅಂಗಿ.
ಮತ್ತೆ ಕ್ಷೌರಿಕನಾಗಿ, ಕೆತ್ತುವೆನು ಬೋಳು.
ಒಮ್ಮೊಮ್ಮೆ ಕಣಜದಲಿ ತುಂಬುವೆನು ಕಾಳು.

## ೬೬೫. ಮುರಾರಿಯ ಬಯಕೆ

ಕವಿಯಾಗಿ ಸಾಯಬೇಕೆಂದನು ಮುರಾರಿ
ನಿಮಿಷದಲಿ ಮಾಡಿದನು ಎಲ್ಲಾ ತಯಾರಿ,
ಬರೆಯಲಿಕೆ ಕುಳಿತುಕೊಂಡನು ಹಿಡಿದು ಪೆನ್ನು
ಸಂಜೆಯಾಗಲು ಮುರಿದುಹೋಗಿತ್ತು ಬೆನ್ನು.

### ೬೬೬. ಕವಿ ಸಮ್ಮೇಳನ

ಕವಿಯ ಸಮ್ಮೇಳನಕೆ ಬಾನುಲಿಯ ಕೇಂದ್ರ
ಅಧ್ಯಕ್ಷನಾಗಿದ್ದ ಪಂಚಮಿಯ ಚಂದ್ರ
ಜನರೆಲ್ಲ ಮಲಗಿದ್ದರೂ ಇಡೀ ರಾತ್ರೆ
ಕೇಳಲಿಕೆ ನೆರೆದಿತ್ತು ಚಿಕ್ಕೆಗಳ ಜಾತ್ರೆ.

### ೬೬೭. ಕವಿವರ್ಯ

ಕವಿವರ್ಯ ತೀರಿಕೊಂಡದ್ದು ದುರದೃಷ್ಟ
ಇನ್ನು ಬದುಕಿದ್ದರೂ ನಮಗಿತ್ತು ಕಷ್ಟ
ಮೊದಮೊದಲು ಬರೆದದ್ದು ರಮಣೀಯ ಕವನ
ಆಮೇಲೆ ಬಂದದ್ದು ಗುಹ್ಯತರ ಗಹನ.

### ೬೬೮. ಕವಿಯ ಸ್ಮಾರಕ

ಕವಿ ಸತ್ತ ಬಳಿಕ ನಿಲಿಸಿದರೊಂದು ಶಿಲ್ಪ
ಶಿಲ್ಪ ನಿಲಿಸಿದ ನರನ ಬುದ್ಧಿ ಅತ್ಯಲ್ಪ.
ಎಂದಿಗೂ ಗೊಂಬೆ ಹಾಡುವುದಿಲ್ಲ, ಜಾಣಾ,
ಕವಿ ಬರೆದ ಪಂಕ್ತಿಗಳು ಜೀವಂತ ಪ್ರಾಣ.

### ೬೬೯. ಚುನಾವಣೆಯಲಿ ಕೇಳಿದ್ದು

ಕಸಬರಿಗೆ ಹಿಡಿದು ಹೇಳಿದಳು ಭೀಮಕ್ಕ;
ಎಲ್ಲವನ್ನೂ ನಾನೆ ಮಾಡುವೆನು ಚೊಕ್ಕ,
ಕೊಳೆ ತೆಗೆಯಲಿಕೆ ಬೇಡ ಯಾವ ಸರಕಾರ
ಸಚಿವರೂ ಬೇಕಿಲ್ಲ; ಬೇಕು ಸಬಕಾರ

### ೬೭೦. ಮಂತ್ರಿತನ

ಕಳಚಿ ಬಿದ್ದರೂ ಮುಖ್ಯಮಂತ್ರಿತನ ಪದವಿ.
ಈತನಿಗೆ ಮಾಡಿದರು ಇನ್ನೊಂದು ಮದವಿ
ಕೇಂದ್ರ ಸರಕಾರದಲಿ ಮಂತ್ರಿತನ ನೀಡಿ
ಮುಂದೆ ದೂಡಿದರು ಈತನ ಮುರುಕು ಗಾಡಿ.

## ೬೭೧. ದೇಣಿಗೆ

ಕಳ್ಳ ಆಯಾತಗಾರರು ಗಳಿಸಿ ಗಳಿಸಿ
ಸುಖವಾಗಿ ಕುಳಿತುಕೊಂಡರು ಸ್ವಲ್ಪ ಕಳಿಸಿ
ಕಳಿಸಿದ್ದು ಏತಕೆಂಬುದನರಿಯಬೇಕು
ಇದು ಚುನಾವಣೆ ಫಂಡು; ಮುಗಿಸೋಣ ಸಾಕು

## ೬೭೨. ದೇವರಿಗೆ ನೀಡುವರು

ಕಳ್ಳತನ ಜೀರ್ಣವಾಗಲಿಕೆಂದು ಕೊಂಚ.
ದೇವರಿಗೆ ನೀಡುವರು ! ಇದಕೆಂಬೆ ಲಂಚ
ದೇವರೂ ಲಂಚ ಕೊಳ್ಳುವ ರೂಢಿ ಇರಲು
ಸಚಿವರಿಗೆ ಮಾತ್ರ ತೋರಿಸಬೇಡ ಬೆರಳು.

## ೬೭೩. ವೈವಿಧ್ಯ

ಕಳ್ಳನಿಗೆ ಮನೆಯಿಂದ ಹಾಕಿದೆನು ಹೊರಗೆ
ಮಳ್ಳರಿಬ್ಬರು ಬಂದು ಹೇಳಿದರು ನನಗೆ;
ಕಳ್ಳನೂ ಲೋಕದೊಳಗಿರಬೇಕು, ಸ್ವಾಮಿ
ವೈವಿಧ್ಯದಿಂದ ಕಂಗೊಳಿಸುವುದು ಭೂಮಿ.

## ೬೭೪. ಅವನು ಹೇಳಿದ್ದು

ಕಳ್ಳಬಾಜಾರಿಗಳ ದೂರಿ ಫಲವಿಲ್ಲ,
ಸಿಕ್ಕಿದರೆ ಎಲ್ಲರೂ ನೆಕ್ಕುವರು ಬೆಲ್ಲ
ವ್ಯವಹಾರಜ್ಞಾನವಿಲ್ಲದ ಪ್ರಾಣಿ ಪಾಪ
ನೆಕ್ಕದಿರಬಹುದೆಂದು ಹೇಳಿದನು, ಭೂಪ.

## ೬೭೫. ಮಡಿವಂತ ಕಳ್ಳರು

ಕಳ್ಳರಲ್ಲೂ ಉಂಟು ಮಡಿವಂತ ಜಾತಿ,
ಭಾರತದ ಆದ್ಯಂತ ಇವರ ಪ್ರಖ್ಯಾತಿ
ಇವರು ಕದ್ದದ್ದು ಕಾನೂನಿನ ಪ್ರಕಾರ
ಬಿರುದು ದಯಪಾಲಿಸಿತು ಕೇಂದ್ರ ಸರಕಾರ.

### ೬೭೬. ಕಳ್ಳರಿಗೆ ಸುಳ್ಳರಿಗೆ

ಕಳ್ಳರಿಗೆ ಸುಳ್ಳರಿಗೆ ಈ ಪ್ರಜಾರಾಜ್ಯ.
ಬಹಳ ಅನುಕೂಲವೆಂದನು ನಮ್ಮ ಅಜ್ಜ
ಸಜ್ಜನರು ಕುಳಿತುಕೊಂಡರು ಮೂಲೆಯಲ್ಲಿ
ಸಂಧಿ ಸಾಧಕರೆಲ್ಲ ಸೇರಿದರು ದಿಲ್ಲಿ.

### ೬೭೭. ಪ್ರಗತಿಪರರು

ಕಳ್ಳರೂ ಪ್ರಗತಿ ಎಂದರು ಭರ್ತಿ ಕೂಗಿ
ಡೊಳ್ಳರೂ ಬಂದು ಸೇರಿದರು ತಲೆದೂಗಿ
ಈ ರೀತಿ ಸೆಳೆದು ಜನಕೋಟಿಗಳ ಲಕ್ಷ್ಯ
ನಿಮಿಷದಲಿ ಕಟ್ಟಿದರು ಪ್ರಗತಿಪರ ಪಕ್ಷ.

### ೬೭೮. ಮಾತು

ಕೃತಿಗಿಂತಲೂ ಮಗಳೆ, ಹೆಚ್ಚಾಗಿ ಮಾತು,
ನವಭಾರತದ ಕಟ್ಟಡಕೆ ಬಿತ್ತು ತೂತು
ಈ ತೂತಿನೊಳಗಿಂದ ನೀರೆಲ್ಲ ಸೋರಿ
ಸಂಪೂರ್ಣ ಹಾಳಾಯ್ತು; ಆಗದು ರಿಪೇರಿ

### ೬೭೯. ನನ್ನ ಮರೆವು

ಕೃತಿ ರಚನೆ ತಪ್ಪಿದಾಗಲೆ ನನಗೆ ಸಾವು
ಬಾಡಿ ಹೋಗುವುದು ಜೀವನದ ಈ ಹೂವು
ಆಮೇಲೆ ಬದುಕಿದರು ನಾನೊಂದು ಕೋಲು
ತೆನೆ ಬಂದರೂ ಕೊನೆಗೆ ಕಾಳೆಲ್ಲ ಪೋಲು.

### ೬೮೦. ಕಾರಣ

ಕ್ಷಣ ಕ್ಷಣಕೆ ಗುಡಿಯೊಳಗೆ ಕೇಳುತಿದೆ ಗಂಟೆ
ಏನಾದರೊಂದು ಕಾರಣವು ಇದಕುಂಟೆ ?
ಇಂಥ ಪ್ರಶ್ನೆಯ ಕೇಳುವುದು ಶುದ್ಧ ಹುಚ್ಚು
ದೇವರಿಗೆ ಯಾವಾಗಲೂ ನಿದ್ದೆ ಹೆಚ್ಚು.

## ೬೮೧. ನನ್ನ ಬಯಕೆ

ಕಂಗೊಳಿಸುತಿರುವಾಗ ಬಿಸಿಲೊಳಗೆ ಗದ್ದೆ
ಭಗವಂತ, ಬರಲೆನಗೆ ಸಂತಸದ ನಿದ್ದೆ
ಮಧ್ಯರಾತ್ರಿಯ ಮರಣ ಬರದಂತೆ ನೋಡು
ಯಾರಿಗೂ ಬೇಡಯ್ಯ ಆ ನಿದ್ದೆಗೇಡು.

## ೬೮೨. ಸೆಟ್ಟಿಯ ಭಜನೆ

ಕಂಟ್ರೋಲು ಗಿಂಟ್ರೋಲು ಬರಲಿ ಬೇಕಾದ್ದು
ನಿನ್ನ ದಯೆಯೊಂದಿರಲು, ಬರಬಹುದು ಗೆದ್ದು
ಶ್ರೀ ಪುರಂದರವಿಠಲ, ನಿನ್ನ ಸಹಕಾರ
ಸಿಕ್ಕಿದರೆ ಸುಮ್ಮನಾಗುವುದು ಸರಕಾರ.

## ೬೮೩. ಕಾಲರಾಯನ ಅಂಗಿ

ಕಂಡದ್ದು ಕೇಳಿದ್ದು ಒಂದೆಡೆಗೆ ಹಾಕಿ
ಕವನ ಹೊಲಿದರೆ ಕಾಲರಾಯನಿಗೆ ಖಾಕಿ.
ಇದನು ಹೊಲಿಯುವ ಸೂಜಿ ಬಹಳ ನಾಜೂಕು
ಚಿರಕಾಲ ಬಾಳುವುದು ನುಡಿಯ ಪೋಷಾಕು.

## ೬೮೪. ಯೋಜನೆಯ ಪ್ರಗತಿ

ಕಂತ್ರಾಟು, ಲೈಸನ್ಸು ಪರ್ಮಿಟ್ಟು ಕೊಟ್ಟು
ಏಕಾಂತದಲಿ ಮಾತನಾಡುವರು ಗಟ್ಟು
ಈ ಗುಟ್ಟಿನೊಳಗುಂಟು ಯೋಜನೆಯ ಪ್ರಗತಿ
ಪಂಚವಾರ್ಷಿಕವೆನ್ನುವುದು ಹೀಗೆ, ಗೆಳತಿ !

## ೬೮೫. ತೆರಿಗೆಗಳು

ಕಂದಾಯ ಸರ್‌ಚಾರ್ಜು, ತರತರದ ಸೆಸ್ಸು
ಸರಿಯಾಗಿ ತುಂಬುವುದು ಸರಕಾರಿ ಬಸ್ಸು
ಪಂಚವಾರ್ಷಿಕವೆಂದು ನೆವ ಮುಂದೆ ಮಾಡಿ,
ಪ್ರತಿ ವರುಷವೂ ಉಂಟು ನಾನಾ ಲಬಾಡಿ.

## ೬೮೬. ಕಲ್ಯಾಣ ಕೇಂದ್ರ

ಕಾಗದದ ಮೇಲುಂಟು ಕಲ್ಯಾಣ ಕೇಂದ್ರ
ಅಮವಾಸ್ಯೆ ದಿವಸ ಕಾಣುವುದಿಲ್ಲ ಚಂದ್ರ.
ಕಲ್ಯಾಣ ಕೇಂದ್ರಕ್ಕೆ ಅಮವಾಸ್ಯೆ ನಿತ್ಯ
ಕೇಂದ್ರ ಉಂಟೆನ್ನುವುದು ಜಾಗತಿಕ ಸತ್ಯ.

## ೬೮೭. ಭಾಷೆಗಳು

ಕಾಗೆಗೊಂದೇ ಭಾಷೆ, ಕಾಂ ಅನ್ನುತಿಹವು
ನರನಿಗೇ ನೂರಾರು, ತಲೆ ತಿನ್ನುತಿಹವು
ಕೋಳಿಗೂ ಮಲೆಯಾಳಿ ತುಳು ಭೇದವಿಲ್ಲಾ,
ಕೋ ಎಂದು ಕೂಗುವವು ಲೋಕದೊಳಗೆಲ್ಲಾ.

## ೬೮೮. ಕಾಗೆ

ಕಾಗೆ ಜೋರಾಗಿ ಕೂಗುವುದು, ಬಲು ಕಾಟ.
ಜೋರಾಗಿ ಕೂಗಿದವರಿಗೆ ಶ್ರಾದ್ಧದೂಟ
ರಾಜಕಾರಣಿ ಕಲಿಯಬೇಕು ಈ ಪಾಠ
ಕಲಿಯದಿದ್ದರೆ ತಪ್ಪಿ ಹೋಗುವುದು ಊಟ.

## ೬೮೯. ಚುಟುಕುಗಳ ಸಾಲು

ಕಾಣಲಿಕೆ ಅತಿ ಸುಲಭ ಚುಟುಕುಗಳ ಸಾಲು
ಬರೆಯಲಿಕೆ ಹೊರಟಾಗ ಆಗುವುದು ಫೇಲು
ಚುಟುಕದೊಳಗಿರಬೇಕು ಲೇಖನಿಯ ಜಾದು
ಜಾದು ತಪ್ಪಿದರೆ, ಸಖಿ, ಬರವಣಿಗೆ ಬಾದು.

## ೬೯೦. ಎಮ್ಮೆ

ಕಾಣೆಯಾಗಿದೆ ಎಮ್ಮೆ, ಬಣ್ಣ ತುಸು ಕಪ್ಪು.
ಬಾಯೊಳಗೆ ಯಾವಾಗಲೂ ಬಸಲೆ ಸೊಪ್ಪು
ಬತ್ತಿಹೋಗಿದೆ ಹಾಲು ಹೆಸರು ಮಂಕಾಳಿ,
ನೋಡಿದರೆ ಗಂಡ ಬಂದಾನೆಂದು ಹೇಳಿ.

### ೬೯೧. ಕಾಣೆಯಾದಳು

ಕಾಣೆಯಾದಳು ಹುಡುಗಿ! ಗೊತ್ತುಂಟೆ ನಿಮಗೆ?
ಮಂತ್ರಿಗಳ ಮನೆಯೊಳಗೆ ಸಿಕ್ಕಿದಳು ಕೊನೆಗೆ.
ಈ ಖ್ಯಾತಿಯಲಿ ಮಂತ್ರಿಪದ ಕಳೆದುಕೊಂಡ
ಇತಿಹಾಸ ಪುಟದೊಳಗೆ ಇದು ಒಂದು ಕೆಂಡ.

### ೬೯೨. ಕಾರಂತರು ಹೇಳಿದ್ದು

ಕಾದಂಬರಿಯ ಕುಡಿದು ಕಟ್ಟಿದೆನು ಗೆಜ್ಜೆ
ಕೋತಂಬರಿಯ ಹಿಡಿದು ಹಾಕಿದೆನು ಹೆಜ್ಜೆ
ಈ ರೀತಿ ಕಳೆದರೂ ಅರ್ಧ ಶತಮಾನ
ನಮ್ಮೊಳಗೆ ಮೂಡಿಲ್ಲ ದಮಡಿ ಅಭಿಮಾನ.

### ೬೯೩. ಕಾನೂನು

ಕಾನೂನು ಎನ್ನುವುದು ಕಾಗದದ ತುಂಡು.
ನೀರೊಳಗೆ ಹಾಕಿದರೆ ತೇಲುವುದು ಬೆಂಡು
ಕಾಯಿದೆಯ ಅನುಸಾರ ಮಾಡಿದರೆ ಅರ್ಜಿ
ಮೊದಲು ಬೇಕಾದದ್ದು ಮಂತ್ರಿಗಳ ಮರ್ಜಿ.

### ೬೯೪. ಕಾಯಬೇಕೆನ್ನ

ಕಾಯಬೇಕೆನ್ನ ಗೋವಿಂದ, ಗೋಪಾಲ,
ನಾನು ತೀರಿಸಬೇಕು ಪೂರ್ವಜರ ಸಾಲ.
ಖಾದಿ ಬೋರ್ಡಿಗೆ ನನ್ನ ಮಾಡು ಅಧ್ಯಕ್ಷ.
ಕರುಣಾಳು, ಸಿಗಬಹುದೆ ಒಂದೆರಡು ಲಕ್ಷ?

### ೬೯೫. ಜಂಟಿ ಕಾರ್ಯದರ್ಶಿ

ಕಾರ್ಯದರ್ಶಿಗಳಲ್ಲಿ ಇವನೊಬ್ಬ ಜಂಟಿ.
ಯಾವಾಗಲೂ ಕುಳಿತುಕೊಳ್ಳುವನು ಅಂಟಿ
ಆಹಾರ ಮಂತ್ರಿಗಳು ಮೊನ್ನೆ ಬಂದಾಗ.
ಇವನ ಹಾರಾಟಕ್ಕೆ ವಿಪರೀತ ವೇಗ.

## ೧೯೬. ಹಣ್ಣು

ಕಾಯಿ ಹಣ್ಣಾದೊಡನೆ ಮರಕೆ ಸಂತೋಷ.
ಸಫಲವಾಯಿತು ಹೂವು ಸತ್ತ ಉದ್ದೇಶ
ದಾರಿಹೋಕರು ಬಂದು ತೃಷೆ ತಣಿಸಲೆಂದು
ಭೂಮಿಗುದುರಿತು ಹಣ್ಣು ಬಿಸಿಲೊಳಗೆ ಬೆಂದು.

## ೧೯೭. ಕಾಯ್ದೆ

ಕಾಯ್ದೆ ಹೆಚ್ಚಾದಂತೆ ಕಳ್ಳತನ ಜಾಸ್ತಿ
ಎರಡರಲ್ಲೂ ನಿತ್ಯ ನಡೆಯುತಿದೆ ಕುಸ್ತಿ
ಈ ಕುಸ್ತಿಯಲಿ ವಕೀಲರ ಫಾಯ್ದೆ ಹೆಚ್ಚು.
ಈ ಲೋಕದೊಳಗುಂಟು ತರತರದ ಹುಚ್ಚು.

## ೧೯೮. ಕಾರವಾರ ಬಂದರ ರಚನೆ

ಕಾರವಾರದ ಬಗ್ಗೆ ಶಂಕೆಯೇತಕ್ಕೆ ?
ಸರಿಯಾಗಿ ಕಾಣುತಿದೆ ಪ್ರತಿಯೊಂದು ಚಿಕ್ಕೆ
ಬಂದರವ ಕಟ್ಟಿದರೆ ನಿಂತಾಗ ಹಡಗ
ನಕ್ಷತ್ರ ಕಾಣದೆಂದನು ನಮ್ಮ ಹುಡುಗ.

## ೧೯೯. ಮಂತ್ರಿಯ ತಾಕೀತು

ಕಾರವಾರದ ಬಂಗ್ಲೆಯಲಿ ಒಮ್ಮೆ ಕೂತು
ಮಂತ್ರಿಗಳು ನನಗೆ ಮಾಡಿದರು ತಾಕೀತು
ಚುಟುಕ ಗೀಚಿದರೆ ಸರಕಾರದ ವಿರುದ್ಧ
ನಿನ್ನ ಕಿವಿಗಳ ಹಿಂಡಿ ಮಾಡುವೆವು ಉದ್ದ.

## ೨೦೦. ಹೊಸ ಶೈಲಿ

ಕಾಲಕ್ಕೆ ತಕ್ಕಂತೆ ಬೇಕು ಹೊಸ ಶೈಲಿ
ಹೊಸ ರಕ್ತವೂ ಹರಿಯುತಿರಬೇಕು ಮೈಲಿ
ಹಿಂದಿ ಇಂಗ್ಲೀಷ್ ಶಬ್ದಗಳು ಜೊತೆಗೆ ಸೇರಿ
ಹೊಡೆಯತಿರಬೇಕು ಕನ್ನಡದ ಜಯಭೇರಿ.

## ೨೦೧. ಚುಟುಕದ ಹುಟ್ಟು

ಕಾಲರಾಯನ ಆಕಳಿಕೆಗೆ ಹಾಕಿ ಹಿಂಡಿ
ಮೊಲೆ ಹಿಂಡಿದೆನು ತಂದು ಚೌಪದಿಯ ಗಿಂಡಿ.
ಹಾಲಿಲ್ಲ, ಹುಳಿ ಮಜ್ಜಿಗೆಯ ಧಾರೆ! ಅಕಟಾ!
ಈ ಮಜ್ಜಿಗೆಯ ಕುಡಿದು ಗೀಚಿದೆನು ಚುಟಕಾ.

## ೨೦೨. ಆಧುನಿಕ ಸ್ವಯಂವರ

ಕಾಲೇಜಿನಲ್ಲಿ ಕಣ್ಣು ಹೊಡೆದವನೆ ಗಂಡ.
ಮದುವೆ ಮಂಟಪವಾಯ್ತು ಕಾಲೇಜು ವ್ಹರಾಂಡಾ.
ಇದು ಸ್ವಯಂವರ ಪದ್ಧತಿಯ ನವ್ಯ ರೂಪ
ಇದಕೆ ಬೇಕಾಗಿಲ್ಲ ದುಷ್ಯಂತ ಭೂಪ.

## ೨೦೩. ಕಾವ್ಯ

ಕಾವ್ಯ ಎಂಬುದು ಕಲ್ಲು ಹುಲ್ಲು ಹೂ ಕಾಯಿ
ದಶಕೋಟಿ ಹೃದಯಗಳು ಒಂದಾದ ಬಾಯಿ
ಕಾವ್ಯ ನಂದಾದೀಪ ಉರಿ ಉರಿವ ಕೆಂಡ.
ಕಾವ್ಯವೆಂಬುದೆ, ಮಗನೆ, ಅಖಿಲ ಬ್ರಹ್ಮಾಂಡ.

## ೨೦೪. ಖ್ಯಾತ ಕವಿ

ಕಾವ್ಯಲೋಕದಲ್ಲಿ ಈತನೆ ಖ್ಯಾತನಾಮ
ಅಲ್ಲಗಳೆಯುವ ವಿಮರ್ಶಕನೆ ಹಜಾಮ
ಈ ಮಹಾ ಕವಿಯ ಸಂಕಲನ ಐವತ್ತು
ಸಾಮಾನ್ಯವಾಯ್ತೆ ಲೇಖನಿಯ ತಾಕತ್ತು?

## ೨೦೫. ರಸಿಕ ಶಿರೋಮಣಿ

ಕಾವ್ಯಲೋಕದಲಿ ನಾನೊಂದು ಮರಿದುಂಬಿ.
ಕವಿ ಸಮಯಗಳನೆಲ್ಲ ತಲೆಯೊಳಗೆ ತುಂಬಿ
ಯಾವಾಗಲೂ ಕಾವ್ಯ ಕುಸುಮಗಳ ಮೇಲೆ
ಹಾರಾಡಿ ತೂಕಡಿಸುವುದು ನನ್ನ ಲೀಲೆ.

## ೨೦೬. ಶ್ರೀಯವರು ಹೇಳಿದ್ದು

ಕಾವ್ಯವೆಂಬುದು ಎಷ್ಟು? ಕಸರತ್ತು ಎಷ್ಟು?
ಬೇರ್ಪಡಿಸಿ ನೋಡಿದರೆ ತಿಳಿಯುವುದು ಗುಟ್ಟು
ಕವಿಪುಂಗವನ ತೊಳೆದುಬಿಡಿ ತೂಕ ಮಾಡಿ
ಆಮೇಲೆ ಬಂದು ನನ್ನೊಡನೆ ಮಾತಾಡಿ.

## ೨೦೭. ಕವಿಯ ಕೋಳಿಮರಿ

ಕಾವ್ಯವೆಂಬುದು ಕವಿಯ ಕೋಳಿಮರಿ ತಾನೆ?
ಹೇಟೆ ಮೊಟ್ಟೆಗೆ ಕಾವು ಕೊಡಬೇಕು ಶಾನೆ.
ಕಾವು ಹೆಚ್ಚಾದಷ್ಟು ಕೋಳಿಮರಿ ಚಂದ.
ಕಾವ್ಯ ಹುಟ್ಟುವುದಿಲ್ಲ ಬರಿ ಸ್ಫೂರ್ತಿಯಿಂದ.

## ೨೦೮. ಕವಿಯ ಹುಚ್ಚು

ಕಾವ್ಯವೆಂಬುದು ಜಾಣತನವಲ್ಲ, ಹುಚ್ಚು
ತೀವ್ರವಾದರೆ ಹುಚ್ಚು ಕವಿಯ ಬೆಲೆ ಹೆಚ್ಚು
ಹುಚ್ಚು ತಲೆಗೇರಿದರೆ ಶಬ್ದಗಳ ಜಾದು
ಎಂದಿಗೂ ಕವಿತೆಯಾಗುವುದಿಲ್ಲ ಬಾದು.

## ೨೦೯. ಪ್ರಾಧ್ಯಾಪಕ ಹೇಳಿದ್ದು

ಕಾವ್ಯವೆಂಬುದು ಬಹಳ ಗಂಭೀರ ತಾನೆ?
ದಿನಕರನ ಚುಟಕ ಕೇಳಿದರೆ ತಲೆಬೇನೆ.
ಏನಾದರೂ ಗೀಚಿ ಮಾಡುವನು ಗೇಲಿ
ಭಾವ ಸಂಪತ್ತಿಲ್ಲ; ತಲೆಬುರುಡೆ ಖಾಲಿ.

## ೨೧೦. ರಸಬಾಳೆಹಣ್ಣು

ಕಾವ್ಯವೆಂಬುದು, ಮಗನೆ, ರಸಬಾಳೆಹಣ್ಣು
ಕೃಷಿ ಮಾಡಲಿಕೆ ಬೇಕು ಅನುಭವದ ಮಣ್ಣು
ಈ ಮಣ್ಣಿನಲಿ ಬೆರೆತು ಭಾವನೆಯ ನೀರು,
ಮೇಲಕೇಳುವುದು ಸಸಿ ಹಸಿಯಾಗಿ ಬೇರು.

## ೭೧೧. ಕವಿಯ ಬೇಸಾಯ

ಕಾವ್ಯಸಾಮ್ರಾಜ್ಯದಲಿ ಬೀಜಗಳ ಬಿತ್ತಿ
ಬೆಳೆ ಪಡೆದುಕೊಂಡರೂ ಅತ್ಯಲ್ಪ ಬುತ್ತಿ
ಲಾಭದಾಯಕವಲ್ಲ ಕವಿಯ ಬೇಸಾಯ
ಕಾಡಿನಲಿ ಕೃಷಿ ಮಾಡಿದಂತೆ, ಮಾರಾಯ.

## ೭೧೨. ಕಾಳರಾತ್ರಿಗೆ

ಕಾಳರಾತ್ರಿಗೆ ಕೋಟಿ ನಕ್ಷತ್ರ ಕಣ್ಣು
ಆದರೂ ಕಾಣಲೊಲ್ಲದು ಅಡಿಯ ಮಣ್ಣು
ಹುಣ್ಣಿಮೆಗೆ ಕೋಟಿ ಕಣ್ಣುಗಳೇಕೆ, ನೀರೆ ?
ಹೃದಯವೇ ಬೆಳಗಿರಲು ಬೇಕೇನು ತಾರೆ ?

## ೭೧೩. ಕಾಳಸಂತೆ

ಕಾಳಸಂತೆಯ ದೂರುವುದು ದೊಡ್ಡ ತಪ್ಪು
ಕಾಳಸಂತೆಯ ನೋಟುಗಳು ಇಲ್ಲ ಕಪ್ಪು,
ಬಿಳಿ ಟೋಪಿ ಧರಿಸಿದರೆ ಮತ್ತಷ್ಟು ಚೊಕ್ಕಾ
ಗೈದ ವ್ಯವಹಾರವೂ ಆಗುವುದು ಪಕ್ಕಾ.

## ೭೧೪. ರಾಜಕಾರಣಿ ಹೇಳಿದ್ದು

ಕಾಳಸಂತೆಯ ಬಗ್ಗೆ ಮಾತನಾಡುವಾಗ
ಒಂದು ಮಾತನು ನೀವು ಮರೆಯಲಿಕ್ಕಾಗ
ನಿತ್ಯವೂ ಶಶಿ ಬೆಳಗಾಗುವುದ ಸಾಧ್ಯವಾಗ
ಅಮವಾಸ್ಯೆಗೂ ಉಂಟು ಧರೆಯೊಳಗೆ ಜಾಗ.

## ೭೧೫. ಒಂದು ಸೂಚನೆ

ಕಾಳು ತಿನ್ನುವ ಇಲಿಗೆ ಆಶ್ರಯವನಿತ್ತು
ಬೆನಕ ತಂದೊಡ್ಡಿದನು ದೊಡ್ಡ ಆಪತ್ತು
ಗಣಪತಿಗೆ ಭಾದ್ರಪದ ಚೌತಿಯಲಿ ಕೂಡ
ಆರತಿಯ ಮಾಡಬಾರದು, ಹಳ್ಳಿಗೌಡ.

## ೭೧೬. ಕ್ರಾಂತಿವೀರನಿಗೆ

ಕ್ರಾಂತಿ ವೀರನೆ, ನಿನ್ನ ಉದ್ದೇಶವೇನು ?
ಧರೆಗಿಳಿಯಬೇಕೆಂಬೆ ಚುಕ್ಕೆಗಳ ಬಾನು
ನನಗೆ ಸಮ್ಮತವಿಲ್ಲ ನಿನ್ನ ಈ ನೀತಿ
ಚಿಕ್ಕೆಗಳ ಗತಿಯೇನು ? ಅವುಗಳ ಫಜೀತಿ !

## ೭೧೭. ನೆರೆಮನೆಯ ಸುಬ್ಬಿ

ಕಿರಿದಾದರೂ ದೇಹ ನೆರೆಮನೆಯ ಸುಬ್ಬಿ
ಹಾರಾಡಲಿಕೆ ಜೋರು; ಅವಳೊಂದು ಗುಬ್ಬಿ
ಯಾವಾಗಲೂ ಇವಳ ಹಾರಾಟ ಜೋರು
ವಿಪರೀತ ಮಜಬೂತು ಈ ಬೇಬಿ ಕಾರು.

## ೭೧೮. ಈ ಸುದ್ದಿ

ಕಿವಿಗೊಟ್ಟು ಈ ಸುದ್ದಿ ಕೇಳು, ಮನದನ್ನೆ,
ನರಕದಲಿ ಕ್ರಾಂತಿಯಾಗಿದೆಯೆಂತೆ ಮೊನ್ನೆ
ಬಡವರಿಗೆ ಭೂಮಿ ಕೊಡತಾರಂತೆ, ಕೇಳು,
ಇಬ್ಬರೂ ಹೋಗೋಣ, ಬರ್ತಿಯಾ, ಹೇಳು ?

## ೭೧೯. ಹೊಲಿಗೆಯ ಯಂತ್ರ

ಕಿವಿಯೊಳಗೆ ಝೇಂಕರಿಸುತಿದೆ ಹೊಲಿಗೆ ಯಂತ್ರ
ಪ್ರತಿಯೊಬ್ಬನಿಗೆ ಕೇಳಿಸಲಿ ಇದರ ಮಂತ್ರ
ಇಂದಿನ ಪ್ರಪಂಚವನು ಹೊಲಿದಷ್ಟು ಕಡಿಮೆ
ಚಿಂದಿಯಾಗಿದೆ ನೋಡು ಮಾನವನ ಮಹಿಮೆ.

## ೭೨೦. ಹಿತವಚನ

ಕಿವಿಯೊಳಗೆ ಹೇಳುವೆನು, ಈ ಕಡೆಗೆ ಬನ್ನಿ.
ತಿನ್ನಬೇಕೆನಿಸಿದರೆ ಹೋಲ್-ಸೇಲ್ ತಿನ್ನಿ
ಸಿಕ್ಕಿಬಿದ್ದರೆ ಇಲ್ಲ ದುಡ್ಡಿನ ಅಭಾವ
ನಾಲ್ಕಾಣೆ ಎಂಟಾಣೆಯೊಳಗಿಲ್ಲ ಜೀವ.

### ೭೨೧. ಬ್ರಹ್ಮಾಂಡ

ಕ್ರಿಮಿಯಲ್ಲ, ಹುಳವಲ್ಲ, ಅಲ್ಲ ಪಶುಪಕ್ಷಿ
ಎಲ್ಲವೂ ಸೂರ್ಯನಾರಾಯಣನ ಅಕ್ಷಿ.
ನೋಡಲಿಕೆ ಇರಬೇಕು ಕಲ್ಪನೆಯ ಕಣ್ಣು.
ಸಾಮಾನ್ಯರಿಗೆ ಕಾಣುವುದು ಬರೀ ಮಣ್ಣು.

### ೭೨೨. ಕೀರ್ತಿ

ಕೀರ್ತಿಯೆಂದರೆ, ಮಗನೆ, ಸೋಜಿಗದ ಸರಕು
ನವ್ಯವಾಗಿರುವಾಗ ಇರಬಹುದು ಹರಕು.
ಹಳತಾದಹಾಗೆಲ್ಲ ಹೊಳಪು ಹೊಸ ಪ್ರಾಯ
ಶತಮಾನ ಕಳೆದಂತೆ ದೃಢವಾದ ಕಾಯ.

### ೭೨೩. ಆಧುನಿಕತೆ

ಕ್ಷೀಣವಾಗಿವೆ ಆಧುನಿಕ ನರನ ಕಾಲು.
ಗಾಡಿ ಏರಲಿಕೆ ಬಲು ತುಟ್ಟಿ ಪೆಟ್ರೋಲು
ನನ್ನ ಅಜ್ಜನ ಕಾಲದಲಿ ಕಾಲು-ನಡಿಗೆ
ಈಗ್ಗೆ ಬೇಕಾದದ್ದು ಕಾರು ಅಡಿಗಡಿಗೆ.

### ೭೨೪. ರಾಜಕೀಯ ಲಾಗ

ಕುರ್ಚಿಗಳ ಮೇಲೆ ಸಿಗಬೇಕೆಂದು ಜಾಗ
ಈ ಬದಿಗೆ ಆ ಬದಿಗೆ ಹಾಕಿದರು ಲಾಗ
ನನಗಿರಲಿ ಯಾವಾಗಲೂ ನೆಲದ ಪೀಠ
ಓ ಮಗನೆ, ಬೇಕಿಲ್ಲ ಡೊಂಬರನ ಆಟ.

### ೭೨೫. ಶಾನುಭೋಗ

ಕುರ್ಚಿ ಬೇಕಿಲ್ಲ; ಸಾಕಾಗುವುದಿಲ್ಲ ಚಾಪೆ
ಚಾಪೆಯಲಿ ಕುಳಿತರೂ ಕೈಯಲ್ಲಿ ಮುನಾಫೆ
ಬಡ ಶಾನುಭೋಗರಿಗೆ ಬೇಕಿಲ್ಲ ಜಾಸ್ತಿ
ತುಸು ಕೊಟ್ಟರೂ ಕೊನೆಗೆ ಸಾಕಷ್ಟು ಆಸ್ತಿ.

### ೭೨೬. ಕುರ್ಚಿಯಲಿ ಕುಳಿತಾಗ

ಕುರ್ಚಿಯಲಿ ಕುಳಿತಾಗ ನನಗೆ ಬಲು ಭೀತಿ.
ನೆಲದೊಳಗೆ ಕುಳಿತಾಗ ಜನಮನದ ಪ್ರೀತಿ
ಕಾರಿನಲಿ ಕುಳಿತಾಗ ಕೈಯೊಳಗೆ ಜೀವ
ನೆಲದೊಳಗೆ ಕುಳಿತಾಗ ಕಾಣುವನು ದೇವ.

### ೭೨೭. ಮುಕ್ಕಿದರು ಕಡಬು

ಕುರ್ಚಿಯಲಿ ಮುಕ್ಕಿದರು ಕಡಬು
ಕುರ್ಚಿ ತಪ್ಪಿದರೆ ಪಕ್ಷಾಂತರದ ಪಿಡುಗು.
ನುಂಗಬೇಕೆನ್ನುವುದೇ ಇದರ ಉದ್ದೇಶ.
ಈ ಪರಿಸ್ಥಿತಿಯೊಳಗೆ ಬದುಕುವುದೆ ದೇಶ ?

### ೭೨೮. ಕುರ್ಚಿಯಲಿ ಕುಳಿತು

ಕುರ್ಚಿಯಲಿ ಕುಳಿತು ಕುಡಿದೆನು ಭರ್ತಿ ಬೀರು.
ಆದರೂ ನನ್ನ ಲೇಖನಿಗಿಲ್ಲ ಜೋರು.
ಅನುಭವದ ಪಾನಕವ ಕುಡಿದಾಗ ಭರ್ತಿ
ಚುಟುಕುಗಳು ಮೂಡಿದವು ಪ್ರತಿಯೊಂದು ಸರ್ತಿ.

### ೭೨೯. ಕೆಸರಿನಲಿ ಹುಟ್ಟಿ

ಕೆಸರಿನಲಿ ಹುಟ್ಟಿ ಹೆಸರಾದವರು ಉಂಟು
ಮೇಲೇರಲಿಕೆ ಬೇಕು ಬಲು ಉದ್ದ ದಂಟು
ಈ ದಂಟು ಕೆಸರಿನಲ್ಲೇ ಹುಟ್ಟಿ ಮುಂದೆ
ಪೂರ್ಣ ಗಮಗಮಿಸುವುದು; ನಾ ನೋಡಿ ಬಂದೆ.

### ೭೩೦. ಕುಡಿಯುವುದು ಹೇಗೆ

ಕುಡಿಯುವುದು ಹೆಚ್ಚಾಗಿ ಹುಡುಗ ಹಾಳಾದ
ಮೇಲಾಗಿ ಈತನಿಗೆ ಹುಡುಗಿಯರ ನಾದ
ಜಾಗರೂಕತೆ ವಹಿಸಬೇಕಿತ್ತು ತಾಯಿ
ಹೀಗೆಂದು ಮರುಗಿದಳು, ಮಂಗಳಾಬಾಯಿ.

## ೭೩೧. ರೈಲುಗಾಡಿ

ಕುದಿಯುತಿರಬೇಕು ಕವಿಹೃದಯದಲಿ ನೀರು
ನೀರು ಉಗಿಯಾದೊಡನೆ ಲೇಖನಿಗೆ ಜೋರು
ಸರಿಯಾಗಿ ಓಡಾಡುವುದು ರೈಲುಗಾಡಿ
ಈ ಗಾಡಿ ಕಾವ್ಯಲೋಕದ ಜೀವನಾಡಿ.

## ೭೩೨. ಮಣ್ಣಿನ ಸವಕಳಿ

ಕುಮರಿ ಬಿತ್ತಲಿಕೆಂದು ಕಡಿಯಲು ಅರಣ್ಯ
ನಿಮಿಷದಲಿ ಮರೆಯಾಯ್ತು ನೆಲದ ತಾರುಣ್ಯ
ಅಸ್ಥಿಪಂಜರವಾಗಿ ಪರ್ವತದ ಸಾಲು
ಭೂದೇವಿ ಮುದುಕಾಗಿ ಊರಿದಳು ಕೋಲು.

## ೭೩೩. ಚುನಾವಣೆಯಲ್ಲಿ ಸೋತವರು

ಕುಸ್ತಿಯಲಿ ಬಿದ್ದವನು ಹೊಸ ರಾಜ್ಯಪಾಲ
ಸೋತವರಿಗೆಲ್ಲ ಈ ಹುದ್ದೆ ಅನುಕೂಲ
ಭಕ್ತವತ್ಸಲ ನೆಹರು, ಇದು ನಿನ್ನ ಯುಕುತಿ
ಭೂತಗಣಗಳಿಗೆ ನೀ ನೀಡಿರುವೆ ಮುಕುತಿ.

## ೭೩೪. ಪಾಕು ಮತ್ತು ಚೀನು

ಕುಳಿತುಕೊಂಡಿದೆ ಪಾಕಿಗಳ ಜೊತೆಗೆ ಚೀನು,
ಹೌದು ಮಾರಾಯಾ! ಮೊಸಳೆಯ ಜೊತೆಗೆ ಮೀನು
ಎಷ್ಟು ದಿನ ನಡೆಯುವುದು ಇಂಥ ಬಾಂಧವ್ಯ?
ಓದಿ ಮುಗಿಸುವ ತನಕ ಈ ಚುಟಕ ಕಾವ್ಯ.

## ೭೩೫. ದೇವರಲ್ಲಿ ಅರಿಕೆ

ಕೆಟ್ಟ ಕೆಲಸವ ಮಾಡಿದರೆ ಆಗ ಪಚನ,
ಕಷ್ಟವಾಗದ ಹಾಗೆ ಕೊಡಬೇಕು ವಚನ
ಈ ವಚನ ನೀಡಿದರೆ, ದೇವ, ನಿಜವಾಗಿ
ಕಾಣಿಕೆಯ ನೀಡುವನು ಪೂರ್ಣ ತಲೆಬಾಗಿ.

### ೭೩೬. ಕೃಷ್ಣಮೆನನ್ ಹೇಳಿದ್ದು

ಕೆಲವರಿಗೆ ಬೇಡಂತೆ ನೆಹರು ಸರಕಾರ!
ಇವರಿಗೆಲ್ಲಾ, ಮಗನೆ, ಇಂದ್ರಿಯ ವಿಕಾರ
ಇಂಥವರ ಪೈಕಿ ಮುದಿಗೊಡ್ಡು ರಾಜಾಜಿ
ರಾಜಾಜಿ ನವಭಾರತದ ದಗಲುಬಾಜಿ.

### ೭೩೭. ನಮ್ಮ ಧುರೀಣರು

ಕೆಲವರಿಗೆ ಯಾವಾಗಲೂ ಬೇಕು ಮಾತು.
ಪ್ರತಿಯೊಂದು ಕೆಲಸಕ್ಕೆ ಹಾಕುವರು ತೂತು
ಕೆಲವರಿಗೆ ಬೆಂಗಳೂರಿನ ಭೇಟಿ ಮುಖ್ಯ.
ಮಧ್ಯರಾತ್ರಿಯ ತನಕ ವರ್ತಕರ ಸಖ್ಯ.

### ೭೩೮. ಸಿಬ್ಬಂದಿ

ಕೆಲಸವಿಲ್ಲಾದರೂ ಹೊಸ ನೇಮೂಣಕಿ
ತಲೆಭಾರವಾಗಿತ್ತು ಇವರನ್ನು ಸಾಕಿ.
ಈ ರೀತಿ ನಾವು ನಡೆಸಿದರೆ ಸರಕಾರ
ಕುತ್ತಿಗೆಯ ತನಕ ಏರುವುದು ಕರ ಭಾರ.

### ೭೩೯. ಕೆಲಸವೆನ್ನುವುದು

ಕೆಲಸವೆನ್ನುವುದು ಬರಿ ಸೇಕಡಾ ಎಂಟು
ಉಳಿದದ್ದು ಬೊಬ್ಬೆ ಕುಟ್ಟುವ ರೂಢಿಯುಂಟು
ಒಮ್ಮೊಮ್ಮೆ ಕೆಲಸವೆಂಬುದು ಬರೀ ಶೂನ್ಯ
ಬೊಬ್ಬೆ ಕುಟ್ಟಿಯೆ ಇವರು ಆಗುವುದು ಧನ್ಯ.

### ೭೪೦. ಕೆಳಮನೆಗೆ ಮತ್ತು ಮೇಲ್ಮನೆಗೆ

ಕೆಳಮನೆಗೆ ನಿಂತಾಗ ಜಾರಿದನು ಕೆಳಗೆ
ಮೇಲ್ಮನೆಗೆ ನಿಂತಾಗ ಹಾರಿದನು ಒಳಗೆ
ಲತ್ತೆ ಹಾಕಿದ ಬಳಿಕ ಸಾಮಾನ್ಯ ಜನರು
ಎತ್ತಿ ಹಿಡಿದರು ಅವನ ಸರಕಾರದವರು.

## ೭೪೧. ಕೆಂಪಣ್ಣನವರು

ಕೆಂಪಣ್ಣನವರ ತುಟಿಗಳ ಬಣ್ಣ ನೋಡಿ
ಮೇಲುನೋಟಕೆ ಯಾರು ಮರುಳಾಗಬೇಡಿ
ವೀಳ್ಯದೆಲೆಯಿಂದ ಬಂದಿದೆ ತುಟಿಗೆ ಲಾಲಿ
ಇದನರಿಯದಿದ್ದ ಪೆದ್ದನ ಮಿದುಳು ಖಾಲಿ.

## ೭೪೨. ಕತ್ತೆ

ಕೇರಿ ಕೇರಿಗಳಲ್ಲಿ ಹುಡುಕಿದರು ಮತ್ತೆ
ಆದರೂ ಸಿಗಲಿಲ್ಲ ಮರೆಯಾದ ಕತ್ತೆ.
ಹಿಡಿದು ತಂದರು ಎತ್ತು ಎಮ್ಮೆ ಕುರಿ ಕೋಣ
ಅಗಸನಿಗೆ ಕತ್ತೆಯೇ ಬೇಕೆಂದ ಜಾಣ.

## ೭೪೩. ಹಾಲಕ್ಕಿ ಜನರು

'ಕೈಮುಗಿದೆ' ಎನ್ನುವರು ಹಾಲಕ್ಕಿ ಜನರು
ಅಚ್ಚಗನ್ನಡ ಮಾತನಾಡುವರು ಇವರು.
ಇವರ ನಾಲಗೆಗೆ ತಿಳಿಯದು 'ನಮಸ್ಕಾರ'
ಮತ್ತೆ ಗೊತ್ತಿಲ್ಲ ಯಾವುದು ಚಮತ್ಕಾರ.

## ೭೪೪. ನಮ್ಮ ಲೋಕಸಭೆ

ಕೈ ಮೇಲೆ ಮಾಡಿದರೆ ಐನೂರು ಜನರು.
ಐವತ್ತು ನಾಲ್ಕು ಕೋಟಿಗಡ ಇಲ್ಲ ಬೆವರು.
ಭಾಷಣವ ಬಿಗಿದರಂತೂ ಪರ್ವಕಾಲ
ಸಾಕಷ್ಟು ಮಳೆಯಾಗಿ ಇಲ್ಲ ಬರಗಾಲ!

## ೭೪೫. ಆಕೆಯ ಸಿಟ್ಟು

ಕೈಯ ಬಳೆಗಿಂತಲೂ ಕೋಡುಬಳೆ ಚೆನ್ನು
ಹೀಗೆನಲು ನನ್ನ ಕಡೆ ಮಾಡಿದಳು ಬೆನ್ನು.
ಬೆಂಡೋಲಿಗಿಂತ ಹಾಗಲಕಾಯಿ ಚಂದ.
ಹೀಗೆನಲು ರೇಗಿ ಮರೆಯಾಯ್ತು ಆನಂದ.

## ೭೪೬. ಅಮಲುದಾರರ ಹೇಳಿಕೆ

ಕೈಯೊಳಗೆ ಕಾಸಿಲ್ಲ, ನಾನು ಬೈರಾಗಿ!
ಸಿಗುವ ಸಂಬಳವೆಲ್ಲವೂ ಬ್ಯಾಂಕಿಗಾಗಿ,
ಸ್ವಲ್ಪಮಟ್ಟಿಗೆ ಸಿಗುವ ಮಾಮೂಲಿನಿಂದ
ಸಂಸಾರವೆಲ್ಲವೂ ಸಾಗಬೇಕೆಂದ.

## ೭೪೭. ಬಾಪೂಜಿಯ ಹರಕೆ

ಕೈಯೊಳಗೆ ಯಾವಾಗಲೂ ಇರಲಿ ಪೊರಕೆ
ಎಂಬುದೇ ಬಾಪೂಜಿ ನನಗಿತ್ತ ಹರಕೆ
ಚುಟಕ ಹೊರಸೂಸುವುದು ಈ ಹರಕೆಯಿಂದ
ನಾನು ಬರೆಯುವ ಪೆನ್ನು ಕಸಬರಿಗೆ, ಕಂದ.

## ೭೪೮. ಜವಾಹರ ಜ್ಯೋತಿ

ಕೈಯೊಳಗೆ ಹಿಡಿ ಜವಾಹರಲಾಲ ಜ್ಯೋತಿ
ಚಂದ ಫೋಟೋ ತೆಗಿಸು ; ನಿನಗಿಲ್ಲ ಭೀತಿ.
ಮುಂದಿನ ಚುನಾವಣೆಗೆ ನಿನಗೇ ತಿಕೇಟು
ಸಚಿವ ಸಂಪುಟದೊಳಗೆ ಸಿಗಬಹುದು ಸೀಟು.

## ೭೪೯. ಸರ್ವಜ್ಞನ ಕನಸು

ಕೈಲಾಸದಲಿ ಗಾಢ ನಿದ್ದೆಯೊಳಗಿದ್ದೆ
ಯಾರೊ ಮೈದಡವಿದರು, ನಿಮಿಷದಲಿ ಎದ್ದೆ
ಸರ್ವಜ್ಞ, ನೀ ಧರೆಗೆ ಇಳಿಯಬೇಕೆಂದು
ಕಿವಿಯೊಳಗೆ ಮಾತಾಡಿದರು ಬಾಪು ಬಂದು.

## ೭೫೦. ಇಹ ಪರಗಳು

ಕೈಲಾಸವೆನ್ನುವುದು ಜಂಗಮರ ಲಂಚ
ವೈಕುಂಠವೆನ್ನುವುದು ಸೂಳೆಯರ ಮಂಚ.
ನರಲೋಕವಾಗಿರಲು ಹೊಲ-ಹಪ್ಪು ನಾತ.
ಸುರಲೋಕ ಗಳಿಸಲಿಕೆ ಬಯಸುವುದು ಪ್ರೇತ.

### ೭೫೧. ಗೀಚಿದೆನು

ಕೈಲಿ ಪೆನ್ಸಿಲು ಹಿಡಿದು ಗೀಚಿದೆನು ಪಂಕ್ತಿ
ಚುಟಕವಾಯಿತು, ಮಗನೆ, ತರತರದ ಸಂಗ್ತಿ
ಈ ಸಂಗ್ತಿಯಿಂದ ಕಾಗದಕೆ ಸಂತೋಷ
ವಾಚಕರು ಹುಡುಕಿ ತೆಗೆಯಲಿ ಇದ್ದ ದೋಷ.

### ೭೫೨. ಕ್ಷೌರ

ಕೈಲಿ ಲೇಖನಿ ಹಿಡಿದು ಕಪ್ಪಣೆಯ ಮಾಡಿ
ಮನೆಗೆ ಕಳಿಸುವ ಪರಂಪರೆ ನನ್ನ ರೂಢಿ.
ಈ ಪರಂಪರೆ ಹಾಕಿದವನು ಸರ್ವಜ್ಞ
ಗಡ್ಡ ಬೋಳಿಸಿ ಮಾಡಿದನು ಕೇಶಯಜ್ಞ.

### ೭೫೩. ಶಾನಭೋಗ

ಕೈಲಿ ಲೇಖನಿ ಹಿಡಿದು ಮನೆಯೊಳಗೆ ಕುಳಿತು
ಬಂದ ಜನರಿಗೆ ಇವನು ಮಾಡುವನು ಒಳಿತು
ಸಾಕಷ್ಟು ನೀಡದಿದ್ದರೆ ಕೆತ್ತಿ ಬೋಳು
ಬಡ ಅಶಿಕ್ಷಿತ ಹಳ್ಳಿಗರ ಪೂರ್ಣ ಗೋಳು.

### ೭೫೪. ಮಂತ್ರಿವರ್ಯನಿಗೆ

ಕೈ ಹಿಡಿದು ಬದುಕಿಸೆನ್ನನು, ಮಂತ್ರಿವರ್ಯ
ಮಾಡಲೇಬೇಕು ನೀ ಈ ಮಹಾಕಾರ್ಯ
ಈ ಕಾರ್ಯದಿಂದ ನಿನಗೂ ಉಂಟು ಫಾಯ್ದೆ
ಅಡ್ಡ ಬರುವುದು ಸಾಧ್ಯವಿಲ್ಲಂತೆ ಕಾಯ್ದೆ.

### ೭೫೫. ಇಂದಿನ ರಾಜಕೀಯ

ಕೊನೆಗೆ ಇವರೂ ಸೇರಿ ಆಡಳಿತ ಪಕ್ಷ
ಕಿಸೆಯೊಳಗೆ ಹಾಕಿದರು ಒಂದೆರಡು ಲಕ್ಷ
ನನ್ನಂಥ ಮೂಢರಿಗೆ ರಾಜಕೀಯದಲಿ
ಜಾಗವಿಲ್ಲೆಂಬುದನು ಜನರು ತಿಳಿದಿರಲಿ.

## ೭೫೬. ಕೊನೆಯವರೆಗೂ

ಕೊನೆಯವರೆಗೂ ಬರೆಯಬೇಕೆಂಬೆ ಕವನ
ಕವನ ಮುಗಿದಾಗ ಆಗಲಿ ನನ್ನ ದಹನ
ಬಂಜೆಯಾಗಲು ಬಾಳು ಫಲವಿಲ್ಲ ಬದುಕಿ
ಅಹುದುಅಹುದೆಂದು ತಲೆದೂಗಿದಳು ಮುದುಕಿ.

## ೭೫೭. ಕೊನೆಗೆ ನೋಡಿದರೆ

ಕೊನೆಗೆ ನೋಡಿದರೆ ಈ ಸರಕಾರ ಘೋಕು
ಇದಕಿಂತಲೂ ಹಳೆಯ ಸರಕಾರ ಬೇಕು
ಪೋಕರಿ ಘಟಿಂಗರೂ ಮಾಳಿಗೆಯನೇರಿ
ಕುಳಿತುಕೊಂಡಿದ್ದಾರೆ ಸರಕಾರ ಸೇರಿ.

## ೭೫೮. ತೀರಿಸದೆ ಸಾಲ

ಕೊನೆಯವರೆಗೂ ಮನುಜ ತೀರಿಸದೆ ಸಾಲ
ಸ್ವರ್ಗವನೇರಿದರೆ ಬಹಳ ಅನುಕೂಲ.
ಪರರ ದುಡ್ಡಿನ ಮೇಲೆ ನಿತ್ಯ ಬಿರಿಯಾನಿ
ತಿಂದು ಸತ್ತರೆ ಅವನಿಗುಂಟೇನು ಹಾನಿ ?

## ೭೫೯. ಪೈರಿನ ಕೊಯ್ಲು

ಕೊರಳಲ್ಲಿ ಕೊರಳಿಟ್ಟು ಕದಿರು ನಲಿದಾಡೆ,
ಮಾನವನ ಕೈಯೊಳಗೆ ಹಲಗತ್ತಿ ನೋಡೆ.
ನೆಲಕುರುಳಿ ಹೆಣವಾಯ್ತು ಜೀವಂತ ಕಾಳು
ಮಾನವನ ಸುಖಕಾಗಿ ಎಲ್ಲವೂ ಹಾಳು.

## ೭೬೦. ದುರಂತ ನಾಟಕ

ಕೊಲ್ಲಲಿಕೆ ಕಲ್ಲು ಯುಗದೊಳಗಿತ್ತು ಬಾಣ.
ಆಮೇಲೆ ಬಂದೂಕು ತೆಗೆಯಲಿಕೆ ಪ್ರಾಣ.
ಸಧ್ಯಕ್ಕೆ ಅಣುಬಾಂಬು ಉಂಟೆಂಬ ಬಿಂಕ
ಶೀಘ್ರದಲಿ ಮುಗಿಯಲಿದೆ ಮೂರನೆಯ ಅಂಕ.

## ೭೬೧. ನನ್ನ ಜೀವನಾಡಿ

ಕೊಂಕಣಿಯ ಜೊತೆಗೆ ಕನ್ನಡ ಮಾತನಾಡಿ
ಒಂದುಗೂಡಿದವು ಎರಡೂ ಜೀವನಾಡಿ
ಎರಡು ಪಕಳೆಯ ಹೂವು ಮಿಡಿಯಾಗಿ ಕಾಯಿ
ಕಾಯಿ ಹಣ್ಣಾದೊಡನೆ ಜೀವನ ಮಿಠಾಯಿ.

## ೭೬೨. ಮಾಮೂಲು

ಕೊಂಚ ತಿಂದರೆ ಲಂಚವಲ್ಲ, ಮಾಮೂಲು.
ಜಾಸ್ತಿ ತಿಂದರೆ ಸಲ್ಲಬೇಕಾದ ಪಾಲು
ಪಚನಗೊಳಿಸಿದರೆ ಪರವಾ ಇಲ್ಲ, ಸ್ವಾಮಿ.
ತಿಂದು ಗೆದ್ದವನೆ ನಿಜವಾದ ಆಸಾಮಿ.

## ೭೬೩. ಮುಂದಿನ ಸಾಲು

ಕೋಗಿಲೆಯ ಕಾಲ ಮುಗಿಯಿತು ಈಗ, ಅಜ್ಜಿ
ನಾಗರನ ವಿಷದಿಂದ ಗಾಳಿಗೂ ಕಜ್ಜಿ
ಹುಟ್ಟಿದೊಡನೆಯೆ ಮಕ್ಕಳಿಗೆ ಸೂಜಿಮದ್ದು
ತೊಟ್ಟಲಿನ ಮುಂದೆ ಕುಣಿಯುವುದು ರಣಹದ್ದು.

## ೭೬೪. ಚಮತ್ಕಾರ

ಕೋಟಿ ಕಣ್ಣುಗಳಿಂದ ರಂಜಿಸಲು ವದನ
ಮೌನದಲ್ಲಿಯೇ ಮಾತನಾಡುವುದು ಗಗನ
ನಲವಿಂದ ಉಕ್ಕೇರಿದೊಡನೆಯೇ ಒಡಲು
ಮೊರೆಮೊರೆದು ಕುಣಿಯುವುದು ಕಾಲಿರದ ಕಡಲು.

## ೭೬೫. ಹಣದ ಉಬ್ಬರ

ಕೋಟಿಗಟ್ಟಲೆ ನೋಟು ಮಾಡಿದರು ಪ್ರಿಂಟು
ಅರ್ಥಶಾಸ್ತ್ರದ ಹಣೆಗೆ ಹಚ್ಚಿದರು ಅಂಟು.
ಹಣದ ಉಬ್ಬರದಿಂದ ಬೆಲೆ ಏರಿದಾಗ
ದಿಲ್ಲಿಯಲಿ ಕೇಳಿಸಿತು ತರತರದ ರಾಗ.

## ೭೬೬. ಭಾರತದ ಒಕ್ಕಟ್ಟು

ಕೋಟಿ ಜಾತಿಗಳಿದ್ದರೂ ಇಲ್ಲ ಚಿಂತೆ.
ಭಾರತದ ಒಕ್ಕಟ್ಟು ಕ್ಯಾಬೇಜಿನಂತೆ.
ಒಂದೊಂದು ಎಲೆ ಎನ್ನುವುದು ಒಂದು ಜಾತಿ.
ಅಪ್ರತಿಮವಾದದ್ದು ಭಾರತದ ರೀತಿ.

## ೭೬೭. ಕೋಟಿಗಳ ಲೆಕ್ಕ

ಕೋಟಿ ದಶ ಕೋಟಿ ಶತ ಕೋಟಿಗಳ ಲೆಕ್ಕ
ಪಂಚವಾರ್ಷಿಕವೆಂದು ಮಾಡಿದರು ಚೊಕ್ಕ
ಯಾರ್ಯಾರ ಕಿಸೆಯೊಳಗೆ ಎಷ್ಟೆಷ್ಟು ಬಿತ್ತು.
ಎನ್ನುವುದು ಕೃಷ್ಣಪರಮಾತ್ಮನಿಗೆ ಗೊತ್ತು.

## ೭೬೮. ಇತಿಹಾಸ

ಕೋಟಿ ಶತಮಾನಗಳ ಗರ್ಭದಲಿ ಹೂವು
ಅರಳಿ ಫಲಿಸಿದ ಬಳಿಕ ಹಣ್ಣಾಯ್ತು ಮಾವು
ಒಂದೊಂದು ಮಾವಿಗೂ ಒಂದೊಂದು ಗೊರಟು
ಹಣ್ಣು ಸವಿಯಾದರೂ ಆತ್ಮ ಬಲು ಒರಟು.

## ೭೬೯. ಹಾಕಿದರು ಒಳಗೆ

ಕೋಟಿಗಟ್ಟಲೆ ತಿಂದು ಹಾಕಿದರು ಒಳಗೆ
ಹೀಗಾಗಿ ಪಂಚವಾರ್ಷಿಕದ ತಲೆ ಕೆಳಗೆ
ದಿನ ಹೋದ ಹಾಗೆಲ್ಲ ಎಲ್ಲವೂ ತುಟ್ಟಿ
ತಿಂದು ತೇಗಿದ ಲಫಂಗರು ಮಾತ್ರ ಗಟ್ಟಿ.

## ೭೭೦. ಕೋರ್ಟಿನಲಿ

ಕೋರ್ಟಿನಲಿ ಇವರು ಮಾಡಿದರು ಫೀರ್ಯಾದು
ಅಲ್ಲಿ ನೋಡಿದರೆ ಸಖಿ, ಆದದ್ದು ಜಾದು.
ಒಳಗೊಳಗೆ ಹಣ ತಿಂದು ಫಿರ್ಯಾದು ಬಾದು
ಈ ರಾಮರಾಜ್ಯದಲಿ ಎಲ್ಲಾ ಚಲೋದು.

## ೭೭೧. ಅಭಿವೃದ್ಧಿ ಕಾರ್ಯ

ಕೋಡಬಳೆಯಾಯ್ತಂತೆ ಅಭಿವೃದ್ಧಿ ಕಾರ್ಯ
ಹೀಗೆಂದರೇನಯ್ಯ? ಹೇಳು, ಮಾರಾಯ
ತುಸು ವಿಚಾರಿಸಿ ನೋಡು ಒಂದೆಡೆಗೆ ಕೂತು
ಕೋಡಬಳೆ ಎನ್ನುವುದು ನಡುಮಧ್ಯೆ ತೂತು.

## ೭೭೨. ನಗು

ಕೋತಿ ನಗೆಯಾಡಿದ್ದು ನೋಡಿದೆಯ, ಕಂದ?
ನಕ್ಕು ನಲಿದಾಡುವುದು ನರನ ಆನಂದ.
ನಗು ಮೂಡಿದರೆ ಮೋರೆ ಬಿಟ್ಟಂತೆ ಹೂವು
ಯಾವಾಗಲೂ ನಲಿಯುತಿರಬೇಕು ನಾವು.

## ೭೭೩. ಕೋಪ

ಕೋಪವೆಂಬುದು ಹಾಳು, ಆದರೂ ಕೂಡ
ಫಲಕಾರಿಯಾದಾಗ ದುಃಖಪಡಬೇಡ
ಒಮ್ಮೊಮ್ಮೆ ಬಂದುಬಿಟ್ಟರೆ ಕವಿಗೆ ಸಿಟ್ಟು
ಸಾಹಿತ್ಯಲೋಕದಲಿ ಜೀವನದ ಹಿಟ್ಟು.

## ೭೭೪. ರೈತನ ವ್ಯವಹಾರಜ್ಞಾನ

ಕೋಳಿಮರಿ, ಸಣ್ಣಕ್ಕಿ, ಬೆಲ್ಲದ ಸರಾಯಿ,
ಕೊಟ್ಟ ಹೊರತೂ ಆಗುವುದೆ ಸರಬರಾಯಿ?
ಇದಕೆಲ್ಲ ಖರ್ಚಾದರೂ ನಾಕು ಕಾಸು
ಕಡಿಮೆಯಾಗುವುದು ಅಧಿಕಾರಿಗಳ ತ್ರಾಸು.

## ೭೭೫. ಚಂದ್ರಯಾನದ ಫಲಶ್ರುತಿ

ಖರ್ಚಾಯ್ತು ಚಂದ್ರಯಾನಕೆ ಕೋಟಿ ದುಡ್ಡು
ಹಿಂಡಿ ನೋಡಿದರೆ ಚಂದಿರನ ಹಸು ಗೊಡ್ಡು
ಅಪ್ರತಿಮವಾದರೂ ನರನ ಈ ಯಾನ
ನೊರೆಹಾಲು ಸಿಗದಿರಲು ತಣ್ಣೀರು ಸ್ನಾನ.

### ೭೭೬. ಸುಖಿಯಾಗೊ ಮನುಜ

ಖಾದಿ ಟೋಪಿಯ ಧರಿಸಿ ಸುಖಿಯಾಗೊ ಮನುಜಾ,
ಇಷ್ಟಾರ್ಥ ಸಿದ್ಧಿ ಕೈಗೂಡುವುದು ಸಹಜ
ಮಂತ್ರಿಪದ ಸಿಗದಿದ್ದರೂ ಕೊನೆಯ ಪಕ್ಷ
ಕಂತ್ರಾಟುಗಳು ಸಿಕ್ಕಿ ಒಂದೆರಡು ಲಕ್ಷ.

### ೭೭೭. ಹಿಪ್ಪಿಗಳು

ಗಡ್ಡ ಬೆಳೆಸಿದ ಯುವಕರಿಗೆ ನಮಸ್ಕಾರ
ಪಾಪ! ಹಿಡಿದಿದೆ ಹಿಪ್ಪಿಗಳ ಗಿರಾಚಾರ
ಹೆಣ್ಣು ಹಿಪ್ಪಿಣಿ ಧರಿಸುವಳು ಟೈಟು ಪ್ಯಾಂಟು
ಧರೆಯೊಳಗೆ ನಾನಾ ನಮೂನೆಗಳು ಉಂಟು.

### ೭೭೮. ಮಾನವನ ಮಿದುಳು

ಗಗನಕಿಂತಲೂ ನರನ ಮಿದುಳು ವಿಸ್ತಾರ
ಈ ಮಿದುಳಿನೊಳಗುಂಟು ನಾನಾ ಪ್ರಕಾರ
ಮೇಲ್ಬದಿಗೆ ಸ್ವರ್ಗ; ಕೆಳಬದಿಗೆ ಪಾತಾಳ
ದೇವ ದೈತ್ಯರ ನಡುವೆ ನಗ್ನ ಬೇತಾಳ.

### ೭೭೯. ತಂಗಿಗೆ

ಗಗನ ದೇವಿಯ ಹಣೆಗೆ ಚಂದಿರನ ಬೊಟ್ಟು,
ರಂಗೋಲೆಯಾಗಿ ಬೆಳದಿಂಗಳಿನ ಹಿಟ್ಟು,
ಬಾಂದಳವ ಸಿಂಗರಿಸಿದವರಾರು, ತಂಗಿ?
ಹೇಳಿದರೆ ಹೊಲಿಸುವೆನು ಚಿಕ್ಕೆಗಳ ಅಂಗಿ.

### ೭೮೦. ಹಕ್ಕಿಯ ವಿವೇಚನೆ

ಗಗನ ಸಂಚಾರದಲಿ ಸಿಡಿಲು ಉತ್ಕ್ರಾಂತಿ,
ಗಿಳಿಯ ಪಂಜರದೊಳಗೆ ಸಂಪೂರ್ಣ ಶಾಂತಿ.
ವೇಳೆವೇಳೆಗೆ ಹಣ್ಣು ರೊಟ್ಟಿ ಅವಲಕ್ಕಿ,
ಹೀಗೆಂದು ಭೂಮಿಗಿಳಿಯಿತು ಒಂದು ಹಕ್ಕಿ.

## ೭೮೧. ಗಣಪತಿಗೆ

ಗಣಪತಿಗೆ ತೋರಿಸಿರಿ ಮೊದಲು ನೈವೇದ್ಯ
ಆಮೇಲೆ ಮಾನವರು ಮುಕ್ಕಿ ಬಿಡಿ ಖಾದ್ಯ
ಮಣ್ಣಿನ ಗಣೇಶ ಮುಕ್ಕುವುದಿಲ್ಲವೆಂದು
ನೈವೇದ್ಯ ನೀಡುವರು ಮೋದಕವ ತಂದು.

## ೭೮೨. ಗಣಪತಿಗೆ ಹೊಟ್ಟೆ

ಗಣಪತಿಯ ಹೊಟ್ಟೆ ಒಡೆಯಿತು ಬಹಳ ತಿಂದು.
ಉದರಕ್ಕೆ ಸುತ್ತು ಹಾಕಿತು ಸರ್ಪ ಬಂದು.
ಗುಣಹೊಂದಿದನು ಗಣಪ ಈ ಸುತ್ತಿನಿಂದ,
ಘಟಸರ್ಪವೂ ಒಳಿತು ಮಾಡಬಹುದೆಂದ.

## ೭೮೩. ಗಣಪ ಬಂದಾಗ

ಗಣಪ ಬಂದಾಗ ತೆಗೆದರು ಸಾಲ ಭರ್ತಿ.
ಪ್ರತಿ ದಿವಸವೂ ಮಾಡಿದರು ಮಂಗಳಾರ್ತಿ
ಸಾಲ ತೀರಿಸಲಿಕ್ಕೆ ಗಣಪನ ಸಹಾಯ.
ಸಿಗಲಿಲ್ಲವೆನ್ನುವುದು ದೊಡ್ಡ ಅನ್ಯಾಯ.

## ೭೮೪. ಗಣಪ ಬಂದಿದ್ದಾನೆ

ಗಣಪ ಬಂದಿದ್ದಾನೆ; ಕಾಳು ಕಡಿ ಇಲ್ಲಾ,
ಅತ್ಯಂತ ತುಟ್ಟಿಯಾಗಿದೆ, ಅಕ್ಕಿ ಬೆಲ್ಲಾ,
ಎಲೆ ಗಣಪ, ನೀನಾದರೂ ಅರ್ಜಿ ಹಾಕು,
ಮಂತ್ರಿಗಳ ಮರ್ಜಿ ಪಡೆಯಲು ನೀನೇ ಬೇಕು.

## ೭೮೫. ಗಣರಾಜ್ಯ ದಿನದಂದು

ಗಣರಾಜ್ಯ ದಿನದಂದು ಸೊಗಸು ಮಾತಾಡಿ
ಮರುದಿವಸ ನಿಮ್ಮ ನಿಮ್ಮೊಳಗೆ ಹೋರಾಡಿ
ಗಡಿ ತಂಟೆ, ನುಡಿ ತಂಟೆ, ನದಿ ನೀರ ತಂಟೆ,
ಹತ್ತು ಕಡೆಗೂ ಕೇಳಿಸಲಿ ಜಗಳ ಗಂಟೆ.

## ೭೮೬. ಕವಿಯ ಕೃಷಿ

ಗರ್ಭದಲಿ ಅಡಗಿಕೊಂಡರೆ ಕ್ರಿಯಾಬೀಜ
ಒಂದು ದಿನ ಮೊಳೆತು ಗಿಡವಾಗುವುದು ಸಹಜ
ಆದರೂ ಸರಿಯಾಗಿ ನೀರೆರೆದ ವಿನಹಾ
ನಡುಮಧ್ಯದಲಿ ಉದುರಿ ಹೋಗುವುದು ಕವನ.

## ೭೮೭. ಭೂಮಿ ತಾಯಿ

ಗರ್ಭದೊಳಗಿದ್ದರೂ ಭರ್ತಿ ಬಂಗಾರ
ಹಣೆಯೊಳಗೆ ತಪ್ಪಿಲ್ಲ ಹೆಣದ ಅಂಗಾರ
ಹೀಗೆಂದು ಭೂದೇವಿ ಮರುಗಿದಳು ಕಂದ.
ಅವಳ ದುಃಖದ ಬೆಂಕಿಯಲಿ ಬುದ್ಧ ಬೆಂದ.

## ೭೮೮. ಕಾವ್ಯಲೋಕದಲಿ

ಗಳಿಸಲಿಕೆ ಸಾಮ್ರಾಜ್ಯದ ಸುವರ್ಣ
ಕುಳಿತಾಗ ಹುಟ್ಟಿ ಬಂದದ್ದು ಗಜಕರ್ಣ
ಯಾವಾಗಲೂ ಬಹಳ ವಿರಳ ಬಂಗಾರ
ಲಾಭದಾಯಕವಲ್ಲ, ಕವಿಯ ವ್ಯವಹಾರ.

## ೭೮೯. ಕರ್ನಾಟಕಾಭಿಮಾನ

ಗಂಗೆಗೂ ಹಿರಿದಾಗಿ ಹರಿಯುತಿದೆ ಭದ್ರಾ
ಅರಸಿಕೆರೆ ಎಂಬುದೇ ಅರಬೀ ಸಮುದ್ರ
ದಿಲ್ಲಿಗಿಂತಲೂ ಧಾರವಾಡವೆ ಪ್ರಚಂಡ.
ಮಾನಸ ಸರೋವರವೆ ಕಲಘಟಗಿ ಹೊಂಡ.

## ೭೯೦. ಗಂಡನಿಗೆ ಬಿಟ್ಟ

ಗಂಡನಿಗೆ ಬಿಟ್ಟ ಹೆಂಡಂದಿರೂ ಉಂಟು.
ನನಗೆ ಗೊತ್ತಿದ್ದವರ ಸಂಖ್ಯೆ ಏಳೆಂಟು
ಹೆಂಗಸರ ಶಿಕ್ಷಣವು ಹೆಚ್ಚಾದ್ದರಿಂದ
ನಮ್ಮೂರ ರಾಮೂಜಿ ಹೀಗಾಯಿತೆಂದ.

### ೭೯೧. ಗಂಡ ಹೆಂಡಿರ ಜಗಳ

ಗಂಡ ಹೆಂಡಿರ ಜಗಳ ಹೀಗೆಯೇ ಸಾಗಿ.
ಮುಂದುವರಿದರೆ ನಮ್ಮ ಗತಿಯೇನು, ನಾಗಿ ?
ನಾಗಿ ಎಂದಳು; ನಮಗೆ ಆರನೆಯ ಕೂಸು
ಹುಟ್ಟಲಾರದು ಖಾತ್ರಿ, ಇದು ಬಹಳ ಲೇಸು.

### ೭೯೨. ಗಂಡ ಹೆಂಡಿರ ನಡುವೆ

ಗಂಡ ಹೆಂಡಿರ ನಡುವೆ ಜಗಳ ನಡೆದಾಗ
ಯಾರಿಂದಲೂ ರಾಜಿ ಮಾಡಲಿಕ್ಕಾಗ
ರಾಜ್ಯ ರಾಜ್ಯದ ನಡುವೆ ನಡೆದಾಗ ತಂಟೆ
ಜಾಗತಿಕ ಸಂಘ ಬಾರಿಸಬಹುದು ಗಂಟೆ.

### ೭೯೩. ಗಂಡ ಹಂಡಿರ ಜಗಳ

ಗಂಡಹೆಂಡಿರ ನಡುವೆ ಜಗಳ ನಡೆದಾಗ
ವಹಿಸಬಾರದು ಯಾರೂ ಇದರೊಳಗೆ ಭಾಗ
ಮೂರು ತಾಸಿನ ಮೇಲೆ ಇಬ್ಬರೂ ಒಂದು
ತಣ್ಣಗಾಗುವುದು ಉರಿ, ತುಸು ಹೊತ್ತು ಬೆಂದು.

### ೭೯೪. ವಿಶ್ವಸಂಘದ ಸಹಜೀವನ

ಗಂಡಹೆಂಡಿರ ನಡುವೆ ನಿತ್ಯವೂ ವಾದ
ನಡೆದರೂ ತಪ್ಪಲ್ಲ, ಅದುವೆ ಮತಭೇದ
ಗುದ್ದಾಟ ಮಾತ್ರ ಸಲ್ಲದೂ ಎಂದಿಗೂನು
ಹೀಗೆಂದು ಇಣಕಿಣಕಿ ನೋಡಿದನು ಭಾನು.

### ೭೯೫. ಗಂಡು ಮತ್ತು ಹೆಣ್ಣು

ಗಂಡಿಗಿಂತಲೂ ಹೆಣ್ಣು ಧರೆಯೊಳಗೆ ವಾಸಿ,
ಗಂಡಸರ ಕೃತಿಯಿಂದ ಬಂತು ಬಿಕನಾಸಿ
ಗಂಡುಮಕ್ಕಳು ಕೋವಿ ಹಿಡಿಯಲು ಲಡಾಯಿ
ಹೆಣ್ಣು ಮಕ್ಕಳು ಅಡಿಗೆ ಮಾಡಲು ಮಿಠಾಯಿ

## ೭೯೬. ದೇಶಭಕ್ತನ ಉತ್ತರ

ಗಂಡುಸಾದರೆ ನಿನ್ನ ಬಲಿಕೊಡುವೆಯೇನು ?
ಕುರಿಯೇನು ಈ ರೀತಿ ಸಾಯಲಿಕೆ ನಾನು ?
ಈ ಪ್ರಜಾರಾಜ್ಯದಲಿ ನಾನಾ ಮಿಠಾಯಿ
ನಿತ್ಯವೂ ತಿಂದು ಸವಿ ಮಾಡುವೆನು ಬಾಯಿ.

## ೭೯೭. ಗಾಳಿಪಟಗಳ ಸಂಖ್ಯೆ

ಗಾಳಿಪಟಗಳ ಸಂಖ್ಯೆ ವಿಪರೀತಕೇರಿ
ಆಕಾಶದಲ್ಲಿಯೇ ಭೀಳುವವು ಜಾರಿ.
ಅಲ್ಲಿಂದ ನಕ್ಷತ್ರಗಳ ಜೊತೆಗೆ ಸೇರಿ
ಭೂಲೋಕದಿಂದ ಅವು ಕಾಯಂ ಪರಾರಿ.

## ೭೯೮. ಗಾಳಿ ಬೀಸಿದರೆ

ಗಾಳಿ ಬೀಸಿದರೆ ಬೀದಿಗೆ ಹೋಗಬೇಡ
ಸೆರಗು ಹಾರಲು ನಿನ್ನ ಗತಿಯೇನು, ನೋಡಾ
ಆಮೇಲೆ ಬೀದಿಯೊಳಗಿನ ತುಂಟ ಮಂದಿ
ನಗೆಯಾಡಿ ಕೈಸನ್ನೆ ಮಾಡಿದರು, ಅಂದಿ.

## ೭೯೯. ಗಾಳಿ

ಗಾಳಿಯಲ್ಲೂ ಉಂಟು ನಾನಾ ನಮೂನೆ
ಬಿರುಗಾಳಿ ಬೀಸಿದರೆ ಮುದಕರಿಗೆ ಬೇನೆ
ತಂಗಾಳಿ ಬೀಸಿದರೆ ಹೆಂಗಸರು ಬಸಿರು
ಮಳೆಗಾಳಿ ಬೀಸಿದರೆ ರಸ್ತೆಯಲಿ ಕೆಸರು

## ೮೦೦. ಅಪ್ಪನ ಉತ್ತರ

ಗ್ರಾಮಪಂಚಾಯ್ತು ಬೇಕೇನು ಅಪ್ಪಾ ?
ಇದರಿಂದ ಅವರ ಬಾಯಲಿ ಬೆಣ್ಣೆ ತುಪ್ಪ
ಬಂದುದೆಲ್ಲಾ ನುಂಗಿಹಾಕಿತು ಪಗಾರ.
ಬಂಜೆಭೂಮಿಗೆ ಹಾಕಿದಂತೆ ಪಗಾರ.

## ೮೦೧. ಗಾಂಧೀಜಿಗೆ ಪತ್ರ

ಗಾಂಧೀಜಿ, ಲಾಲಿಸೈ, ಇದು ನನ್ನ ಪತ್ರ;
ಮತ್ತಷ್ಟು ತುಟ್ಟಿಯಾಗಿದೆ ಉಡುವ ಧೋತ್ರ
ನಿನ್ನಂತೆ ನಾನು ಧರಿಸಿದರೆ ಲಂಗೋಟಿ
ಪಾರಾಗಬಹುದೆ ಈ ಸಂಸಾರ ದಾಟಿ ?

## ೮೦೨. ಗಾಂಧೀಜಿ

ಗಾಂಧಿ ಮಡಿದರು ಎನ್ನುವುದು ಸುಳ್ಳು ಸುದ್ದಿ.
ಹೀಗೆ ಹೇಳುವ ಜಾಣರಿಗೆ ಇಲ್ಲ ಬುದ್ಧಿ
ಕೋಟಿ ಜನತೆಯ ಹೃದಯದಲಿ ಬಿರಿದ ಹೂವು
ಬಾಡಲಾರದು ಮಗನೆ! ಅದಕಿಲ್ಲ ಸಾವು !

## ೮೦೩. ಹೂವು

ಗಿಡದ ಮೇಲೆಯೇ ಹೂವು ಮುಡಿಯುವಳು ಧರಣಿ
ನೀ ಮುಡಿಯೆ ಬಲು ಬೇಗ ಬಾಡುವುದು ರಮಣಿ
ಹೂವುಗಳ ಮೂಸಿದರೆ ನರುಗುಂಪು, ನೀರೆ.
ಕೈಯಿಂದ ಉಜ್ಜಿದರೆ ವಾಸನೆಯು ಬೇರೆ.

## ೮೦೪. ರಂಗಿಯ ಸಂಸಾರ

ಗಿಡದೊಳಗೆ ಶ್ರೇಷ್ಠ ಗಿಡವೆಂಬುದು ಪರಂಗಿ.
ಸಂಸಾರದೊಳಗೆ ನೀನಿದ್ದಂತೆ, ರಂಗಿ.
ಈ ಪರಂಗಿಯ ವೃಕ್ಷ ನಿನ್ನ ಪಡಿಯಚ್ಚು
ಇಬ್ಬರಿಗೂ ಕೂಸುಗಳು ಹುಟ್ಟುವುದು ಹೆಚ್ಚು.

## ೮೦೫. ನಗು

ಗಿಡಬಳ್ಳಿ ನಕ್ಕಾಗ ಹೂವಾಯ್ತು ಕಂದ.
ಕಡಲು ನಕ್ಕಾಗ ಬೆಳ್ನೊರೆಯ ಆನಂದ
ಇರುಳು ನಕ್ಕಾಗ ಹುಣ್ಣಿಮೆಯಾಯ್ತು ಚೆಂದ.
ಆಗಸದ ನೊಸಲೊಳಗೆ ಶಶಿಯ ಶ್ರೀಗಂಧ

## ೮೦೬. ನನ್ನ ಆಸೆ

ಗಿಡ ಬಳ್ಳಿ ಹೂ ಕಾಯಿಗಳು ನನ್ನ ಆಸ್ತಿ.
ಇಷ್ಟು ಇದ್ದರೆ ಸಾಕು, ಬೇಕಿಲ್ಲ ಜಾಸ್ತಿ.
ಹೂವುಗಳು ಹುಟ್ಟಿದಲ್ಲೇ ಬಾಡಬೇಕು
ಕಾಯಿಗಳನೆಲ್ಲ ತಿನ್ನಲಿ ನಮ್ಮ ರಾಕು.

## ೮೦೭. ಗುಣವಂತೆಗೆ

ಗುಣವಂತೆ, ನನ್ನ ಮಾತನು ಸ್ವಲ್ಪ ಕೇಳು;
ಹತ್ತು ಮಕ್ಕಳ ತಾಯಿಯಾಗಿ ನೀ ಬಾಳು
ಎಂಬ ಆಶೀರ್ವಾದ ಕೊಡಬೇಡ ಅಂದೆ.
ಇದ್ದ ಮಕ್ಕಳಿಗಿಲ್ಲ ಯಾವುದೂ ದಂಧೆ.

## ೮೦೮. ನಿನಗಿಲ್ಲ ಪುರಸತ್ತು

ಗುಣವಂತೆ, ನಿನಗಿಲ್ಲ ತುಸುವು ಪುರಸತ್ತು.
ಹೀಗಾಗಿ ನನಗೆ ದೊರಕುವುದಿಲ್ಲ ಮುತ್ತು
ನೀವು ಶುರುಮಾಡಿದರೆ ಮುಗಿಯುವುದೆ ಬೇಗ ?
ಮಧ್ಯರಾತ್ರಿಯ ತನಕ ಅಡಿಗೆಯೂ ಆಗ.

## ೮೦೯. ಗುಬ್ಬಚ್ಚಿ

ಗುಬ್ಬಚ್ಚಿಯಾಗಿರಲಿ ನಾನು ಬರೆದದ್ದು
ಉದ್ದ ಗೀಚಿದರೆ ಆಗುವುದು ರಣಹದ್ದು
ಬರಿ ನಾಕು ಪಂಕ್ತಿಯಲಿ ಹದಿನೆಂಟು ಹೇಳಿ.
ಮುಗಿಸಿದರೆ ಗುಬ್ಬಚ್ಚಿಯಾಗುವುದು ಕೋಳಿ.

## ೮೧೦. ಅಪ್ಪನ ಉತ್ತರ

ಗುಬ್ಬಚ್ಚಿ ಹಾರಿದರೆ ಮನಕೆ ಸಂತೋಷ
ನರನ ಹಾರಾಟವೆಂಬುದು ದೊಡ್ಡ ದೋಷ.
ಕೆಳಗಿಳಿಯಲೇ ಬೇಕು ಹಾರಿದವರೆಲ್ಲಾ
ನಿಜವಾಗಿಯೂ, ಮಗನೆ, ಹಾರಾಟ ಸಲ್ಲಾ.

### ೮೧೧. ಗುಂಡಪ್ಪನವರ ಚೌಪದಿ

ಗುಂಡಪ್ಪನವರ ಚೌಪದಿಗಳಿಗೆ ನಮನ
ಮಂಕು ತಿಮ್ಮಪ್ಪ ಸೆಳೆದನು ನನ್ನ ಗಮನ
ಇಂಥ ಶೈಲಿಯ ಸೊಗಸು ನನಗಿಲ್ಲ ಸಾಧ್ಯ
ನಾನು ಗೀಚಿದ್ದು ಡೊಂಕಾಪುರದ ಪದ್ಯ.

### ೮೧೨. ಸಚಿವರಿಂದ ಉದ್ಘಾಟನೆ

ಗುಂಡಿ ಒತ್ತಿದ ಬಳಿ ವಿದ್ಯುತ್ ಪ್ರಕಾಶ
ವೇದಿಕೆಯ ಸುತ್ತಲೂ ಕತ್ತಲೆಯ ನಾಶ
ಮಂಟಪದ ಹೊರ ಬದಿಗೆ ಪೂರ್ಣ ಅಮವಾಸ್ಯೆ
ಇದಕೆನ್ನುವರು ಕಾಳಸಂತೆಯ ಸಮಸ್ಯೆ.

### ೮೧೩. ಪಕ್ಷಾಂತರಿಗಳ ಅವಸ್ಥೆ

ಗೆದ್ದ ಎತ್ತಿನ ಬಾಲ ಹಿಡಿದವರಿಗೆಲ್ಲಾ
ಇಂದಿರಾ ಜಗದಂಬೆ ತಿನಿಸಿದಳು ಬೆಲ್ಲಾ
ಈ ಭೂಪರಿಗೆ ಪಾಪ ನೀಡದೆ ತಿಕೇಟು
ಕೈಲಿ ಚುರುಮುರಿ ಕೊಟ್ಟು ಮುಚ್ಚಿದಳು ಗೇಟು.

### ೮೧೪. ಕೊಡಬೇಕು

ಗೆದ್ದರೂ ಕೊಡಬೇಕು; ಸೋತರೂ ಕೂಡ
ಎಂದೆಂದಿಗೂ ಇವನ ಸಹವಾಸ ಬೇಡ
ಕಲಹದಿಂದಲೆ ತುಂಬುವುದು ಇವನ ಚೀಲ
ಇವನಾರು ಗೊತ್ತುಂಟೆ ? ಇವನೇ ವಕೀಲ.

### ೮೧೫. ಕವನ ಸಂಗ್ರಹ

ಗೊತ್ತಾಯ್ತೆ ಈ ಕವನ ಸಂಗ್ರಹದ ಸುದ್ದಿ ?
ಹತ್ತು ಪ್ರತಿ ಖರ್ಚಾಗಿ ಉಳಿದದ್ದು ರದ್ದಿ.
ಪಠ್ಯ ಪುಸ್ತಕವೆಂದು ಚಪ್ಪೆ ಹೊಡೆದಾಗ
ಪೇಟೆಯಲಿ ಕೊನೆಗೆ ಸಿಕ್ಕಿತು ಸ್ವಲ್ಪ ಜಾಗ.

### ೮೧೬. ಚಿಲ್ಲರೆ ಮನುಷ್ಯ

ಗೊತ್ತಿಲ್ವೆ? ಆ ಇಸಮು ಚಿಲ್ಲರೆ ಮನುಷ್ಯ.
ಅವನ ಕುರಿತಾಗಿ ಚರ್ಚೆಯು ಅನಾವಶ್ಯ.
ನಮ್ಮ ಕಾರ್ಯವ ಮಾಡುವುದೆ ನಮ್ಮ ಧರ್ಮ.
ನಮಗೇಕೆ ಆ ಮಾತು ? ಅವರಿವರ ಕರ್ಮ ?

### ೮೧೭. ದೇಶಭಕ್ತರ ಪುಣ್ಯಕಾರ್ಯ

ಗೊತ್ತುಂಟೆ ? ದೇಶಭಕ್ತರ ಪುಣ್ಯಕಾರ್ಯ ?
ಅಹುದೆಂದು ಹೀಗೆ ಹೇಳಿದನು ಆಚಾರ್ಯ
ಮಂತ್ರಿ ಸತ್ತರೆ ಮಡಕೆಯಲಿ ಒಂದು ಕೋಟಿ
ಜನರು ಸತ್ತರೆ ಹೆಣದ ಮೇಲೆ ಲಂಗೋಟಿ.

### ೮೧೮. ಎಳನೀರಿನ ಜಾಹೀರಾತು

ಗೊತ್ತುಂಟೆ ನಿಮಗೆ ಎಳನೀರಿನ ಮಹತ್ವ ?
ಇದರಿಂದ ಎಳತಾಗುವುದು ಹಳೆಯ ಸತ್ವ
ನಿಮ್ಮ ಅಜ್ಜಿಗೆ ನಿತ್ಯವೂ ಕುಡಿಸಿ ನೋಡಿ
ಹದಿನೆಂಟು ದಿನದೊಳಗೆ ಆಗುವಳು ಲೇಡಿ.

### ೮೧೯. ಪಂಚವಾರ್ಷಿಕ ಫಲಶ್ರುತಿ

ಗೊತ್ತುಂಟೆ ಪಂಚವಾರ್ಷಿಕದ ಪರಿಣಾಮ ?
ಅಹುದೆಂದು ಈ ರೀತಿ ಹೇಳಿದನು ರಾಮ;
ಮುಗಿದರೂ ಪೂಜೆ ಸಿಗಲಿಲ್ಲ ನೈವೇದ್ಯ
ಆಸ್ಪತ್ರೆಯಿದ್ದರೂ ಇರಲಿಲ್ಲ ವೈದ್ಯ.

### ೮೨೦. ಪಾನಪ್ರತಿಬಂಧದ ಪ್ರತಾಪ

ಗೊತ್ತುಂಟೆ ಪಾನಪ್ರತಿಬಂಧದ ಪ್ರತಾಪ ?
ಹೇಳಿದರೆ ಸಚಿವರಿಗೆ ಬರಬಹುದು ಕೋಪ.
ಬೇಲೆಕೇರಿಯ ಬಂಗಲೆಗೆ ಮಾತ್ರ ಬಂದು
ಸಂಸಾರ ಹೂಡಿದರು ಬಾಟ್ಲಿಗಳ ತಂದು.

## ೮೨೧. ರಾಜಕೀಯ ಅಧಿವೇಶನ

ಗೊತ್ತುವಳಿಯಿಂದ ಜಯಘೋಷಗಳ ಹಿಂಡಿ.
ಕಾಗದದ ಮೇಲೆ ಬಡಿಸಿದರು ಬಿಸಿ ತಿಂಡಿ.
ಕಾಗದವ ನೆಕ್ಕಿ ನೋಡಲು ಆದಕೆ ತೂತು
ನಾಲಗೆಗೆ ಅಂಟಿಕೊಂಡದ್ದು ಒಣ ಮಾತು.

## ೮೨೨. ತಗಣಿ

ಗೊಬ್ಬರದ ಕುಣಿಯೊಳಗೆ ತುಂಬಿರಲು ಸಗಣಿ
ಅರಮನೆಯ ಮಂಚದಲಿ ಒರಗಿತ್ತು ತಗಣಿ
ಸಗಣಿಯೇ ಕದಿರಾಗಿ ಕಣಜವನು ಸೇರೆ
ಮೈ ತುಂಬಿಕೊಂಡಿತ್ತು ತಗಣಿ ಮನವಾರೆ.

## ೮೨೩. ಬಾಲೋದ್ಯಾನದಲ್ಲಿ

ಗೊಂಬೆಯಾಟದ ಬದಲು ಉಪಯುಕ್ತ ವಿದ್ಯೆ
ಕಲಿಸಬೇಕೆಂಬ ಆಲೋಚನೆಯೊಳಿದ್ದೆ.
ಗಂಡುಮಕ್ಕಳಿಗೆಲ್ಲ ಬಂದೂಕು ಕೊಟ್ಟೆ
ಹೆಣ್ಣು ಮಕ್ಕಳ ಕೈಲಿ ಬ್ಯಾಂಡೇಜು – ಬಟ್ಟೆ.

## ೮೨೪. ಗೋಕರ್ಣ ಕ್ಷೇತ್ರದಲಿ

ಗೋಕರ್ಣ ಕ್ಷೇತ್ರದಲಿ ನಡೆದರೂ ಖೂನಿ
ಕ್ಷೇತ್ರದ ಪವಿತ್ರತೆಗೆ ಬಂದಿಲ್ಲ ಹಾನಿ
ಭಸ್ಮವಾಗುವುದಿಲ್ಲಿ ಪ್ರತಿಯೊಂದು ಪಾಪ
ಮೈಗೆ ಅಂಟುವುದಿಲ್ಲ ಯಾವುದೂ ಶಾಪ.

## ೮೨೫. ಗೋಕರ್ಣದೊಳಗೆ

ಗೋಕರ್ಣದೊಳಗೆ ಬೇಕಿಲ್ಲ ವ್ಯಾಕರಣ
ಹೇಗೆ ಮಾತಾಡಿದರು ಆಗುವುದು ಜೀರ್ಣ
ಅಲ್ಲಿ ಬೇಕಾದದ್ದು ದಕ್ಷಿಣೆಯ ದುಡ್ಡು
ಎಲ್ಲವೂ ಸರಿಹೋಗಿ ತಿನಬಹುದು ಲಡ್ಡು.

## ೮೨೬. ರಮಣೀಯ ಗೊಂಬೆ

ಗೋದಿ ಬಣ್ಣದ ನೀನು ರಮಣೀಯ ಗೊಂಬೆ
ನಿನ್ನ ನೋಡಿದರೆ ನಾಚುವಳು ಆ ರಂಭೆ
ತೆಳ್ಳಗಾಗಿದ್ದು ಎತ್ತರವು ಬೇಕಷ್ಟು
ಪೂರ್ಣ ಬರೆದರೆ ಉದ್ದವಾಗುವುದು ಲಿಸ್ಟು.

## ೮೨೭. ಖಾದಿ–ಬೋರ್ಡು

ಗೋವಿಂದ ಗೋಪಾಲ ಕೇಳೋ, ಮುರಾರಿ;
ನೈವೇದ್ಯ ಸ್ವೀಕರಿಸಿ ಆದರು ಪರಾರಿ
ಲೆಕ್ಕಪತ್ರಗಳಿಲ್ಲ; ಕರಣಿಸು, ಮುಕುಂದ
ಖಾದಿ ಬೋರ್ಡಿನ ಹಣೆಗೆ ಹಚ್ಚಿದರು ಗಂಧ.

## ೮೨೮. ಆಧುನಿಕ ಭಜನೆ

ಗೋವಿಂದ ಗೋಪಾಲ, ಕೇಳೋ ಮುರಾರಿ;
ಲಕ್ಷಗಟ್ಟಲೆ ತಿಂದು ಕೊಳ್ಳುವರು ಜಾರಿ
ಇದು ಕೂಡ ನಿನ್ನದೇ ಆಟ, ಭಗವಂತ
ಅರಗಳಿಗೆಯಲ್ಲಿ ಆಗುವನು ಶ್ರೀಮಂತ.

## ೮೨೯. ಗೋವಿಂದ ಗೋಪಾಲ

ಗೋವಿಂದ ಗೋಪಾಲ, ಕೇಳೋ ಮುರಾರಿ;
ಲಕ್ಷಗಟ್ಟಲೆ ತಿಂದುಕೊಳ್ಳುವರು ಜಾರಿ
ವೈಕುಂಠದಲಿ ನೀನು ಎಲ್ಲಿ ಕುಳಿತಿರುವೆ
ಈ ಲೂಟಿ ನಡೆದರೂ ನಿನಗಿಲ್ಲ ಪರಿವೆ.

## ೮೩೦. ಒಂದು ಸೂಚನೆ

ಗೋವಿಂದ ಗೋಪಾಲ, ಕೇಳೋ ಮುರಾರಿ;
ಆಮೇಲೆ ಎರಡು ಕೈಯಿಂದಲೂ ತಿಂದು ಪರಾರಿ
ಜೀರ್ಣವಾಗಲು ತಿರುಪತಿಗೆ ಹೋಗಿ ಬನ್ನಿ
ಬರುವ ಹೊತ್ತಿಗೆ ಪ್ರಸಾದವ ಭರ್ತಿ ತನ್ನಿ.

## ೮೩೧. ಸ್ವೈರಣೆಯ ಜೀವನಾಡಿ

ಗೋವೆ ಎಂಬುದು ಸ್ವೈರಣೆಯ ಜೀವನಾಡಿ.
ಹಿಂದು ಕ್ರಿಸ್ತಗಳಿಬ್ಬರೂ ಒಂದು ಜೋಡಿ
ಗುಡಿಯ ಪಕ್ಕದಲಿ ಚರ್ಚಿನ ಮಹಾದ್ವಾರ
ಧರ್ಮಗಳು ಕೂಡಿದರೆ ಜೀವನದ ಸಾರ.

## ೮೩೨. ವಿಜಯನಗರ ಸಾಮ್ರಾಜ್ಯ

ಘನತೆಗೇರಿದ ವಿಜಯನಗರ ಸಾಮ್ರಾಜ್ಯ.
ಈಗ ಪುನಹಾ ಹುಟ್ಟಬಹುದೇನು, ಅಜ್ಜ?
ಹೌದು, ಹುಟ್ಟುವುದು, ಆದರೆ ಒಂದು ಮಾತು?
ಈ ರಾಜ್ಯದೊಳಗೆ ಅದು ಹೋಗುವುದು ಸೋತು.

## ೮೩೩. ಸರಕಾರದ ಅರಣ್ಯ ಧೋರಣೆ

ಘೋರ ಕಾನನದಿಂದ ಹುಲಿಗೆ ಆವೇಶ
ಸಾಗವಾನಿಯ ಗಿಡಕೆ ಪರಮ ಸಂತೋಷ
ಸರಕಾರಿ ಬೊಕ್ಕಸಕೆ ಹಣ ಕೋಟಿ ಕೋಟಿ
ಹಾಲಕ್ಕಿ ಮಕ್ಕಳಿಗೆ ಹರಕು ಲಂಗೋಟಿ.

## ೮೩೪. ಘೋರಾಂಧಕಾರದಲಿ

ಘೋರಾಂಧಕಾರದಲಿ ಕಾರ್ಮುಗಿಲನುಟ್ಟು
ಬಂದುಬಿಟ್ಟಳು ಇವಳು, ಹಿಡಿದೆಮ್ಮ ಜುಟ್ಟು!
ಇವಳ್ಯಾರು! ಇವಳ ಹೆಸರೇನು? ತುಸು ಹೇಳಿ!
ಕಾಳಸಂತೆಯ ದುರ್ಗೆ, ಹೆಸರು ಮಂಕಾಳಿ!

## ೮೩೫. ಕಾಲರಾಯನ ತಾಯಿ

ಚಕ್ರವರ್ತಿಯ ಗದ್ದುಗೆಯ ಸುತ್ತುಮುತ್ತು.
ಕಾಲರಾಯನ ನಾಯಿ ಬೊಗಳಿ ಉಗುಳಿತ್ತು
ಆದರೂ ನಮಗಿನ್ನು ಬಂದಿಲ್ಲ ಬುದ್ಧಿ
ತಲೆಯೊಳಗೆ ದೊಡ್ಡ ಸಾಮ್ರಾಜ್ಯಗಳ ಸುದ್ದಿ.

### ೮೩೬. ಚರ್ಚೆ

ಚರ್ಚೆ ಎನ್ನುವುದು ಪಂಡಿತರ ಗುದ್ದಾಟ
ಈ ಲೋಕದೊಳಗೆ ಇದು ಇನ್ನೊಂದು ಕಾಟ
ವೇದಿಕೆಯ ತುಂಬ ವಿಪರೀತ ತಲೆಹರಟೆ
ಚರ್ಚೆ ಮುಗಿದಾಗ ಕೈಯೊಳಗಿತ್ತು ಗರಟೆ.

### ೮೩೭. ಸರ್ವಜ್ಞನ ತ್ರಿಪದಿ

ಚಟ್ನಿ ಉಪ್ಪಿನಕಾಯಿಗಳಿಗಿದ್ದ ಸ್ವಾದ,
ಪಾಯಸಕೆ ಉಂಟೇನು ರುಚಿಯ ಉನ್ಮಾದ ?
ಸರ್ವಜ್ಞ ತ್ರಿಪದಿಗಳ ಹಿಂಗು, ಒಗ್ಗರಣೆ
ಬೇರೆ ಕಬ್ಬಿಗರ ರಸದೂಟದಲಿ ಕಾಣೆ.

### ೮೩೮. ಸುಳಿಗಾಳಿ

ಚಟವಟಿಕೆ ಎನ್ನುವುದು ಸುಳಿಗಾಳಿತಾನೆ
ಅದಕಿಲ್ಲ ಆಲಸ್ಯ, ಅದಕಿಲ್ಲ ಬೇನೆ
ಸುಳಗಾಳಿಯಾಗಿ ನೀ ನಲಿದಾಡು ಅಂದೆ.
ನಿನ್ನ ಸೀರೆಯ ಸೆರಗು ನೋಡಲಿಕೆ ಬಂದೆ.

### ೮೩೯. ಸರಕಾರಿ ಕಾಮಗಾರಿ

ಚಪ್ಪಾಳೆ ತಟ್ಟಿದರು ಅಲ್ಲಲ್ಲಿ ಕೂತು
ಆಮೇಲೆ ನೋಡಿದರೆ ಅಲ್ಲಲ್ಲಿ ತೂತು
ತೂತುಗಳ ಮುಚ್ಚಲಿಕೆ ಐವತ್ತು ಲಕ್ಷ
ಆರಂಭದಲಿ ಯಾರು ಕೊಡಲಿಲ್ಲ ಲಕ್ಷ.

### ೮೪೦. ಶ್ರೀಹರಿಯ ಗೋಳು

ಚರಣಕಮಲಕೆ, ಹರಿಯೆ ಇಷ್ಟೇಕೆ ಧೂಳು ?
ಗೊತ್ತಿಲ್ಲ ನಿನಗೆ, ಮಗು, ಶ್ರೀಹರಿಯ ಗೋಳು
ಪೇಟೆಯಲಿ ಮೊನ್ನೆ ಕ್ಯೂ ಹಿಡಿದು ನಿಂತಾಗ
ಬಸ್ಸಿನಲೂ ನನಗೆ ಸಿಗಲಿಲ್ಲ ಜಾಗ.

## ೮೪೧. ಇದು ಪರ್ವಕಾಲ

ಚಂಡಿ, ಚಾಮುಂಡಿ, ಕೇಳ್; ಇದು ಪರ್ವಕಾಲ
ಈಗ್ಗೆ ಬರಿ ಮಂತ್ರಿಗಳು; ಇಲ್ಲ ನರಪಾಲ
ಈ ವ್ಯವಸ್ಥೆಗೆ ಅನ್ನುವರು ಪ್ರಜಾಸತ್ತೆ
ಸಂಬಳದಗಿಂತಲೂ ಹೆಚ್ಚಾಯ್ತು ಭತ್ಯೆ.

## ೮೪೨. ಹುಣ್ಣಿಮೆ ಹೇಳಿದ್ದು

ಚಂದ್ರ ಕಿರಣಗಳಿಂದ ನೇಯ್ದ ಈ ಬಟ್ಟೆ
ನೀವೆಲ್ಲರೂ ಹೊದ್ದಿಕೊಳ್ಳಿ ಎಂದು ಕೊಟ್ಟೆ
ನಾ ಕೊಟ್ಟರೂ ನಿಮಗೆ ಸಿಗಲಿಲ್ಲ ಪಾಪ
ಈ ಮೇಘರಾಜನಿಗೆ ಬರಬೇಕೆ ಕೋಪ!

## ೮೪೩. ಮಾನವನ ಸಾಧನೆ

ಚಂದ್ರಗ್ರಹದಲ್ಲಿ ಖಾನಾವಳಿಯ ಹಾಕಿ
ಊಟ ಮಾಡುವುದೊಂದೆ ಉಳಿದಿಹುದು ಬಾಕಿ.
ಎಲ್ಲರೂ ಅಲ್ಲಿಯೇ ಮಾಡಿದರೆ ಊಟ
ನಮಗಿಲ್ಲ ಆಹಾರಧಾನ್ಯಗಳ ಕೋತಾ.

## ೮೪೪. ವದಂತಿ

ಚಂದ್ರದೋಣಿಯನೇರಿ ಗಾಳಿ ಹಾಕಿದರೆ
ದೊರೆಯುವುದು ಮುಗಿ ಬಂಗಡೆ ಮತ್ತು ತೋರೆ
ಎಲ್ಲರೂ ನಂಬಿದರು ನಿಜವೆಂದು! ಪಾಪ!
ಅಂತರಿಕ್ಷಕೆ ಹಾರಿದವರು ಉಪವಾಸ.

## ೮೪೫. ಜೀವವಿಮೆ

ಚಂದ್ರನೂ ಜೀವವಿಮೆ ತೆಗೆಯುವುದು ಲೇಸು
ಇದಕಾಗಿ ತಾರೆಗಳು ಕೂಡಿಸಲಿ ಕಾಸು.
ಅಣುಬಾಂಬು ಯುಗದೊಳಗೆ ಚಂದ್ರನೂ ಕೂಡ.
ದೀರ್ಘಾಯುವಾಗುವುದು ದುಸ್ಸಾಧ್ಯ ನೋಡಾ.

## ೮೪೬. ಚಂದ್ರಮಂಡಲದಲ್ಲಿ

ಚಂದ್ರಮಂಡಲದಲ್ಲಿ ಗದ್ದಲ ಗಲಾಟೆ
ಅಮೇರಿಕನ್ನರು ಕಟ್ಟುತ್ತಿದ್ದಾರೆ ಕೋಟೆ
ಕಟ್ಟಬಾರದು ಎಂದು ರಷ್ಯನರ ವಾದ
ಇಬ್ಬರೂ ಜಗಳಾಡಿ ಚಂದ್ರನಿಗೆ ಖೇದ.

## ೮೪೭. ಚಂದ್ರಲೋಕಕ್ಕೆ ಪ್ರಯಾಣ

ಚಂದ್ರಲೋಕಕೆ ತೆರಳುವವರೆಲ್ಲ ಬನ್ನಿ.
ತಲುಪುವುದು ಬಲು ಸುಲಭ ಆಗಿಬಿಡಿ ಕುನ್ನಿ.
ಚಂದ್ರಬಿಂಬದ ಬೆಳ್ಳಿ ನಮ್ಮದೇ ಆಸ್ತಿ
ಮೊದಲು ಮುಟ್ಟಿದ ನಾಯಿಗಿರಲಿ ತುಸು ಜಾಸ್ತಿ

## ೮೪೮. ಚಂದ್ರಲೋಕಕೆ

ಚಂದ್ರಲೋಕಕೆ ನಾನು ಮಾಡುವೆ ಪ್ರಯಾಣ
ಅಲ್ಲಿಂದ ತರುವೆ ಮಣಗಟ್ಲೆ ಆಭರಣ.
ವಂಕಿಗಳು ಚಂದ್ರಲೋಕದ ಬೆಳ್ಳಿಯಿಂದ
ನಿನ್ನ ತೋಳಿಗೆ, ಗೆಳತಿ, ಕಾಣುವವು ಚಂದ.

## ೮೪೯. ತರುಣರಿಗೊಂದು ಸಲಹೆ

ಚಂದ್ರಲೋಕಕೆ ಜಾರಿ ಮರಳಿದರೆ ತರುಣ
ಸಂತಾನ ಶಕ್ತಿ ಆಗುವುದಂತೆ ಹರಣ
ಚಂದಿರನ ಅಪ್ಪಿಕೊಳಿ ಬಂದೊಡನೆ ಪ್ರಾಯ
ಸಂತತಿ ನಿಯಂತ್ರಣಕೆ ಉತ್ತಮ ಉಪಾಯ.

## ೮೫೦. ಎಣ್ಣೆ-ಬೆಣ್ಣೆ

ಚಂದ್ರಲೋಕಕೆ ಹೋಗಿ ತರಲಿಲ್ಲ ಬೆಣ್ಣೆ
ಅತ್ಯಂತ ತುಟ್ಟಿಯಾಗಿದೆ ತೆಂಗಿನೆಣ್ಣೆ
ಈ ರೀತಿ ಎಣ್ಣೆ-ಬೆಣ್ಣೆಗಳ ದುಷ್ಕಾಳ
ತೀವ್ರವಾಗಲು ಗೆಳತಿ, ಕೈಯೊಳಗೆ ತಾಳ.

### ೮೫೧. ಗಂಡ ಹೇಳಿದ್ದು

ಚಂದ್ರಲೋಕಕೆ ಹೋಗಿ ನರನ ವ್ಯಾಗನ್ನು
ಆಯಾತಗೊಳಿಸಲಿದೆ ಸಾಕಷ್ಟು ಹೊನ್ನು
ನಿಮಿಷದಲಿ ಅಗ್ಗವಾಗುವುದು ಬಂಗಾರ
ಆತನಕ ನಿನಗೇಕೆ ಕೊಳ್ಳುವ ವಿಚಾರ ?

### ೮೫೨. ಅಜ್ಜಿಯ ದುಃಖ

ಚಂದ್ರಲೋಕಕೆ ಹೋಗಿ ಬಂತಂತೆ ಕುನ್ನಿ!
ನಾವಿನ್ನು ಕಾಶಿಗೂ ಹೋಗಿಲ್ಲ ಚೆನ್ನಿ
ನಾಯಿಗೂ ಕಡೆಯಾಗಿ ಹೋಯ್ತೆ ನರಜನ್ಮ ?
ಎಂದು ಮಮ್ಮಲ ಮರುಗಿದಳು ನಮ್ಮ ಅಮ್ಮ.

### ೮೫೩. ಅಜ್ಜಿಯ ದುಃಖ

ಚಂದ್ರಲೋಕಕೆ ಹೋಗಿ ಮರಳಿದರು ನಿನ್ನೆ
ಕೆನೆಹಾಲಿನಂತೆ ಬಿಳುಪಾಯ್ತೇನೆ ಕೆನ್ನೆ ?
ಜೊತೆಗೆ ತಂದಾರೇನು ಮಣಗಟ್ಲೆ ಬೆಳ್ಳಿ ?
ಬರಿಗೈಲಿ ಮರಳಿದರು ಗೊತ್ತಿಲ್ವೆ, ಮಳ್ಳಿ ?

### ೮೫೪. ಚಂದ್ರಲೋಕದ ಮೇಲೆ

ಚಂದ್ರಲೋಕದ ಮೇಲೆ ಮೊಲ ಉಂಟು, ನೋಡು.
ಬಲು ಹಿಂದೆ ಅವು ಅಲ್ಲಿ ಕಟ್ಟಿದವು ಬೀಡು
ಮಾನವನು ಅಲ್ಲಿ ಹೋದದ್ದು ಸದ್ಯಕ್ಕೆ
ಮರಳಿದನು ಸಾಧ್ಯವಾಗದೆ ಉಳಿಯಲಿಕ್ಕೆ.

### ೮೫೫. ಚಂದ್ರಲೋಕ ಪ್ರಯಾಣ

ಚಂದ್ರಲೋಕಕೆ ಹೋಗಿ ಮರಳಿದರು ನಿನ್ನೆ
ಸಿಗಲಿಲ್ಲ ಬಂಗಾರ, ತಂದದ್ದು ಸೊನ್ನೆ
ಬೆಳ್ಳಿಯೂ ಸಿಗಲಿಲ್ಲ, ಸಿಕ್ಕಿದ್ದು ಕಲ್ಲು
ವ್ಯರ್ಥವಾಯಿತು ಇವರ ವೈಭವದ ಗುಲ್ಲು.

## ೮೫೬. ಚೀನಾದ ಮಾವೋ ಹೇಳಿದ್ದು

ಚಂದ್ರಲೋಕದ ಮೇಲೆ ಏತಕೆ ಸವಾರಿ ?
ಸಾಮ್ರಾಜ್ಯ ಕಟ್ಟಲಿಕೆ ನಡೆದಿದೆ ತಯಾರಿ.
ಶಶಿಭೂಮಿಯನು ಮೊದಲು ವಶಪಡಿಸಿಕೊಂಡು
ಉಡುಗಣಕೆ ನುಗ್ಗಲಿದೆ ಅಮೇರಿಕದ ದಂಡು.

## ೮೫೭. ಚಂದ್ರಲೋಕದ ಮೇಲೆ

ಚಂದ್ರಲೋಕದ ಮೇಲೆ ಧರೆಯ ಸ್ಪುಟ್‌ನಿಕ್ಕು
ಇದಕೆನ್ನುವರು ಯಂತ್ರ ಮಾನವನ ಬೆಕ್ಕು
ಈ ಬೆಕ್ಕು ತಿಂದುಬಿಟ್ಟರೆ ಶಶಿಯ ಬೆಣ್ಣೆ
ದೇವಲೋಕದ ಪಾಲಿಗೂ ತೆಂಗಿನೆಣ್ಣೆ.

## ೮೫೮. ಮಾನವನ ವಿಜಯ

ಚಂದ್ರಲೋಕವ ದಾಟಿ ಆಕಾಶಬಾಣ
ಸುಂಯ್‌ಗುಡಲು ಓಡತೊಡಗಿತು ಯಮನ ಕೋಣ
ಮೇಲಿದ್ದ ಯಮದೇವನೂ ಕೆಳಗೆ ಬಿದ್ದ.
ಕಟ್ಟಕಡೆಯಲಿ ಸೊಟ್ಟ ಮಾನವನೆ ಗೆದ್ದ.

## ೮೫೯. ಚಂದ್ರಲೋಕದ ಪ್ರಯಾಣ

ಚಂದ್ರಲೋಕವನೇರಿ ಜಾರಿದೆವು ಕೆಳಗೆ
ತಾರೆಯೊಂದೂ ಬೀಳಲಿಲ್ಲ ಕಿಸೆಯೊಳಗೆ
ತಾರೆಗಳ ಬದಲು ಮೈತುಂಬ ಒಣ ಧೂಳು
ಊಟಕ್ಕೆ ಸಿಗಲಿಲ್ಲ ಯಾವುದೂ ಕಾಳು.

## ೮೬೦. ಚಂದ್ರಲೋಕವನೇರಿ

ಚಂದ್ರಲೋಕವನೇರಿ ಮರಳಿದರು ಧರೆಗೆ
ಅಲ್ಲಿಂದ ತಂದದ್ದು ಏನು ಈವರೆಗೆ
ಬಹಳ ತಂದಿದ್ದಾರೆ; ಇದು ನೋಡು ಲಿಸ್ಟು.
ಹದಿಮೂರು ಕಲ್ಲುಗಳು, ಮಣ್ಣು ಒಂದಿಷ್ಟು.

### ೮೬೧. ಮನೆ

ಚಂದ್ರಲೋಕವನೇರಿಯೂ ಇವರು ಕೊನೆಗೆ
ಇಳಿದು ಬರಬೇಕಾಯ್ತು ಮಾನವನ ಮನೆಗೆ
ಮನೆ ಎಂಬುದೇ ಮೇಲು, ಇದಕಿಲ್ಲ ಸಾಟಿ,
ಇದರ ಬೆಲೆ ಕೋಟಿ ದಶಕೋಟಿ ಶತಕೋಟಿ.

### ೮೬೨. ವೇದಮೂರ್ತಿಗಳು ಹೇಳಿದ್ದು

ಚಾ ಕುಡಿವ ಹಾಳು ಚಟವೇಕೆ, ಎಲೆ ಪಾಪಿ ?
ಇತ್ತೇನು ವೇದಕಾಲದಲಿ ಚಾ ಕಾಫಿ ?
ನಮಗಿರಲಿ ನಮ್ಮ ಸೋಮರಸ ಪಾನೀಯ.
ಇಂಥ ಪಾನೀಯವೇ ಭಟ್ಟಿಗಳ ಪೇಯ.

### ೮೬೩. ಒಂದು ಜಾಹೀರಾತು

ಚಿಕ್ಕ ಉಳಿತಾಯ ಯೋಜನೆ ಸುಗಮ ದಾರಿ
ಮಕ್ಕಳೆಷ್ಟಾದರೂ ಭಯವಿಲ್ಲ ನಾರಿ
ಪೈಸೆಪೈಸೆಗಳಿಟ್ಟು ಕಟ್ಟಿದರೆ ಗೋಡೆ
ತೊಟ್ಟಿಲವ ತೂಗಲಿಕೆ ಮನೆಯುಂಟು, ನೋಡೆ.

### ೮೬೪. ಬೆಕ್ಕು

ಚಿಕ್ಕಂದಿನಲಿ ನಾನು ತಂದು ಅವಲಕ್ಕಿ
ಬೆಕ್ಕಿಗೂ ಕೊಡುತ್ತಿದ್ದೆ ಒಂದಿಷ್ಟು ಮುಕ್ಕಿ
ಆ ಬೆಕ್ಕು ಕೊನೆಯವರೆಗೂ ಮರೆಯಲಿಲ್ಲಾ
ಈ ಬುದ್ಧಿ ಮಾನವನಿಗೂ ಇಲ್ಲವಲ್ಲಾ !

### ೮೬೫. ಕೊರಸಕ್ಕಿ

ಚಿಕ್ಕಂದಿನಲಿ ಮನುಜ ಕೊರಸಕ್ಕಿಯಂತೆ
ಬೆಂದು ಬಂದರೆ ಕಡಿಮೆಯಾಗುವುದು ಚಿಂತೆ.
ಕೊರಸಕ್ಕಿಯೊಳಗಿರುವ ಶಕ್ತಿ ಸಾಮರ್ಥ್ಯ
ಬೆಣತಕ್ಕಿಯೊಳಗಿಲ್ಲವೆನ್ನುವುದು ಸತ್ಯ.

## ೮೬೬. ನನ್ನ ಗೆಳತಿ

ಚಿಕ್ಕಂದಿನಿಂದ ಈತನು ನನ್ನ ಗೆಳೆಯ
ಮೊನ್ನೆಯಾದನು ಮುಖ್ಯಮಂತ್ರಿಗಳ ಅಳಿಯ
ಸಾಲೆಯೊಳಗಿದ್ದಾಗ ದಡ್ಡನಾಗಿದ್ದ,
ಆದರೂ ಪುಣ್ಯಾತ್ಮ ಮದುವೆಯಲಿ ಗೆದ್ದ.

## ೮೬೭. ಜೀವನ

ಚಿಕ್ಕಂದು ಮುಂಜಾವು, ಪ್ರಾಯ ನಡುಹಗಲು
ಮುಪ್ಪು ಸಂಜೆಯ ಸಮಯ, ಯೌವನವೆ ಬಿಸಿಲು
ಮಧ್ಯರಾತ್ರೆಯ ಅಮಾಸೆಗೆ ಹೆಸರು ಮರಣ.
ತರಣಿ ಮೂಡಲು ಮತ್ತೆ ಮುಂಜಾವ ಕಿರಣ.

## ೮೬೮. ಚುನಾವಣೆಯಲ್ಲಿ ಬೇಡಿಕೆ

ಚಿಗುರೆಲೆಯ ಹಿಂಡಿದರೆ ಸಿಗಬೇಕು ಜೇನು.
ಅಡಿಗೆಮನೆಯಲಿ ನಮಗೆ ಬೇಕು ಟೆಲಿಫೋನು
ಪ್ರತಿಯೊಂದು ಗುಡಿಸಲಿಗೆ ಬೇಕು ಉಪ್ಪರಿಗೆ
ಎಲ್ಲವೂ ಮೂರು ತಿಂಗಳ ಅವಧಿಯೊಳಗೆ.

## ೮೬೯. ಚಿತ್ರರಂಗದ ವಿಕಾಸ

ಚಿತ್ರರಂಗದ ಜಾತ್ರೆ ನೋಡು ಬಾ, ಕಂದ.
ತುಂಬಿಹೋಗಿದೆ ನಗರ ನಟನಟಿಯರಿಂದ
ಆಕಾಶದೊಳಗಿರುವ ದಶಕೋಟಿ ತಾರೆ
ಬೆಂಗಳೂರಿನ ರಸ್ತೆಯಲಿ ನಿಂತಿದಾರೆ.

## ೮೭೦. ವಿದೇಶಿಯ ಸಹಾಯ

ಚಿಂತೆ ಪಡಲಿಕ್ಕೆ ಕಾರಣವಿಲ್ಲ ಜೀಯ.
ದೇಶ ದೇಶಗಳಿಂದ ಬರಲಿದೆ ಸಹಾಯ
ಅಭಿವೃದ್ಧಿ ಕಾರ್ಯಕ್ಕೆ ಕೈತುಂಬ ಸಾಲ
ತಿನ್ನುವ ಮಹಾತ್ಮರಿಗೆ ಬಹಳ ಅನುಕೂಲ.

### ೮೭೧. ಬಾಂಬಿಗೆ ಪ್ರತಿಭಟನೆ

ಚೀನಿಯರ ಕೈಯೊಳಗೆ ಜಲಜನಕ ಬಾಂಬು,
ನಮ್ಮ ಕೈಯೊಳಗೆ ತಾಮ್ರದ ದೊಡ್ಡ ಚೆಂಬು
ಬಾಂಬು ಸಿಡಿದರೆ ಚೆಂಬು ನೀರು ಸಿಂಪಡಿಸಿ,
ಜಲಜನಕ ಕಿಡಿಗಳನು ಹಾಕುವೆವು ಗುಡಿಸಿ.

### ೮೭೨. ಆಡಳಿತ ಅನಾರೋಗ್ಯ

ಚುಚ್ಚುಮದ್ದಿನ ಕಾರ್ಯಕ್ರಮ ಬಹಳ ಜೋರು
ಆದರೂ ಆಡಳಿತ ಆಗದು ಹುಷಾರು.
ಇಪ್ಪತ್ತು ವರುಷಗಳ ದುಷ್ಕರ್ಮದಿಂದ
ಅಂಟಿಕೊಂಡಿದೆ ರೋಗ ಬಿಡುವುದಿಲ್ಲೆಂದು.

### ೮೭೩. ಚುಟುಕುಗಳು

ಚುಟಕಗಳ ಗೀಚಿದೆನು ಮನಬಂದ ಹಾಗೆ
ಹುಟ್ಟಿದವು ಗುಬ್ಬಚ್ಚಿ ಗಿಣಿ ನವಿಲು ಕಾಗೆ
ಮಕ್ಕಳೆಂದರು : ನವಿಲು ಬೇಕು ಕುಣಿತಕ್ಕೆ
ಅಜ್ಜಿ ಎಂದಳು : ಕಾಗೆ ಬೇಕು ಶ್ರಾದ್ಧಕ್ಕೆ.

### ೮೭೪. ಕಲಬೆರಕೆ ತಿಂಡಿ

ಚುಟಕಗಳ ಛಂದಸ್ಸು ಬಹಳ ಪ್ರಾಚೀನ
ಮಾತನಾಡುವ ಶೈಲಿ ನೂತನ ವಿಧಾನ
ಇದು ಒಂದು ಕಲಬೆರಕೆ, ಮಿಶ್ರಣದ ತಿಂಡಿ.
ಬಾಯೊಳಗೆ ಹಾಕಿದರೆ ಹೋಗುವುದು ಥಂಡಿ.

### ೮೭೫. ಸಾಕಾಯ್ತು ಜೀವ

ಚುಟಕಗಳ ಬರೆಬರೆದು ಸಾಕಾಯ್ತು ಜೀವ
ಲೇಖನಿಯ ಹಿಡಿದು ಕೈ ನೋಡುತಿದೆ, ದೇವ.
ದೇವನೆಂದನು : ನಿನಗೆ ಏಕೆ ಈ ವ್ಯಾಧಿ
ಸೇಕಡಾ ತೊಂಬತ್ತು ಮುಕ್ಕುವವು ಬೂದಿ.

## ೮೭೬. ಹೊಸ ದಾರಿಯಲ್ಲಿ

ಚುಟಕಗಳ ಬರೆದು ಹುಡುಕಿದೆನು ಹೊಸ ದಾರಿ
ಹಿಂದೆಯೇ ಬಂದುಬಿಟ್ಟರು ಇವರು ಹಾರಿ,
ಈ ರೀತಿ ಬೇಲಿ ಹಾರಿದರೆ ಫಲವೇನು ?
ಲೋಕಾನುಭವ ಹಿಂಡಿದರೆ ಮಾತ್ರ ಜೇನು.

## ೮೭೭. ಚುಟಕುಗಳು

ಚುಟಕುಗಳು ಆಗಬೇಕೆನಿಸದರೆ ಹೊನ್ನು
ಬರೆಯಲಿಕೆ ಕುಳಿತಾಗ ಮುರಿಯಬಾರದು ಬೆನ್ನು
ಒಮ್ಮೊಮ್ಮೆ ಹೊನ್ನು ಎಂಬುದು ಆಗಿ ಟಿನ್ನು
ದುಗುಡದಲಿ ತಳಮಳಿಸುವುದು ನನ್ನ ಪೆನ್ನು.

## ೮೭೮. ಚುಟಕದ ರಚನೆ

ಚುಟಕದೊಳಗಿದ್ದರೂ ಬರಿ ನಾಕು ಸಾಲು
ಇದರ ರಚನೆಗೆ ಬೇಕು ಪೂರ್ಣ ಕಂಟ್ರೋಲು
ಕಂಟ್ರೋಲು ತಪ್ಪಿದರೆ ರಚನೆ ನೆಲಕುರುಳಿ,
ಚುಟಕವಾಗುವುದುಂಟು ಕಾಗದದ ಸುರುಳಿ.

## ೮೭೯. ಹಿಡಿದಿತ್ತು ಮುಳ್ಳು

ಚುಟಕದೊಳಗಿರಲಿಲ್ಲ ಸ್ವಲ್ಪವೂ ಸುಳ್ಳು
ಇದಕೆ ಕಾರಣ ನನಗೆ ಹಿಡಿದಿತ್ತು ಮಳ್ಳು.
ಮಳ್ಳುತನ ಮರೆಯಾಗಿ ನಾನಾದೆ ಜಾಣ
ಆಮೇಲೆ ಬರೆದದ್ದು ಬಿಡಬೇಕೆ ಪ್ರಾಣ ?

## ೮೮೦. ಚುಟಕದ ಶೈಲಿ

ಚುಟಕ ಬರೆದರೆ ಅದರ ಕೊನೆಗಿರಲಿ ಹರಿತ,
ಇದರಿಂದ ಎಚ್ಚರವಾಗುವನು ಜಡ–ಭರತ,
ಚುಟಕ ಬರೆದರೆ ಭಾಷೆಯೊಳಗಿರಲಿ ಮದ್ದು,
ಸಪ್ಪಳಕೆ ಓಡಿಹೋಗುವುದು ರಣಹದ್ದು.

## ೮೮೧. ಮಹಾಕವಿ ಹೇಳಿದ್ದು

ಚುಟಕ ಬರೆಯುವ ಕೆಲಸ ಅತ್ಯಂತ ಸಾದಾ.
ನಾಲ್ಕು ಪಂಕ್ತಿಗಳಲ್ಲಿ ಏನಿದೆ ಆಗಾಧ?
ಏನಾದರೂ ಗೀಚಿ ಹಚ್ಚಿಬಿಡಿ ಪ್ರಾಸ
ತಿಳ ಮಾತ್ರವೂ ಕವಿಯ ತಲೆಗಿಲ್ಲ ತ್ರಾಸ.

## ೮೮೨. ಸಂಸ್ಕಾರ

ಚುಟಕ ಬರೆಯುವ ಕವಿಗೆ ಬೇಕು ಸಂಸ್ಕಾರ
ಮತ್ತೆ ಲೇಖನಿಯೊಳಗೆ ತುಂಬಿರಲಿ ಖಾರ
ಕವಿ ಕುಳಿತು ಅನುಭವದ ಅಟ್ಟವನೇರಿ
ಲೇಖನಿಯ ತುದಿಯಿಂದ ಬರಬೇಕು ಜಾರಿ.

## ೮೮೩. ನಿನ್ನ ಪರಿವಾರ

ಚುಟಕಮ್ಮ, ಎಷ್ಟುಂಟು ನಿನ್ನ ಪರಿವಾರ?
ಲೆಕ್ಕ ಇಡಲಿಲ್ಲ, ಮಗು, ಲೆಕ್ಕ ತಲೆಭಾರ,
ರೊಕ್ಕ ಬೇಕಾದವರು ಇಡಬಹುದು ಲೆಕ್ಕ,
ಓ ಮಗನೆ, ನನ್ನ ಕೈ ಮೈ ಬಹಳ ಚೊಕ್ಕ.

## ೮೮೪. ಗಹನ ಪ್ರಶ್ನೆ

ಚುಟಕಮ್ಮ, ಕೇಳುವೆನು; ಈ ಪ್ರಶ್ನೆ ಗಹನ.
ಎಲ್ಲಾಗಬೇಕು ನೀ ಸತ್ತಾಗ ದಹನ?
ನಿಮಗೆ ಬೇಕಾದಲ್ಲಿ ಹಚ್ಚಿ ಬಿಡಿ ಬೆಂಕಿ.
ನನ್ನ ಕೈಗೆ ಇರಲಿ ಈ ವಕ್ರ ವಂಕಿ.

## ೮೮೫. ಭಕ್ತಿ ಮತ್ತು ಮುಕ್ತಿ

ಚುಟಕಮ್ಮ, ಚುಟಕಮ್ಮ, ನಿನಗುಂಟೆ ಭಕ್ತಿ?
ಮಾಯವಾಗಿದೆ ಭಕ್ತಿ, ಈಗುಂಟು ಯುಕ್ತಿ
ಈ ಯುಕ್ತಿಯಿಂದಲೇ ಹಾಕುವರು ಗಾಳ
ಗಾಳ ಹಾಕಿದ ಬಳಿಕ ಬಂದ ಬೇತಾಳ.

## ೮೮೬. ಚುಟಕಮ್ಮನ ಸಂಸಾರ

ಚುಟಕಮ್ಮ, ಚುಟಕಮ್ಮ, ನಿನ್ನ ಸಂಸಾರ
ಆಗಬಾರದು ವಿಮರ್ಶಕರ ತಲೆಭಾರ
ಹೌದು ಮಗ, ನಮ್ಮ ಕನ್ನಡದಲಿ ವಿಮರ್ಶೆ
ಒಮ್ಮೊಮ್ಮೆ ಆಗುವುದು ಬಲುದೊಡ್ಡ ಈರ್ಷೆ.

## ೮೮೭. ಚುಟಕಮ್ಮನ ಉತ್ತರ

ಚುಟಕಮ್ಮ, ಚುಟಕಮ್ಮ, ನಿನ್ನ ಹೆಸರೇನು ?
ನನಗೆನ್ನುವರು ಧಾರುಣಿಯ ಕಾಮಧೇನು.
ನಿಮಗೆ ಬೇಕಾದಂಥ ಉಡುಗೊರೆಯ ನೀಡಿ
ನಿತ್ಯವೂ ಗುಡಿಸಿ ಹೊರದೂಡುವೆನು ರಾಡಿ.

## ೮೮೮. ಮಂತ್ರಿ ಬಂದಲ್ಲಿ

ಚುಟಕಮ್ಮ, ಚುಟಕಮ್ಮ, ಮಂತ್ರಿ ಬಂದಲ್ಲಿ
ಅವನ ಸ್ವಾಗತಕೆ ನೀ ಬರಬೇಕು ಇಲ್ಲಿ.
ಈ ಗೊಡ್ಡು ಮುದುಕಿ ಏತಕೆ ಅಲ್ಲಿ ಜೀಯಾ ?
ಮಂತ್ರಿಗಳ ಸ್ವಾಗತಕೆ ಬೇಕು ಎಳೆಪ್ರಾಯ.

## ೮೮೯. ಚುಟಕಮ್ಮನ ಅವತಾರ

ಚುಟಕಮ್ಮ, ತುಸು ಕೇಳು; ನಿನ್ನ ಅವತಾರ.
ಅಪ್ರತಿಮವಾದದ್ದು, ಅದು ಬಹಳ ಖಾರ
ಹೌದು ಮಗು, ನಾನೊಮ್ಮೆ ಚಂಡಿಯಾಗಿದ್ದೆ
ಈಗ್ಗೆ ಮರಳಿದ್ದೇನೆ ಮಾಡಿ ತುಸಿ ನಿದ್ದೆ.

## ೮೯೦. ನೀನೊಂದು ಚೇಳು

ಚುಟಕಮ್ಮ, ನನ್ನ ಮಾತನು ಸ್ವಲ್ಪ ಕೇಳು,
ಸಿಟ್ಟಾಗಬೇಡೆಂಬೆ ; ನೀನೊಂದು ಚೇಳು.
ಹೌದು, ಮಗು, ನಿಜವಾಗಿ ನಾನೊಂದು ಚೇಳು
ಅಡ್ಡಹೋದರೆ ಕಡಿಮೆ ಎಂಬುದು ಹೇಳು.

## ೪೯೧. ಅಕ್ಕ ಮಹಾದೇವಿ

ಚುಟಕಮ್ಮ, ನಮ್ಮ ಕನ್ನಡ ಮಹಾದೇವಿ
ಯಾರ್‍ಯಾರು ಮರೆಯಲಾಗದ ಅಮರ ಜೀವಿ
ಹೌದು ಮಗು, ಹೌದು ಮಗು, ಈ ಮಾತು ಸತ್ಯ
ಅವಳಿಂದ ನಮ್ಮ ನುಡಿಯಾಯ್ತು ಕೃತಕೃತ್ಯ.

## ೪೯೨. ಚುಟಕಮ್ಮನ ಉತ್ತರ

ಚುಟಕಮ್ಮ, ನಿನಗಿಲ್ಲ ಮಂತ್ರಿಗಳ ದೋಸ್ತಿ
ಹೀಗಾಗಿ ಸಿಗಲಿಲ್ಲ ದಸರಾ ಪ್ರಶಸ್ತಿ
ಹೌದು, ಮಗು, ನೀನು ಹೇಳಿದ ಮಾತು ಸತ್ಯ.
ಉಂಟೇನು ನನಗೆ ಈ ಮೆಡಲಿನ ಅಗತ್ಯ.

## ೪೯೩. ವಾರಂಟು

ಚುಟಕಮ್ಮನಿಗೆ ತೆಗೆಯಬಹುದು ವಾರಂಟು.
ಈ ಸುದ್ದಿ ಹತ್ತು ಕಡೆಗೂ ಈಗ್ಗೆ ಉಂಟು.
ಅವಳು ಮಾಡುವ ಟೀಕೆಗಿಲ ಆಧಾರ.
ಎಂದು ಪ್ರಕಟನೆ ತೆಗೆಯಬಹುದು ಸರಕಾರ.

## ೪೯೪. ಚುಟಕಮ್ಮನ ಆವೇಶ

ಚುಟಕಮ್ಮನಿಗೆ ನಿನ್ನೆ ಬಂದು ಆವೇಶ.
ಸಾಕಾಗಲಿಲ್ಲ ಕನ್ನಡ ಶಬ್ದಕೋಶ
ಹೊಸ ಶಬ್ದಗಳ ರಚನೆ ಆಗಬೇಕೆಂದು
ಮಾಡಿಬಿಟ್ಟಳು ಆಜ್ಞೆ ಎಲೆ ಅಡಿಕೆ ತಿಂದು.

## ೪೯೫. ಚುಟಕಮ್ಮ

ಚುಟಕಮ್ಮ, ನಿನಗೇಕೆ ದೊರೆಯ ಬಹುಮಾನ ?
ಸಿಕ್ಕಿದರೆ ಸಾಕು ಜನಹೃದಯದಲಿ ಸ್ಥಾನ
ಹಿಡಿಯಬಾರದು ನೀನು ಯಾರ ದರಕಾರ
ಸತ್ಯಕ್ಕಿಂತಲೂ ಶ್ರೇಷ್ಠವಲ್ಲ ಸರಕಾರ.

## ೪೯೬. ಚುಟಕಮ್ಮನ ಉತ್ತರ

ಚುಟಕಮ್ಮ ನಿನಗವರು ಪದ್ಮಶ್ರೀ ನೀಡಿ
ಬಾಯಿ ಮುಚ್ಚಿದರೆ ನೀನಾಗುವೆಯ ಲೇಡಿ ?
ಇಲ್ಲ, ಮಗು ! ನನ್ನ ಬಾಯಿಗೆ ಹಾಕಿ ಬೀಗ
ಕಿಡಕಿ ಮುಚ್ಚುವುದು ಯಾರಿಂದಲೂ ಆಗ.

## ೪೯೭. ಚುಟಕಮ್ಮನ ಉತ್ತರ

ಚುಟಕಮ್ಮ, ನಿನಗೆ ಬೇಕೇನು ಸವಲತ್ತು ?
ಸವಲತ್ತಿನಿಂದ ನಾ ಹೋಗುವೆನು ಸತ್ತು
ನನ್ನ ಬಾಯಿಗೆ ಬೀಳುವುದು ದೊಡ್ಡ ಬೀಗ
ಆಮೇಲೆ ಬದುಕುವುದು ನನ್ನಿಂದ ಆಗ.

## ೪೯೮. ಕವಿತೆ

ಚುಟಕಮ್ಮ, ನಿನಗೆ ಸೇರುವ ಕವಿತೆಯುಂಟೆ ?
ಕವಿತೆಯೊಳಗಿರಬೇಕು ಮಾನಸಿಕ ತಂಟೆ
ಅಲ್ಲೋಲ ಕಲ್ಲೋಲವಾಗಿರಲಿ ಮಾತು
ಎಲ್ಲರೂ ಕೇಳುವರು ಒಂದೆಡೆಗೆ ಕೂತು.

## ೪೯೯. ಚುಟಕಮ್ಮನ ಆಹಾರ

ಚುಟಕಮ್ಮ, ನೀನು ತಿನ್ನುವುದೇನು ನಿತ್ಯ ?
ಭರ್ತಿ ಮೆಣಸಿನ ಕಾಯಿ, ಆಮೇಲೆ ಪಥ್ಯ,
ಮಧ್ಯಾಹ್ನ ಕುಡಿಯುವೆನು ಸ್ವಲ್ಪ ಹುಳಿಸಾರು
ಮತ್ತೆ ಆಗಾಗ್ಗೆ ತುಸು ಮೂಲಂಗಿ ಬೇರು.

## ೫೦೦. ಚುಟಕಮ್ಮ ಹೇಳಿದ್ದು

ಚುಟಕಮ್ಮ, ನೀನು ಹಳ್ಳಿಗೆ ಹೋಗಬೇಕು
ಹಳ್ಳಿಯಲ್ಲೂ ಗ್ರಾಮಪಂಚಾಯ್ತು; ಸೀಕು
ಎಲ್ಲಿ ಹೋದರು, ಮಗನೆ, ಭಾರತವು ಒಂದೆ.
ಪ್ರತಿಯೊಂದು ಕಡೆಗೆ ನಡೆದಿದೆ ಅದೇ ದಂಧೆ.

### ೯೦೧. ನೋಡಲಿಕೆ ಸಿನಿಮಾ

ಚುಟಕಮ್ಮ, ಬರ್ತಿಯಾ ನೋಡಲಿಕ ಸಿನೆಮಾ ?
ಓ ಮಗನೆ, ಏನಂತಿ ? ಹೇ ರಾಮ ರಾಮಾ !
ಕುಳಿತಲ್ಲಿಯೇ ನೋಡುತ್ತಿದ್ದೇನೆ, ಆಮಮಾ !
ಅಖಿಲ ಭಾರತವೆನುವುದೆ ದೊಡ್ಡ ಸಿನೆಮಾ !

### ೯೦೨. ಚುಟಕಮ್ಮನ ಉತ್ತರ

ಚುಟಕಮ್ಮ ಬೇಕೇನು ಅಕೆಡೆಮಿಯ ಪ್ರೈಜು ?
ಚಿಕ್ಕದಾಗಿದೆಯಲ್ಲ ನನ್ನ ಮೈ ಸೈಜು !
ನಿತ್ಯವೂ ನಾನೆಷ್ಟು ಸುರಿಸಿದರು ಬೆವರು
ಮೆಚ್ಚುವರೆ ಗಿಡ್ಡ ಹೆಂಗಸಿಗೆ ದೊಡ್ಡವರು.

### ೯೦೩. ಕೇಸರೀ ಭಾತು

ಚುಟಕಮ್ಮ, ಬೇಕೇನು ಕೇಸರಿಭಾತು !
ಎಲ್ಲರೂ ತಿನ್ನೋಣ ಒಂದೆಡೆಗೆ ಕೂತು.
ಬೇಡ ಮಗು, ಕಳ್ಳಸಂತೆಗಳ ಸಣ್ಣಕ್ಕಿ
ಬದುಕುವೆನು ತಿಂದು ಸಾಕಷ್ಟು ಅವಲಕ್ಕಿ.

### ೯೦೪. ಬಸ್ಸಿನಲ್ಲಿ ಕೇಳಿದ್ದು

ಚುಟಕಮ್ಮ, ಹೇಳುವುದು ಸುಳ್ಳಲ್ಲ ನೋಡಿ !
ಈ ಪ್ರಜಾರಾಜ್ಯದಲಿ ನಾನಾ ಲಬಾಡಿ.
ಪ್ರತಿಯೊಂದು ಮಾತಿಗೂ ನೆಹರೂಜಿ, ಗಾಂಧಿ
ಇವರ ಹೆಸರಲಿ ಕಟಪ ನಾಟಕದ ನಾಂದಿ.

### ೯೦೫. ಚುಟಕ

ಚುಟಕವಾಗಿರಬೇಕು ಅನವರತ ಸತ್ಯ
ಎಂದಿಗೂ ಆಗಬಾರದು ಕವಿಯ ನೃತ್ಯ
ನಾಲ್ಕು ಪಂಕ್ತಿಗಳಲ್ಲಿ ನಲವತ್ತು ಮೂಡಿ
ಮಾತುಗಳು ಅರಳಿದರೆ ಅದಕಿಲ್ಲ ಧಾಡಿ.

### ೯೦೬. ನೋಡಲಿಕೆ ಸಿನಿಮಾ

ಚುಟಕವಾಗಿರಲಿ, ಸಖಿ ಡೊಂಕಾದ ವಂಕಿ.
ಈ ವಂಕಿಯೊಳಗಿರಲಿ ಕೆಂಡಗಳ ಬೆಂಕಿ
ಯಾವಾಗಲೂ ಉರಿಯುತಿರಬೇಕು ಕೆಂಡ
ಉರಿಯದಿದ್ದರೆ ನನ್ನ ನುಡಿ ಬ್ರಹ್ಮದಂಡ.

### ೯೦೭. ಸಾಹಿತಿಯ ಬಾಣ

ಚುಟಕವೆಂಬುದು ಸಾಹಿತಿಯ ಬಿರುಸು ಬಾಣ
ಮರ್ಮ ಭೇದಿಸಿದರೂ ಉಳಿಯುವುದು ಪ್ರಾಣ,
ಇದು ಅಹಿಂಸಾವಾದಿಗಳ ಮೂಲ ಆಸ್ತಿ
ಹೀಗೆಂದು ಬಾಪೂಜಿ ಕೊಟ್ಟರು ಪ್ರಶಸ್ತಿ.

### ೯೦೮. ಚುಟಕ

ಚುಟಕ ಸಣ್ಣದಾರೂ ಬರೆಯುವುದು ಕಷ್ಟ
ಮಾತು ತಪ್ಪಿದರೆ ಕವಿಯಾಗುವನು ಭ್ರಷ್ಟ
ಬರಿ ನಾಲ್ಕು ಪಂಕ್ತಿಯಲಿ ನಾನ್ನೂರು ತುಂಬಿ
ಕಂಪು ಬೀರಿದರೆ ಹಾರಾಡುವುದು ದುಂಬಿ.

### ೯೦೯. ಕಿರಿದು

ಚುಟಕ ಸಣ್ಣಾದರೂ ಶಕ್ತಿ ಹಿರಿದಾಗಿ
ಮೂಡಿಬಂದರೆ ಇದಕೆ ಅನ್ನುವರು ರಾಗಿ
ನುಡಿ ಚಿಕ್ಕದಾದರೂ ಕಸುವು ಬೇಕೆಂದು
ಮನಮುಟ್ಟಿ ಹರಸುವಳು ನುಡಿಯ ಜಗದಂಬೆ.

### ೯೧೦. ಚುಟಕ ಸಾಮ್ರಾಟ

ಚುಟಕ ಸಾಮ್ರಾಟನಾಗಲು ಹೊರಟ ವೀರ
ಬರೆದು ಹಾಕಿದನು, ಸಖಿ ಗಹನ ಗಂಭೀರ
ಸಾಮ್ರಾಜ್ಯ ಅರಗಳಿಗೆಯಲಿ ಕುಸಿದು ಬಿತ್ತು
ಕಾಗದದ ಮೇಲೆ ಮೂಡಿತು ಒರಲೆ ಹುತ್ತು.

### ೯೧೧. ಚಿಟ್ಟೆಯ ಉತ್ತರ

ಚಂದ ಚಂದದ ಬಣ್ಣಬಣ್ಣಗಳ ಚಿಟ್ಟೆ
ಎಲ್ಲಿ ಸಿಗುವುದು ನೀನು ಧರಿಸಿರುವ ಬಟ್ಟೆ?
ನೋಡಿಲ್ಲವೇನು ಗ್ರಾಮೋದ್ಯೋಗ ಕೇಂದ್ರ?
ಅಲ್ಲಿಯೇ ಬಟ್ಟೆ ಹೊಲಿಸುವನು ದೇವೇಂದ್ರ.

### ೯೧೨. ಅಂಜಿಕೆ

ಚೇತನವನೆಲ್ಲ ಕಳಕೊಳ್ಳುವನು ಭೀರು.
ಚಳಿಗಂಜಿ ಹಿಮವಾಗುವುದು ಹರಿವ ನೀರು
ಸುಮ್ಮನಿದ್ದರೆ ನೀರು ಹಾರಲಿಕೆ ಅಂಜಿ,
ಪುಟಿಯಬಹುದೇನು ಜೀವನದ ಕಾರಂಜಿ?

### ೯೧೩. ಜಗದಂಬೆಗಿಂತ

ಜಗದಂಬೆಗಿಂತಲೂ ಹೆಂಡತಿಯೆ ಶ್ರೇಷ್ಠ
ಮಡದಿ ಮುನಿದರೆ ನಮಗೆ ವಿಪರೀತ ಕಷ್ಟ
ಪತಿರಾಯನಿಗೆ ಸಿಗದು ಸರಿಯಾದ ತುತ್ತು
ಮೇಲಾಗಿ ಸಿಗಲಾರ ಸವಿಯಾದ ಮುತ್ತು

### ೯೧೪. ಕಾಗೆಯ ಪ್ರಕಟನೆ

ಜಗದ ಸಂಗಡ ಜಗಳ ತೆಗೆದವನು ಜಾಣ
ಜಗವ ಚುಂಬಿಸಿದವನು ಕೊಡಬೇಕು ಪ್ರಾಣ
ಯೇಸುವಿನ ಕಾಲದಲ್ಲೂ ಇತ್ತು ಹೀಗೆ
ಎಂದು ಪ್ರಕಟಿಸಬೇಕೆ, ಆ ಹಾಳು ಕಾಗೆ.

### ೯೧೫. ಕೋರ್ಟಿನ ವ್ಯಾಜ್ಯ

ಜಗಳವಾಡಬೇಡವ್ವ, ಸಾಕಾಯ್ತು ತಂಟೆ
ಆ ನೆಲದ ವಿಸ್ತಾರ ಬರಿ ಅರ್ಧ ಗುಂಟೆ
ಕೋರ್ಟಿನಲಿ ಖರ್ಚಾದ ಹಣ ಸಾವಿರಾರು
ಈ ನೆಲದ ಕಿಮ್ಮತ್ತು ಭರ್ತಿ ಇನ್ನೂರು.

### ೯೧೬. ಜಗಳ

ಜಗಳಾಡಿ ಜಗಳಾಡಿ ಕೊನೆಗೆ ಒಪ್ಪಂದ
ಮಾಡಿಕೊಂಡರೆ, ಮಡದಿ, ಜಗಳವೂ ಚಂದ
ಈ ರೀತಿ ಪ್ರತಿವಾರ ಜಗಳಾಡಿ ನೀನು
ಒಪ್ಪಂದ ಮಾಡಿದರೆ ತುಟಿಗೆ ಹೆಜ್ಜೇನು.

### ೯೧೭. ನನ್ನ ಹೂವು

ಜನತಾ ಜನಾರ್ಧನನ ಸೇವೆಯೇ ಹೂವು
ಹೂವು ಅರಳಿದ ಬಳಿಕ ಬಾಡುವುದು ಬೇವು
ಈ ಹೂವಿನಿಂದಲೇ ದೇಶದುದ್ಧಾರ
ಸೇವೆಗಿಂತಲು ಶ್ರೇಷ್ಠವಲ್ಲ ಅಧಿಕಾರ !

### ೯೧೮. ಒಂದು ಘೋಷಣೆ

ಜನತೆಯಲಿ ಕಂಗೊಳಿಸಿದರೆ ಸದಾಚಾರ
ಪೂರ್ಣ ಪರಿಶುದ್ಧವಾಗುವುದು ಸರಕಾರ
ಆಮೇಲೆ ಅಧಿಕಾರಿಗಳಿಗಿಲ್ಲ ಲಂಚ
ಮುಖ್ಯಮಂತ್ರಿಗೆ ಮಾತ್ರ ಸಿಗಬಹುದು ಕೊಂಚ.

### ೯೧೯. ಬಹುಮುಖ ಪ್ರಗತಿ

ಜನ ಪ್ರಗತಿ ಎನ್ನುವುದು ಮನೆ ಪ್ರಗತಿಯಾಗಿ
ಮಾಳಿಗೆಯ ಮನೆ ಕಟ್ಟಿಸಿದರು ಸೊಗಸಾಗಿ,
ಈ ರೀತಿ ಖರ್ಚಾಗಬೇಕು ಹಣಕಾಸು
ಪ್ರಗತಿ ಬಹುಮುಖವಾಗಿ ಸೂಸುವುದು ಲೇಸು.

### ೯೨೦. ಆದಿ ಪಂಪನಿಗೆ

ಜನ್ಮ ಜನ್ಮಾಂತರಕೆ ಬನವಾಸಿ ನಾಡು
ನಂದನದಿ ಮರಿದುಂಬಿಯನ್ನಾಗಿ ಮಾಡು
ಎಂದು ಹಾಡಿದ ನಿನ್ನ ಆ ಹೃದಯದೊಲುಮೆ
ಇಂದಿಗೂ ನಮ್ಮ ನಾಡಿನ ಮಹಾ ಮಹಿಮೆ.

### ೯೨೧. ಕಾನೂನು

ಜನರ ಹಿತಕಾಗಿ ಮಾಡಿದರು ಕಾನೂನು
ಅಧಿಕಾರಿಗಳ ಕೈಲಿ ನೂತನ ಬಲೂನು
ಕಾಯಿದೆಯ ಹೆಸರಿನಲಿ ಶುರುವಾಯ್ತು ಪೀಡೆ
ಎರಡು ಕೈಯಿಂದಲೂ ನುಂಗಿದರು ಪೇಡೆ.

### ೯೨೨. ಸಂಖ್ಯೆ

ಜನಸಂಖ್ಯೆ ಸದ್ಯ ಹೆಚ್ಚಾಗಿದ್ದರಿಂದ
ಮಂತ್ರಿಗಳ ಸಂಖ್ಯೆಯೂ ಹೆಚ್ಚು ಬೇಕೆಂದ
ಪ್ರತಿಯೊಂದು ಲಕ್ಷ ಜನತೆಗೆ ಮಂತ್ರಿಯೊಬ್ಬ
ಆಗಿಬಿಟ್ಟರೆ ಬೆಂಗಳೂರಿನಲಿ ಹಬ್ಬ.

### ೯೨೩. ಮಂತ್ರಿಗಳ ಭಾಷಣ

ಜನಸೇವೆ ಗೈದು ಪ್ರತಿಯೊಬ್ಬ ನಾಗರಿಕ
ನಿತ್ಯ ಹೆಚ್ಚಿಸಬೇಕು ಭಾರತದ ತೂಕ
ನಿಮ್ಮ ಮೇಲೆಯೆ ಉಂಟು ಈ ಮಹಾಕಾರ್ಯ
ಇದು ನನ್ನ ಭಾಷಣದ ಮುಖ್ಯ ತಾತ್ಪರ್ಯ.

### ೯೨೪. ಜನಸೇವೆ

ಜನಸೇವೆಯಲಿ ಮುಳುಗಿ ಮಾಡಲು ತಪಸ್ಸು
ತಪ್ಪಿಹೋಯಿತು ಪಾಪ ಪ್ರತಿಯೊಂದು ಬಸ್ಸು
ರಾಜಕಾರಣದಲ್ಲಿ ಮಾಡಲು ಪ್ರವೇಶ
ಸರಕಾರಿ ಸೌಧದಲಿ ಮೆಚ್ಚಿದನು ಈಶ.

### ೯೨೫. ಜೀವನದ ಗುರಿ

ಜಮಖಾನೆಯೂ ಬೇಡ, ನನಗಿರಲಿ ನೆಲವು
ಸೋಲಿನಲಿ ಸುಖಿಸುವೆನು, ಬೇಕಿಲ್ಲ ಗೆಲವು
ನನಗೆ ಬೇಕಾದದ್ದು ಮಾನವ ಪ್ರಯತ್ನ
ಸಿಗಬಹುದು ನಾಗರಾಜನ ಫಣಿಯ ರತ್ನ

## ೬೨೬. ಜಯಲಕ್ಷ್ಮೀ ಅಮ್ಮಣ್ಣಿ

ಜಯಲಕ್ಷ್ಮೀ ಅಮ್ಮಣ್ಣಿ ಹಿಡಿದಾಗ ಪೆನ್ನು
ಸತ್ಯ ಹೊರಸೂಸುವುದು ; ಇದಕೆಂಬೆ ಹೊನ್ನು
ಈ ಹೊನ್ನಿನಿಂದ ಮಾಡಿದರೆ ಆಭರಣ
ಆಕಾಶ ಇರುವನಕ ಅದಕಿಲ್ಲ ಮರಣ.

## ೬೨೭. ಮೀನುಗಾರ

ಜಲಧಿ ಸಾಮ್ರಾಟನಿಗೆ ಮುಡಿಪಿಟ್ಟು ಪ್ರಾಣ
ಬೀಜ ಬಿತ್ತದೆ ಬೆಳೆಯ ಕೊಯ್ಯುವನು ಜಾಣ
ಕಡಲರಾಯನಿಗೆ ಕೊಡಬೇಕಿಲ್ಲ ಗೇಣಿ
ತಂದ ಬೆಳೆ ತಿನಲಾರ ಜೋಯಿಸರ ಮಾಣಿ.

## ೬೨೮. ಶ್ರೀರಂಗರು ಹೇಳಿದ್ದು

ಜಹಗೀರು ಬಿಟ್ಟ ಕಲಿ ನಾನೆ ಶ್ರೀರಂಗ
ನನ್ನ ಅಂಗಳದೊಳಗೆ ನರನೆಂಬ ಮಂಗ.
ಈ ಮಂಗನಿಗೆ ಹಾಕಿ ತರತರದ ವೇಷ
ಕಸರತ್ತು ಕಲಿಸಿದರೆ ನನಗೆ ಸಂತೋಷ.

## ೬೨೯. ದಾಸಾಳ

ಜಾಜಿ ಮಲ್ಲಿಗೆ ಬಕುಲ ಸೇವಂತಿಯಂತೆ
ದಾಸಾಳಕೆಲ್ಲಿಹುದು ಪರಿಮಳದ ಚಿಂತೆ ?
ಚಿಂತೆಯಿಲ್ಲದ ಹೂವು ಅರಳಿ ಪ್ರತಿನಿತ್ಯ
ಹನ್ನೆರಡು ತಿಂಗಳೂ ಸಾರುತಿದೆ ಸತ್ಯ.

## ೬೩೦. ಸುಧಾರಣೆ

ಜಾಜಿ, ಮಲ್ಲಿಗೆಗೆ ಸಖಿ, ಅತ್ತರನು ಹಚ್ಚಿ,
ಹೊಸ ಸುಧಾರಣೆಯೆಂದು ಹೇಳಿದರು ಬಿಚ್ಚಿ
ಇಂದ್ರಚಾಪವ ಹಿಡಿದು ಅಗಸವನೇರಿ
ನಕ್ಷತ್ರಗಳಿಗೆ ಹಚ್ಚಿದರು ಜರತಾರಿ.

## ೯೩೧. ಹೂವುಗಳು

ಜಾಜಿ ಮಲ್ಲಿಗೆ ಸುರಗಿ ಸೇವಂತಿ ಸೇರಿ
ಗಮಗಮಿಸುತಿದೆ, ಮಗನೆ, ನಮ್ಮೂರ ಕೇರಿ,
ಬಕುಲ ಸಂಪಗೆ ಕಮಲ ಬರಬೇಕು ಇನ್ನು.
ಹೂ ಗುಲಾಬಿಯು ಸೇರಿ ಜೀವಂತ ಹೊನ್ನು.

## ೯೩೨. ಕಾನೂನು

ಜಾಣತನದಿಂದ ಮುರಿಯದೆಯೆ ಕಾನೂನು
ದಾಸ್ತಾನು ಮಾಡಿದರು ಭರ್ತಿ ಸಾಮಾನು
ಕಾನೂನು ಮಾಡಿದವರೂ ಕೊನೆಗೆ ಸೋತು
ಕಾಲ ಕಳೆದರು ಪಾಪ ಕುರ್ಚಿಕಲಿ ಕೂತು.

## ೯೩೩. ಜಾಣತನ ಹೆಚ್ಚಾಗಿ

ಜಾಣತನ ಹೆಚ್ಚಾಗಿ ಹಾಳಾಯ್ತು ಊರು.
ಪ್ರತಿಯೊಂದು ಗಿಡ ಮರಕೆ ಸಡಿಲಾಯ್ತು ಬೇರು
ಸಂಚೆಯಾಗುವ ತನಕ ತರತರದ ವಾದ
ನಡು ನಡುವೆ ಚಹದ ಅಂಗಡಿಗಳಿಗೆ ಸೀದಾ.

## ೯೩೪. ಜಾತಕವ ನೋಡಿದರೆ

ಜಾತಕವ ನೋಡಿದರೆ ಪಾತಕದ ವಿವರ
ತಿಳಿಯುವುದು ಎಂದು ನುಡಿಯಿತು ಒಂದು ಭ್ರಮರ
ಪಾತಕವ ಮಾಡಿದರೆ ದೇವರಿಗೆ ಲಂಚ
ನೀಡಿದರೆ ಕೃತಿಗಿಳಿಯುವುದು ನಿಮ್ಮ ಹೊಂಚ.

## ೯೩೫. ಸೆಟ್ಟಿಯ ದಿಗ್ವಿಜಯ

ಜಾರಿಯಲಿ ಬಂದರೂ ಬೆಲೆಯ ಕಂಟ್ರೋಲು
ನಮ್ಮ ಸೆಟ್ಟಿಗೆ ಮಾತ್ರ ಬರಲಿಲ್ಲ ಸೋಲು
ಕಂಟ್ರೋಲಿನೊಳಗಿತ್ತು ಒಂದೆರಡು ರಂಧ್ರ
ಜಾರಿಕೊಂಡನು ನಮ್ಮ ಸೆಟ್ಟಿ ದೇವೇಂದ್ರ.

## ೯೩೬ ಸರಕಾರಿ ಕಾನೂನು

ಜಾರಿಯೊಳಗಿದ್ದರೂ ನೂರು ಕಾನೂನು
ಕೈ ತೊಳೆಯಲಿಕೆ ಬೇಕು ನಿತ್ಯ ಸಾಬೂನು
ಬೆರಳಿಗಂಟಿದ ಜಿಡ್ಡು ಉಗುರೊಳಗೆ ಸೇರೆ
ಸಾಬೂನಿನುಪಯೋಗವು ವ್ಯರ್ಥ ನೀರೆ.

## ೯೩೭. ಜೀವಂತವಿದ್ದಾಗ

ಜೀವಂತವಿದ್ದಾಗ ಉಂಟು ಸತ್ತವರು.
ಸತ್ತರೂ ಜೀವಂತವಿದ್ದವರು ಕೆಲರು.
ಅಖಿಲ ಮನುಕುಲದೊಳಗೆ ಇವು ಎರಡು ಭೇದ
ಉಳಿದ ಭೇದಗಳೆಲ್ಲ ಬರಿ ಪೊಳ್ಳು ವಾದ.

## ೧೩೮. ರಾಜಕಾರಣಿಗಳು

ಜೀವಂತವಿದ್ದಾಗ ಪೃಥವಿ ಸಾಕಾಗ
ಸತ್ತ ಕೂಡಲೆ ಸಾಕು ಮೂರು ಮೊಳ ಜಾಗ
ಮಸಣ ಕಿರಿದಾದರೂ ಇವರೆಲ್ಲರನ್ನು
ಮೂರು ನಿಮಿಷದ ಒಳಗೆ ಸುಡಬಹುದು ಅನ್ನು.

## ೯೩೯. ದೊಡ್ಡವರು

ಜೀವಂತವಿದ್ದಾಗ ಸತ್ಕಾರ ಕೂಟ
ಸತ್ತ ಕೂಡಲೆ ಇವರ ಸ್ಮಾರಕದ ಕಾಟ
ಎಂದಿಗೂ ನಮಗೆ ತಪ್ಪುವುದಿಲ್ಲ ರಗಳೆ
ಸಾಮಾನ್ಯನಾಗಿ ಬಾಳುವುದೊಳಿತು, ಮಗಳೆ.

## ೯೪೦. ಕವಿಯ ಸಾವು

ಜೀವಂತವಿದ್ದಾಗಲೇ ಸತ್ತುಬಿದ್ದೆ
ಇದಕೆನ್ನುವರು ಜನರು ಕಬ್ಬಿಗನ ನಿದ್ದೆ
ಕೆಲವು ಕವಿಗಳಿಗೆ, ಮಗು, ಎರಡು ಸಲ ಸಾವು
ಮೊದಲ ಸಾವಿಗೆ ಆರಿ ಹೋಗುವುದು ಕಾವು.

### ೯೪೧. ಜೀವಂತವಿದ್ದಾಗ

ಜೀವಂತವಿದ್ದಾಗ ಹಾಕುವರು ಕೊಂದು
ಸತ್ತಾಗ ಪೂಜೆ ಮಾಡುವರು ಹೂ ತಂದು.
ನೋಡಲಿಲ್ಲವೆ ನೀನು ನಾಗರನ ಕಲ್ಲು ?
ನಿಜ ನಾಗರವ ಕಂಡು ಹೊಡೆಯುವರು ಗುಲ್ಲು.

### ೯೪೨. ಜೀವನ

ಜೀವನವೆ ಕನಸೆಂದು ತಿಳಿದೊಡನೆ ಕವಿಯು
ಮಣ್ಣು ಹಾಸಿಗೆಯಾಗಿ ಮಲಗಿತ್ತು ಬುವಿಯು
ನರಜನ್ಮ ನೀರ್ಗುಳ್ಳೆಯೆಂದು ತಿಳಿದಾಗ
ಕಡಲ ತೆರೆಗಳು ಜಿಗಿದು ಹಾಕಿದವು ಲಾಗ.

### ೯೪೩. ಆ ಮುತ್ತು

ಜೇನಿಗೂ ಸವಿಯಲ್ವೆ ನಿನ್ನ ಸವಿ ಮುತ್ತು ?
ಸವಿದವರು ನೀವಲ್ವೆ ? ನನಗೇನು ಗೊತ್ತು ?
ಜೇನಿಗೂ ರುಚಿಯೆಂಬೆ ಇನ್ನೊಂದು ಪಟ್ಟು
ತಣಿಸಬೇಕೆನ್ನವೆನು ಆಗಾಗ್ಗೆ ಕೊಟ್ಟು.

### ೯೪೪. ವಿಜ್ಞಾನಿಗಳು

ಜೇನಿನಲಿ ಅಂಟು ದ್ರವ, ನೀರೆಷ್ಟು ? ಎಂದು
ವಿಜ್ಞಾನಿಗಳು ವಾದ ಹೂಡಿದರು ಅಂದು,
ನೊಣ ಬಂದು ಹೀಗೆ ಹೇಳಿತು; ನನ್ನ ಕಂದಾ,
ಅಂಟಲ್ಲ, ನೀರಲ್ಲ, ಪೂರ್ಣ ಮಕರಂದ.

### ೯೪೫. ತುಟಿ ಜೇನು

ಜೇನು ತುಪ್ಪದ ಸವಿಗೆ ನಿನ್ನ ತುಟಿ ಜೇನು
ತುಲನೆ ಮಾಡುವುದು, ಸಖಿ, ತಪ್ಪಲ್ಲವೇನು ?
ನಿನ್ನ ತುಟಿಗಿರುವ ಸವಿ ಜೇನಿಗೂ ಇಲ್ಲ
ಇದಕೆನ್ನುವರು ಗೆಳತಿ ಪ್ರೇಮಿಗಳ ಬೆಲ್ಲ.

### ೯೪೬. ಜೇನುತುಪ್ಪ

ಜೇನು ಹುಳು ದುಡಿಯುವುದು ಪ್ರತಿಯೊಂದು ದಿವಸ
ಒಂದು ದಿನ ತಿನ್ನುವುದೆ ಮಾನವನ ಕೆಲಸ,
ಈ ಪರಿಸ್ಥಿತಿಗೆ ಏನೆನ್ನುವರು, ಕಿಟ್ಟು?
ಇದಕೆನ್ನುವರು ಅರ್ಥಮಂತ್ರಿ ಬಜೆಟ್ಟು.

### ೯೪೭. ದಾಸ್ತಾನು

ಜೇನ್ನೊಣವು ಎಷ್ಟು ಮಾಡಿದರು ದಾಸ್ತಾನು
ಊರ ಮಕ್ಕಳ ನಾಲಗೆಯ ಮೇಲೆ ಜೇನು
ದೊಡ್ಡ ವರ್ತಕರು ಮಾಡಿದರೆ ದಾಸ್ತಾನು
ಊರ ಸಾಮಾನ್ಯರಿಗೆ ಪೂರ್ಣ ಲುಕ್ಸಾನು.

### ೯೪೮. ಜೇಲುಮನೆ

ಜೇಲುಮನೆ ಸಣ್ಣ ಕಳ್ಳರಿಗಾಗಿ ಉಂಟು.
ದೊಡ್ಡ ಕಳ್ಳರಿಗೆ ಒಳಗಿಂದೊಳಗೆ ಗಂಟು
ಇದಕೆನ್ನುವರು, ಮಗನೆ, ಬಂಡವಾಳಶಾಹಿ
ಕೋಟಿ ದಶಕೋಟಿ ಶತಕೋಟಿ ರೂಪಾಯಿ.

### ೯೪೯. ದೇಶಪಾಂಡೆ ಗಂಗಾಧರ ರಾಯರು ಹೇಳಿದ್ದು

ಜೈಲಿಗೊಯ್ದರು ನನ್ನ ಕಟ್ಟಿ ಹೆಡಮುರಿಗೆ,
ಸಿಂಹಗರ್ಜನೆ ಮಾಡಿದೆನು ಕೊನೆಯ ವರೆಗೆ
ಸಿಂಹ ಮರೆಯಾದ ಕೂಡಲೆ ಕಾಡಿನಿಂದ,
ನಾಡೆಲ್ಲ ತುಂಬಿಹೋಯಿತು ನರಿಗಳಿಂದ.

### ೯೫೦. ವಿಶ್ವೇಶ್ವರಯ್ಯನವರಿಗೆ

ಜೊತೆಯಲ್ಲಿ ನೀನಿರಲು, ವಿಶ್ವೇಶ್ವರಯ್ಯ
ಭಗವಂತನಿಗೆ ಕೂಡ ಮತ್ತಷ್ಟು ಧೈರ್ಯ
ಕ್ಷಾರ ಸಾಗರದಿಂದ ಸವಿ ನೀರ ನಾಲೆ
ಧರೆಯ ಕೊರಳಿಗೆ ಕೋಟಿ ತಾರೆಗಳ ಮಾಲೆ.

## ೯೫೧. ಒಂದು ಪರಿಚಯ

ಜೊತೆಗೆ ಬರುವಾಗ ಇವಳನು ಕರೆದು ತಂದೆ
ಇವಳ ಮಾವಂದಿರುಗಳೇ ನನ್ನ ತಂದೆ.
ಅರ್ಥವಾಗದು ನನಗೆ ತುಸು ಬಿಡಿಸಿ ಹೇಳಿ
ನನ್ನ ಹೆಂಡತಿ ಇವಳು. ಹೆಸರು ಮಂಕಾಳಿ.

## ೯೫೨. ಅರ್ಜಂಟು ಫೈಲು

ಜೋರಾಗಿ ಚೀಟಿ ಹಚ್ಚಿದರು ಅರ್ಜಂಟು
ಅರ್ಜಂಟು ಎನ್ನುವುದು ದಿವಸ ನೂರೆಂಟು
ಇಲ್ಲಿಂದ ಅಲ್ಲಿಂದ ಆ ಕಡೆಗೆ ಓಡಿ
ಕೊನೆಗೆ ನೋಡಿದರೆ ಆ ಫೈಲು ಗತಿಗೇಡಿ

## ೯೫೩. ಇವನ ಹಾರಾಟ

ಜೋರು ಜೋರಾಗಿ ಹಾರಾಡಿದನು ನಿನ್ನೆ
ಈ ಹೊತ್ತು ಮುಂಜಾನೆ ಸಂಪೂರ್ಣ ಸೊನ್ನೆ
ಈ ಪರಿಸ್ಥಿತಿಗೆ ಕಾರಣವೇನು ಗೊತ್ತಾ?
ಮಂತ್ರಿಪದ ಮುಗಿದೊಡನೆ ಸಂಪೂರ್ಣ ಸತ್ವ

## ೯೫೪. ಕಾವ್ಯದ ಭಾಷ್ಯಕಾರನಿಗೆ

ಟೀಕೆ-ಟಿಪ್ಪಣೆ ಎನ್ನುವುದು ಹಾಳು ಕೆಮ್ಮು.
ಭಾಷ್ಯಕಾರನಿಗೆ ಉಬ್ಬಸ ಮತ್ತು ದಮ್ಮು.
ಕಾವ್ಯರಾಶಿಯ ಬದಿಗೆ ಔಷಧದ ಸೀಸೆ.
ಆದರೂ ಮುಗಿದಿಲ್ಲ ಆತನ ಪಿಪಾಸೆ!

## ೯೫೫. ನೊರೆ

ಟೂತ್‌ಪೇಸ್ಟಿನಲಿ ಅಡಗಿಕೊಂಡಷ್ಟು ಬುರುಗು
ತನ್ನೊಳಗೆ ಇಲ್ಲೆಂದು ಶರಧಿಗೂ ಕೊರಗು
ಕುಣಿಯುವುದು ಬಾಯೊಳಗೆ ಧವಳ ನೊರೆ ಭರ್ತಿ
ನೊರೆಯಲ್ಲಿಯೇ ಉಂಟು ಮಾನವನ ಕೀರ್ತಿ.

## ೯೫೬. ಕಾಗೆ

ಠಕ್ಕುತನದಲಿ ಕಾಗೆಯೇ ಬಹಳ ಶ್ರೇಷ್ಠ
ಇದಕಾಗಿ ಮನುಜನಿಗೆ ಅದು ಬಹಳ ಇಷ್ಟ
ಶ್ರಾದ್ಧದಲಿ ಈ ಠಕ್ಕು ಜಾತಿಗೆ ಮಾನ.
ಸತ್ತವರು ತಿನ್ನುವರು ; ಬೇಡ ಅನುಮಾನ.

## ೯೫೭. ಚಂದ್ರಮುಖಿಯವರು

ಠೀವಿಯಲಿ ಸಿಂಗರಿಸಿಕೊಂಡರು ಕೂಡ
ಚಂದ್ರಮುಖಿಯರ ಮೋರೆಯನು ನೋಡಬೇಡ.
ವಿಜ್ಞಾನಿಗಳ ಬಾಣ ಚಂದ್ರನನು ಇರಿದು
ಚಂದ್ರಮುಖಿಯರ ಮೂಗು ಹೋಗಿಹದು ಹರಿದು.

## ೯೫೮. ರಾಜಕೀಯ ಗಾಳಿಪಟ

ಡಂ ಡುಮ್ಮ ಡಂ ಡುಮ್ಮು ಬಾರಿಸಲು ಡೋಲು
ಉದ್ದವಾಯಿತು ರಾಜಕಾರಣದ ನೂಲು
ಗಾಳಿಪಟ ತೇಲೆಬಿಟ್ಟರು ನೂಲಿನಿಂದ
ವೋಟು ನೀಡುವ ಬೆರಳುಗಳಿಗೆ ಆನಂದ.

## ೯೫೯. ಮಗನಿಗೆ ಉಪದೇಶ

ಡೋಲು ಬಾರಿಸು ಮಗನೆ, ಇದು ಮಹಾ ವಾದ್ಯ.
ಈ ವಿದ್ಯೆಯೊಂದಿರಲು ಎಲ್ಲವೂ ಸಾಧ್ಯ
ನಾ ಮಂತ್ರಿಯಾದದ್ದು ಡೋಲಿನ ಪ್ರತಾಪ
ಉಳಿದ ವಿದ್ಯೆಗಳೆಲ್ಲ ಶಾರದೆಯ ಶಾಪ.

## ೯೬೦. ತನ್ನ ದೊಡ್ಡಸ್ತನಕೆ

ತನ್ನ ದೊಡ್ಡಸ್ತನೆ ಆಗಿ ಅಧ್ಯಕ್ಷ
ಯಾವುದಕ್ಕೂ ಇವನು ಕೊಡಲಿಲ್ಲ ಲಕ್ಷ್ಯ
ಸರಿಯಾಗಿ ಕುರ್ಚಿ ಬಿಸಿ ಮಾಡಿದನು ಮಾತ್ರ
ಸಕಲರೂ ನಿತ್ಯ ಹಾಡಿರಿ ಇವನ ಸ್ತೋತ್ರ.

### ೯೬೧. ಭಾಷಾ ಸಮಸ್ಯೆ

ತಮಿಳು ನಾಡಿನ ಹುಂಜ, ಹೇಟೆ ಮಲಬಾರಿ;
ಇಬ್ಬರೂ ಒಂದು ನುಡಿಯಾಡುವರು, ನಾರಿ.
ಕಾಗೆಗೊಂದೇ ಭಾಷೆ; ಕಾಂ ಅನ್ನುತಿಹವು
ಮನುಜನಿಗೆ ನೂರಾರು, ತಲೆ ತಿನ್ನುತಿಹವು.

### ೯೬೨. ಕಾವ್ಯದ ಸ್ವರೂಪ

ತರಕಾರಿ ಎನ್ನುವುದು ಅಲ್ಲ ಬರಿ ಬದನೆ
ಕಾವ್ಯವೆಂಬುದು ಅಲ್ಲ ಬರಿ ಶಬ್ದ ರಚನೆ
ಪ್ರತಿಯೊಂದು ಶಬ್ದದೊಳಗಿರಬೇಕು ಪಾಕ
ಈ ಪಾಕವೆನ್ನುವುದು ಅನುಭವದ ಲೋಕ.

### ೯೬೩. ವಿಶ್ವದರ್ಶನ

ತಲೆಗೆ ಏರಲು ವಿಶ್ವದರ್ಶನದ ಕಳ್ಳು
ಆಂಗ್ಲ ಕವಿ ಬ್ಲೇಕನಿಗೆ ಹಿಡಿದಿತ್ತು ಮಳ್ಳು
ರವಿಯಂತೆ ಪ್ರಜ್ವಲಿಸುತಿದೆ ಹೃದಯ ಕುಂಡ
ಕೈಯ ಹಿಡಿಯೊಳಗಿತ್ತು ಅಖಿಲ ಬ್ರಹ್ಮಾಂಢ.

### ೯೬೪. ಅನುಭವ

ತಲೆಗೇರಿದರೆ ಮಾತ್ರ ಅನುಭವದ ಮದ್ಯ
ಹೃದಯದೊಳಗಿಂದ ಹೊರಸೂಸುವುದು ಪದ್ಯ
ಹುಚ್ಚೆದ್ದು ಕುಣಿದಾಡಿದರೆ ಕವಿಯ ಮನಸು
ಎಚ್ಚರಿದ್ದಾಗಲೇ ಬೀಳುವುದು ಕನಸು.

### ೯೬೫. ಈಗಿನ ಮಹಾರಾಜರು

ತಲೆಗೆ ಕಂಗೊಳಿಸುತಿದೆ ಖಾದಿಯ ಕೀರಿಟ
ಕೈಯೊಳಗೆ ಅಧಿಕಾರ ಲಾಲಸೆಯ ಸೋಟಾ
ಕಿಸೆಯೊಳಗೆ ಕಪ್ಪುಗಾಣಿಕೆ ತಂದ ಕೋಟಾ
ವೈಭವದ ದರಬಾರು ಸತ್ಕಾರ ಕೂಟ.

## ೯೬೬. ಯಾವ ಅವತಾರ

ತಲೆ ಕೆಳಗೆ, ಬುಡ ಮೇಲೆ, ಇದು ಯಾವ ರೀತಿ!
ಕಾಗದದ ಮೈಮೇಲೆ ತಿರುಗಿತಿದೆ ಮೂತಿ
ಮೂಗಿನಲಿ ಕಪ್ಪು, ಇದು ಯಾವ ಅವತಾರ?
ಇದಕೆಂಬೆ ಮಗಳೆ, ಲೇಖನಿಯ ಸಂಸಾರ.

## ೯೬೭. ವಕೀಲರು

ತಲೆಯೊಳಗೆ ತುಂಬಿಕೊಂಡಿದೆ ವಕಾಲತ್ತು
ಮೈಯೊಳಗೆ ಲವಲೇಶವಿಲ್ಲ ತಾಕತ್ತು.
ಇವರು ಬೆಳಸುವ ಪೈರು ಮೊಕದ್ದಮೆಯ ಮಾತು
ಇವರ ಕಣ್ಣಿಗೆ ಕಾಣುವುದು ಬರೀ ತೂತು.

## ೯೬೮. ತಂಗುಮನೆ

ತಂಗುಮನೆ ಕಟ್ಟಿಸಿತು ಸೇವಕ ಸಮಾಜ
ತಂಗುವವರಾರಿಲ್ಲ ಎನ್ನುವುದು ಸಹಜ.
ತಂಗಿದರೆ ಮೈಯೆಲ್ಲ ಸಂಪೂರ್ಣ ಒದ್ದೆ
ಪ್ರತಿಯೊಂದು ಕೋಣೆ ನೀರಾವರಿಯ ಗದ್ದೆ.

## ೯೬೯. ಲಕೋಟೆ

ತಂದುಕೊಟ್ಟನು ಕೈಲಿ ತುಂಬಿದ ಲಕೋಟೆ
ಅದರೊಳಗೆ ಏನಿತ್ತು? ಅದು ಒಂದು ನೋಟೆ?
ಬರಿ ಒಂದು ನೋಟಲ್ಲ; ಸಾಕಷ್ಟು ದಪ್ಪ
ಸ್ವೀಕರಿಸಿದವನಾರು? ಮಂತ್ರಿಗಳ ಅಪ್ಪ.

## ೯೭೦. ಗೆಳಯನಿಗೆ ಸೂಚನೆ

ತಂದೆ ಗಳಿಸಿದ್ದುಂಟು, ಬೇಕಷ್ಟು ತಿನ್ನು
ನಿನ್ನ ಗೆಳೆಯರಿಗೆ ತೋರಿಸಬೇಡ ಬೆನ್ನು.
ತರತರದ ಚೈನಿ, ನಡೆಯಲಿ ಎಲ್ಲ ಷೋಕು
ಪ್ರತಿಯೊಂದು ಊರೊಳಗೆ ಇಂಥವರು ಬೇಕು.

## ೯೭೧. ಇಬ್ಬರೂ ಜೋಡಿ

ತಂದೆಯಂತೆಯೆ ಮಗನು, ಇಬ್ಬರೂ ಜೋಡಿ.
ಸರಿಯಾಗಿ ಮುಂದುವರಿದರೆ ಇವರ ಗಾಡಿ
ತರತರ ಭಾನಗಡಿ, ಇಲ್ಲದ ರಗಳೆ,
ಮಂಗಳಾರತಿ ಎತ್ತಿ ಬಾಯ್ತುಂಬ ಹೊಗಳೆ.

## ೯೭೨. ತಂಬೂರಿ ದಾಸರು

ತಂಬೂರಿ ದಾಸರಿಗೆ ಪೂರ್ಣ ಅವಕಾಶ
ಮಂತ್ರಿಗಳು ಮನೆಯೊಳಗೆ ಒಡನೆಯ ಪ್ರವೇಶ
ತಂಬೂರಿ ದಾಸರೇ ಹೆಚ್ಚಾಗಿ ಸದ್ಯ
ಹಾಡು ಮುಗಿದಾಗ ಹಂಚುವರು ನೈವೇದ್ಯ.

## ೯೭೩. ಭಾಷೆಗಳು

ತಾಯ್ನುಡಿಯ ಜೋಗುಳಕೆ ಉಂಟೇನು ಸಾಟಿ ?
ಹಿಂದಿ ಎಂಬುದು ನೂಲು ತೆಗೆಯಲಿಕೆ ರಾಟಿ.
ಶ್ರಾದ್ಧಕ್ಕೆ ಕುಳಿತಾಗ ಗೀರ್ವಾಣ ಭಾಷೆ.
ಆಂಗ್ಲ ನುಡಿ ಎನ್ನುವುದು ನೌಕರಿಯ ಆಸೆ.

## ೯೭೪. ಉಪ್ಪಿನ ಸತ್ಯಾಗ್ರಹ

ತಾರುಣ್ಯದಲ್ಲಿಯೇ ಅಣಕಿಸಲು ಮುಪ್ಪು
ಬೆವರಾಗಿ ಹರಿದು ಹೋಗಲು ಎಲುಬಿನುಪ್ಪು
ನಡೆದಿತ್ತು ಅಂಕೋಲೆಯಲಿ ಲವಣ ಯುದ್ಧ
ಇಡಿಯ ಭಾರತದಲ್ಲಿ ಬಾಪೂಜಿ ಗೆದ್ದ.

## ೯೭೫. ತಾರುಣ್ಯ

ತಾರುಣ್ಯ ಬಂದಾಗ ಕಣ್ಣಿನ ಫಜೀತಿ
ಲಾವಣ್ಯವತಿಯಾಗಿ ಕಾಣುವಳು ಕೋತಿ
ಕಾಮಣ್ಣ ಕತ್ತೆಗೂ ಕೊಡಬಹುದು ಮುತ್ತು
ಮುಗುದಾಣಿ ಹರಿದು ಓಡಾಡುವುದು ಎತ್ತು.

### ೯೭೬. ಹಬ್ಬಗಳು

ತಿನ್ನಲಿಕೆ ಸಿಗದಿದ್ದರೂ ಹಬ್ಬ ಹೆಚ್ಚು.
ಇದಕೆನ್ನುವರು ಅಖಿಲ ಭಾರತದ ಹುಚ್ಚು
ಹಬ್ಬಗಳ ಆಚರಿಸುವರು ಸಾಲ ತಂದು.
ಮೂರು ದಿನ ಉಪವಾಸ ಒಂದು ದಿನ ತಿಂದು.

### ೯೭೭. ತಿನ್ನುವವರಿಗೆ

ತಿನ್ನುವವರಿಗೆ ಸಿಕ್ಕಿದರೆ ಭರ್ತಿ ಕಾಸು
ನಮ್ಮ ಸರಕಾರದಲಿ ಎಲ್ಲವೂ ಲೇಸು.
ಸರಿಯಾಗಿ ನೆರವೇರುವುದು ನಿಮ್ಮ ಕಾರ್ಯ
ಯಾವಾಗಲೂ ಬೇಕು ಸ್ವಲ್ಪ ಔದಾರ್ಯ.

### ೯೭೮. ನುಂಗುವುದು

ತಿನ್ನುವುದಕಿಂತಲೂ ನುಂಗುವುದು ಜಾಸ್ತಿ
ನುಂಗಿದವರೆಲ್ಲರೂ ಕಟ್ಟಿದರು ಆಸ್ತಿ
ನುಂಗುವಲ್ಲೂ ಉಂಟು ಹಲವಾರು ರೀತಿ.
ಸರಿಯಾಗಿ ನುಂಗಿದವನಿಗೆ ಇಲ್ಲ ಭೀತಿ.

### ೯೭೯. ತಿನ್ನುವವರಿಗೆ

ತಿನ್ನುವವರಿಗೆ ಸಿಕ್ಕಿ ಭರ್ತಿ ಬಿರಿಯಾನಿ
ಪ್ರಗತಿಯಾಗಿದೆ ಎಂದು ನುಡಿದನು ಮಸಾನಿ
ಕೃಪಲಾನಿ ಹೇಳಿದನು : ಈ ಮಾತು ಸತ್ಯ
ಅನುಭವಿಸುತ್ತಿದ್ದೇವೆ ಇದನು ಪ್ರತಿನಿತ್ಯ.

### ೯೮೦. ಅಲ್ಲಿಯೇ ಬಂತು

ತಿರುತಿರುಗಿ ತಿರು ತಿರುಗಿ ಅಲ್ಲಿಯೇ ಬಂತು.
ಎಲ್ಲರೂ ನೋಡಿದರು ಕೂತಲ್ಲಿ ನಿಂತು.
ಇದಕೆಂಬೆ ಪಂಚವಾರ್ಷಿಕದ ಅಭಿವೃದ್ಧಿ
ಮತ್ತೆ ನಾವೆಲ್ಲರೂ ಸಾಧಿಸಿದ ಸಿದ್ಧಿ.

### ೯೮೧. ಕಾಯಿಲೆ

ತಿರುಪತಿಗೆ ಹೋದರೂ ಗುಣವಿಲ್ಲ ತುಸುವು
ಔಷಧಿಗಳಿಂದಲೂ ಬರಲಿಲ್ಲ ಕಸುವು
ಮದುವೆ ಮಾಡಿದ ಕೂಡ್ಲೆ ಗುಣವಾಯ್ತು ಪೂರ್ಣ
ಮಡದಿ ನೀಡಿರಬೇಕು ರಸಭರಿತ ಚೂರ್ಣ.

### ೯೮೨. ಸರ್ವಜ್ಞನ ತ್ರಿಪದಿ

ತ್ರಿಪದಿ ಕಿರಿದಾದರೂ ಒಳಗಿರುವ ಶಬ್ದ
ಶತಮಾನ ಕಳೆದರೂ ಉಂಟು ಉಪಲಬ್ಧ.
ಕನ್ನಡಾಂಬೆಯ ತೋಟದೊಳಗೊಂದು ದ್ರಾಕ್ಷಿ
ಎಂದಿಗೂ ತಿನ್ನಲಾರದು ಕಾಲಪಕ್ಷಿ.

### ೯೮೩. ಬಾಪೂಜಿಗೆ

ತ್ರಿಭುವನಕೆ ದಾರಿ ತೋರಿಸಿದೆ, ಬಾಪೂಜಿ
ನಿನ್ನ ಕೈಯೊಳಗಿತ್ತು ಕಾಂಚನದ ಸೂಜಿ,
ಚಿಂದಿಯಾದರೂ ಪೃಥಿವಿ ಹೋರಾಟದಿಂದೆ.
ಅದನು ಹೊಲಿಯುವ ಶಕ್ತಿ ನಿನಗಿತ್ತು ತಂದೆ.

### ೯೮೪. ಆಹಾರ ಮಂತ್ರಿಯ ಸೂಚನೆ

ತಿಂದು ತೇಗುವುದು ನೀ ದಿನಕೊಂದು ಸರ್ತಿ
ರಾತ್ರಿ ಹೊತ್ತಿಗೆ ನೀನು ಉಣಬೇಡ ಭರ್ತಿ
ಪೂರ್ಣ ತುಂಬಲು ಹೊಟ್ಟೆ ಹಾಳಾದ ಕನಸು
ದೆವ್ವ ಭೂತಗಳಿಂದ ಅಂಜುವುದು ಮನಸು.

### ೯೮೫. ತಿಂದದ್ದು

ತಿಂದದ್ದು ಸರಿಯಾಗಿ ಜೀರ್ಣವಾದಾಗ್ಗೆ
ತಿರುಪತಿಗೆ ಹೋಗಿ ಸಲ್ಲಿಸಬೇಕು ಹರಕೆ,
ಆಮೇಲೆ ಹಿಂದಿರುಗಿ ಮತ್ತಷ್ಟು ತಿನ್ನಿ
ಪ್ರತಿ ದಿವಸ ಗೋವಿಂದ ಗೋಪಾಲ ಅನ್ನಿ.

### ೯೮೬. ತಿಂದರೂ

ತಿಂದರೂ ಬೀಳಬಾರದು ನೀವು ಸಿಕ್ಕಿ
ಪೂರ್ಣ ಕರಗಿಸಬೇಕು ಸರಿಯಾಗಿ ಮುಕ್ಕಿ
ಪ್ರತಿಯೊಂದು ಕೆಲಸಕ್ಕೆ ಬೇಕು ಚಾತುರ್ಯ
ಸರಿಯಾಗಿ ನೇರವೇರುವುದು ನಿಮ್ಮ ಕಾರ್ಯ.

### ೯೮೭. ತೀರ್ಪು

ತೀರ್ಪು ಕೊಟ್ಟರು : ಇವನು ದೊಡ್ಡ ಅಪರಾಧಿ
ಈ ಪ್ರಾಣಿ ಕದ್ದದ್ದು ಒಂದು ಕಿಲೋ ಗೋದಿ
ಇನ್ನೊಬ್ಬ ಲೂಟಿ ಹಾಕಿದ್ದು ದಶಲಕ್ಷ
ಈತನಿಗೆ ಅನ್ನುವುದು : ಕರ್ತವ್ಯದಕ್ಷ.

### ೯೮೮. ಕರಿಮಣಿಯ ಚಿನ್ನ

ತುಟಿಗೆ ತುಟಿ ಹಚ್ಚಿದರೆ ಚರ್ಮಕ್ಕೆ ಚರ್ಮ
ಇದರಿಂದ ಉದುರಿ ಹೋಗುವುದಿಲ್ಲ ಧರ್ಮ
ಹೀಗೆಂದು ವರಿಸಿದನು ಹೊಲೆಯಬೇಕೆಯನ್ನ.
ಉದುರಿ ಬೀಳಲೆ ಇಲ್ಲ ಕರಿಮಣಿಯ ಚಿನ್ನ.

### ೯೮೯. ಮುತ್ತು

ತುಟಿಗೆ ತುಟಿ ಹಚ್ಚಿದರೆ ಹುಟ್ಟುವುದು ಮುತ್ತು
ಇದರ ಸವಿ ಅನುಭವಿಸಿದವರಿಗೇ ಗೊತ್ತು
ಹೀಗೆನಲು ಮುಗುಳುನಗೆ ಬೀರಿ ನನ್ನಾಕೆ
ಹೇಳಿದಳು; ತೆಗೆದುಕೊಳಿ, ಈಗಲೇ ಬೇಕೆ?

### ೯೯೦. ಗೆಳತಿಗೆ

ತುಟಿಗೆ ತುಟಿ ಹಚ್ಚಿದರೆ ಹುಟ್ಟುವುದು ಮುತ್ತು
ಒಂದು ಸಾವಿರ, ಗೆಳತಿ, ನೀಡು ಈ ಹೊತ್ತು
ನಾಳೆ ನಾ ಬೆಂಗಳೂರಿಗೆ ಹೋಗಿ ಬರುವೆ,
ಬರುವಾಗ ಹೊಸ ರೇಶಿಮೆಯ ಸೀರೆ ತರುವೆ.

## ೯೯೧. ಕವಿ ಸಮಯದ ಹಾವಳಿ

ತುಟಿಯೆಂಬುದೇ ಪಕಳೆ ; ಮೋರೆ ಅರವಿಂದ,
ಮುತ್ತು ಕೊಟ್ಟರೆ ನೀನು ಮತ್ತಷ್ಟು ಚೆಂದ
ಇದ್ದ ಮಕರಂದವನು ಸಂಪೂರ್ಣ ಹೀರಿ.
ಜೇನ್ನೊಣಕೆ ಉಪವಾಸ ಹಾಕಿದೆನು, ನಾರಿ.

## ೯೯೨. ಅವಳ ಚಮತ್ಕಾರ

ತುಟಿಯೊಳಗೆ ರಂಜಿಸಲು ಕೆಂಪು ದಾಸಾಳ
ಸರಕಾರಿ ಸೌಧದಲಿ ಹಾಕಿದಳು ಗಾಳ
ಒಬ್ಬ ಉಪಮಂತ್ರಿ ಮತ್ತೊಬ್ಬ ಅಧಿಕಾರಿ
ಗಾಳದಲಿ ಸಿಕ್ಕಿಬಿದ್ದರು ಕಾಲು ಜಾರಿ.

## ೯೯೩. ತುಟಿಯು ಡೊಂಕಾದರೂ

ತುಟಿಯು ಡೊಂಕಾದರೂ ಅದರ ಮಾಧುರ್ಯ
ಸರಿಯಾಗಿ ಮಾಡುವುದು ಮುತ್ತಿಡುವ ಕಾರ್ಯ.
ನಿನ್ನ ತುಟಿಗಳ ಸವಿಗೆ ಎಣೆಯಿಲ್ಲ ಬೇರೆ
ಜೇನು ಸಕ್ಕರೆ ಬೆಲ್ಲ ಎಲ್ಲವೂ, ನೀರೆ.

## ೯೯೪. ತುಟ್ಟಿತನ

ತುಟ್ಟಿತನ ಹೆಚ್ಚಾಗಿ ಮಿತಿ ಮೀರಿದಾಗ
ನಮ್ಮ ಸೆಟ್ಟಿಯ ಫಾಯ್ದೆ ಎಣಿಸಲಿಕ್ಕಾಗ
ತುಟ್ಟಿತ ಗಟ್ಟಿಗರ ರೆಟ್ಟೆ ಕೈ ಕಾಲು
ಮತ್ತೆ ವರ್ತಕರ ಕೈಯಲಿ ಉದ್ದ ಕೋಲು.

## ೯೯೫. ಗಟ್ಟಿ ನಾವು

ತುಟ್ಟಿತನ ಹೆಚ್ಚಾದರೂ ಗಟ್ಟಿ ನಾವು
ಅರ್ಧ ಬದುಕಿದ್ದೇವೆ, ಬರಲಿಲ್ಲ ಸಾವು
ಭಾರತೀಯರ ಶಕ್ತಿ ವಿಪರೀತವೆಂಬೆ
ಈ ಸತ್ಯವನು ಮರೆಯಲಾರೆ ಜಗದಂಬೆ.

### ೯೯೬. ತುಟ್ಟಿಯಾದರೆ

ತುಟ್ಟಿಯಾದರೆ ಅಕ್ಕಿ ತಿನ್ನಿ ಕರಿಗಡಬು
ಮತ್ತೆ ರಾತ್ರಿಗೆ ತಿನ್ನಿ ಬೇಕಷ್ಟು ಸೇಬು
ಹೀಗೆಂದು ಮಂತ್ರಿಗಳು ಉಪದೇಶ ನೀಡಿ
ಮರಳಿದರು ಅವಳ ಜೊತೆಯಲಿ ಹತ್ತಿ ಗಾಡಿ.

### ೯೯೭. ತುರ್ತು ಸ್ಥಿತಿ

ತುರ್ತುಸ್ಥಿತಿಯೆಂಬ ಕರಡಿಯ ಮುಂದೆ ಮಾಡಿ
ಸಜ್ಜನರ ಕೈಯಿಗೂ ಹಾಕಿದರು ಬೇಡಿ
ಈ ಅಧೋಗತಿಗೆ ಜಾರಿದೆ ಸರಕಾರ
ನವ ಭಾರತಕೆ ಲಫಂಗರ ರಾಜ್ಯಭಾರ.

### ೯೯೮. ತುಳಸಿಕಟ್ಟೆಯ ಒಳಗೆ

ತುಳಸಿಕಟ್ಟೆಯ ಒಳಗೆ ಪರದೇಶಿ ಮಧ್ಯ!
ಈ ಸುದ್ದಿ ಕೇಳಿ ಹುಟ್ಟಿತು ನನ್ನ ಪದ್ಯ
ಜನತೆ ಪ್ರಿಯಕರವಾದ ವಸ್ತುಗಳನ್ನೆಲ್ಲಾ
ದೇವರಿಗೆ ಅರ್ಪಿಸುವ ರೂಢಿ ಇದೆಯಲ್ಲಾ.

### ೯೯೯. ಅಪ್ರತಿಮ ಕಾರು

ತೆಗೆದುಕೊಂಡಿದ್ದಾನೆ ಅಪ್ರತಿಮ ಕಾರು.
ಪೆಟ್ರೋಲು ಕುಡಿಯುತಿದೆ ಕುಡಿದಂತೆ ನೀರು.
ಪ್ರತಿಯೊಂದು ತಾಸಿಗೂ ನೂತನ ರಿಪೇರಿ
ಆದರೂ ಕೊನೆಗೆ ಮುಟ್ಟಿತು ನಮ್ಮ ಕೇರಿ.

### ೧೦೦೦. ಇನ್ನೊಂದು ಜಾಹೀರಾತು

ತೆಗೆದುಕೊಂಡರೆ ನಿತ್ಯ 'ಶಕ್ತಿ ಟಾನಿಕ್ಕು'
ಬಂದುಬಿಡುವುದು ಮೈಗೆ ವಿಪರೀತ ಸೊಕ್ಕು.
ಕ್ರಾಂತಿಕಾರನಿಗಂತು ಬಹಳ ಉಪಕಾರಿ
ಪ್ರತಿಯೊಂದು ಸರಕಾರ ಬೀಳುವುದು ಜಾರಿ.

### ೧೦೦೧. ಆಕೆ ಹೇಳಿದ್ದು

ತೆಗೆದುಕೊಳ್ಳಿರಿ ನೀವು, ನಾನು ಕೊಡಲಾರೆ.
ಹೀಗೆಂದು ಹೇಳುವಳು ಪ್ರತಿಯೊಂದು ಸಾರೆ.
ಈ ಒಡವೆ ಯಾವುದೆಂಬುದು ನಿಮಗೆ ಗೊತ್ತು
ಬೇರೆ ಏನೂ ಅಲ್ಲ, ಅದು ಅವಳ ಮುತ್ತು.

### ೧೦೦೨. ರೇಶಿಮೆಯ ಸೀರೆ

ತೊಟ್ಟುಕೊಂಡರೆ ನೀನು ರೇಶಿಮೆಯ ಸೀರೆ
ಸೆಕೆಯಾಗಿ ಬೆವರು ಹನಿ ಮೂಡುವುದು , ನೀರೆ.
ಚಂದ ಸಾದಾ ಸೀರೆ ಅನುಕೂಲ ಬಹಳ.
ಸಿಟ್ಟಾಗಬೇಡ, ಸಖಿ, ಹಾಕೋಣ ಕವಳ.

### ೧೦೦೩. ರೇಶಿಮೆಯ ರವಕೆ

ತೊಟ್ಟುಕೊಳ್ಳಲು ನೀನು ರೇಶಿಮೆಯ ರವಕೆ
ಅಲ್ಲಲ್ಲಿ ತಿರಗಬಾರದು, ಸ್ವಲ್ಪ ಜೋಕೆ.
ಅಹುದಹುದು ! ನಿಮ್ಮ ಜೊತೆಯಲ್ಲಿಯೇ ಇದ್ದು
ಯಾವಾಗಲೂ ಮಾಡಿಕೊಳಬೇಕೆ ಮುದ್ದು ?

### ೧೦೦೪. ದಪ್ಪ ಹೆಂಗಸು

ದಪ್ಪ ಹೆಂಗಸಿಗೆ ಓಡಾಟ ಬಲು ಕಷ್ಟ
ಮನೆಯಲ್ಲಿಯೇ ಕುಳಿತುಕೊಳ್ಳುವುದು ಇಷ್ಟ.
ಯಾವಾಗಲೂ ನಿಮ್ಮ ಜೊತೆಯೊಳಗೆ ಇದ್ದು
ಮಧ್ಯರಾತ್ರಿಯ ತನಕ ಮಾಡುವಳು ಮುದ್ದು.

### ೧೦೦೫. ಕೊನೆಯ ಪಯಣ

ದಾರಿ ನೂರಾರು; ಮುಟ್ಟುವ ಜಾಗ ಒಂದು.
ನಡೆಯುವರು ಜೊತೆಗೆ ಗೆಳೆಯರ ಬಳಗ ಬಂಧು
ಕೊನೆಯ ಹೆಜ್ಜೆಯ ಹಾಕಿ ಕೈ ಮುಗಿಯುವಾಗ,
ಹಿಂಬಾಲಿಸುವ ಕಾರ್ಯ ಯಾರಿಂದ ಆಗ.

## ೧೦೦೬. ಆಡಳಿತ ಮಟ್ಟ

ದಿನದಿನಕೆ ಕೆಳಗಾಗಿ ಆಡಳಿತ ಮಟ್ಟ
ಮೇರು ಪರ್ವತದಿಂದ ಆಗುಂಬೆ ಘಟ್ಟ
ಮತ್ತೆ ತುಸು ದಿನದೊಳಗೆ ಆಗುಂಬೆ ದಾಟಿ
ನಾವು ಮುಟ್ಟುವ ಸೀಮೆ ಕಡಲಿನ ಸಪಾಟಿ.

## ೧೦೦೭. ಚಕ್ರಬಡ್ಡಿಯ ಪ್ರತಾಪ

ದಿನದಿನಕೆ ಗಗನಕೇರಲು ಚಕ್ರಬಡ್ಡಿ
ಉಟ್ಟ ಧೋತರ ಹೋಗಿ ಬಂತು ಬರಿ ಚಡ್ಡಿ
ಚಡ್ಡಿಯೂ ಮಾಯವಾದರೆ ಏನು ಮುಂದೆ ?
ಹೇ ದಿಗಂಬರಧಾರಿ, ನೀನೆ ಗತಿಯೆಂದೆ.

## ೧೦೦೮. ನನ್ನ ಚೌಪದಿ

ದಿನಕರನ ಚೌಪದಿಗೆ ಬರಿ ನಾಕು ಸಾಲು
ಸರಿಯಾಗಿ ಹಿಂಡಿದರೆ ಮಣಗಟ್ಲೆ ಹಾಲು
ಈ ಹಾಲಿನೊಳಗುಂಟು ಮಜ್ಜಿಗೆಯ ಅರ್ಕ.
ಹಾಲು ಹುಳಿಯಾದೊಡನೆ ತರತರದ ತರ್ಕ.

## ೧೦೦೯. ಕುಮಟೆಯಲ್ಲಿ ಕೇಳಿದ್ದು

ದಿನಕರನ ಮರಣವಾರ್ತೆಯ ಕೇಳದಾಗ
ಹೀಗೆ ಹೇಳಿದಳು ಕುಮಟೆಯ ಚಂದ್ರಭಾಗ;
ಪರಲೋಕದಲ್ಲಿಯೂ ಚುಟಕಗಳ ಹಾಡಿ
ಬೈಲಿಗೆಳೆಯುವನೇನು ಬರ್ದಿಲದ ರಾಡಿ ?

## ೧೦೧೦. ದಿನಕರನು ಉದಯಿಸಲು

ದಿನಕರನು ಉದಯಿಸಲು ಗುಬ್ಬಿಗಳು ಹಾಡಿ
ಕಾಳು ಹೆಕ್ಕುವವು ತಮ್ಮೊಳಗೆ ಮಾತಾಡಿ
ಈ ನೋಟ ನೋಡಿದರೆ ನನ್ನ ಆಯುಷ್ಯ
ಅಧಿಕವಾಗುವುದು, ಸಖಿ, ಹೋಗಿ ಆಲಸ್ಯ,

## ೧೦೧೧. ದಿನಮಣಿಯ ಕವಿತೆ

ದಿನಮಣಿಯ ಕವಿತೆ ಎನ್ನುವುದು ಬರಿ ಬಿಸಿಲು
ಈ ಬಿಸಿಲಿನಿಂದ ಗಿಡಮರಗಳಿಗೆ ಟಿಸಿಲು
ದಿನಕರನ ಕೃತಿಯಿಂದಲೇ ಈ ಜಗತ್ತು
ಸಕಲ ಲೋಕಕೆ ನಿತ್ಯ ನೀಡುವನು ಮುತ್ತು

## ೧೦೧೨. ದಿನ ಹೋದಹಾಗೆ

ದಿನಹೋದಹಾಗೆಲ್ಲ ಇವರ ದರಬಾರ
ಮತ್ತಷ್ಟು ಜೋರಾಗಿ ಜನರ ಉದ್ಧಾರ
ಇದರ ಹೊರತಾಗಿ ನುಂಗುವುದುಂಟು ಬೇರೆ
ರಾಜಕಾರಣವಾಯ್ತು ಸರ್ಕಸ್ಸಿನ ಡೇರೆ.

## ೧೦೧೩. ಹೆಚ್ಚಾಗಿ ಬುದ್ಧಿ

ದಿನ ಹೋದ ಹಾಗೆಲ್ಲ ಹೆಚ್ಚಾಗಿ ಬುದ್ಧಿ
ಇವನು ಪಡೆದನು ಕೊನೆಗೆ ಬಹಳೇ ಪ್ರಸಿದ್ಧಿ
ಭಾನಗಡಿಯಲ್ಲಿಯೇ ಕಟ್ಟಿದನು ಗಂಟು
ಲಕ್ಷ ಗಳಿಸಿದ ಭಾಗ್ಯ ಎಷ್ಟು ಜನಕುಂಟು ?

## ೧೦೧೪. ಮುಖ್ಯಮಂತ್ರಿಯ ಸಿಟ್ಟು

ದಿನಹೋದಹಾಗೆ ಹೆಚ್ಚಾಯ್ತು ಬಿಕ್ಕಟ್ಟು.
ಹೀಗೆನಲು ಮುಖ್ಯಮಂತ್ರಿಗೆ ಬಂತು ಸಿಟ್ಟು
ಅವನೆಂದ : ಕೋಟಿಗಟ್ಟಲೆ ಖರ್ಚುಮಾಡಿ
ಕುಳಿತರೂ ಮುಗಿದಿಲ್ಲ ಟೀಕೆಗಳ ರಾಡಿ.

## ೧೦೧೫. ಹೆಚ್ಚಾಯ್ತು ಬುದ್ಧಿ

ದಿನ ಹೋದಹಾಗೆಲ್ಲ ಹೆಚ್ಚಾಯ್ತು ಬುದ್ಧಿ
ಬುದ್ಧಿ ಹೆಚ್ಚಾದಂತೆ ಕೆಡಕಾಯ್ತು ಸುದ್ದಿ
ಯಾವುದಕ್ಕೂ ಒಂದು ಮಿತಿ ಬೇಕು, ಸ್ವಾಮಿ
ಮಿತಿ ತಪ್ಪಿ ಹೋದಲ್ಲಿ ನಾನಾ ಹರಾಮಿ.

### ೧೦೧೬. ದಿಲ್ಲಿಯ ಪರಿಷತ್ತು

ದಿಲ್ಲಿಯಲಿ ನಡೆದಿತ್ತು ಕಾವ್ಯ ಪರಿಷತ್ತು
ಅಂಕೋಲೆಯಿಂದ ಈ ಚುಟಕ ಹೋಗಿತ್ತು
ಕಿಡಿಗೇಡಿ ಎಂದು ಹೊರ ತಳ್ಳಿದರು ಗುದ್ದಿ.
ಆದರೂ ಚುಟಕಕ್ಕೆ ಬರಲಿಲ್ಲ ಬುದ್ಧಿ!

### ೧೦೧೭. ದೊಡ್ಡ ಲೂಟಿ

ದಿಲ್ಲಿಯಲ್ಲಿ ಮೊನ್ನೆ ನಡೆಯಿತು ದೊಡ್ಡ ಲೂಟಿ
ಅಪಹರಣ ಮಾಡಿದ್ದು ಮುನ್ನೂರು ಕೋಟಿ
ಈ ಲೂಟಿ ನಡೆದು ಕಾನೂನಿನ ಪ್ರಕಾರ
ಅಧಿಕವಾಯಿತು ನಮ್ಮ ತೆರಿಗೆಗಳ ಭಾರ.

### ೧೦೧೮. ಹಣತೆ

ದೀವಳಿಗೆ ಹಬ್ಬದಲಿ ದಶಕೋಟಿ ಹಣತೆ
ಈ ಹಣತೆಗಳು, ಮಗನೆ, ಸಾಮಾನ್ಯ ಜನತೆ.
ಎನಿತು ಹಾರಿದರೂ ಚಟಾಕಿಗಳ ಮದ್ದು
ಹಣತೆ ಮಾಡುವುದಿಲ್ಲ ಕಿಂಚಿತ್ತು ಸದ್ದು.

### ೧೦೧೯. ಹೊಲಿಗೆ ಯಂತ್ರ

ದುಡಿಯುವಾಗಲೆ ನುಡಿಯುವುದು ಹೊಲಿಗೆ ಯಂತ್ರ
ಕೇಳಿಸಲಿ ಪ್ರತಿಯೊಬ್ಬನಿಗೆ ಇದರ ಮಂತ್ರ :
ಇಂದಿನ ಪ್ರಪಂಚವನು ಹೊಲಿದಷ್ಟು ಕಡಿಮೆ.
ಚಿಂದಿಯಾಗಿದೆ ನೋಡು ಮಾನವನ ಮಹಿಮೆ.

### ೧೦೨೦. ಗೋಕರ್ಣದ ಮಹಾತ್ಮೆ

ದುಷ್ಕರ್ಮಗಳ ಅಳಿಸಿ ಬಿಡುವಂಥ ಚೂರ್ಣ
ದಯಪಾಲಿಸಲು ಉಂಟು ಕ್ಷೇತ್ರ ಗೋಕರ್ಣ
ಅಲ್ಲಿ ಹೋದರೆ ದೊರಕುವುದು ಇದರ ಜಾತ್ರೆ
ಇದಕಾಗಿ ನೆರೆಯುತಿದೆ ಬಲುದೊಡ್ಡ ಜಾತ್ರೆ.

## ೧೦೨೧. ಮಾನವನ ಶೋಧ

ದುಷ್ಟ ಬುದ್ಧಿಯ ಕೊಲ್ಲಬೇಕೆಂದು, ನೀರೆ.
ಇಡಿಯ ಲೋಕವ ಹುಡುಕಿದೆನು ಹತ್ತು ಸಾರೆ.
ಆದರೂ ಸಿಗಲಿಲ್ಲ ಕೇಳು, ಗುಣವಂತೆ
ನನ್ನ ತಲೆಯಲ್ಲಿಯೇ ಅಡಗಿದ್ದನಂತೆ.

## ೧೦೨೨. ಮಂಜೂರಾದ ಹಣ

ದೂರಾಗಬೇಕೆಂದು ಜನತೆಯ ಪಿಪಾಸೆ
ನೀರ್ ತರಲು, ಕೆಲವರಿಗೆ ಕೈ ತೊಳೆವ ಆಸೆ
ಶಮನವಾಗುವ ಮೊದಲೆ ಜನರ ನೀರಡಿಕೆ
ಕೈ ತೊಳೆದು ಬರಿದಾಗಬೇಕೆ ಆ ಮಡಕೆ ?

## ೧೦೨೩. ಪರಂಪರೆ

ದೆವ್ವವಿಲ್ಲದ ಹಳ್ಳಿಗಿತಿಹಾಸವಿಲ್ಲ
ಭೂತವಿಲ್ಲದ ಮಸಣ ಹೆಣಗಳಿಗೆ ಸಲ್ಲ
ಚಾವುಂಡಿ ಮಾರಮ್ಮ ಮಾಸ್ತಿ ಬೇತಾಳ
ಇವರೊಡನೆ ದೇವನೂ ಹಾಕಿದನು ತಾಳ.

## ೧೦೨೪. ಸಂಸತ್ತಿನ ಸದಸ್ಯರು

ದೆಹಲಿಯಲಿ ಕುಳಿತುಕೊಂಡರೆ ಭತ್ತೆ ಕಾಸು
ಸಂಚಾರಕಾಗಿ ಹೊರಡೆ ರೈಲು ಪಾಸು
ಹೋದ ಹೋದಲ್ಲಿ ಊಟದ ಸಮಾರಂಭ
ಎಂ.ಪಿ.ತನ ಜೀವನದ ಆಧಾರ ಸ್ತಂಭ.

## ೧೦೨೫. ನಡೆದ ಸಂಗತಿ

ದೇವದೈತ್ಯರ ನಡುವೆ ನಡೆದಾಗ ಯುದ್ಧ
ಮಾನವನು ಒಂದು ಕಡೆ ಬಿದ್ದುಕೊಂಡಿದ್ದ
ಈಗವನು ಎಚ್ಚತ್ತು ದೇವರ ವಿರುದ್ಧ
ಹೂಡಿದನು ಆಧುನಿಕ ಪದ್ಧತಿಯ ಯುದ್ಧ.

### ೧೦೨೬. ದೇವರಲ್ಲಿ ಪ್ರಾರ್ಥನೆ

ದೇವ, ನೀನೊಬ್ಬ, ಮಂತ್ರಿಗಳು ಹಲವಾರು.
ಇವರೆಲ್ಲರಿಗೆ ನೀನೆ ಕೊಡಬೇಕು ಕಾರು.
ನಿತ್ಯ ಸಂಚಾರದಲಿ ಕಾಪಾಡು, ದೇವ.
ಭಿನ್ನವಾದರು ರೂಪು ನಿನ್ನದೇ ಜೀವ.

### ೧೦೨೭. ದೇವರ ಉತ್ತರ

ದೇವ, ನೀ ಮುಖ ತೋರಿಸುವುದಿಲ್ಲವೇಕೆ?
ಎಂದು ಕೈ ಮುಗಿದು ಕೇಳಿದಳು ನನ್ನಾಕೆ.
ಭಗವಂತ ಹೇಳಿದನು ನಿಂತು ಮರೆಯೊಳಗೆ :
ಅಡಗಿಕೊಂಡರೆ ಲೇಸು ಈ ರಾಜ್ಯದೊಳಗೆ.

### ೧೦೨೮. ದೇವನೆಂದನು

ದೇವನೆಂದನು : ನನಗೆ ಆಗಿದೆ ಅಜೀರ್ಣ
ಆದರೂ ಯಾರು ನೀಡುವುದಿಲ್ಲ ಚೂರ್ಣ
ಬಾಳೆಹಣ್ಣನು ಪುನಹ ನೀಡುವರು ಮತ್ತೆ
ಏನು ಮಾಡಲಿ ಹೇಳು? ನಾನೀಗ ಸತ್ತೆ!

### ೧೦೨೯. ಮರು ಮಾತು

ದೇವನೆಂದನು : ನನಗೆ ಎಲ್ಲರೂ ಒಂದೆ.
ಸಕಲ ಮಾನವ ಕುಲಕೆ ನಾ ತಾಯಿ ತಂದೆ.
ಮನುಜನೆಂದನು : ನನಗೆ ಎಲ್ಲರೂ ಒಂದೆ.
ನಿನ್ನ ಮಾತನು ಒಂದು ಪಿಳ್ಳೆಯೂ ನಂಬ.

### ೧೦೩೦. ಮಾನಸಿಕ ಬೇನೆ

ದೇವನೆಂದನು : ನನಗೆ ಮಾನಸಿಕ ಬೇನೆ.
ಇದಕೆ ಕಾರಣ ಬುವಿಯ ಮಾನವರ ಸೇನೆ.
ಒಂದು ದಿನ ದಂಡೆತ್ತಿ ಬರಬಹುದು ಇಲ್ಲಿ.
ಓಡಬೇಕಾದೀತು ಅಸ್ತ್ರಗಳ ಚೆಲ್ಲಿ.

## ೧೦೩೧. ದೇವನೆಂದನು

ದೇವನೆಂದನು : ನನ್ನ ಕೇಳುವವರಾರು ?
ಈಗ್ಗೆ ಓಡಾಡುತಿವೆ ನೂರಾರು ಕಾರು.
ಇಂದಿಗೂ ನನ್ನ ವಾಹನವು ಪಲ್ಲಕ್ಕಿ
ನಗೆಯಾಡುತಿದೆ ನೋಡಿ ಪ್ರತಿಯೊಂದು ಹಕ್ಕಿ.

## ೧೦೩೨. ದೇವ ಹೇಳಿದ್ದು

ದೇವನೆಂದನು : ನೀನು ಬರಬೇಡ ಇಲ್ಲಿ.
ನಿನ್ನ ಸ್ಥಾನವು ಅಲ್ಲಿ, ಹೊಸದಿಲ್ಲಿಯಲ್ಲಿ.
ರಾಜಕಾರಣಿಗಳಿಗೆ ಇಲ್ಲಿಲ್ಲ ಜಾಗ
ನಾನಿಲ್ಲಿ ಹಾಕಿಬಿಟ್ಟಿದ್ದೇನೆ ದೊಡ್ಡ ಬೀಗ.

## ೧೦೩೩. ಕಾವ್ಯದ ಉಗಮ

ದೇವನೆ ಕವನಗಳ ಬರೆದು ಸಾಕಷ್ಟು
ನಮ್ಮ ಈ ರಾಜ್ಯಕ್ಕೆ ಮಾಡಿದನು ಪೋಸ್ಟು
ನಾ ಬರೆದೆ ಎನ್ನುವದು ಬರಿ ಒಂದು ಭ್ರಾಂತಿ
ದೇವ ಔಷಧಿ ಕೊಡಲು ಕವಿಗಾಯ್ತು ವಾಂತಿ.

## ೧೦೩೪. ಭಕ್ಷಕರು

ದೇವರನ್ನೂ ನುಂಗುವವರು ಇದ್ದಾರೆ
ಈಗಲೇ ತೋರಿಸುವೆ, ನನ್ನ ಜೊತೆ ಬಾರೆ.
ಆಕೆ ಎಂದಳು : ಇವರು ರಾಕ್ಷಸರು ಏನು ?
ನಾನೆಂದೆ : ಭಕ್ಷಕರು, ಹಿಂಡುವರು ಜೇನು.

## ೧೦೩೫. ದೇವರಲ್ಲೂ

ದೇವರಲ್ಲೂ ನನಗೆ ವಿಶ್ವಾಸವಿಲ್ಲ.
ಆಕೆ ಎಂದಳು : ನಿಮಗೆ ಈ ಮಾತು ಸಲ್ಲ
ನಾನೆಂದೆ : ಆತ್ಮ ವಿಶ್ವಾಸವೇ ದೇವ.
ಮತ್ತೆ ಕಾಯಕ ಬೇಕು ಮೂಡಿಸಲು ಭಾವ.

### ೧೦೩೬. ಕವಿಗಳ ಘೋಷಣೆ

ದೇವರಿಗೆ ಆಹ್ವಾನ ಕೊಡುವವರು ನಾವು.
ಎಂದಿಗೂ ನಮ್ಮ ಲೇಖನಿಗಿಲ್ಲ ಸಾವು.
ಪರಮಾತ್ಮ ತಪ್ಪುಗೈದರೆ ಅವನ ತಿದ್ದಿ
ಸರಿಯಾಗಿ ನಡೆಯೆಂದು ಕಲಿಸುವೆವು ಬುದ್ಧಿ.

### ೧೦೩೭. ಕವಿಗಳು

ದೇವರಿಗೆ ಆಹ್ವಾನ ಕೊಡುವವರು ನಾವು.
ನಮ್ಮಿಂದ ಸಚಿವರಿಗೆ ಭರ್ತಿ ತಲೆನೋವು.
ನಮ್ಮ ಬರವಣಿಗೆ ಎಂಬುದು ಒಂದು ಶೂಲ.
ಅದಕೆ ಇತಿಮಿತಿಯಿಲ್ಲ, ಅದು ಸರ್ವಕಾಲ.

### ೧೦೩೮. ಇಲ್ಲ ಭೀತಿ

ದೇವರಿಗೆ ಸಿಟ್ಟು ಬಂದರೆ ಇಲ್ಲ ಭೀತಿ.
ಶ್ರೀಮತಿಗೆ ಸಿಟ್ಟು ಬಂದರೆ ಬಲು ಫಜೀತಿ
ಗಂಡನಿಗೆ ಸರಿಯಾದ ಊಟ ಸಿಗಲಾರ.
ಸಂಸಾರವಾಗುವುದು ವಿಪರೀತ ಖಾರ.

### ೧೦೩೯. ದೇವರ ಬೇಸರಿಕೆ

ದೇವರೂ ಬೇಸರದೊಳಿದ್ದಾನೆ ಸದ್ಯ.
ವಿಪರೀತ ತುಟ್ಟಿಯಾಗಿದೆ ಪಂಚಖಾದ್ಯ.
ಮುಖ್ಯಮಂತ್ರಿಗೆ ಮೊನ್ನೆ ಮಾಡಿದನು ಅರ್ಜಿ
ಎಷ್ಟು ದಿನ ಕಾಯಬೇಕಾದೀತು ಮರ್ಜಿ ?

### ೧೦೪೦. ಠಕ್ಕರಬಾಪಾ ಹೇಳಿದ್ದು

ದೇವಲೋಕದ ಧೋಬಿ ಧರೆಗಿಳಿದ ವಿನಹಾ
ರಾಜಕೀಯವ ತೊಳೆಯುವವನಾರು ಪುನಹಾ ?
ಬಾಪೂಜಿ ಒಮ್ಮೆ ಮಾಡಿದ್ದುಂಟು ಚೊಕ್ಕ
ಈಗ ಇವರಿಗೆ ಬೇಕು ತಿನ್ನಲಿಕೆ ರೊಕ್ಕ.

## ೧೦೪೧. ನಾರದ ಹೇಳಿದ್ದು

ದೇವಲೋಕದ ನಾರದನು ಬಂದು ಮೊನ್ನೆ
ಕರೆದುಕೊಂಡನು ನನ್ನ ಮಾಡಿ ಕೈಸನ್ನೆ.
ಹೇಳಿದನು : ದೇಸಾಯಿ, ಚುಟಕುಗಳ ಬರಹ
ಸರ್ವವಿಧದಿಂದಲೂ ವಿಪರೀತ ತರಹ.

## ೧೦೪೨. ಮರಳಿದೆನು

ದೇವಲೋಕಕೆ ಹೋಗಿ ಮರಳಿದೆನು ನಿನ್ನೆ
ಬಾ ಎಂದು ರಂಭೆ ಮಾಡಿದಳು ಕೈಸನ್ನೆ.
ನಮ್ಮೂರ ನಾಗಿಯೇ ಸುಕುಮಾರಿ ಎಂದೆ.
ಕೂಡಲೇ ಅಲ್ಲಿಂದ ಹಿಂದಿರುಗಿ ಬಂದೆ.

## ೧೦೪೩. ಸುಲಭ ಉಪಾಯ

ದೇಶದೊಳಗಿಲ್ಲ ಸಾಕಷ್ಟು ಆಹಾರ
ಊಟ ಬೀಡಬೇಕಂತೆ ಪ್ರತಿ ಸೋಮವಾರ
ನಿತ್ಯವೂ ಊಟ ಬಿಟ್ಟರೆ ಬಹಳ ಲೇಸು
ಆಹಾರವೂ ಉಳಿದು ಕಿಸೆಯೊಳಗೆ ಕಾಸು.

## ೧೦೪೪. ದೇಶ ಸೇವಕ ಮತ್ತು ರಾಜಕಾರಣಿ

ದೇಶಸೇವಕನಾಗಬೇಕೆಂದು ಹೊರಟೆ
ಬಾಪೂಜಿ ತಂದುಕೊಟ್ಟರು ಕೈಲಿ ಗೆರಟೆ.
ರಾಜಕಾರಣಿಯಾಗಬೇಕೆನಲು, ಬಾಪು
ಕೈಯೊಳಗೆ ತಂದು ಕೊಟ್ಟರು ಒಂದು ಸೋಪು.

## ೧೦೪೫. ದೇಶ ಸೇವಕ

ದೇಶಸೇವಕನೆಂದು ಗಳಿಸಿದನು ಹೆಸರು.
ಕೃತಿ ನೋಡಿದರೆ ಇವನ ಕೈ ತುಂಬ ಕೆಸರು
ಕಳ್ಳಬಾಜಾರದಲಿ ಗಳಿಸಿದನು ಲಕ್ಷ
ಈ ಪ್ರಜಾರಾಜ್ಯದಲಿ ಈತನಿಗೆ ಮೋಕ್ಷ.

## ೧೦೪೬. ದೇಶ ಸೇವಕರೆಂದು

ದೇಶ ಸೇವಕರೆಂದು ಹಾಕಿದರು ಒಳಗೆ.
ನಿಮಿಷದಲಿ ಭಾರತೀಯ ತಲೆಯಾಯ್ತು ಕೆಳಗೆ
ಇದ ನೋಡಿ ಮರುಗಿದನು ಗಾಂಧೀ ಮಹಾತ್ಮ
ಒರಲೆಗಳ ಹುತ್ತಾಯ್ತೆ ಭಾರತದ ಆತ್ಮ?

## ೧೦೪೭. ಸಚಿವರು ಹೇಳಿದ್ದು

ದೇಸಾಯಿ ದಿನಕರನ ಚುಟುಕುಗಳ ಹಿಂದೆ
ಅಡಗಿರುವ ಕಾವ್ಯಲಕ್ಷಣ ಯಾವುದೆಂದೆ?
ಯಾವ ಲಕ್ಷಣವಿಲ್ಲ; ಕಿಡಗೇಡಿ ಪದ್ಯ.
ಸಾಹಿತ್ಯವಾಗುವುದೆ ಬರೆದರೆ ಕುಚೋದ್ಯ?

## ೧೦೪೮. ಮುಖ್ಯಮಂತ್ರಿ ಹೇಳಿದ್ದು

ದೇಸಾಯಿ ಮಾಡಬಾರದು ಚೇಷ್ಟೆ ನೀನು
ಮಾಡಬಾರದು ಮತ್ತೆ ಶ್ರೀಹರಿಗೆ ಫೋನು
ಶ್ರೀಹರಿಯ ರಾಜ್ಯ ನಡೆಯುವುದಿಲ್ಲ ಇಲ್ಲಿ
ನನ್ನ ತಾಬೆಯಲುಂಟು ನೀನಿರುವ ಗಲ್ಲಿ

## ೧೦೪೯. ಆಡಳಿತ

ದೈತ್ಯ ಮರೆಯಾದೊಡನೆ ಬಂದನು ಪಿಶಾಚಿ
ಲೋಕಶಾಹಿಗೆ ತಪ್ಪಲಿಲ್ಲ ಬಿಕನಾಸಿ
ಎಡೆಬಿಡದೆ ಹೋರಾಡಿದರೆ ಸಕಲ ಜನತೆ
ಬಿಕನಾಸಿ ನೆಲಕುರಳಿ ಮಿಂಚುವುದು ಹಣತೆ.

## ೧೦೫೦. ನಮ್ಮ ಸರಕಾರ

ದೊಡ್ಡದಾಗಿರಬಹುದು ನಮ್ಮ ಸರಕಾರ
ಆದರೂ ನನಗಿಲ್ಲ ಅದರ ದರಕಾರ
ದೊಡ್ಡದಾಗಿರದೆ ಇದು ಇರಬಹುದು ಸಣ್ಣ
ಚೊಕ್ಕವಾಗಿರಬೇಕು ಅದರ ಮೈಬಣ್ಣ.

## ೧೦೫೧. ಪುಢಾರಿಗಳ ಕತೆ

ದೊಡ್ಡಗುಳ್ಳಾಪುರದ ನೂತನ ಪುಢಾರಿ
ಬೆಳಕು ಹರಿಯುವ ಮುನ್ನ ಆದನು ಪರಾರಿ.
ಮತ್ತೆ ದಾವಣಗೆರೆಯ ಮುಂದಾಳು ಸುದ್ದಾ
ಜನರ ಹಣ ತಿಂದರೂ ಕೋರ್ಟಿನಲಿ ಗೆದ್ದ!

## ೧೦೫೨. ದೊಡ್ಡವರ ಹಾರಾಟ

ದೊಡ್ಡವರ ಹಾರಾಟ ಆಕಾಶಯಾನ.
ಉದ್ದಾಮ ಕವಿಗಳಿಗೆ ಅಧ್ಯಕ್ಷ ಸ್ಥಾನ
ಚುಟಕ ಬರೆಯುವ ಕವಿಗೆ ಸೈಕಲ್ ಸವಾರಿ
ಚೇತರಿಸಿಕೊಳ್ಳುವನು ಬಿದ್ದರೂ ಜಾರಿ.

## ೧೦೫೩. ದೊಡ್ಡವರು

ದೊಡ್ಡವರು ದೂರದಲ್ಲಿರುವುದೇ ವಾಸಿ.
ಸನಿಯ ಬಂದರೆ ಅವರು ಪೂರ್ಣ ಬಿಕನಾಸಿ
ಸೂರ್ಯದೇವನು ಸನಿಯ ಬಂದರೆ ಫಜೀತಿ
ನಿಮಿಷದಲಿ ಭಸ್ಮವಾಗುವುದು ಮನುಜಜಾತಿ.

## ೧೦೫೪. ರಾಜಕೀಯ ಸುಂಟರಗಾಳಿ

ದೊಡ್ಡ ಸುಂಟರಗಾಳಿ ಬಂತು ಈ ಹೊತ್ತು
ಹಾರಿಹೋದವು ವೇಷಧಾರಿಗಳ ಎತ್ತು,
ಬರಡೆತ್ತುಗಳ ಜೋಡಿ ಉರುಳಿದ್ದರಿಂದ
ಅಖಿಲ ಭಾರತಕಾಯ್ತು ಅಮಿತ ಆನಂದ.

## ೧೦೫೫. ಗಣಪನಿಗೆ

ದೊಳ್ಳು ಹೊಟ್ಟೆಯ ಗಣಪನಿಗೆ ನಮಸ್ಕಾರ
ಆಗಬಾರದು ಕಳ್ಳ ಪೇಟೆಯುದ್ಧಾರ.
ಗಣಪನೆಂದನು; ನನ್ನ ದೊಳ್ಳಿಗೂ ಸದ್ಯ
ಸೆಟ್ಟಿ ನೀಡುವುದಿಲ್ಲ ಭರ್ತಿ ನೈವೇದ್ಯ.

## ೧೦೫೬. ಸಾಗಾಟದ ಮಹಿಮೆ

ಧನಧಾನ್ಯ ಸಂಪತ್ತು ಬಂದರೂ ತೇಲಿ
ದಂಡೆ ಮುಟ್ಟುವ ತನಕ ಸಂಪೂರ್ಣ ಖಾಲಿ!
ಇದು ಹೇಗೆ ಎಂದು ಕೇಳಿದನೊಬ್ಬ ವ್ಯಕ್ತಿ
ಇದಕೆನ್ನುವರು ಕಳ್ಳಸಂತೆಗಳ ಶಕ್ತಿ

## ೧೦೫೭. ಧನಲಕ್ಷ್ಮಿಯ ಕಥೆ

ಧನಲಕ್ಷ್ಮಿ, ನೀನೆಲ್ಲಿ? ಎಲ್ಲಿಯೂ ಕಾಣೆ!
ಗೊತ್ತಿಲ್ಲವೇನೂ, ಮಗು, ನನ್ನ ಹೊಸ ಕೋಣೆ?
ಕಡಕಿ ಇರದಿದ್ದರೂ ಬಹಳ ಅನುಕೂಲ!
ಮೂಲೆ ಮೂಲೆಗೆ ಉಂಟು ಸಕ್ಕರೆಯ ಚೀಲ.

## ೧೦೫೮. ಧರ್ಮ

ಧರ್ಮವೆಂಬುದು ಅರ್ಥ ಬೆಂದ ಇಟ್ಟಂಗಿ
ದೇವದಾಸಿಯ ಮನೆಯ ಕಟ್ಟಿದರು, ತಂಗಿ.
ಯೋನಿ ಪೀಠದ ಮೇಲೆ ಈಶ್ವರನ ಲಿಂಗ
ಗಂಟೆ ಬಾರಿಸಿ ಪೂಜೆ ಮಾಡಿದನು ಮಂಗ.

## ೧೦೫೯. ದೇವರು ಹೇಳಿದ್ದು

ಧರ್ಮ ಸ್ಥಾಪನೆಗಾಗಿ ಇನ್ನೊಮ್ಮೆ ಹುಟ್ಟಿ
ನಾ ಸ್ವಂತ ಆಗಬೇಕೆನ್ನುವೆನು ಸೆಟ್ಟಿ
ಆಮೇಲೆ ಎಲ್ಲವೂ ಆಗುವದು ಅಗ್ಗ
ವ್ಯಾಪಾರಿಗಳ ಕೈಗೆ ಕಟ್ಟುವೆನು ಹಗ್ಗ.

## ೧೦೬೦. ಗೃಹಲಕ್ಷ್ಮಿಯ ಗಮನಕ್ಕೆ

ಧರಿಸಿಕೊಂಡರೆ ನೀನು ಆಧುನಿಕ ವಂಕಿ
ಸಂಸಾರದೊಳಗಿಲ್ಲ ಜೀವನದ ಬೆಂಕಿ
ಹಚ್ಚಿದರೆ ಸಾಕು ನಂದಾದೀಪ ಮೂರು
ಜಾಸ್ತಿ ಹಚ್ಚಿದರೆ ಮಂತ್ರಿಗಳ ತಕರಾರು.

### ೧೦೬೧. ಈ ತರದ ಇಸಮು

ಧರೆಯೊಳಗೆ ಅತಿ ವಿರಳ ಈ ತರದ ಇಸಮು
ಪತ್ತೆಯಾಗದು ಇವನು ನುಂಗಿರುವ ರಕಮು
ನೋಡಲಿಕೆ ಬಹಳ ಸಂಭಾವಿತನು ಮತ್ತೆ
ಇವನ ಚಟುವಟಿಕೆ ಆಗುವುದಿಲ್ಲ ಪತ್ತೆ.

### ೧೦೬೨. ದೊಂಬಿ

ಧರೆಯೊಳಗೆ ಮರಳಿ ಅವತರಿಸಿದನು ಕಂಸ.
ಕೈಗೆ ಸಿಕ್ಕಿದ ಆಸ್ತಿ ಮಾಡಿದನು ಧ್ವಂಸ,
ರೈಲುಗಾಡಿಯ ಜೊತೆಗೆ ಸೈಕಲ್ಲು ಟ್ರಕ್ಕು
ಬೆಂಕಿಗಾಹುತಿಯಾಯ್ತು; ಇದಕಿಲ್ಲ ಬ್ರೆಕ್ಕು.

### ೧೦೬೩. ಕಲಾರಚನೆ

ಧರೆಯೊಳಗೆ ವಿರಳವಾಗಿದೆ ಕಲಾರಚನೆ
ವಿಫುಲವಾಗಿದೆ ಸಂತೆಯಲಿ ಸಿಗುವ ಬದನೆ
ನೂರು ಪಂಕ್ತಿಗಳಲ್ಲಿ ಹೊಳೆದರೂ ಮೂರು
ಕಾಲರಾಯನ ಮೂಗಿನಲಿ ಕವಿಯ ಬೇರು.

### ೧೦೬೪. ವಿಶ್ವಸಂಘ

ಧರೆಯೊಳಗೆ ಶ್ರೇಷ್ಠವಾದುದು ವಿಶ್ವಸಂಘ.
ರಷ್ಯ ಅಮೇರಿಕ ಕೂಡಿ ನುಡಿಸುವ ಮೃದಂಗ
ಇಬ್ಬರೂ ನುಡಿಸಿ ಒಂದೊಂದು ಬದಿಯಿಂದ
ಜೋರು ಜೋರಾಗಿ ಒದರಾಡುವರು, ಕಂದ.

### ೧೦೬೫. ಆಧುನಿಕ ನಿರೂಪಣೆ

ಧರೆಯೊಳಗೆ ಹರಿಯೊಬ್ಬನೇ ಸರ್ವವ್ಯಾಪಿ
ಪ್ರತಿಯೊಂದು ಮನೆಯೊಳಗೆ ಕುಡಿಯುವನು ಕಾಫಿ
ಭಗವಂತನಿಗೆ ಯಾವುದೂ ಭೇದವಿಲ್ಲ.
ಸಕ್ಕರೆಯ ಸಿಗದಿರಲು ತಿನ್ನುವನು ಬೆಲ್ಲ.

### ೧೦೬೬ ಸಾಹೇಬರು

ಧವಳ ಸಾಹೇಬರೆಲ್ಲಾ ಹೊರಟು ಹೋಗಿ
ಕವಳ ಸಾಹೇಬರು ನಮಿಸು ತಲೆಬಾಗಿ
ಕವಳ ಒಂದೇ ಅಲ್ಲ ಎಲ್ಲವನು ತಿಂದು
ಸರಕಾರ ನಡೆಸುವರು, ಹೇ ದೀನಬಂಧು.

### ೧೦೬೭. ನಾಲ್ಕು ಹಂತಗಳು

ಧಾನ್ಯಗಳ ಬೆಲೆಯನ್ನು ನಿಗದಿಪಡಿಸಿಲ್ಲ
ನಿಗದಿಪಡಿಸಿದ ಮೇಲೆ ಕಾಳು ಸಿಗಲಿಲ್ಲ
ಸಿಕ್ಕಿದರೆ ಸಾಕಾಗಲಲ್ಲ ಊಟಕ್ಕೆ
ಎಣಿಸಿಬಿಡಿ ಆಗಸದ ದಶಕೋಟಿ ಚಿಕ್ಕೆ.

### ೧೦೬೮. ಜೀವನದ ಹಕ್ಕು

ನಕ್ಕು ನಲಿದಾಡಿಯೇ ಸಾಯಬೇಕೆಂಬೆ.
ಇದು ನನ್ನ ಜೀವನದ ಹಕ್ಕು, ಜಗದಂತೆ.
ಈ ಹಕ್ಕಿಗಾಗಿ ಹೋರಾಡುವೆನು ಕೊನೆಗೆ
ಹೋರಾಡಿ ಹೋರಾಡಿ ಮರುಳುವೆನು ಮನೆಗೆ.

### ೧೦೬೯. ಸಾಮಾನ್ಯ ಜನತೆ

ನಕ್ಷತ್ರಗಳ ನಭದ ಸಾಮಾನ್ಯ ಜನತೆ
ತಾರೆಗಳಿಗೆಂದಿಗೂ ಸ್ಥಿರವಾದ ಘನತೆ
ಸ್ಥಿರತೆಯಿಲ್ಲದ ಚಂದ್ರನಲಿ ದೊಡ್ಡ ದೋಷ.
ದೇಶನಾಯಕರಂತೆ ದಿನಕೊಂದು ವೇಷ.

### ೧೦೭೦. ಕಾವ್ಯಶಕ್ತಿ

ನಕ್ಷತ್ರಗಳ ಚುಚ್ಚಿಬಿಡುವಂಥ ಶಕ್ತಿ
ಅಕ್ಷರಕೆ ಬರಲು ಕವಿರಾಜನಿಗೆ ಮುಕ್ತಿ
ವರ್ಣಮಾಲೆಯ ಅಕ್ಷತೆಯ ಮಂತ್ರದಿಂದ
ಪ್ರೇತಗಳನೂ ನಿಲಿಸಿ ಕುಣಿಸಬಹುದೆಂದ.

## ೧೦೭೧. ದೇವರ ನಿಘಂಟು

ನಕ್ಷತ್ರಗಳ ಸಂಖ್ಯೆ ಕೋಟಿ ಹದಿನೆಂಟು
ಆಗಸದ ಬರವಣಿಗೆ ದೇವರ ನಿಘಂಟು.
ಪ್ರತಿಯೊಂದು ಭಾಷೆಗೂ ಈ ಶಬ್ದಕೋಶ
ಈ ಕೋಶದೊಳಗುಂಟು ಅವನ ಸಂದೇಶ.

## ೧೦೭೨. ನಗ್ನತೆ

ನಗ್ನವೆಂಬುದು ಸತ್ಯ; ಹುಸಿ ಅಲಂಕಾರ.
ಪೂರ್ಣ ಬತ್ತಲೆಯಾಗಲೆನ್ನ ಸಂಸಾರ.
ನಗ್ನತೆಗೆ ಮಾತ್ರವೇ ಅಂಜುವುದು ಭೂತ.
ನೀ ಕೂಡ ನಗ್ನವಾಗಿರು, ಭಾವಗೀತ.

## ೧೦೭೩. ಹಗಲುಗನಸು

ನಡು ಹಗಲಿನಲಿ ನನಗೆ ಬೀಳುವುದು ಕನಸು
ಈ ಕನಸಿನಿಂದ ಚಿಗುರುವದುಂಟು ಮನಸು
ಒಂದೊಂದು ಚಿಗುರಿಗೂ ಒಂದೊಂದು ಶಾಲೆ
ಮೂಡಿದರೆ ಶಾರದಾಂಬೆಗೆ ಪುಷ್ಪಮಾಲೆ.

## ೧೦೭೪. ಚುಟುಕದ ಕಾವ್ಯವಸ್ತು

ನಡೆದದ್ದು ಕಂಡದ್ದು ಕೇಳಿದ್ದು ಎಲ್ಲಾ
ಸರಿಯಾಗಿ ಹಿಂಡಿದರೆ ಸೂಸುವುದು ಬೆಲ್ಲ
ಈ ಬೆಲ್ಲದಿಂದ ಇಳಿಸಿದರೆ ರಸ ಪಾಕ
ಸಾಹಿತ್ಯಲೋಕದಲ್ಲಿ ಚುಟುಕುಗಳ ಶ್ಲೋಕ.

## ೧೦೭೫. ನಡೆದದ್ದು ನೋಡಿದರೆ

ನಡೆದದ್ದು ನೋಡಿದರೆ ಈ ದೇಶದೊಳಗೆ
ಹಾಕಬೇಕಾದೀತು ಬಾಮು ತಲೆಕೆಳಗೆ
ಪ್ರತಿಯೊಂದು ಪೇಟೆಯಲಿ ಕಳ್ಳಬಜಾರ
ಜನಕೋಟಿಗಳಿಗಿಲ್ಲ ಯಾವ ಆಧಾರ.

## ೧೦೭೬. ಜಮಾಬಂದಿಯ ಕತೆ

ನಡೆದಿತ್ತು ನಮ್ಮೂರಿನಲ್ಲಿ ಜಮಾಬಂದಿ
ಅಧಿಕಾರಿಗಳ ಮುಂದೆ ನೆರೆದಿತ್ತು ಮಂದಿ.
ಲೆಕ್ಕಪತ್ರಗಳಿಂದ ಹೊರಬಿತ್ತು ಬೆಕ್ಕು
ಈ ಬೆಕ್ಕು ಶಾನುಭೋಗರು ಗೈದ ಠಕ್ಕು.

## ೧೦೭೭. ಮಂತ್ರಿಯ ಹುಟ್ಟುಹಬ್ಬ

ನಡೆದಿತ್ತು ಮುಖ್ಯಮಂತ್ರಿಯ ಹುಟ್ಟುಹಬ್ಬ
ಕಾಣಿಕೆಯ ಕಳಿಸಿದನು ನಮ್ಮೂರ ಸುಬ್ಬ
ಬಂದ ಪಾರ್ಸಲ್ ಬಿಚ್ಚಿ ನೋಡಿದರೆ ಧೂಪ!
ಮುಖ್ಯಮಂತ್ರಿಗೆ ಬಂತು ವಿಪರೀತ ಕೋಪ.

## ೧೦೭೮. ಪುಢಾರಿಗಳ ವೀರಗಾಥಾ

ನಡೆ ಮುಂದೆ, ನಡೆ ಮುಂದೆ, ನಡೆ ಮುಂದೆ, ಮುಂದೆ!
ಶೀಘ್ರದಲಿ ನಿನ್ನ ಬೆನ್ನಿಗೆ ನಾನು ಬಂದೆ
ಆದಷ್ಟು ಬೇಗ ಪ್ರಗತಿಯ ಸೀಮೆ ದಾಟಿ
ಕಿಸೆಯೊಳಗೆ ಹಾಕೋಣ ಒಂದೆರಡು ಕೋಟಿ.

## ೧೦೭೯. ಅಗ್ನಿನಾರಾಯಣ

ನನಗಿಲ್ಲ ಯಾವಾಗಲೂ ಯಾವ ದುಃಖ
ನಾ ಮುಟ್ಟಿದ್ದೆಲ್ಲವೂ ಆಗುವುದು ಚೊಕ್ಕ
ಕೊನೆಗೊಮ್ಮೆ ಈ ಲೋಕವನೆ ಮುಗಿಸಿಬಿಟ್ಟು
ನೋಡಬೇಕೆನ್ನುವುದೇ ಅಣುಯುಗದ ಗುಟ್ಟು.

## ೧೦೮೦. ಕುರ್ಚಿ

ನನಗೇಕೆ ಈ ಕುರ್ಚಿ? ಸಾಕು ಈ ನೆಲವು
ನನ್ನ ಪಾಲಿಗೆ ಬರಲಿ ಬಡಜನರ ಒಲವು
ಈ ಒಲವಿನೊಳಗುಂಟು ಜೀವನದ ಸಾರ
ಕುರ್ಚಿಯೆಂಬುದು, ಮಗನೆ, ಒಣ ಅಲಂಕಾರ.

## ೧೦೮೧. ನನಗೇಕೆ ಭಾನಗಡಿ

ನನಗೇಕೆ ಭಾನಗಡಿ ? ಸಾಕಪ್ಪ ಸಾಕು.
ನಾ ಹಾಗೆ ಹೇಳಿದ್ದು ಆಗಿತ್ತು ಜೋಕು
ಒಂದು ಮಾತಾಡಿದರೆ ಇನ್ನೊಂದು ಅರ್ಥ
ಈ ರೀತಿ ಹುಟ್ಟುವುದು ಇಲ್ಲದ ಅನರ್ಥ.

## ೧೦೮೨. ನನಗೇಕೆ ಶೃಂಗಾರ

ನನಗೇಕೆ ಶೃಂಗಾರ ? ಬೇಡ ಕಸರತ್ತು
ಭಾವನೆಯ ಚಿಪ್ಪಿನಲಿ ಹೊಳೆಯುವುದು ಮುತ್ತು.
ಗರ್ಭದಲಿ ಕುಡಿಯೊಡೆದು ಮೂಡಿದರೆ ಭಾಷೆ
ಚೆನ್ನಾಗಿ ಚಿಗುರುವುದು ಮಾನವನ ಆಸೆ.

## ೧೦೮೩. ನನಗೇಕೆ ಷಷ್ಟ್ಯಬ್ಧಿ ?

ನನಗೇಕೆ ಷಷ್ಟ್ಯಬ್ಧಿ? ಸಾಕು ಬರವಣಿಗೆ
ಕವಿಗೆ ಬೇಕಾಗಿಲ್ಲ ಯಾವ ಮೆರವಣಿಗೆ
ಮೂಲೆಯಲ್ಲಿ ಕುಳಿತು ಬರೆದರೆ ಒಂದು ಪದ್ಯ
ತಾಯ್ನುಡಿಗೆ ಅರ್ಪಿಸಿದ ಹಾಗೆ ನೈವೇದ್ಯ.

## ೧೦೮೪. ಚುಟಕಗಳ ರಾಜ

ನನಗೆನ್ನುವರು ಇವರು ಚುಟಕಗಳ ರಾಜಾ
ಈ ರೀತಿ ನುಡಿಸಬಾರದು ಬ್ಯಾಂಡು–ಬಾಜಾ.
ರಾಜರೆಲ್ಲಾ ಹೊರಟು ಹೋಗುವರು ಕೊನೆಗೆ
ಒಂದು ದಿನ ಬೀಗ ಹಾಕುವರು ಅರಮನೆಗೆ.

## ೧೦೮೫. ಸಾಮ್ರಾಟ

ನನಗೆನ್ನುವರು ಇವರು ಚುಟಕ ಸಾಮ್ರಾಟ
ಉರುಳಿದವು ನೆಲಕೆ ಸಾಮ್ರಾಟರ ಕಿರೀಟ
ಈ ಚುಟುಕಗಳು ಮೂರು ದಿನ ಆಟವಾಡಿ
ಮಣ್ಣುಮುಕ್ಕಿದರೆ ಆಶ್ಚರ್ಯಪಡಬೇಡಿ.

## ೧೦೮೬. ಒಂದೇ ದಾರಿ

ನನಗೆ ಒಂದೇ ದಾರಿ ; ಸೋಷಲಿಸ್ಟ್ ಪಕ್ಷ
ಹಾರಾಟ ಮಾಡಿಲ್ಲ ತಿನ್ನಲಿಕೆ ಭಕ್ಷ.
ಸೋತರೂ ಬಿಡಲಿಲ್ಲ, ಹಾಕಿದೆನು ಹೆಜ್ಜೆ
ಕಟ್ಟಲಿಲ್ಲವೊ ಸಂಧಿಸಾಧಕರ ಗೆಜ್ಜೆ.

## ೧೦೮೭. ನನಗೆ ಒಂದೇ ಹುಚ್ಚು

ನನಗೆ ಒಂದೇ ಹುಚ್ಚು, ಆ ಹುಚ್ಚು ಏನು ?
ಆಕೆ ಎಂದಳು; ಹೌದು, ತುಟಿ ಮತ್ತೆ ಜೇನು.
ನಾನೆಂದೆ; ನಿನ್ನಾಣೆ, ಈ ಮಾತು ಸುಳ್ಳು.
ನನಗೆ ಹಿಡಿದದ್ದು, ಸಖಿ, ಕವನಗಳ ಮಳ್ಳು.

## ೧೦೮೮. ಪ್ರಾಸದ ಹುಚ್ಚು

ನನಗೆ ಪ್ರಾಸದ ಹುಚ್ಚು ಎನ್ನುವುದು ಸತ್ಯ.
ಈ ಹುಚ್ಚಿನಿಂದ ನಾನಾದೆ ಕೃತಕೃತ್ಯ
ಹುಚ್ಚು ಇದ್ದರೆ ಮಾತ್ರ ಬಾಳು ಸಾಫಲ್ಯ.
ಇಲ್ಲದಿದ್ದರೆ ಬಾಳು ಬರಿ ಕಾಯಿಪಲ್ಯ.

## ೧೦೮೯. ನನಗೆ ಬೇಕಾಗಿಲ್ಲ

ನನಗೆ ಬೇಕಾಗಿಲ್ಲ ಬೆಡಗು ಬಿನ್ನಾಣ
ಭಾವನೆಯ ನುಡಿಗಿರಲಿ ಅನುಭವದ ತ್ರಾಣ
ನನಗೆ ಬೇಕಾಗಿಲ್ಲ ಮೂರು ಮೊಳ ಉದ್ದ.
ಗೇಣುದ್ದ ಬರೆದ ಕವಿ ಸರ್ವಜ್ಞ ಗೆದ್ದ.

## ೧೦೯೦. ಯಾರದೂ ಮರ್ಜಿ

ನನಗೆ ಬೇಕಾಗಿಲ್ಲ ಯಾರದೂ ಮರ್ಜಿ
ಎಂದಿಗೂ ಕೊಡಲಾರೆ ಯಾರಿಗೂ ಅರ್ಜಿ
ಯಾರ ದರಕಾರವಿಲ್ಲದ ಕಲ್ಲು ನಾನು.
ನನ್ನ ಮೈಮೇಲೆ ಹೊಳೆದರೆ ಸಾಕು ಭಾನು.

## ೧೮೯೧. ಚುಟಕದ ಸವಾರಿ

ನನಗೆ ಬೇಕಾದದ್ದು ಚುಟಕದ ಸವಾರಿ
ಮರುಳುವೆ ಚಂದ್ರಲೋಕದವರೆಗೆ ಹಾರಿ
ಇದಕೆ ಖರ್ಚಿಲ್ಲ ಒಂದೂ ಕಾಸು ಕೂಡಾ
ನಿಮಿಷದಲಿ ಮುಗಿಸುವೆನು, ತಾಸು ಸಹ ಬೇಡ.

## ೧೮೯೨. ಸರಿಯಾದ ಊಟ

ನನಗೆ ಬೇಕಾದದ್ದು ಸರಿಯಾದ ಊಟ.
ಅವಳ ಜೊತೆಯಲಿ ನಿತ್ಯ ತುಸು ಆಟಪಾಟ
ಎರಡು ಹೊತ್ತಿಗೆ ಕಾಫಿ ಮತ್ತೆ ಬಿಸಿ ದೋಸೆ
ನನಗೆ ಇಲ್ಲವು ಬೇರೆ ಯಾವುದೂ ಆಸೆ.

## ೧೮೯೩. ಮುಳ್ಳು

ನನಗೆ ಬೇಕಾದದ್ದು ಹೂವಲ್ಲ, ಮುಳ್ಳು
ಮುಳ್ಳು ಕೈಯೊಳಗಿರಲು ಅಂಜುವದು ಸುಳ್ಳು
ಹೂವು ನನಗಿರಲಿ, ಸಖಿ, ನನಗಿರಲಿ ಪೆನ್ನು
ಈ ಪೆನ್ನಿಗಿರುವ ಮುಳ್ಳಿನ ತುದಿಯೆ ಹೊನ್ನು.

## ೧೮೯೪. ನನ್ನ ಮಕ್ಕಳು

ನನಗೆ ಮಕ್ಕಳು ಮೂರು! ಹಿರಿಯ ಮಗು ಬಾಲೆ
ಇನ್ನೊಂದು ಹೆಣ್ಣು ಹುಟ್ಟಿದಳು ಆಮೇಲೆ
ಗಂಡು ಬೇಕೆಂದು ಬಯಸಿದೆವು ಬಹಳಷ್ಟು
ಕೊನೆಗೆ ಹುಟ್ಟಿದ ಗಂಡು; ಶಿಕ್ಷಣದ ಟ್ರಸ್ಟು.

## ೧೮೯೫. ಮುನ್ನುಡಿ

ನನಗೆ ಮುನ್ನುಡಿ ಬೇಕು ನಿಮ್ಮ ಕಡೆಯಿಂದ
ಅಧಿಕವಾಗುವುದು ಈ ಪುಸ್ತಕದ ಅಂದ
ಪ್ರತಿಗಳೂ ಖರ್ಚಾಗಿ ಕಿಸೆಯೊಳಗೆ ಕಾಸು
ಸರ್ವ ವಿಧದಿಂದಲೂ ಲೇಖಕನ ಲೇಸು.

## ೧೧೯೬. ಸಾದಾ ಊಟ

ನನಗೆ ಸಾದಾ ಊಟ ಸೇರುವುದು ಭಾರಿ
ಕೋಳಿ ಇದ್ದರೆ ಸಾಕು, ಬೇಡ ತರಕಾರಿ.
ಮತ್ತೆ ಮುಂಜಾನೆ ಒಂದಿಷ್ಟು ಆಮ್ಲೇಟು
ಹೆಚ್ಚು ಬೇಕಾಗಿಲ್ಲ ನಾಕೈದು ಪ್ಲೇಟು.

## ೧೧೯೭. ನನಗೆ ಸಿಕ್ಕಿದ ಇಸಮು

ನನಗೆ ಸಿಕ್ಕಿದ ಇಸಮು ಫೋಕರಿ ಫಟಿಂಗ
ಸಾಕಾಯ್ತು ಮೂರು ದಿನದಲಿ ಇವನ ಸಂಗ.
ಇನ್ನೊಬ್ಬ ಸಿಕ್ಕಿದನು, ಇವನೂ ಲಫಂಗ
ಎಲ್ಲವೂ ನಿನ್ನಾಟ, ಹೇ ಪಾಂಡುರಂಗ.

## ೧೧೯೮. ನನ್ನ ಜಿಲ್ಲೆ

ನನ್ನ ಕನ್ನಡ ಜಿಲ್ಲೆ ಬಡತನದ ಬಿಲ್ಲೆ
ಈ ಬಿಲ್ಲೆ ಹಚ್ಚಿಕೊಂಡವರಾರು, ನಲ್ಲೆ ?
ಆಗೇರ ಮುರಕುಂಡಿ, ಹಾಲಕ್ಕಿ ರಾಕು
ಮುಕ್ರಿ ವೆಂಕಟರಮಣ, ಹಳ್ಳೇರ ತೋಕು.

## ೧೧೯೯. ಕನ್ನಡ ತಾಯಿಗೆ

ನನ್ನ ಕನ್ನಡ ನುಡಿಯೆ, ನಾ ನಿನ್ನ ಕೂಸು
ಇಲ್ಲದಿರಬಹುದು ನಾ ಬರೆದದದ್ದು ಲೇಸು.
ತೊದಲು ನುಡಿಯೆಂದು ಮನ್ನಿಸಬೇಕು, ತಾಯಿ
ನಾ ನಿನ್ನ ಕಂದಯ್ಯನಲ್ವೆ ದೇಸಾಯಿ ?

## ೧೨೦೦. ಕನ್ನಡ ನುಡಿಗೆ

ನನ್ನ ಕನ್ನಡ ನುಡಿಯೆ, ನೀನೆಷ್ಟು ಚಂದ !
ಏನು ಗೀಚಿದರು ಆಗುವುದು ಶ್ರೀಗಂಧ
ಸಿಂಗರದ ಗಣಿ ನಿನ್ನ ಶಬ್ದ ಸಂಪತ್ತು.
ಬಂಗಾರಕಿಂತಲೂ ಶ್ರೇಷ್ಠ ನುಡಿಮುತ್ತು.

## ೧೧೦೧. ಚುಟುಕಮ್ಮನ ಕುಲಗೋತ್ರ

ನನ್ನ ಕವಿತೆಯ, ಹೇಳು, ನಿನಗೇನು ಬೇಕು.
ನೀವೆಲ್ಲರೂ ಹೀಗೆ ಕೇಳಿದ್ದೆ ಸಾಕು.
ನನಗೆ ಬೇಕಾದದ್ದು ಕೋಟಿ ನಕ್ಷತ್ರ
ನಕ್ಷತ್ರಗಳ ಪಿಂಡ ನನ್ನ ಕುಲಗೋತ್ರ

## ೧೧೦೨. ದೊಡ್ಡಪ್ಪ ಹೇಳಿದ್ದು

ನನ್ನ ಕಾಲದಲಿ ಎಲ್ಲಾ ಸಪ್ಪೆ ದಂಥೆ.
ಕಾಲೇಜಿನಲ್ಲಿ ಹುಡುಗಿ ಇರಲಿಲ್ಲ ಅಂದೆ.
ಈಗ್ಗೆ ನೋಡಿದರೆ ಎಲ್ಲಾ ಬಣ್ಣ ಬೇರೆ
ಪ್ರತಿಯೊಂದು ಕ್ಲಾಸಿನಲಿ ತರತರದ ಸೀರೆ.

## ೧೧೦೩. ಕವಿಯ ಉತ್ತರ

ನನ್ನ ಕೈಯೊಳಗಿತ್ತು ಒಂದು ಬಿಳಿ ಮೊಟ್ಟೆ
ಇದಕೆ ಮೂಡಿತು ಕಣ್ಣು, ಮೂಗು, ಕಿವಿ, ರಟ್ಟೆ
ಈ ಹಕ್ಕಿ ಯಾವುದೆನ್ನಲು, ನಾನು ಅಂದೆ:
ಹೆಸರು ದಾದಿಗೆ ಗೊತ್ತು ನಾನಿದರ ತಂದೆ.

## ೧೧೦೪. ನನ್ನ ಗೆಳೆಯರು

ನನ್ನ ಗೆಳೆಯರು ಸೇರಿ ಸರಕಾರಿ ಪಕ್ಷ
ಮೂರು ಜನ ನುಂಗಿದರು ತರತರದ ಭಕ್ಷ
ಉಳಿದವರು ಪಾಪ ಏನೂ ಸಿಗದೆ ಕೊನೆಗೆ
ಖಾಲಿ ಕಿಸೆಯಿಂದಲೇ ಮರಳಿದರು ಮನೆಗೆ.

## ೧೧೦೫. ನನ್ನ ಚುಟಕಗಳು

ನನ್ನ ಚುಟಕಗಳೆಲ್ಲವೂ ಬ್ರಹ್ಮದಂಡ
ಎಂದು ಶ್ರುತಪಡಿಸಿದನು ಗರ್ದಭಿಯ ಗಂಡ
ಅರೆ ನಿಮಿಷದೊಳಗೆ ಇವು ನೀಗುವವು ಪ್ರಾಣ
ಎಂದು ಜಾಹೀರು ಪಡಿಸಿತು ಒಂದು ಕೋಣ.

## ೧೧೧೬. ಒಂದು ಹಕ್ಕಿ

ನನ್ನ ಜೀವನವೆನ್ನುವುದು ಒಂದು ಹಕ್ಕಿ.
ಹಾರಬೇಕೆನ್ನುತಿದೆ ಹಿಡಿಯಲಿಕೆ ಚುಕ್ಕಿ
ಚುಕ್ಕಿ ಸಿಗದಿರಲು, ಸಖಿ, ಮನಕೆ ಸಂತಾಪ
ಸೃಷ್ಟಿ ನಿರ್ಮಿಸಿದ ದೇವರ ಮೇಲೆ ಕೋಪ.

## ೧೧೧೭. ಸಾಸಿವೆಯ ಕಾಳು

ನನ್ನ ಜೀವನವೆಂಬೆ ಸಾಸಿವೆಯ ಕಾಳು
ಕಡಲ ತೀರದ ಒಂದು ಕಣ ನನ್ನ ಬಾಳು
ಬ್ರಹ್ಮಾಂಡದಲಿ ಇದರ ಬೆಲೆಯೆಷ್ಟು ಕಂದ ?
ಇದರ ಪರಿಮಿತಿ ಒಂದು ನಿಮಿಷ, ಗೋವಿಂದ.

## ೧೧೧೮. ಕತ್ತಲೆ ಮತ್ತು ಬೆಳಕು

ನನ್ನ ತಲೆ ಎನ್ನುವುದು ಕತ್ತಲೆಯ ಕೋಣೆ.
ಸುಳ್ಳು ಹೇಳುವುದಿಲ್ಲ, ಕೇಳು, ನಿನ್ನಾಣೆ !
ಒಮ್ಮೊಮ್ಮೆ ಬೆಳಕು ಬಿದ್ದರೆ ಸೂರ್ಯಕಿರಣ.
ಈ ಕಿರಣವೆನ್ನುವುದು ಕವನಗಳ ಚರಣ.

## ೧೧೧೯. ನನ್ನ ತಲೆಯೊಳಗೆ

ನನ್ನ ತಲೆಯೊಳಗಿಲ್ಲ ಯಾವುದು ಲಗೇಜು
ಹೀಗಾಗಿ ನಾನು ಬರೆಯುವುದೆಲ್ಲ ಮೋಜು
ನನ್ನ ಕಿಸೆಯೊಗಿಲ್ಲ ನೋಟುಗಳ ರಾಶಿ
ಹೀಗಾಗಿ ನಾನು ನಿಶ್ಚಿಂತ ಪರದೇಶಿ.

## ೧೧೨೦. ನನ್ನ ತಂದೆ

ನನ್ನ ತಂದೆಯ ಹೆಸರು ದತ್ತಣ್ಣನವರು.
ಹಳ್ಳಿಯಲಿ ಗಿಡಮರದ ಜತೆಗೆ ಬೆಳೆದವರು
ಅವರ ಮಗ ನಾನೊಬ್ಬ ಪಟ್ಟಣನಿವಾಸಿ
ಡಾಂಬರದ ಬೀದಿಗಳ ನೋಡಿದೆನು ಮೂಸಿ.

## ೧೧೨೧. ಅವನು ಹೇಳಿದ್ದು

ನನ್ನ ಪರಿಚಯ ಉಂಟು ರಂಭೆಗೂ ಕೂಡಾ.
ಅವಳ ಜೊತೆಯಲಿ ನಾನು ಕುಡಿದಿರುವೆ ಸೋಡಾ.
ನನಗಿತ್ತು ಆ ಕಾಲದಲಿ ಭರ್ತಿ ಪ್ರಾಯ.
ಈಗ್ಗೆ ಕೇಳುವರು ಯಾರಿಲ್ಲ, ಮಾರಾಯ.

## ೧೧೨೨. ಮುದವೀಡು ಕೃಷ್ಣರಾಯರು ಹೇಳಿದ್ದು

ನನ್ನ ಪರಿಚಯವುಂಟೆ ? ನಾನೆ ಮುದವೀಡು
ಹಳ್ಳಿತಪ್ಪಿ ಜಾರಿತ್ತು ಕನ್ನಡದ ಬೀಡು.
ಎತ್ತಿ ನಿಲಿಸಿದೆವಣ್ಣ ನಾವೆಲ್ಲ ಕೂಡಿ
ಮತ್ತೆ ಮುಗ್ಗರಿಸಿ ಬಿದ್ದಿದೆ ರೈಲುಗಾಡಿ.

## ೧೧೨೩. ಗಾಂಧೀಜಿ ಹೇಳಿದ್ದು

ನನ್ನ ಪ್ರತಿಮೆಯ ತಂದು ನಿಲಿಸಿದರು ಮತ್ತೆ !
ಗತಿಯೇನು ಮೈಯುಜ್ಜಿದರೆ ಬೀದಿಕತ್ತೆ ?
ಕಾಗೆಯೂ ಕೆಲೆಯುವುದು ಮೈಮೇಲೆ ಕೂತು.
ಹೃದಯದೊಳಗಿದ್ದರೇ ನಾನು ಸಾಬೀತು.

## ೧೧೨೪. ಗೆಳತಿಗೆ

ನನ್ನ ಪ್ರೀತಿಯ ಗೆಳತಿ, ನೀನೆಷ್ಟು ಚಂದ ?
ನೀನು ಮಾತನಾಡಿದರೆ ಮನಕೆ ಆನಂದ.
ತೆಗೆದುಕೊಂಡರೆ ಮುತ್ತು ಹೋಗುವುದು ಹೊತ್ತು,
ನನ್ನ ಹುಚ್ಚಿನ ಆಳ ನಿನಗೇನು ಗೊತ್ತು ?

## ೧೧೨೫ ನನ್ನ ಪೆನ್ನು

ನನ್ನ ಪೆನ್ನಿಗೆ ಬೇಡ ಯಾರದು ವಶೀಲಿ.
ಆಗಾಗ್ಗೆ ಮಾಡುವುದು ಮಂತ್ರಿಗಳ ಗೇಲಿ
ಸಾಯಬೇಕೆನ್ನುವುದು ಕಂಡದ್ದು ಬರೆದು
ಬದುಕಬೇಕೆನ್ನುವುದು ಗೋಡೆಗಳ ಮುರಿದು.

## ೧೧೨೬. ಆಧುನಿಕ ನಾರಿಗೆ

ನನ್ನ ಪೆಪ್ಪರಮಿಂಟೆ, ಆಧುನಿಕ ನಾರಿ
ಸಂಸಾರವೆನ್ನುವುದು ಸೈಕಲ್ ಸವಾರಿ
ನೀನೆ ಮುಂದಿನ ಗಾಲಿ, ನಾ ಬೆನ್ನ ಹಿಂದೆ.
ರಾಜಮಾರ್ಗದ ಹುಡಿಯ ಸಾಕಷ್ಟು ತಿಂದೆ.

## ೧೧೨೭. ಮಗಳಿಗೆ

ನನ್ನ ಬೆನ್ನಿಗೆ ಉಂಟು ನೂರಾರು ರಗಳೆ
ನೀನು ಮಾಡಿದ್ದು ಇದು ಚೆನ್ನಾಯ್ತು ಮಗಳೆ
ಗಂಡ ಹುಡುಕುವ ಕೆಲಸ ನೀನೆ ಮಾಡಿದ್ದಿ
ಉಳಿದವರಿಗೂ ಬರಲಿ ಈ ತರದ ಬುದ್ಧಿ.

## ೧೧೨೮. ಕವಿತೆಯ ರಹಸ್ಯ

ನನ್ನ ಭತ್ತದ ತೆನೆಗೆ ಮೂಡಿದವು ಕಾಳು.
ಹದಿನೆಂಟರಲಿ ಕೊನೆಗೆ ಹದಿಮೂರು ಹಾಳು.
ಇದಕೆನ್ನುವರು ಮಗಳೆ, ಕವಿತೆಯ ರಹಸ್ಯ
ಹೀಗೆಂದು ಜಗದಂಬೆ ಹಾಕಿದಳು ನಸ್ಯ

## ೧೧೨೯. ನನ್ನ ಮನದನ್ನೆ

ನನ್ನ ಮನದನ್ನೆ, ನೀ ಬಹಳ ಕೆಟ್ಟವಳು.
ಮುತ್ತು ನೀಡುವುದಿಲ್ಲ, ಕಾರಣವ ಕೇಳು ?
ಆಕೆ ಎಂದಳು : ಮೊದಲು ನಕ್‌ಲೇಸು ತನ್ನಿ.
ಆಮೇಲೆ ನಾನು ನಿಮ್ಮವಳೆಂದು ಅನ್ನಿ.

## ೧೧೩೦. ಕೆಟ್ಟವಳು ನೀನು

ನನ್ನ ಮನದನ್ನೆ, ಬಲು ಕೆಟ್ಟವಳು ನೀನು
ಆಗಾಗ್ಗೆ ನನಗೆ ನೀಡುವುದಿಲ್ಲ ಜೇನು
ಕೇಳಿದರೆ ಏಕೆ ಗಡಿಬಿಡಿ ಎಂದು ಕೂಗಿ
ಕುಳಿತುಕೊಳ್ಳುವೆ ಅಡಿಗೆ ಮನೆಯೊಳಗೆ ಹೋಗಿ.

## ೧೧೩೧. ಮುದುಕಿಯ ಆಯುಷ್ಯ

ನನ್ನ ಮಾತನು ಸ್ವಲ್ಪ ಕೇಳು, ಎಲೆ ಮುದುಕಿ
ಇನ್ನೆಷ್ಟು ವರುಷ ಇರಬೇಕೆಂಬೆ ಬದುಕಿ ?
ನನ್ನ ಮೊಮ್ಮಗನ ಮಗನಿಗೆ ಮಗನು ಹುಟ್ಟಿ
ಮದುವೆಯಾಗುವ ತನಕ ನಾನಿರುವೆ ಗಟ್ಟಿ.

## ೧೧೩೨. ಮದವಳತಿಗೆ

ನನ್ನ ಮಾತನು ಸ್ವಲ್ಪ ಕೇಳು ಮದುವಳತಿ
ಬಾಸಿಗದ ಗೊಂಡೆಯಲಿ ಅರಳುತಿದೆ ಪ್ರೀತಿ
ಈ ಪ್ರೀತಿ ಬಲಿಬಲಿತು ಬಸುರಾಗಿ ನೀನು
ಕೂಸು ಹುಟ್ಟಿದ ಮೇಲೆ ಬಾಳು ಸವಿ ಜೇನು.

## ೧೧೩೩. ಮುತ್ತುಗಳು

ನನ್ನ ಮಾತನು ಸ್ವಲ್ಪ ಕೇಳು, ಮದವಳತಿ
ನಾನಿಡುವ ಮುತ್ತುಗಳು ಹದಿನೆಂಟು ರೀತಿ
ಆಕೆ ಎಂದಳು : ಸಾಕು – ಬಿಡಿ ಸ್ವಲ್ಪ ನಿಲ್ಲಿ
ಈ ರೀತಿಗಳ ನೀವು ಕಲಿತಿದ್ದು ಎಲ್ಲಿ ?

## ೧೧೩೪. ಒಬ್ಬಳೇ ಮಗಳು

ನನ್ನ ಮಾವನಿಗೆ ಇವಳೊಬ್ಬಳೇ ಮಗಳು.
ಯಾವಾಗಲೂ ಇವಳ ವರ್ತನೆಯ ಹೊಗಳು
ಒಮ್ಮೊಮ್ಮೆ ಮೀನುಪಳದಿಗೆ ಇಲ್ಲ ಉಪ್ಪು
ಆಗಾಗ್ಗೆ ಸಪ್ಪೆ ಎಂಬೆನು ಬಸಲೆಸೊಪ್ಪು.

## ೧೧೩೫. ನನ್ನ ಮುಕ್ತಕ

ನನ್ನ ಮುಕ್ತಕಗಳಿಗೆ ಉಂಟೇನು ಮುಕ್ತಿ ?
ಇಲ್ಲ ಮಾರಾಯ, ತಲೆದೋರಿದರೆ ಯುಕ್ತಿ
ನನ್ನ ಮುಕ್ತಕಗಳಿಗೆ ಉಂಟೆ ಕಿಮ್ಮತ್ತು ?
ನನಗೆ ತಿಳಿಯದು; ಕಾಲರಾಯನಿಗೆ ಗೊತ್ತು.

## ೧೧೩೬. ಬೆಕ್ಕು

ನನ್ನ ಮುದ್ದಿನ ಸೊಕ್ಕು ಎನ್ನುವುದು ಬೆಕ್ಕು
ವ್ಯಕ್ತಿ ಸ್ವಾತಂತ್ರ್ಯವೆಂಬುದು ಇದರ ಹಕ್ಕು
ಸರ್ಕಸಿನ ಡೇರೆಯಲಿ ಇದಕಿಲ್ಲ ಸ್ಥಾನ
ಆದರ್ಶಪ್ರಾಯ ಬೆಕ್ಕಿನ ಸ್ವಾಭಿಮಾನ.

## ೧೧೩೭. ಸೊನ್ನೆ

ನನ್ನ ಲಲಿತಾ; ಕೇಳು ನೀನೊಂದು ಸೊನ್ನೆ
ನನ್ನ ಬಲ ಬದಿಗೆ ಕುಳಿತಾಗ ಮನದನ್ನೆ
ಎಡಬದಿಗೆ ಕುಳಿತಾಗ ಇಲ್ಲ ಕಿಮ್ಮತ್ತು
ಅಂಕೆಗಳ ಶಾಸ್ತ್ರ ನಿನಗುಂಟೇನು ಗೊತ್ತು?

## ೧೧೩೮. ಮನದನ್ನೆಗೆ

ನನ್ನ ಲಲಿತಾ, ಚಿವುಟುವೆನು ನಿನ್ನ ಕೆನ್ನೆ
ನೀನಾಗಬೇಕೀಗ ನನ್ನ ಮನದನ್ನೆ
ಹೀಗೆಂದು ಮುತ್ತು ಕೊಟ್ಟೆನು ನೂರು ಸರ್ತಿ
ಪ್ರತಿಯೊಂದು ಚುಂಬನವು ತುಟಿ ತುಂಬ ಭರ್ತಿ.

## ೧೧೩೯. ನನ್ನ ಲಲಿತಾ

ನನ್ನ ಲಲಿತಾ, ನನಗೆ ಕೊಡು ನೂರು ಮುತ್ತು
ಆಮೇಲೆ ಪ್ರತಿಯಂದು ನಿಮಿಷಕ್ಕೆ ಹತ್ತು.
ಈ ರೀತಿ ಒಂದು ತಾಸಿನ ವರೆಗೆ ನೀಡಿ
ಪೂರ್ಣ ಸಂತೈಸು ನಡು ನಡುವೆ ಮಾತಾಡಿ.

## ೧೧೪೦. ನೀನು ಕೇಳುವುದಿಲ್ಲ

ನನ್ನ ಲಲಿತಾ, ನಾನು ಎಷ್ಟು ಹೇಳಿದರೂ
ನೀನು ಕೇಳುವುದಿಲ್ಲ, ನಿನ್ನದೇ ಜೋರು
ಆದರೂ ನಿನ್ನ ಮೇಲಿನ ಪ್ರೀತಿ ತುಸುವೂ
ಕಡಿಮೆಯಾಗಿಲ್ಲ ಎಂಬುದು ನಿನ್ನ ಕಸವು.

## ೧೧೪೧. ಸಿಟ್ಟು ಬಂದಾಗ

ನನ್ನ ಲಲಿತಾ, ನಿನಗೆ ಬಂದಾಗ ಸಿಟ್ಟು,
ನಿನ್ನ ಮುಖಕೇರುವುದು ಸೊಗಸು ಇನ್ನಷ್ಟು
ನಿನ್ನ ಕೆನ್ನೆಯ ಬಣ್ಣ ಪೂರ್ಣ ಕೆಂಪೇರಿ,
ನನ್ನ ಪ್ರೀತಿಗೆ ಬಂತು ಹೊಸ ಮಿರುಗು ಭಾರಿ.

## ೧೧೪೨. ಬೇಡ ಬಂಗಾರ

ನನ್ನ ಲಲಿತಾ, ನಿನಗೆ ಬೇಡ ಬಂಗಾರ,
ನಿನ್ನ ಮೋರೆಯ ಸೊಗಸು ಅಮಿತ ಸಿಂಗಾರ
ಆಕೆ ಎಂದಳು ; ನನ್ನ ಕೊರಳಲ್ಲ ಚಂದ
ಚಿನ್ನ ಹಾಕಿದರೇನೆ ಆಗುವುದು ಅಂದ.

## ೧೧೪೩. ನನ್ನ ಲಲಿ

ನನ್ನ ಲಲಿತಾ, ನಿನಗೆ ಲಲಿ ಎಂಬೆ ನಾನು
ನೀನಿಡುವ ಮುತ್ತುಗಳು ತುಟಿ ತುಂಬ ಜೇನು
ಯಾವಾಗಲೂ ನನಗೆ ನಿನ್ನದೇ ಮಳ್ಳು
ನಿನ್ನಾಣೆ, ನಾನು ಹೇಳುವುದಿಲ್ಲ ಸುಳ್ಳು.

## ೧೧೪೪. ನನ್ನ ಲಲಿತಾ

ನನ್ನ ಲಲಿತಾ, ನಿನಗೆ ಲಲಿ ಎಂಬೆ ನಾನು.
ಈ ಹೆಸರಿನೊಳಗುಂಟು ಅಕ್ಕರೆಯ ಜೇನು
ಆಕೆ ಎಂದಳು : ನಿಮಗೆ ತರತರದ ಮಳ್ಳು
ನಾನೆಂದೆ : ನೀನು ಕುಡಿಸಿದೆಯಲ್ಲ ಕಳ್ಳು.

## ೧೧೪೫. ಕಣ್ಣುಗಳ ಛಾಯೆ,

ನನ್ನ ಲಲಿತಾ, ನಿನ್ನ ಕಣ್ಣುಗಳ ಛಾಯೆ,
ಬಣ್ಣಿಸಲು ಅಸದಳವು ಅದು ಒಂದು ಮಾಯೆ
ಈ ಮಾಯೆಯಲಿ ತೇಲುತಿದೆ ನನ್ನ ಪ್ರೀತಿ
ಇದಕೆನ್ನುವರು ಹುಚ್ಚು ಹಿಡಿದವರ ರೀತಿ.

## ೧೧೪೬. ಕಣ್ಣುಗಳ ಥಳಕು

ನನ್ನ ಲಲಿತಾ, ನಿನ್ನ ಕಣ್ಣುಗಳ ಥಳಕು
ಕತ್ತಲಲ್ಲೂ ಬೀರುವುದು ಬಹಳ ಬೆಳಕು
ನಿಮ್ಮ ವರ್ಣನೆ ಸಾಕು, ಕೇಳಲಿಕ್ಕಾಗಾ
ರಾತ್ರಿಯಾಯಿತು ಬಹಳ, ಮಲಗಿಬಿಡಿ ಬೇಗಾ.

## ೧೧೪೭. ನನ್ನ ಲಲಿತಾ

ನನ್ನ ಲಲಿತಾ, ನಿನ್ನ ಕಣ್ಣುಗಳ ಥಳಕು
ನಸುಗತ್ತಲಲ್ಲಿಯೂ ಬೀರುತಿದೆ ಬೆಳಕು
ಈ ಬೆಳಕು ನಿನ್ನ ತುಟಿಯಲಿ ಮಿಂಚಿದಾಗ
ಸುಮ್ಮನಿರುವುದು, ಗೆಳತಿ, ನನ್ನಿಂದ ಆಗ.

## ೧೧೪೮. ನಿನ್ನ ತೋಳು

ನನ್ನ ಲಲಲಿತಾ, ನಿನ್ನ ತೆಳ್ಳನೆಯ ತೋಳು
ಹುಚ್ಚು ಹಿಡಿಸಿವೆ ನನಗೆ; ಇದು ಹೇಗೆ ಹೇಳು ?
ಬಿಳಿ ರವಕೆ ಹಾಕಿದರೆ ಹೆಚ್ಚಾಗಿ ಹುಚ್ಚು
ಮಲ್ಲಿಗೆಯ ಹೂವಾಗಿ ಅರಳುವುದು ಮೆಚ್ಚು.

## ೧೧೪೯. ಎಲ್ಲಿ ಹೋಗಿದ್ದೆ

ನನ್ನ ಲಲಿತಾ, ನೀನು ಎಲ್ಲಿ ಹೋಗಿದ್ದೆ ?
ನಿನ್ನಾಣೆ ! ನಾನು ಸಂಶಯದೊಳಗೆ ಬಿದ್ದೆ
ಅಹುದಹುದು ! ನಿಮಗೆ ಸಂಶಯವೇಕೆ ಹಾಳು ?
ಸಂಶಯ ಪಿಶಾಚಿಯಿಂದಲೆ ದೊಡ್ಡ ಗೋಳು.

## ೧೧೫೦. ಗಹನ–ಗಂಭೀರೆ

ನನ್ನ ಲಲಿತಾ, ನೀನು ಗಹನ ಗಂಭೀರೆ
ಆದಾಗ ಸೊಟ್ಟಾಗುವುದು ನಿನ್ನ ಮೋರೆ
ನೀನು ನಕ್ಕಾಗ ಅಕ್ಕರೆ ಮೂಡಿ ಬೆಳಕು
ಮತ್ತೆ ತುಟಿಗಳ ತುಂಬ ಕಣ್ಣುಗಳ ಥಳಕು.

## ೧೧೫೧. ತೆಳ್ಳನೆಯ ಬಳ್ಳಿ

ನನ್ನ ಲಲಿತಾ, ನೀನು ತೆಳ್ಳನೆಯ ಬಳ್ಳಿ.
ಬಳ್ಳಿಯಲಿ ಜೋಲುತಿವೆ ಎರಡು ನೀರುಳ್ಳಿ
ಇನ್ನು ವರ್ಣನೆ ಸಾಕು, ಊಟಕ್ಕೆ ಬನ್ನಿ
ಹೊಟ್ಟೆ ತುಂಬುವ ತನಕ ಕರಿಕಡಬು ತಿನ್ನಿ.

## ೧೧೫೨. ನನ್ನವಳು ಅನ್ನು

ನನ್ನ ಲಲಿತಾ, ನೀನು ನನ್ನವಳು ಅನ್ನು
ಎಂದಿಗೂ ನನಗೆ ತೋರಿಸಬೇಡ ಬೆನ್ನು
ಮದುವೆಯಾಗುವದೇಕೆ ? ಹೀಗೆಯೇ ಇದ್ದು
ಗಂಡ ಹೆಂಡಿರ ಹಾಗೆ ಮಾಡೋಣ ಮುದ್ದು.

## ೧೧೫೩. ಪರಿಮಳದ ಸುರಗಿ

ನನ್ನ ಲಲಿತಾ, ನೀನು, ಪರಿಮಳದ ಸುರಗಿ
ನಿನ್ನ ಕಂಡರೆ, ತಾಪ ಹೋಗುವುದು ಕರಗಿ
ನೀನಿಡುವ ಮುತ್ತುಗಳು ಸಕ್ಕರೆಯ ಪಾಕು
ನೂರು ಸಲ ಸವಿದರೂ ಇನ್ನೊಮ್ಮೆ ಬೇಕು.

## ೧೧೫೪. ಕವಳ

ನನ್ನ ಲಲಿತಾ, ನೀನು ಹಾಕಿದರೆ ಕವಳ
ನಿನ್ನ ಹಲ್ಲುಗಳೆಲ್ಲ ಆಗುವವು ಹವಳ
ಆಮೇಲೆ ಬೇರೆ ಆಭರಣ ಬೇಕಿಲ್ಲ
ಹೀಗೆಂದು ಚಿವುಟಿದೆನು ನಾನವಳ ಗಲ್ಲ.

## ೧೧೫೫. ಹಟಮಾರಿ ನೀನು

ನನ್ನ ಲಲಿತಾ, ಬಹಳ ಹಟಮಾರಿ ನೀನು
ಎಷ್ಟು ಹೇಳಿದರೂ ನೀಡುವುದಿಲ್ಲ ಜೇನು
ಹಗಲ ಹೊತ್ತಿಗೆ ಬೇಡವೆಂಬೆ, ಮಾರಾಯ್ತಿ
ಹಗಲೇನು ? ಇರುಳೇನು ? ಇದು ಎಂಥ ಪ್ರೀತಿ ?

## ೧೧೫೬. ನನ್ನ ಲಲಿ

ನನ್ನ ಲಲಿ, ನೀನು ಎಲ್ಲಿಗೆ ಹೋಗಿ ಬಂದೆ ?
ನಾನಿಲ್ಲಿ ದಾರಿ ಕಾಯುತ ಪೂರ್ಣ ಬೆಂದೆ
ಒಂದು ದಿನ ಬೆಂದರೇನಾಗುವುದು ಹೇಳಿ ?
ಬೀಸಣಿಕೆಯಿಂದ ನಾ ಹಾಕುವೆನು ಗಾಳಿ.

## ೧೧೫೭. ಜಗಳ

ನನ್ನ ಸಂಗಡ ನಾನೆ ಜಗಳಾಡಬಲ್ಲೆ
ಈ ಜಗಳದಲಿ ಹುಟ್ಟುವುದು ಕಾವ್ಯ, ನಲ್ಲೆ
ಪರರ ಸಂಗಡ ಜಗಳ ಹೂಡಿದರೆ ಕೇಡು
ನನ್ನೊಳಗೆ ಜಗಳವೆದ್ದರೆ ದಿವ್ಯ ಹಾಡು.

## ೧೧೫೮. ನನ್ನ ಸಂಗಾತಿ

ನನ್ನ ಸಂಗಾತಿಯಾಗಿದ್ದರೂ ಕೂಡಾ
ಕೊನೆಯವರೆಗೂ ಇವನ ತಲೆಯೊಳಗೆ ಸೋಡಾ
ಸಹವಾಸ ಬಲದಿಂದ ಬರಲಿಲ್ಲ ಕೆಂಚು
ಸ್ವಲ್ಪ ಮಳೆ ಬಿದ್ದರೂ ಸೋರುತಿದೆ ಹಂಚು.

## ೧೧೫೯. ಆಕೆ ಹೇಳಿದ್ದು

ನನ್ನ ಸೀರೆಯ ಸೆರಗು ಬಿಟ್ಟುಬಿಡಿ ಬೇಗ
ನಿಮ್ಮಿಂದ ಯಾವುದೂ ತಡೆಯಲಿಕ್ಕಾಗ
ಹೀಗೆ ಗಡಿಬಿಡಿ ಮಾಡಿ ಉಪಯೋಗವಿಲ್ಲ
ಮದುವೆಯಾಗುವ ಮೊದಲು ಈ ನಡತೆ ಸಲ್ಲ.

## ೧೧೬೦. ನಭಕೆ ಹಾರುವ ಮೊದಲು

ನಭಕೆ ಹಾರುವ ಮುನ್ನ ಗಲ್ಲಿಯಲಿ ತಿರುಗಿ
ಹೃದಯವಿದ್ದರೆ ನಿಮಗೆ ಹೋಗುವುದು ಕರಗಿ
ಇಲ್ಲದಿದ್ದರೆ ಹೃದಯ, ಪೇಟೆಯಲಿ ಹೋಗಿ
ತೆಗೆದುಕೊಳ್ಳಿರಿ ಒಂದು ಹರಿಗೆ ತಲೆಬಾಗಿ

## ೧೧೬೧. ಭಗವಂತನಿಗೆ

ನಭದೊಳಗೆ ಕೋಟಿ ತಾರೆಗಳಿದ್ದರೂನು
ನಮಗಾಗಿ ಒಂದನಾದರೂ ಎಸೆದೆಯೇನು ?
ಭಗವಂತ, ನಿನಗೇಕೆ ಈ ಹಾಳು ಸ್ವಾರ್ಥ ?
ನೀ ಕೂಡ ಜಿಪುಣನಾದೆಯೆ, ಸೃಷ್ಟಿಕರ್ತ ?

## ೧೧೬೨. ರೋಗಕ್ಕೆ ಮದ್ದು

ನಮಗೆಲ್ಲರಿಗೆ ಹಿಡಿದ ಈ ಹಾಳು ರೋಗ
ಗುಣಹೊಂದುವುದು ಹೇಗೆ ಮತ್ತೆ ಯಾವಾಗ ?
ಜಾತಿಗಳನ್ನೆಲ್ಲ ಬೇಯಿಸಿ ಒಂದು ಖಿಚಡಿ
ಮಾಡಿದರೆ ಮಾತ್ರ ಹೋಗುವುದು ಈ ನೆಗಡಿ.

## ೧೧೬೩. ವಿದೇಶಿಯ ಧಾನ್ಯ

ನಮಗೆ ಬೇಕಾಗಿಲ್ಲ ಅಮೇರಿಕದ ಗೋದಿ
ಈ ಗೋದಿಯಿಂದ ನವ ಭಾರತಕ್ಕೆ ವ್ಯಾಧಿ
ಅಪಶಕುನವೆಂಬೆ ಅವಲಂಬನದ ಕಾಳು
ಸ್ವಾವಲಂಬನದಿಂದ ಬೆಳಗುವುದು ಬಾಳು.

## ೧೧೬೪. ವರ್ತಕ ಹೇಳಿದ್ದು

ನಮಗೆ ಬೇಕಾದವನು ಜಿಲ್ಲಾ ಪುಢಾರಿ
ಪಾರಾಗಬಹುದು ಸಂಕಟದಿಂದ ಜಾರಿ
ಬೆಂಗಳೂರಿಗೆ ಮಾಡಿದರೆ ಸಾಕು ಫೋನು
ದುಡ್ಡು ಖರ್ಚಾದರೂ ಇಲ್ಲ ಲುಕ್ಸಾನು.

## ೧೧೬೫. ಆಡಳಿತ

ನಮ್ಮ ಆಡಳಿತದಲ್ಲಿ ತರತರದ ಸರಕು
ಒಡ್ಡುಗಳ ಕಟ್ಟಿದರೆ ಹದಿನೆಂಟು ಬಿರುಕು.
ಆಸ್ಪತ್ರೆ ಕಟ್ಟಿದರೆ ಮಳೆಯೆಲ್ಲ ಒಳಗೆ
ಪಂಚವಾರ್ಷಿಕದಿಂದ ಆಕಾಶ ಕೆಳಗೆ.

## ೧೧೬೬. ಹಾಲಕ್ಕಿ ರಾಕು

ನಮ್ಮ ಅಂದೋಲನಕೆ ಹಾಲಕ್ಕಿ ರಾಕು
ಕೆಂಪು ಧ್ವಜ ಹಿಡಿಯಲಿಕೆ ಅವನೊಬ್ಬ ಸಾಕು
ಆರು ಅಡಿ ಎತ್ತರದ ಈ ನಗ್ನ ಮೂರ್ತಿ
ಮೆರವಣಿಗೆಯೊಳಗಿದ್ದ ಪ್ರತಿಯೊಂದು ಸರ್ತಿ.

## ೧೧೬೭. ಕ್ರಾಂತಿ

ನಮ್ಮ ಈ ಜಗದೊಳಗೆ ಆಗಾಗ್ಗೆ ಗಲಭೆ
ಈ ಗಲಭೆಯಿಂದ ಜನ್ಮಿಸಬಹುದು ಕ್ಷೋಭೆ
ಕ್ಷೋಭೆ ಎಂಬುದು ದಲಿತ ವರ್ಗಗಳ ಕ್ರಾಂತಿ
ಆರೋಗ್ಯ ರಕ್ಷಣೆ ಆದಂತೆ ವಾಂತಿ.

## ೧೧೬೮. ಜಾಣತನ

ನಮ್ಮ ಈ ಜಿಲ್ಲೆಯಲಿ ಜಾಣತನ ಅಧಿಕ
ಆದರೂ ಯಾರಿಗೂ ಸಿಗಲಿಲ್ಲ ಪದಕ
ಇಂಥ ಅನ್ಯಾಯ ಎಲ್ಲಾದರೂ ಉಂಟೆ?
ಮಂತ್ರಿ ಬಂದಾಗ ಎಬ್ಬಿಸಬೇಕು ತಂಟೆ.

## ೧೧೬೯. ಆಕೆಯ ರಗಳೆ

ನಮ್ಮೂರ ಕಡೆಗೆ ಬಂದರೆ ಸ್ವಲ್ಪ ಜೋಕೆ
ಗಾಳ ಹಾಕಲಿಕೆ ನಿಂತಿರತಾಳೆ ಆಕೆ
ಜಾಗರೂಕತೆ ವಹಿಸಬೇಕು ಮಾರಾಯ
ಕುಡಿಮೀಸೆಯಲಿ ತೇಲುತಿದೆ ನಿನ್ನ ಪ್ರಾಯ.

## ೧೧೭೦. ಭೀಮಪ್ಪ

ನಮ್ಮೂರ ತಹಶೀಲದಾರ ಭೀಮಪ್ಪ
ಈತನಿಗೆ ಜೀರ್ಣವಾಗದು ಜೇನುತುಪ್ಪ
ಪಚನವಾಗುವುದು ಬರಿ ಬೆಲ್ಲದ ಸರಾಯಿ
ನಿತ್ಯವೂ ಗಮಗಮಿಸುವುದು ಇವನ ಬಾಯಿ.

## ೧೧೭೧. ನಮ್ಮೂರ ಪುಟ್ಟಪ್ಪ

ನಮ್ಮೂರ ಪುಟ್ಟಪ್ಪ ಅಲ್ಲ ಸಾಮಾನ್ಯ
ಏಳು ಮಕ್ಕಳು ಹುಟ್ಟಿ ಸಂಪೂರ್ಣ ಧನ್ಯ
ಈ ರೀತಿ ಪುಟ್ಟಪ್ಪ ದೊಡ್ಡಪ್ಪನಾದ
ಎಂಬುದಕೆ ತಿಳಮಾತ್ರವೂ ಇಲ್ಲ ವಾದ.

## ೧೧೭೨. ದೀಪದ ಕಂಬ

ನಮ್ಮೂರ ಪೇಟೆಯೊಳಗಿನ ದೀಪಗಂಬ
ಯಾವ ವರ್ತಕನನ್ನು ಸಂಪೂರ್ಣ ನಂಬ
ಮಾತನಾಡದೆ ಇದ್ದರೂ ಇಡಿಯ ದಿವಸ
ಮೌನದಲಿ ಕಾವಲಿಡುವುದು ಅದರ ಕೆಲಸ.

## ೧೧೭೩. ನಮ್ಮೂರ ನಗರಸಭೆ

ನಮ್ಮೂರ ಮುನಿಸಿಪಾಲಿಟಿಯ ಆಡಳಿತ,
ಭಾರತ ಆದ್ಯಂತ ಲೋಕಪ್ರಖ್ಯಾತ
ಅದರ ಕಟ್ಟಡವು ಆಗುವ ಮೊದಲೆ ಪೂರ್ಣ
ಎಡಬದಿಗೆ ಕುಸಿದು ಆಯಿತು ಅರ್ಧ ಜೀರ್ಣ.

## ೧೧೭೪. ರೋಟರೀ ಕ್ಲಬ್ಬು

ನಮ್ಮೂರಿಗೂ ಬಂತು ರೋಟರೀ ಕ್ಲಬ್ಬು
ಎಲ್ಲವೂ ಸುರಳೀತ ಸಾಗುವುದು, ಸುಬ್ಬು
ಊರ ನಡುಮಧ್ಯದಲಿ ಪ್ರತಿಯೊಂದು ವಾರ
ಶುಭ್ರ ಮೇಜಿನ ಮೇಲೆ ಊಟ ಉಪಚಾರ.

## ೧೧೭೫. ಶಾನುಭೋಗರ ಮಗಳು

ನಮ್ಮೂರ ಶಾನುಭೋಗರ ಮಗಳ ಭಾಗ್ಯ
ಶ್ರೀಮಂತ ಗಂಡ ಸಿಕ್ಕಿದ್ದು ಬಲು ಯೋಗ್ಯ
ನೋಡಲಿಕೆ ಬಹಳ ಚೆನ್ನಾಗಿರುವ ಹುಡುಗಿ
ಹುಡುಕಿ ತೆಗೆವರು ಕುಳಿತುಕೊಂಡರೂ ಅಡಗಿ.

## ೧೧೭೬. ಆಡಳಿತದ ಪರಿಮಳ

ನಮ್ಮ ಕನ್ನಡ ನಾಡಿನಲ್ಲಿ ಶ್ರೀಗಂಧ
ಇದ್ದರೂ ನಮಗೆ ತಪ್ಪಿದ್ದಲ್ಲ ದುರ್ಗಂಧ!
ಈಗಂತು ಗಾಳಿ ಜೋರಾಗಿದ್ದರಿಂದ
ನಿಮಿಷ ನಿಮಿಷಕೆ ಮೂಗು ಹಿಡಿಯಬೇಕೆಂದ.

## ೧೧೭೭. ಸಮೃದ್ಧ ದೇಶ

ನಮ್ಮ ಕನ್ನಡ ನಾಡು ಸಮೃದ್ಧ ದೇಶ.
ಧನಧಾನ್ಯ ಸವಲತ್ತುಗಳ ವಿಶ್ವಕೋಶ
ಮಾಡಿಕೊಂಡರೆ ಮತ್ತೆ ಮಂತ್ರಿಗಳ ದೋಸ್ತಿ
ಸಿಗುವ ಸವಲತ್ತುಗಳು ಇನ್ನಷ್ಟು ಜಾಸ್ತಿ.

## ೧೧೭೮. ಸಾಹಿತಿಗಳು

ನಮ್ಮ ಕವಿಗಳ ಪೈಕಿ ಕವಿಶ್ರೇಷ್ಠನಾರು?
ಹೆಸರು ಹೇಳಿದರೆ ಬರಬಹುದು ತಕರಾರು
ಶ್ರೇಷ್ಠ ಕತೆಗಾರ ಯಾರೆಂಬುದನ್ನು ಹೇಳು?
ಹೇಳಿದರೆ ನಾಲಗೆಗೆ ಕಡಿಯುವುದು ಚೇಳು.

## ೧೧೭೯. ಸಿಕ್ಕಿದಳು ನೀಲಿ

ನಮ್ಮ ಕಾಮಣ್ಣನಿಗೆ ಸಿಕ್ಕಿದಳು ನೀಲಿ
ಮೂರು ದಿನದಲ್ಲಿಯೇ ಕಿಸೆಯಾಯ್ತು ಖಾಲಿ
ಮಾರಿದನು ಕೊನೆಗೆ ಹೆಂಡತಿಯ ದಾಗೀನು
ನೀಲಿ ಸರಿಯಾಗಿಯೇ ಹಿಂಡಿದಳು ಜೇನು.

## ೧೧೮೦. ಕಾಲೇಜಿನ ಜಿಂಕೆ

ನಮ್ಮ ಕಾಲೇಜಿನಲ್ಲಿ ಅವಳೊಂದು ಜಿಂಕೆ
ಎನ್ನುವುದು ತಿಳಿಯಲಿಲ್ಲವೆ, ನಿನಗೆ ಮಂಕೆ?
ಎಷ್ಟೋ ಷಿಕಾರಿಗಳು ಹತ್ತಿದರು ಬೆನ್ನು
ಆದರೂ ಯಾರಿಗೂ ಸಿಗಲಿಲ್ಲ ಇನ್ನೂ!

## ೧೧೮೧. ನಮ್ಮ ಗೋವಿಂದಯ್ಯ

ನಮ್ಮ ಗೋವಿಂದಯ್ಯ ಈಗಿಲ್ಲ ಮಂತ್ರಿ
ನಿಂತು ಹೋದವು ಪಾಪ ಬಾಜಾ–ಭಜಂತ್ರಿ
ಏನು ಹೇಳಲಿ ನಾನು ಅವನ ಆ ಥಾಟು
ಚಪರಾಶಿಗೂ ಇತ್ತು ರೇಶಿಮೆಯ ಕೋಟು.

## ೧೧೮೨. ಬಿರುದು

ನಮ್ಮ ಚುಟುಕಮ್ಮನಿಗೆ ಸರಕಾರ ಬಿರುದು
ಕೊಟ್ಟಾಗ ಚುಟಕಮ್ಮ ಹಾಕಿದಳು ಹರಿದು
ಬಿರುದು ಎನ್ನುವುದು ಮಗು ಕೊರಳಲ್ಲಿ ಹಗ್ಗ
ಹಗ್ಗವಿದ್ದಾಗ ಏರುವುದೆಂತು ಸಗ್ಗ?

## ೧೧೮೩. ಚೂಡಾಮಣಿಗೆ

ನಮ್ಮ ಚೂಡಾಮಣಿಗೆ ಎಲ್ಲವೂ ಸಾಧ್ಯ
ಕೃಷ್ಣಪಕ್ಷವು ಕೂಡ ಆಗುವುದು ಶುದ್ಧ.
ಕತ್ತಲಲ್ಲೇ ಇವನ ಕಾರ್ಯಗಳು ಜಾಸ್ತಿ
ಬೆಳಕು ಹರಿಯುವ ಮುನ್ನ ಗಳಿಸಿದನು ಆಸ್ತಿ.

## ೧೧೮೪. ಪಕ್ಕಾ ಷಿಕಾರಿ

ನಮ್ಮ ಜಿಲ್ಲೆಗೆ ಮೊನ್ನೆ ಬಂದ ಅಧಿಕಾರಿ
ಸಾಮಾನ್ಯ ಇಸಮಲ್ಲ ಪಕ್ಕಾ ಷಿಕಾರಿ
ಕೋವಿ ಬೇಕಿಲ್ಲ ಹಾರಿಸಲಿಕ್ಕೆ ಮದ್ದು
ಬೇಟೆಯಾಡುವನು ಮಾಡದೆ ಯಾವ ಸದ್ದು.

## ೧೧೮೫. ಜಿಲ್ಲಾಧಿಪರ ಪ್ರಕಟನೆ

ನಮ್ಮ ಜಿಲ್ಲೆಯ ಸಕ್ಕರೆಯ ಪೂರ್ಣ ಕೋಟಾ
ಬರದಿದ್ದರೂ ಕೂಡ ನಮಗಿಲ್ಲ ತೋಟಾ
ಜನರು ಸಹಕರಿಸಿದರೆ ಕಳ್ಳವ್ಯಾಪಾರಿ
ಸರಿಯಾಗಿಯೇ ಮಾಡುವನು ವಿಲೇವಾರಿ.

## ೧೧೮೬. ಹಬ್ಬದ ಮೇಲೆ ಹಬ್ಬ

ನಮ್ಮ ದೇಶದಲಿ ಹಬ್ಬದ ಮೇಲೆ ಹಬ್ಬ
ಪ್ರತಿ ವರುಷ ಕೋಟಿಗಟ್ಟಲೆ ಹೆಣ್ಣು ಗಬ್ಬ
ಆಹಾರ ಸಿಗದಿದ್ದರೂ ಹಬ್ಬ ಉಂಟು
ಆಗಾಗ್ಗೆ ಹೊಸ ಕೂಸು ಬೀಳುವುದು ಗಂಟು.

## ೧೧೮೭. ನಮ್ಮ ನರಸಮ್ಮ

ನಮ್ಮ ನರಸಮ್ಮನಿಗೆ ಬಿಡುವಿಲ್ಲ ತುಸುವು.
ಭರ್ತಿ ಓಡಾಡುವವಳು ಆದರೂ ಕಸುವು.
ಅಖಿಲ ಊರಿನ ಸುದ್ದಿಗಳು ಇವಳ ಹತ್ರ
ಇವಳ ನಾಲಿಗೆ ಎನ್ನುವುದು ಸುದ್ದಿ–ಪತ್ರ.

## ೧೧೮೮. ತಾತ್ಪೂರ್ತಿಕ ಪ್ರಧಾನಿ

ನಮ್ಮ ನಂದಾಜಿ ತಾತ್ಪೂರ್ತಿಕ ಪ್ರಧಾನಿ
ಇವನಿಂದ ಯಾರ್‍ಯಾರಿಗೂ ಇಲ್ಲ ಹಾನಿ,
ಯಜಮಾನಿ ಬರುವತನಕ ಈ ಅಡಿಗೆ ಭಟ್ಟ
ಗದ್ದುಗೆಯ ಮೇಲೇರಿ ರುಚಿ ನೋಡಿಬಿಟ್ಟ.

## ೧೧೮೯. ವಿಮರ್ಶಕರು

ನಮ್ಮ ನಾಡಿನ ವಿಮರ್ಶಕರೆಲ್ಲ ಸೇರಿ
ಆ ಕವಿಯ ಬಗ್ಗೆ ಹೊಡಿಸಿದರು ಜಯಭೇರಿ.
ಇಪ್ಪತ್ತು ವರುಷ ಮುಗಿಯಲು ತೂತು ಬಿದ್ದು
ಕವಿಪುಂಗವನ ಪದ್ಯಗಳು ಪೂರ್ಣ ರದ್ದು.

## ೧೧೯೦. ನಮ್ಮ ಪಟ್ಟಣ ಸೆಟ್ಟಿ

ನಮ್ಮ ಪಟ್ಟಣಸೆಟ್ಟಿಗಿಲ್ಲ ಬರಗಾಲ
ಬರಗಾಲದಲ್ಲಿ ಈತನಿಗೆ ಪರ್ವಕಾಲ
ಈತನಿಗೆ ಪದ್ಮಭೂಷಣ ಬಿರುದು ಸಿಕ್ಕಿ
ತುಟ್ಟಿಯಾಯಿತು ಅಲ್ಪಕಾಲದಲ್ಲಿ ಅಕ್ಕಿ.

## ೧೧೯೧. ನಮ್ಮ ಆಕಾಶವಾಣಿ

ನಮ್ಮ ಭಾರತದಲ್ಲಿ ಆಕಾಶವಾಣಿ
ಎನ್ನುವುದು ಸರಕಾರಗಳ ಮೂಲಗೇಣಿ
ಇಂಗ್ಲೆಂಡಿನಲ್ಲಿ ಪರಿಸ್ಥಿತಿ ಪೂರ್ಣ ಬೇರೆ
ಜನರ ಪ್ರತಿನಿಧಿಯಾಗಿ ದುಡಿಯುತಿದೆ, ನೀರೆ.

## ೧೧೯೨. ಉಪವಾಸ ಮುಷ್ಕರ

ನಮ್ಮ ಭಾರತದಲ್ಲಿ ತರತರದ ರೀತಿ
ಕೆಲವರಿಗೆ ಉಪವಾಸ ಮುಷ್ಕರದ ಪ್ರೀತಿ.
ಆಹಾರ ಧಾನ್ಯಗಳ ಕೊರತೆಯಿದಾಗ
ಬಹಳ ಲೇಸೆಂಬೆ ಈ ಉಪಯುಕ್ತ ರೋಗ.

## ೧೧೯೩. ನಮ್ಮ ಭಾರತದಲ್ಲಿ

ನಮ್ಮ ಭಾರತದಲ್ಲಿ ನೂರಾರು ವ್ಯಾಜ್ಯ
ಆದರೂ ಭದ್ರವಾಗಿದೆ ನಮ್ಮ ರಾಜ್ಯ
ಬಾಯಿ ಜಗಳವೆ ನಮಗೆ ಮುಖ್ಯವಾದದ್ದು
ಹೊತ್ತು ಹೋಗಲಿಕೆ ಇದು ಆದರ್ಶ ಮದ್ದು.

## ೧೧೯೪. ಪ್ರತಿಪಕ್ಷವೇಕೆ ?

ನಮ್ಮ ಭಾರತದಲ್ಲಿ ಪ್ರತಿ ಪಕ್ಷವೇಕೆ ?
ನಮಗೆಲ್ಲರಿಗೂ ಸಾಕು ಬರಿ ಒಂದು ನೌಕೆ.
ಎಲ್ಲರೂ ಒಂದಾಗಿ ಕುಳಿತುಕೊಳ್ಳೋಣ.
ಗುರಿಯ ಮಟ್ಟುವ ತನಕ ಹಂಚಿ ತಿನ್ನೋಣ.

## ೧೧೯೫. ದಿಲ್ಲಿಯಲ್ಲಿ ಕೇಳಿದ್ದು

ನಮ್ಮ ಭಾರತದಲ್ಲಿ ಮಂತ್ರಿ ಸತ್ತಾಗ
ಎಲ್ಲರೂ ತಯ್ಯಾರು ಮಾಡಲಿಕೆ ತ್ಯಾಗ
ಖಾಲಿ ಜಾಗದ ಕುರ್ಚಿ ತನಗೆ ಸಿಗಲೆಂದು
ಪ್ರತಿಯೊಬ್ಬನಿಗೆ ಆಸೆ, ಹೇ ದಿನಬಂಧು

## ೧೧೯೬. ನಮ್ಮ ಮಂಕಾಳಮ್ಮ

ನಮ್ಮ ಮಂಕಾಳಮ್ಮನಿಗೆ ಮಾತು ಬಹಳ
ನಿಮಿಷ ನಿಮಿಷಕೆ ಹಾಕುವಳು ಭರ್ತಿ ಕವಳ
ಮತ್ತೆ ಆಗಾಗ್ಗೆ ತಪ್ಪುವುದಿಲ್ಲ ನಸ್ಯ
ಹೀಗಾಗಿ ಮೈಗಿಲ್ಲ ತುಸುವು ಆಲಸ್ಯ.

## ೧೧೯೭. ಹೋದಹೋದಲ್ಲಿ

ನಮ್ಮ ಮಂಕಾಳಮ್ಮ ಹೋದ ಹೋದಲ್ಲಿ
ಅರೆ ನಿಮಿಷದಲ್ಲಿಯೇ ತುಂಬುತಿದೆ ಗಲ್ಲಿ
ಗಂಡಹೆಂಡಿರ ಜಗಳಗಳ ಪೊಟ್ಲೆ ಬಿಚ್ಚಿ
ಏನೇನೊ ಹೇಳುವಳು ಖಾರಪುಡಿ ಹಚ್ಚಿ

## ೧೧೯೮. ಹನುಮಂತ ಸೆಟ್ಟಿ

ನಮ್ಮ ಯಲ್ಲಾಪುರದ ಹನುಮಂತ ಸೆಟ್ಟಿ
ಬಿರುಗಾಳಿ ಬಂದರೂ ತಡೆಯಲಿಕೆ ಗಟ್ಟಿ
ಉಳಿದವರು ಸಿಕ್ಕಿಬಿದ್ದರು ಇವನು ಮಾತ್ರ
ಉಳಿಸಿಕೊಂಡನು ತನ್ನ ಮನೆಯ ಕುಲಗೋತ್ರ.

## ೧೧೯೯. ರಾಮಣ್ಣನಿಗೆ

ನಮ್ಮ ರಾಮಣ್ಣನಿಗೆ ಕಾಮಣ್ಣ ಸಿಕ್ಕಿ
ನಾನಾ ಉಮೇದುಗಳ ಝುರಿ ಬಂತು ಉಕ್ಕಿ
ವಿಪರೀತ ಜೋರಾಯ್ತು ಇವನ ದರಬಾರ
ಆಮೇಲೆ ಮನೆಯ ಆಸ್ತಿಯ ಫಲಹಾರ.

## ೧೨೦೦. ಆರ್ಥಿಕ ವಿಷಮತೆ

ನಮ್ಮವರ ವರಮಾನಗಳ ತಾರತಮ್ಯ
ಯಾವ ನಾಟಕಕಿಂತಲೂ ಬಹಳ ರಮ್ಯ!
ನಡುಮಧ್ಯದೊಳಗೆ ದಶಲಕ್ಷ, ದಶಕೋಟಿ,
ಆ ಬದಿಗೆ ಈ ಬದಿಗೆ ಹರುಕು ಲಂಗೋಟಿ.

## ೧೨೦೧. ವೆಂಕಟರಾಯರು

ನಮ್ಮ ವೆಂಕಟರಾಯರಿಗೆ ದೊಡ್ಡ ದಂಥೆ.
ಮಂತ್ರಿಗಳು ಬಂದಾಗ ಎಲ್ಲರಿಗೂ ಮುಂದೆ
ಬಹಳ ಚೊಕ್ಕಾಗಿ ಮಾತಾಡಿ ಈ ಭೂಪ
ಕಳ್ಳಪೇಟೆಯ ಒಳಗೆ ಹಾಕುವನು ಧೂಪ.

## ೧೨೦೨. ನಮ್ಮ ವೆಂಕಮ್ಮ

ನಮ್ಮ ವೆಂಕಮ್ಮ ಮಾತಾಡುವುದು ಬೆಲ್ಲ
ತಿನ್ನಲಿಕೆ ಕುಳಿತಾಗ ಸ್ವಲ್ಪವೂ ಇಲ್ಲ
ಹಿಟ್ಟು ಇರದಿದ್ದರೂ ಮಾಡುವಳು ರೊಟ್ಟಿ
ಈ ಕಷ್ಟಕಾಲದಲಿ ಇಂಥವರೆ ಗಟ್ಟಿ.

## ೧೨೦೩. ನಮ್ಮ ವೈಶಿಷ್ಟ್ಯ

ನಮ್ಮ ವೈಶಿಷ್ಟ್ಯವೆನ್ನುವುದು ಆಲಸ್ಯ
ಹೀಗೆಂದು ಹತ್ತು ಸಲ ಹಾಕಿದೆನು ನಸ್ಯ.
ಆಕೆ ಅಂದಳು: ನಿಮ್ಮ ಮೂಗು ಅಪವಾದ
ಅದರ ಚಟುವಟಿಕೆಗಳು ನೂತನ ಅಗಾಧ.

## ೧೨೦೪. ತೆರೆಯಿತು ಕಾರಖಾನೆ

ನಮ್ಮ ಸರಕಾರ ತೆರೆಯಿತು ಕಾರಖಾನೆ
ಆರಂಭದಿಂದಲೇ ಉಂಟಾಯ್ತು ಬೇನೆ.
ಪ್ರತಿವರುಷವೂ ಕೋಟಿಗಟ್ಲೆಗಳ ಹಾನಿ
ಇದುವೆ ರಾಷ್ಟ್ರೀಕರಣವೆಂದ, ಕೃಪಲಾನಿ.

## ೧೨೦೫. ಆಡಳಿತ

ನಮ್ಮ ಸರಕಾರ ನಡೆಸುವ ಕಾರುಭಾರು
ಬಾಳೆ ಎಲೆಗಳ ಮೇಲೆ ಬಡಿಸಿರುವ ಸಾರು
ಶೀಘ್ರದಲಿ ಊಟವಾಗಲಿ, ಮಹಾಸ್ವಾಮಿ
ಇಲ್ಲದಿದ್ದರೆ ಒದ್ದೆಯಾಗುವುದು ಭೂಮಿ.

## ೧೨೦೬. ದೊಡ್ಡ ರಸ್ತೆ

ನಮ್ಮ ಸರಕಾರ ಮಾಡಿದ ದೊಡ್ಡ ರಸ್ತೆ
ಕೆಸರಾಗಿ ಮಳೆಗಾಲದಲಿ ಅವ್ಯವಸ್ಥೆ
ಸಿಕ್ಕಿಬೀಳಲು ನಡುವೆ ಪ್ರತಿಯೊಂದು ಟ್ರಕ್ಕು
ಮುರಿದುಹೋಯಿತು, ಮಗನೆ, ಡ್ರೈವರನ ಸೊಕ್ಕು.

## ೧೨೦೭. ನಮ್ಮ ಹರಿಯಣ್ಣನಿಗೆ

ನಮ್ಮ ಹರಿಯಣ್ಣನಿಗೆ ಗಿರಿಯಣ್ಣ ಸಿಕ್ಕಿ
ಇಬ್ಬರೂ ಪಾರ್ಟಿಯಾದರು ಭರ್ತಿ ಮುಕ್ಕಿ
ಇವರು ತೆಗೆದದ್ದೇನು? ಸಹಕಾರಿ ಸಂಘ
ಬಾಲ ಅಲುಗಾಡಿಸುತ ಹಾರಿತು ಪತಂಗ.

## ೧೨೦೮. ಬಂತು ವಿದ್ಯುತ್ತು!

ನಮ್ಮ ಹಳ್ಳಿಗೆ ಕೂಡ ಬಂತು ವಿದ್ಯುತ್ತು!
ಇಗು ಬಂದ ರೀತಿ ಚುಟಕಮ್ಮನಿಗೆ ಗೊತ್ತು
ಕಂಬಗಳ ನಿಲಿಸಲಿಕೆ ಒಂದು ಶತಮಾನ.
ತಂತಿ ಹಚ್ಚಲಿಕೆ, ಮಗು, ಬರಲಿದೆ ವಿಮಾನ.

## ೧೨೦೯. ಅಳತೆ

ನಮ್ಮ ಹಳ್ಳಿಗೆ ನಮ್ಮ ಸಿಂಪಿಗನೆ ಜಾಣ.
ಹೊಲಿಗೆಯೆಂದರೆ ಆತನಿಗೆ ಪಂಚಪ್ರಾಣ
ಕವಿತೆಗೂ ಅಂಗಿ ಹೊಲೆಯುವೆನೆಂದು ಬಂದ.
ಟೇಪು ಹಿಡಿಯಲು ಅಳತೆ ಸಿಗಲಿಲ್ಲ ಛಂದ.

## ೧೨೧೦. ಸಂಗೀತದ ಮಹತ್ವ

ನಮ ಹುಡುಗಿಗೆ ಕಲಿಸಬೇಕು ಸಂಗೀತ
ಸಂಸಾರದಲಿ ಬಾಧಿಸದು ಸಂಧಿವಾತ
ಸಿಟ್ಟಿಗೆದ್ದರು ಅತ್ತೆ ಸಂಗೀತ ಕೇಳಿ
ಆಗುವಳು ಮೊಟ್ಟೆಹಾವಿನ ಬಾತುಕೋಳಿ.

### ೧೨೧೧. ರಾಮ ಸೆಟ್ಟಿ

ನರಕದಲಿ ಕಾಳುಕಡಿಯಾಯ್ತು ಬಲು ತುಟ್ಟಿ
ನರಕ ಲೇಸೆಂದು ಹೊರಟನು ರಾಮಸೆಟ್ಟಿ
ಈ ವರುಷ ರಾಮಸೆಟ್ಟಿಯ ಬಳಗದವರು
ಮೇ ತಿಂಗಳಲ್ಲಿ ಅಲ್ಲಿ ಹೋಗಿ ನೆಲಸುವರು.

### ೧೨೧೨. ಸ್ವರ್ಗಕೇರಿ

ನರಕ ಬೇಡೆಂದು ಸಕಲರು ಸ್ವರ್ಗಕೇರಿ
ಸ್ವರ್ಗದಲಿ ಎಲ್ಲವೂ ಆಗಿದೆ ದುಬಾರಿ.
ಬಾಡಿಗೆಯ ಮನೆಗಳೂ ಸಿಗುವುದಿಲ್ಲಂತೆ
ನರಕ ಲೇಸೆಂದು ಹೇಳುವಳು ಗುಣವಂತೆ.

### ೧೨೧೩. ನನ್ನ ಲಗೇಜು

ನರಕಲೋಕಕೆ ಹೋಗುವುದೆ ಒಂದು ಮೋಜು
ನನ್ನ ಹತ್ತಿರ ಉಂಟು ತುಂಬಾ ಲಗೇಜು.
ಭೂಲೋಕದೊಳಗಿರುವ ಆದಷ್ಟು ಕೊಳಚೆ
ನರಕಕ್ಕೆ ಹೋಗಲೆಂಬುದೆ ನನ್ನ ಬಯಕೆ.

### ೧೨೧೪. ಪ್ರೀತಿ

ನರನ ಜೀವನದಲ್ಲಿ ಪ್ರೀತಿಯೇ ಮುಖ್ಯ.
ಪ್ರೀತಿ ಹೂವಾದೊಡನೆ ಅರಳುವುದು ಸಖ್ಯ.
ಮಿಡಿಯಾಗಿ ಕಾಯಾಗಿ ಹಣ್ಣಾಗಿ ಕೊನೆಗೆ
ಉದುರಿ ಬೀಳಲು ತೆರಳುವುದು ತನ್ನ ಮನೆಗೆ.

### ೧೨೧೫. ಒಂದು ಹುಲ್ಲು

ನರನ ಜೀವನವೆನ್ನುವುದು ಒಂದು ಹುಲ್ಲು
ಅರ್ಥವಿಲ್ಲದೆ ಇವರು ಮಾಡುವರು ಗುಲ್ಲು.
ಮಳೆಗಾಲ ಮುಗಿದೊಡನೆ ಹೋಗುವುದು ಬಾಡಿ
ಮರಳಿದನು ವೇದಾಂತಿ ಹೀಗೆ ಮಾತಾಡಿ.

## ೧೨೧೬. ನರನ ಜೀವನ

ನರನ ಜೀವನವೆನ್ನುವುದು ಲಲಿತ ರಗಳೆ.
ಸರಿಯಾದ ಅರ್ಥವಾಯಿತೆ ನಿನಗೆ, ಮಗಳೆ ?
ಕಂದ ಪದ್ಯವು ಲಲಿತವೆನ್ನುವುದು ಸತ್ಯ.
ವಾರ್ಧಿಕವನೋದುವರು ಮುಪ್ಪಿನಲಿ ನಿತ್ಯ.

## ೧೨೧೭. ಕಪ್ಪೆಯ ಆತ್ಮಕಥನ

ನರನಲ್ಲ, ಮಾರಾಯ ! ನಾನೊಂದು ಕಪ್ಪೆ !
ಈ ಹೊಂಡದಲಿ ಕುಳಿತುಕೊಂಡದ್ದು ತಪ್ಪೆ ?
ಎಲ್ಲರೂ ಕುರ್ಚಿಯೇ ಬೇಕೆನ್ನುವಾಗ
ನಾನೇಕೆ ಮಾಡಬಾರದು ಸ್ವಲ್ಪ ತ್ಯಾಗ.

## ೧೨೧೮. ನರಸಮ್ಮ ಹೇಳಿದ್ದು

ನರಸಮ್ಮ ನರಸಮ್ಮ ಏನು ಹೊಸ ಸುದ್ದಿ ?
ಅಕ್ಕಿ ಸಿಗದಿದ್ದರೂ ಉಂಟು ಅಭಿವೃದ್ಧಿ
ನರಸಮ್ಮ, ನರಸಮ್ಮ, ಮಾತಾಡು ಸತ್ಯ
ಹೊಟ್ಟೆ ತುಂಬುವುದಿಲ್ಲ ಕೊಟ್ಟರೂ ಭತ್ಯ.

## ೧೨೧೯. ಇಂದಿನ ರಾಜಕಾರಣ

ನರಿಗಳೆಲ್ಲಾ ಈಗ್ಗೆ ಸರಕಾರ ಸೇರಿ
ಜೋರು ಜೋರಾಗಿ ಬಾರಿಸುತಿವೆ ನಗಾರಿ.
ಹುಲಿ ಸಿಂಹಗಳು ಪಾಪ ಅಡವಿಯೊಳಗಿದ್ದು
ನಿವೃತ್ತಿ ಹೊಂದಿದವು ಮಾಡದೆಯೆ ಸದ್ದು.

## ೧೨೨೦. ಹರ್ಡೀಕರ್ ನಾರಾಯಣರಾಯರು

ನಲವತ್ತು ವರುಷ ನಾ ಬಿತ್ತಿದೆನು ಶಿಸ್ತು
ಆದರೂ ಲಭ್ಯವಾಗಿಲ್ಲ ಈ ವಸ್ತು !
ನಾನು ಬಿತ್ತಿದ ಹೊಲಕೆ ಬರಲಿಲ್ಲ ಕಾಳು !
ಧ್ಯಾನವಿಲ್ಲದೆ ನರಳುತಿದೆ ನರನ ಬಾಳು.

### ೧೨೨೧. ವರ್ತಕರ ದೇಶಭಕ್ತಿ

ನಲಿದಾಡುತಿದ್ದರೂ ಸಂತೆಯಲಿ ಬೆಣ್ಣೆ
ಅಡಗಿಕೊಂಡಿದೆ ಪೇಟೆಯಲಿ ತೆಂಗಿನೆಣ್ಣೆ
ಹೀಗೇಕೆ ಎಂದು ಕೇಳಿದನೊಬ್ಬ ವ್ಯಕ್ತಿ
ಇದಕೆ ಕಾರಣ ವರ್ತಕರ ದೇಶಭಕ್ತಿ!

### ೧೨೨೨. ಪುರೋಹಿತರು ಹೇಳಿದ್ದು

ನವ್ಯ ಭಾರತಕೆ ಇಲ್ಲ ಯಾವುದೂ ವಿಘ್ನ.
ಪ್ರತಿ ವರುಷ ನಡೆಯುತಿದೆ ನೂರಾರು ಲಗ್ನ
ಹೊಟ್ಟೆಗಿರದಿದ್ದರೂ ಉಂಟು ಸಂಸಾರ
ಮಕ್ಕಳೂ ಹುಟ್ಟುವರು ಪ್ರತಿಯೊಂದು ವಾರ.

### ೧೨೨೩. ನೂತನ ಯುಗಾದಿ

ನವ ಭಾರತಕೆ ಬರಲು ನೂತನ ಯುಗಾದಿ
ಅಮೇರಿಕದ ಉಗಿಹಡಗದಲಿ ಬಂತು ಗೋದಿ
ಸ್ವಾವಲಂಬನ ವಹಿಸಿ ಮಾಡಿದರು ಹೋಳಿ
ಪಂಚವಾರ್ಷಿಕವೆಂದು ತೆಗೆದರು ದಿವಾಳಿ.

### ೧೨೨೪. ಸಣ್ಣ ಕಾರು

ನವ ಭಾರತಕೆ ಬೇಕು ಅತಿ ಸಣ್ಣ ಕಾರು.
ಇದರೊಳಗೆ ಕುಳಿತುಕೊಳ್ಳುವ ಪ್ರಾಣಿ ಯಾರು?
ಅವನ ಸಂಗಡ ಇವಳು; ಇಬ್ಬರೇ ಸಾಕು
ಸಂಚಾರದಲಿ ನಡೆಯಲಿ ಭರ್ತಿ ಷೋಕು.

### ೧೨೨೫. ನವ ಭಾರತಕೆ

ನವ ಭಾರತಕೆ ಬೇಕು ಜೇನ್ನೊಣದ ದುಡಿಮೆ
ಆಗಬಾರದು ಮತ್ತೆ ಶಿಸ್ತಿನಲಿ ಕಡಿಮೆ
ನಿಲಬೇಕು ನಿತ್ಯ ಸೋರುವ ಜೊಳ್ಳು ಮಾತು
ಕೂಡಲೇ ಮುಚ್ಚಿಬಿಡಿ ಪ್ರತಿಯೊಂದು ತೂತು.

## ೧೨೨೬. ಮಂತ್ರಿಗಳ ಕೃಷಿ

ನವ ಭಾರತದ ಗದ್ದುಗೆಯ ಮೇಲೆ ಕೂತು
ಇವರು ಕೃಷಿ ಮಾಡುವದು ಸೊಗಸಾದ ಮಾತು
ಈ ಮಾತಿನೊಳಗುಂಟು ದಿವ್ಯ ಮಕರಂದ
ನೆಕ್ಕಿಬಿಟ್ಟರೆ ಸಾಕು ; ಹಸಿವೆ ಇಲ್ಲೆಂದ !

## ೧೨೨೭. ನವ ಭಾರತದ ವೈಶಿಷ್ಟ್ಯ

ನವ ಭಾರತದ ಮುಖ್ಯ ವೈಶಿಷ್ಟ್ಯವೇನು ?
ಪ್ರತಿ ಮೂಲೆಯಲ್ಲಿಯೂ ಉಂಟು ಟೆಲಿಫೋನು.
ಪಂಚವಾರ್ಷಿಕದಿಂದ ಸಾಧಿಸಿದ್ದೇನು ?
ತಾರುಣ್ಯದಲಿ ಬೆನ್ನಿಗೆ ಬಂತು ಗೂನು.

## ೧೨೨೮. ನವ್ಯ ಕಾವ್ಯ

ನವ್ಯ ಕಾವ್ಯದ ನಡುವೆ ಗೀರ್ವಾಣ ಶ್ಲೋಕ
ಆಂಗ್ಲ ವಾಕ್ಯದ ಸಹಿತ ಗಂಧರ್ವ ಲೋಕ
ಇದಕೆನ್ನುವರು ಜನರು ಆಧುನಿಕ ಕವನ
ಇದರಿಂದ ಸೃಷ್ಟಿಯಾಗುವುದು ಹೊಸ ಭವನ.

## ೧೨೨೯. ಮೈ ಬಣ್ಣಗಳು

ನಸುಗೆಂಪು, ಕಂದು, ಹಳದಿಯ ಜೊತೆಗೆ ಕಪ್ಪು
ಪ್ರತಿಯೊಂದು ಮೈಬಣ್ಣ ದೇವರಿಗೆ ಒಪ್ಪು
ಮಾನವ ಕುಟುಂಬವೆಂಬುದು ಒಂದು ಜಾತಿ
ಸಕಲರಿಗೆ ಮುತ್ತಜ್ಜನಾಗಿದ್ದ ಕೋತಿ.

## ೧೨೩೦. ಯುರೋಪಿಯ ಹೆಂಗಸು ಹೇಳಿದ್ದು

ನಾ ಕಂಡ ಸೋಜಿಗವು ನಿಮಗೇನು ಗೊತ್ತು ?
ಇಂಡಿಯಾ ಜನರ ಮೈ ಬಣ್ಣ ಬಿಸ್ಕತ್ತು
ರವಿಯ ಬೇಕರಿಯಲ್ಲಿ ಬೆಂದ ಆ ದೇಹ
ನೋಡಿದರೆ ನನಗಂತು ವಿಪರೀತ ಮೋಹ.

## ೧೨೩೧. ನಾಗಿ ಹೇಳಿದ್ದು

ನಾಗಿ ಎಂದಳು : ಹೌದು, ನಿಮಗೇಕೆ ರಂಭೆ ?
ದೇವಲೋಕದ ಸೂಳೆಯರು ಬರೀ ಗೊಂಬೆ.
ಆ ಹೆಣ್ಣುಗಳ ಮೈಗೆ ಇಲ್ಲ ತಾಕತ್ತು
ಸುಳ್ಳು ಹೇಳುವುದಿಲ್ಲ, ನಿಮಗೇನು ಗೊತ್ತು ?

## ೧೨೩೨. ನಾಡ ಮುಂದಾಳುಗಳು

ನಾಡ ಮುಂದಾಳುಗಳು ಮಾಡಿದರೆ ತ್ಯಾಗ
ನಾನು ಬರೆಯುವ ಚುಟಕಗಳಿಗಿಲ್ಲ ಜಾಗ
ನಾಡ ಮುಂದಾಳುಗಳು ನುಂಗಿದರೆ ದುಡ್ಡು
ನನ್ನ ಬರವಣಿಗೆಯಾಗುವುದಿಲ್ಲ ಗೊಡ್ಡು.

## ೧೨೩೩. ಹೊಸ ಬೂಂದಿ ಲಾಡು

ನಾ ತಯಾರಿಸಿದ ಚುಟುಕಗಳ ರುಚಿ ನೋಡು
ಸಾಹಿತ್ಯ ಲೋಕದಲಿ ಹೊಸ ಬೂಂದಿ ಲಾಡು
ಈ ಲಾಡುಗಳಿಗಿಲ್ಲ ಸಕ್ಕರೆಯ ಪಾಕು
ಬಾಯೊಳಗೆ ಹಾಕಿದರೆ ತರತರದ ಜೋಕು.

## ೧೨೩೪. ಹೊಲಿಗೆ

ನಾ ತೆಗೆದುಕೊಳ್ಳುವೆನು ಚೂಪಾದ ಸೂಜಿ
ನಿನ್ನ ಸಂಗಡವಿರಲಿ ದಾರಗಳು, ಅಜ್ಜಿ
ಇಬ್ಬರೂ ಹೊಲಿಯೋಣ ಹೊಸ ಕಾಲವನ್ನ
ಇಷ್ಟರಲ್ಲಿಯೆ ಹರಕು ಮುರುಕಾದುದನ್ನ.

## ೧೨೩೫. ಹೊಟ್ಟೆಕಿಚ್ಚು

ನಾದಿನಿಯ ಸಲುವಾಗಿ ಜರತಾರಿ ಸೀರೆ
ತಂದಿಡಲು ರೇಗಿಬಿಟ್ಟಳು ನನ್ನ ನೀರೆ
ಉದರದಲಿ ಬೆಂಕಿ ಬೀಳಲು ತಿಂದ ಗೋದಿ
ಹೃದಯದೊಂದಿಗೆ ಬೆಂದು ಆತ್ಮವೂ ಬೂದಿ.

## ೧೨೩೬. ನನ್ನ ಪ್ರವೃತ್ತಿ

ನಾ ಧರಿಸಿಕೊಂಡರೂ ಸಾಹಿತಿಯ ಅಂಗಿ
ಈ ರಾಮರಾಜ್ಯದಲಿ ನಾನೊಬ್ಬ ಭಂಗಿ.
ಗುಡಿಸಿ ಹಾಕಿದ ಹೊರತು ಪ್ರತಿಯೊಂದು ಹೊಲಸು
ವಿಶ್ರಾಂತಿ ಹೊಂದಲಾರದು ನನ್ನ ಮನಸು.

## ೧೨೩೭. ಜೋಳಿಗೆಯ ದಾಸಯ್ಯ

ನಾನಲ್ಲ ಶ್ರೀಮಂತ. ಜೋಳಿಗೆಯ ದಾಸ
ನನಗಿಲ್ಲ ಯಾವ ವ್ರತ, ಯಾವ ಉಪವಾಸ
ತಂದ ಭಿಕ್ಷೆಯ ಲೋಕಕಲ್ಯಾಣಕ್ಕಾಗಿ
ಬೆಟ್ಟದಡಿಯಲಿ ಬಿತ್ತಿ ಬೆಳಸಿದೆನು ರಾಗಿ.

## ೧೨೩೮. ಮಂತ್ರಿ ಹೇಳಿದ್ದು

ನಾನಲ್ಲ ಶ್ರೀಮಂತ; ನಾ ಬಡ ಫಕೀರ.
ಜನಸೇವೆಗಾಗಿ ಸೇರಿದೆನು ಸರಕಾರ
ನಾನು ಮಾಡುವುದಿಲ್ಲ ಯಾವುದೂ ದಂಧೆ.
ಎಲ್ಲವೂ ಮಗನ ಹೆಸರಲಿ ಉಂಟು ಅಂದೆ.

## ೧೨೩೯. ರಾಜ್ಯಪಾಲ

ನಾನಾಗಬೇಕು ಎಂಬೆನು ರಾಜ್ಯಪಾಲ
ಆಮೇಲೆ ನನಗಿಲ್ಲ ಯಾವ ಬರಗಾಲ
ಮೂರು ತಿಂಗಳಿಗೊಮ್ಮೆ ಮಾಡಿ ದಸ್ಕತ್ತು
ಮಲಗಿಕೊಂಡರೆ ಸಾಕು, ಹೋಗುವುದು ಹೊತ್ತು

## ೧೨೪೦. ನಾನು

ನಾನಾದೆ ನಾನಾದೆ ನಾನಾದೆ ದೊಡ್ಡ
ಎಂದು ಭಾವಿಸಿದಾಗ ತಲೆಯಾಯ್ತು ಹೆಡ್ಡ
ನಾನಾದೆ ನಾನಾದೆ ಬಲು ಸಣ್ಣ ಧಾನ್ಯ
ಎಂದು ಭಾವಿಸಿದಾಗ ಬಾಳಾಯ್ತು ಧನ್ಯ.

### ೧೨೪೧. ಅಕ್ಕ ಮಹಾದೇವಿ ಹೇಳಿದ್ದು

ನಾನಾ ನಮೂನೆಯಲಿ ಕಾಡಿತ್ತು ಮಾಯೆ;
ಮಡಕೆಯಲ್ಲೂ ಅಡಗಿಕೊಂಡಿತ್ತು ತಾಯೆ!
ನನ್ನ ಉಡಿಯಲಿ ಹೊಕ್ಕಿ ಒಂದು ಮಧ್ಯಾನ್ಹ
ಸಂಪೂರ್ಣ ತಿಂದುಹಾಕಿತು ದವಸ–ಧಾನ್ಯ!

### ೧೨೪೨. ಬೇಂದ್ರೆ ಹೇಳಿದ್ದು

ನಾನಿದಕೆ ನಿತ್ಯ ಹಾಕುವದು ಯಾಲಕ್ಕಿ.
ಅಂತರಿಕ್ಷದ ತುದಿಗೆ ಹಾರುತಿದೆ ಹಕ್ಕಿ
ನಾನಿದಕೆ ಕುಡಿಸುವುದು ಕಾಡಮ್ಮೆ ಹಾಲು.
ಸೂರ್ಯ ಚಂದ್ರರ ನೆತ್ತಿಯಲಿ ಇದರ ಕಾಲು.

### ೧೨೪೩. ನಾಕು ವರುಷ

ನಾನಿದ್ದೆ ಲೋಕಸಭೆಯಲಿ ನಾಕು ವರುಷ
ಒಂದು ದಿನವೂ ನನಗೆ ಇರಲಿಲ್ಲ ಹರುಷ
ಹಳ್ಳಿಯೊಳಗುಂಟು, ಸಖಿ, ಭಾರತದ ಮರ್ಮ
ಲೋಕಸಭೆಯೊಳಗುಂಟು ಮಂತ್ರಿಗಳ ಕರ್ಮ.

### ೧೨೪೪. ದಾರಿಹೋಕ

ನಾನ್ಯಾರು ಗೊತ್ತಾಯ್ತೆ? ನಾ ದಾರಿಹೋಕ
ಅಂಕೋಲೆಯಲಿ ಕುಳಿತು ನೋಡಿದೆನು ಲೋಕ
ನಾ ಹಿಡಿದ ಲೇಖನಿಯೆ ದೊಡ್ಡ ದುರ್ಬೀನು
ಇಲ್ಲಿಂದಲೇ ಹರಿಗೆ ಮಾಡುವೆನು ಫೋನು.

### ೧೨೪೫. ಜಿಲ್ಲಾ ಪುಢಾರಿ

ನಾನ್ಯಾರು ಗೊತ್ತುಂಟೆ? ಜಿಲ್ಲಾ ಪುಢಾರಿ
ಊರ ಪುಂಡರಿಗೆಲ್ಲ ನಾನೆ ಕೈವಾರಿ
ಯಾರ ದರಕಾರವಿಲ್ಲದ ಪ್ರಾಣಿ ನಾನು
ಮುಖ್ಯಮಂತ್ರಿಗೆ ಮಾತ್ರ ಮಾಡುವೆನು ಫೋನು.

## ೧೨೪೬. ಆತ್ಮಾವಲೋಕನ

ನಾನೇಕೆ ಬಡವ ? ನಾನೇಕೆ ಪರದೇಶಿ ?
ಮಂತ್ರಿಪದವಿರುವತನಕ ಧನಕನಕ ರಾಶಿ.
ಐದು ವರುಷದ ಅವಧಿಯಲಿ ಆರು ಲಕ್ಷ
ಗಳಿಸಿದರೆ ಸಾಕಯ್ಯ ಲಭಿಸುವುದು ಮೋಕ್ಷ.

## ೧೨೪೭. ಕನಸ ಕಂಡೆನು

ನಾನೊಂದು ಕನಸ ಕಂಡೆನು ? ಕೇಳು, ಅವ್ವ
ಮಂಟಪದ ಮುಂದುಗಡೆ ನಿಂತಿತ್ತು ದೆವ್ವ
ಹೆದರಿ ಕಣ್ದೆರೆದೆ ನಾ ಚೀರಿ ಹೌಹಾರಿ
ನೋಡಿದರೆ ಕಣ್ಮುಂದೆ ಜಿಲ್ಲಾ ಪುಢಾರಿ !

## ೧೨೪೮. ಹಸುಗೂಸು

ನಾನೊಂದು ಗೇಣುದ್ದ ಪುಟ್ಟಾಣಿ ಕೂಸು
ನನಗದು ಪ್ರಾಯ ಬರಿ ಮುಕ್ಕಾಲು ತಾಸು
ನನ್ನ ಮಟ್ಟಿಗೆ ಧರಣಿ ತರಣಿ ನಕ್ಷತ್ರ
ಎಲ್ಲವೂ ತಾಯ ಮೊಲೆಯೊಳಗೆ ಏಕತ್ರ.

## ೧೨೪೯. ಆಧುನಿಕ ತುಂಟ

ನಾನೊಬ್ಬ ಕವಿಯಲ್ಲ, ಆಧುನಿಕ ತುಂಟ
ನನಗೆನ್ನುವರು ಇವರು, ಬರಿ ಜಗಳಗಂಟ
ಈ ಜಗಳದೊಳಗುಂಟು ಲೋಕದ ವಿಮರ್ಶೆ
ಮತ್ತು ಲೇಖನಿ ಹಿಡಿದ ಬೆರಳುಗಳ ಈರ್ಷೆ

## ೧೨೫೦. ನಾನೊಬ್ಬ ಕಾರಕೂನ

ನಾನೊಬ್ಬ ಕವಿಯೆಂದು ಭಾವಿಸಲೇಬೇಡಿ
ನನ್ನ ಲೇಖನಿಯಿಂದ ಹೊರದುಡುತಿದೆ ರಾಡಿ
ನಾನೊಬ್ಬ ದುರ್ದೈವಿ, ಬಡ ಕಾರಕೂನ
ನನ್ನ ಒಡೆಯನ ಹೆಸರು ಶ್ರೀ ಕಾಲಮಾನ.

### ೧೨೫೧. ಆಧುನಿಕ ದಾಸಯ್ಯ

ನಾನೊಬ್ಬ ದಾಸಯ್ಯ, ನಿತ್ಯ ಸಂಚಾರಿ
ನನ್ನ ಲಹರಿಗೆ ಲೋಕ ಸಾಕಾಗ, ನಾರಿ,
ಇಂದ್ರಲೋಕದ ರಂಭೆ ತಂಬೂರಿಯೊಳಗೆ.
ಚಂದ್ರಲೋಕದ ಬಿಂಬ ತಲೆಬುರುಡೆಯೊಳಗೆ.

### ೧೨೫೨. ಸಚಿವರ ಸನ್ನಿಧಿಯಲ್ಲಿ

ನಾನೊಬ್ಬ ನಿಮ್ಮ ಅಡಿದಾವರೆಯ ದುಂಬಿ.
ಬದುಕಿಕೊಂಡಿದ್ದೇನೆ ಸಚಿವರನು ನಂಬಿ.
ಮಾಡಿಬಿಡಿ ನನಗೆ ಸಿಗುವಂತ ಕಂತ್ರಾಟು
ನಿಮ್ಮ ಕರಕಮಲದಲಿ ಸಾವಿರದ ನೋಟು.

### ೧೨೫೩. ಮನದನ್ನೆಗೆ

ನಾನೊಬ್ಬನೆ ಸ್ವರ್ಗಲೋಕವನ್ನೇರಿ
ನೀ ನರಕ ಸೇರಿದರೆ ಸುಖವಿಲ್ಲ, ನಾರಿ.
ನರಕಲೋಕಕೆ ನಡೆಯುವೆನು ನಾನು ಕೂಡ
ನೀನಿಲ್ಲದಿದ್ದರೆ ಜೊತೆಗೆ ಸ್ವರ್ಗವೂ ಬೇಡ.

### ೧೨೫೪. ನರಕ ಮತ್ತು ಸ್ವರ್ಗ

ನಾನೊಮ್ಮೆ ನರಕ ಲೋಕಕೆ ಹೋಗಿ ಬಂದೆ,
ತರತರದ ಮೀನುಗಳ ಮನವಾರೆ ತಿಂದೆ.
ಆಮೇಲೆ ಸ್ವರ್ಗಲೋಕಕೆ ನಡೆದೆ ಅಜ್ಜಿ
ನಿತ್ಯ ಅಮೃತ ಕುಡಿದು ನನಗಾಯ್ತು ಕಜ್ಜಿ.

### ೧೨೫೫. ಅರ್ಧಾಂಗಿಗೆ

ನಾನೊಮ್ಮೆ ಹೇಳಿದೆನು : ನನ್ನ ಅರ್ಧಾಂಗಿ
ನೋಡೋಣ, ನೀನುಟ್ಟುಕೊಳು ಒಂದು ಲುಂಗಿ
ಇದು ನವ್ಯ ಫಾಷನ್ನು ಎನ್ನುವರು ಅವರು
ಅನುಕರಣೆ ಮಾಡುವರು ಉಳಿದ ಹೆಂಗಸರು.

## ೧೨೫೬. ಚುಟುಕ ಸಾಮ್ರಾಜ್ಯ

ನಾನು ಕಟ್ಟಿದ್ದು ಬರಿ ಚುಟಕ ಸಾಮ್ರಾಜ್ಯ.
ಲಟಕಾಗಿ ಉರುಳಿ ಹೋಗುವುದೇನು, ಅಜ್ಜ?
ಓ ಮುದ್ದು ಮೊಮ್ಮಗನೆ, ಇದು ಕ್ರಾಂತಿಕಾಲ
ಚುಟಕಕ್ಕೆ ಅನವರತ ಉಂಟು ಉಳಿಗಾಲ.

## ೧೨೫೭. ಅನುಭವದ ಸಾರು

ನಾನು ಕುಡಿದದ್ದು ಬರಿ ಅನುಭವದ ಸಾರು.
ಹೀಗಾಗಿ ನನ್ನ ಕವಿತೆಗೆ ಬಂತು ಬೇರು.
ಈ ಬೇರಿನೊಳಗಿಂದ ತರತರದ ಟೊಂಗೆ.
ಫಲಿಸಿದವು. ಕೆಲವು ಟೊಂಗೆಯಲಿ ಹುಳಿ ನಿಂಬೆ.

## ೧೨೫೮. ನನ್ನ ಚುಟಕ

ನಾನು ಗೀಚಿದ ಚುಟಕಗಳ ಸಂಖ್ಯೆ ರಾಸಿ;
ಸೇಕಡಾ ತೊಂಬತ್ತು ಕೊನೆಗೆ ಬೇವಾರ್ಸಿ
ಉಳಿದ ಹತ್ತರ ಪೈಕಿ ಏಳೆಂಟು ಪೊಳ್ಳು
ಒಂದೆರಡು ಬದುಕಿದರೆ ಅವು ಮಾತ್ರ ಎಳ್ಳು.

## ೧೨೫೯. ತೆಂಗಿನ ಎಣ್ಣೆ

ನಾನು ಗೀಚುವ ಚುಟಕದೊಳಗಿಲ್ಲ ಬೆಣ್ಣೆ
ಸಿಗಬಹದು ಗಾಣದೊಳಗಿನ ತೆಂಗಿನೆಣ್ಣೆ
ಈ ಎಣ್ಣೆ ಹಾಕಿಕೊಂಡರೆ ತಲೆಗೆ ನಿತ್ಯ
ಮಿದುಳು ಸಾಫಾಗಿ ಗೋಚರಿಸುವುದು ಸತ್ಯ.

## ೧೨೬೦. ಬಸವಣ್ಣ ಹೇಳಿದ್ದು

ನಾ ನುಡಿದ ವಚನವನು ಚಿನ್ನದಲಿ ಬರೆದು
ಪ್ರಕಟಗೊಳಿಸಿದರಣ್ಣ ವಜ್ರದಲಿ ಕೊರೆದು
ವಚನದೊಳಗಿನ ಲಿಂಗ ಹೃದಯವನು ಬೆಳಗಿ
ಬಾಳಿದವರನು ಕಾಣೆ ಲೋಕವನು ತೊಳಗಿ.

## ೧೨೬೧. ನವ್ಯ ಕವಿ ಹೇಳಿದ್ದು

ನಾನು ಧರಿಸಿದ್ದು ನವ್ಯತೆಯ ಬುಷ್ ಷರ್ಟು
ಸೀರೆಯೇತಕೆ ನಿನಗೆ ? ಧರಿಸು ಮಿನಿ ಸ್ಕರ್ಟು
ನಾನಲ್ಲ ಶ್ರೀಕೃಷ್ಣ; ನೀನಲ್ಲ ರಾಧೆ
ಸೀರೆಯೊಳಗಿಲ್ಲ ಆಧುನಿಕ ಮರಿಯಾದೆ.

## ೧೨೬೨. ಪ್ರೇಮಿಗಳು

ನಾನು ನೀನೂ ಕೂಡಿ ಓಡಿ ಹೋಗೋಣ.
ಮರಳಬಾರದು ಇಲ್ಲಿ ಹೋದರೂ ಪ್ರಾಣ
ಬಹಳ ವಿಸ್ತೀರ್ಣವಾಗಿದೆ ಈ ಜಗತ್ತು
ಜಾಗವಿಲ್ಲವೆ ನಮಗೆ ಕೊಳ್ಳಲಿಕೆ ಮುತ್ತು ?

## ೧೨೬೩. ನಾನು ನೋಡಿದ ಮಂದಿ

ನಾನು ನೋಡಿದ ಮಂದಿ ನಾನಾ ನಮೂನೆ.
ಇದರೊಳಗೆ ಒಂದಿತ್ತು ದೊಡ್ಡ ಕಾಡಾನೆ
ನರಿಗಳೂ ನನಗೆ ಕೊಟ್ಟಿದ್ದಾವೆ ಭೇಟಿ
ಮೊಸಳೆಯೂ ಬಂದಿತ್ತು ದೊಡ್ಡ ಹೊಳೆ ದಾಟಿ.

## ೧೨೬೪. ನಾನು ನೋಡಿದ್ದೇನೆ

ನಾನು ನೋಡಿದ್ದೇನೆ ನಾನಾ ನಮೂನೆ.
ಹೇಳಿದರೆ ಬರಬಹುದು ಬೇಸರಿಕೆ ಬೇನೆ.
ಸುಮ್ಮನಿರುವುದು ಲೇಸು, ನನಗೇಕೆ ಸುದ್ದಿ ?
ಬಾಯಿಬಿಟ್ಟರು ವ್ಯರ್ಥ, ಬರಲಾರ ಬುದ್ಧಿ.

## ೧೨೬೫. ಈ ಜಾಗ

ನಾನು ಪ್ರತಿದಿವಸವೂ ಸುರಿಸಿದೆನು ಬೆವರು.
ಆದರೂ ಈ ಜಾಗ ಕೊಡಲಿಲ್ಲ ಇವರು.
ಸಕಲರಿಗೆ ಹೇಳುವರು ನಾನಂತೆ ಹುಚ್ಚ
ಇರಬಹುದು; ಇವರಂತೆ ನಾನಲ್ಲ ಲುಚ್ಚ.

### ೧೨೬೬. ನಾನು ಬರೆಯುವ ಚುಟಕ

ನಾನು ಬರೆಯುವ ಚುಟಕ ಅಲ್ಲ ಬರಿ ಗೇಲಿ
ಕಾವ್ಯ ಸಾಮ್ರಾಜ್ಯದಲಿ ನಾ ಝಾಡಮಾಲಿ
ನನ್ನ ಲೇಖನಿ ಎನ್ನುವುದು ಒಂದು ಪೊರಕೆ.
ಇದು ಪ್ರಾಪ್ತವಾದದ್ದು ಈಶ್ವರನ ಹರಕೆ.

### ೧೨೬೭. ನನ್ನ ರೀತಿ

ನಾನು ಬರೆಯುವ ಚುಟಕಗಳ ರೀತಿ ಬೇರೆ.
ಸರಿಯಾಗಿ ಕಾಣುವುದು ಮಂತ್ರಿಗಳ ಮೋರೆ.
ಕನ್ನಡಿಯ ಹಿಡಿದಾಗ ಪೆನ್ನಿನೊಳಗಿಂದ
ಹೊಟ್ಟೆಯೊಳಗಿನ ರೋಗ ಕಾಣಬಹುದೆಂದ.

### ೧೨೬೮. ಪೆನ್ಸಿಲಿನ ಆಟ

ನಾನು ಬರೆಯುವ ಚುಟಕ ಪೆನ್ಸಿಲಿನ ಆಟ
ಚೂಪಾದ ಮೊನೆ ಎನ್ನುವುದೆ ಅದರ ಸೋಟಾ
ಪೆನ್ಸಿಲ್ಲು ಸಿಟ್ಟಿಗೆದ್ದರೆ ನಿಮ್ಮ ಗೋಳು
ಪ್ರತಿಯೊಂದು ಬೆರಳಿಗೂ ಕಡಿಯುವುದು ಚೇಳು.

### ೧೨೬೯. ಸರಳತೆ

ನಾನು ಬರೆಯುವ ಚುಟಕ ಅತ್ಯಂತ ಸರಳ.
ಆದರೂ ಈ ತರದ ಸಾಹಿತ್ಯ ವಿರಳ.
ಸರಳವಾದರೂ ಶೈಲಿ, ಇದು ವಕ್ರರೇಖೆ
ನಿಮ್ಮ ಮೇಲೂ ಏರಿ ಬರಬಹುದು, ಜೋಕೆ.

### ೧೨೭೦. ನನ್ನ ಚುಟಕ

ನಾನು ಬರೆಯುವ ಚುಟಕ ಸುಲಭ ಅತ್ಯಂತ
ಮೇಲೆಯೇ ತೇಲುತಿದೆ, ಅದಕಿಲ್ಲ ಕಂತ.
ಬಿರುಗಾಳಿ ಬೀಸಿದರೆ ಹೋಗುವುದು ಹಾರಿ
ಇಲ್ಲದಿದ್ದರೆ ಕೆಳಗೆ ಬೀಳುವುದು ಜಾರಿ.

## ೧೨೭೧. ಜೀವನದ ಆಸೆ

ನಾನು ಬರೆಯುವದೆಲ್ಲ ಕೇವಲ ತಮಾಷೆ.
ಈ ಚುಟಕಗಳು ನನ್ನ ಜೀವನದ ಆಸೆ
ನನ್ನ ಪ್ರಾರ್ಥನೆಯ ತುಸು ಕೇಳು, ಜಗದಂಬೆ
ಮಾನವರು ನರನಾಗಿ ಬಾಳಬೇಕೆಂಬೆ.

## ೧೨೭೨. ಸಾಮಾನ್ಯ ಬುದ್ಧಿ

ನಾನು ಬರೆಯುವುದೆಲ್ಲವೂ ನಡೆದ ಸುದ್ದಿ
ಇದಕೆ ಸಾಕೆನಿಸುವುದು ಸಾಮಾನ್ಯ ಬುದ್ಧಿ
ಸಾಮಾನ್ಯ ಬುದ್ಧಿ ಇದ್ದವರೆಷ್ಟು ಹೇಳು ?
ಹೇಳದಿದ್ದರೆ ಒಳಿತು, ಹೇಳಿದರೆ ಗೋಳು;

## ೧೨೭೩. ಅನುಭವದ ಕೆಂಡ

ನಾನು ಬರೆಯುವುದೆಲ್ಲವೂ ಬಹಳ ಸಣ್ಣ
ಹೊರಗೆ ಮೂಡುವುದಿಲ್ಲ ಹದಿನೆಂಟು ಬಣ್ಣ
ಒಳಗೊಳಗೆ ಬೇಯುತಿದೆ ಅನುಭವದ ಕೆಂಡ.
ಬೇಯದಿದ್ದರೆ ಭಾಷೆ ಬರಿ ಬ್ರಹ್ಮದಂಡ.

## ೧೨೭೪. ಕನ್ನಡದ ಮರುಳ

ನಾನು ಬರೆಯುವುದೆಲ್ಲವೂ ಬಹಳ ಸರಳ.
ಇದಕೆ ಕಾರಣ ನಾನು ಕನ್ನಡದ ಮರುಳ.
ನಾನು ಗೀಚುವ ಪಂಕ್ತಿ ಬರಿ ನಾಕು ಸಾಲು
ಆದರೂ ಇದಕುಂಟು ರೆಕ್ಕೆ ಕೈ ಕಾಲು.

## ೧೨೭೫. ಶೂನ್ಯ

ನಾನು ಬರೆಯುವುದೆಲ್ಲವೂ ಮಹಾ ಶೂನ್ಯ
ಆದರೂ ಧರೆಯೊಳಗೆ ನಾನಾದೆ ಧನ್ಯ
ಶೂನ್ಯವೆಂಬುದು ಮಗನೆ ಈ ಪೃಥಿವಿ ಗೋಲು
ಶೂನ್ಯಗಳ ರಾಶಿ ನಕ್ಷತ್ರಗಳ ಸಾಲು.

## ೧೨೭೬. ಚುಟಕದ ಪರಂಪರೆ

ನಾನು ಬರೆಯುವ ಚುಟಕ ಹೊಸದಲ್ಲ, ಜೀಯ.
ಸರ್ವಜ್ಞ ಸಂಪ್ರದಾಯದ ಕಹಿ ಕಷಾಯ.
ಇದರ ಗರ್ಭದೊಳುಂಟು ನಾಕು ಶತಮಾನ.
ಆಧುನಿಕವೆನಿಸಿದರು ಚುಟಕ ಪ್ರಾಚೀನ.

## ೧೨೭೭. ಗೀತೆಯ ವೇದಾಂತ

ನಾನು ಮಾಡುತ್ತೇನೆ ಎನ್ನುವುದು ವ್ಯರ್ಥ.
ಎಲ್ಲವೂ ನಿನ್ನ ಕೈಯಲಿ ಸೃಷ್ಟಿಕರ್ತ
ನಿನ್ನಿಂದಲೇ ನಮಗೆ ಸಕ್ಕರೆಯ ಕೋಟಾ
ಲಂಚ ತಿನಿಸುವ ಕೆಲಸವೂ ನಿನ್ನ ಆಟ.

## ೧೨೭೮. ಗೀತೆಯಲ್ಲಿ ಹೇಳಿದ್ದು

ನಾನು ಮಾಡುತ್ತೇನೆ ಎನ್ನುವುದು ಸುಳ್ಳು
ಆ ಸೃಷ್ಟಿಕರ್ತನಿಂದಲೆ ಭತ್ತ ಜಳ್ಳು.
ಆಹಾರ ಕೊರತೆಗೂ ಭಗವಂತ, ನೋಡಾ.
ಮಂತ್ರಿ ಮಾಡುತ್ತಾನೆ ಎನಬೇಡ, ಮೂಢಾ.

## ೧೨೭೯. ಶಾಸಕನ ಅನುಭವ

ನಾನು ಶಾಸಕನಿದ್ದೆ ಹದಿನೈದು ವರುಷ
ಬೇಕಾದ ಹಾಗೆ ಅನುಭವಿಸಿದೆನು ಹರುಷ
ಈಗ್ಗೆ ಮಾಡುವುದಿಲ್ಲ ಯಾರೂ ಸಲಾಮು
ಮತ್ತೆ ಹಚ್ಚುವುದಿಲ್ಲ ಕೈಯಿಗೆ ಮಲಾಮು.

## ೧೨೮೦. ನಾನು ಸತ್ತಾಗ

ನಾನು ಸತ್ತಾಗ ನೀ ಅಳಬೇಡ, ಕಂದ.
ನಾ ಬರೆದ ಕವಿತೆಗಳ ನೋಡು ಮುದದಿಂದ
ಈ ಕವಿತೆಯೊಳಗುಂಟು ದಿನಕರನ ಜೀವ
ಇರುಳು ಕವಿದಾಗಲೂ ಮೂಡುವುದು ಭಾವ.

## ೧೨೮೧. ನಾನು ಸತ್ತಾಗ

ನಾನು ಸತ್ತಾಗ ನೀವೆಲ್ಲರೂ ಎದ್ದು.
ಸ್ವಲ್ಪವೂ ಮಾಡಬಾರದು ಯಾವ ಸದ್ದು
ಗದ್ದಲ ಗಲಾಟೆಯಲಿ ಬದುಕಿ ಬೇಸತ್ತೆ
ಈ ಜಗದ ಸಹವಾಸವೂ ಬೇಡ ಮತ್ತೆ

## ೧೨೮೨. ನಾನು ಸತ್ತಾಗ

ನಾನು ಸತ್ತಾಗ, ಮಗು, ಅಳಬೇಡ ಮತ್ತೆ
ಸುಖವಾಗಿ ಸ್ವರ್ಗವೇರುವುದು, ಈ ಕತ್ತೆ.
ಇದಕೆ ಕಾರಣ ನಾನು ಗಳಿಸಿರುವ ಪುಣ್ಯ
ಜೇಬಿನೊಳಗಿರಲಿಲ್ಲ ಬೆಲೆಯುಳ್ಳ ನಾಣ್ಯ.

## ೧೨೮೩. ಲೇಖನಿಯ ಗತಿಯೇನು ?

ನಾನು ಸತ್ತಾಗ ಲೇಖನಿಯ ಗತಿಯೇನು ?
ಗೆಳೆಯನೆಂದನು ! ಚಿಂತೆ ಪಡಬೇಡ ನೀನು.
ಲೇಖನಿಗೆ ದೊರಕುವುದು ಭರ್ತಿ ವಿಶ್ರಾಂತಿ.
ವಿಶ್ರಾಂತಿಯಿಂದ ತಲೆದೋರುವುದು ಕ್ರಾಂತಿ.

## ೧೨೮೪. ನಾನು ಸತ್ತಿಲ್ಲ

ನಾನು ಸತ್ತಿಲ್ಲ, ಮಗು, ಇದ್ದೇನೆ ಇನ್ನೂ
ಇಂದಿಗೂ ಅಲುಗಾಡುತಿದೆ ನನ್ನ ಪೆನ್ನು
ಮುದುಕಾದರೂ ನಾನು, ನನ್ನ ಪೆನ್ಸಿಲ್ಲು
ಚೌಪದಿಯ ಬಾಗಿಲಲಿ ಹೊಡೆಯುತಿದೆ ಗುಲ್ಲು.

## ೧೨೮೫. ಉತ್ತಂಗಿಯವರು ಹೇಳಿದ್ದು

ನಾನು ಸಿಂಪಿಗ, ನನ್ನ ಹೆಸರು ಉತ್ತಂಗಿ.
ಸರ್ವಜ್ಞನಿಗೆ ಹೊಲಿಸಿದೆನು ಒಂದು ಅಂಗಿ.
ಅಂಗಿ ಧರಿಸಿದ ಬಳಿಕ ಕಪ್ಪರದ ಮೂರ್ತಿ
ಮದುವೆ ಚಪ್ಪರದೊಳಗೆ ಗಳಿಸಿದನು ಕೀರ್ತಿ.

## ೧೨೮೬. ಅಂಕೋಲೆಯಲ್ಲಿ

ನಾನು ಹುಟ್ಟಿದ್ದು, ಸಖಿ, ಅಂಕೋಲೆಯಲ್ಲಿ
ಚಿಂತೆಯಿಲ್ಲದೆ ಸಾಯಬೇಕೆಂಬೆ ಅಲ್ಲಿ.
ಅಂಕೋಲೆ ಎನ್ನುವುದು ಕನ್ನಡದ ಕಡಲು
ಈ ಕಡಲಿನೊಳಗಿರಲಿ ದಿನಕರನ ಒಡಲು.

## ೧೨೮೭. ನನ್ನ ಹುಟ್ಟುದಿನ

ನಾನು ಹುಟ್ಟಿದ್ದು ಸಪ್ಟಂಬರದ ಹತ್ತು
ನೆಲತಾಯಿ ಬಸುರಾಗಿ ಕದಿರು ಮೂಡಿತ್ತು
ಹಸಿರು ಸೀರೆಯನುಟ್ಟು ಧರೆಗೆ ಆನಂದ
ಇದು ನನ್ನ ಸೌಭಾಗ್ಯವೆನ್ನುವೆನು ಕಂದ.

## ೧೨೮೮. ದೇವರ ಲಗೇಜು

ನಾನು ಹೇಳುವ ಮಾತು ಅಲ್ಲ ಬರಿ ಮೋಜು
ಮಾತಿನಲಿ ತುಳುಕುತಿದೆ ದೇವರ ಲಗೇಜು
ಈ ಲಗೇಸು ಹೊತ್ತು ಸಾಕಾಯ್ತು ಜೀವ
ಕೆಳಗಿಳಿಲಿಕೆ ಓಡಿ ಬಾರೋ, ಮಾದೇವ.

## ೧೨೮೯. ಬಾಪು ಹೇಳಿದ್ದು

ನಾನು ಹೇಳುವ ಮಾತು ಇಲ್ಲವೆ ಪಸಂದು ?
ಇಲ್ಲದಿದ್ದರೆ ಹಾಕಿಬಿಡಿ ಭರ್ತಿ ತಿಂದು
ಹೀಗೆಂದು ನಡೆದುಬಿಟ್ಟರು ನಮ್ಮ ಬಾಪು
ಮತ್ತೆ ನಡೆಯುವ ಮೊದಲು ನೀಡಿದರು ಸೋಪು.

## ೧೨೯೦. ಹಚ್ಚಿದರು ಅಂಟು

ನಾ ಬರೆದ ಕವಿತೆಗಳ ಮಾಡಿ ಬಿಸ್ ಪ್ರಿಂಟು
ನನ್ನ ಮೋರೆಗೆ ಇವರು ಹಚ್ಚಿದರು ಅಂಟು.
ಏನು ಮಾಡಲಿ ಮಗಳೆ ನನ್ನ ಪ್ರಾರಬ್ಧ
ಒಮ್ಮೊಮ್ಮೆ ಇವರು ನುಂಗುವುದುಂಟು ಶಬ್ದ.

## ೧೨೯೧. ಭಾವನೆಯ ಹೆಣ್ಣು

ನಾ ಬರೆದ ಕಾಗದಕೆ ಬಂತು ಹೊಸ ಜೀವ.
ಇದಕೆನ್ನವರು ಮಗಳೆ ಕವಿತೆಯ ಪ್ರಭಾವ.
ನಾ ಹಿಡಿದ ಲೇಖನಿಗೆ ಮೂಡಿದವು ಕಣ್ಣು
ಇದಕ್ಕೆನ್ನುವರು, ಮಗಳೆ, ಭಾವನೆಯ ಹೆಣ್ಣು.

## ೧೨೯೨. ಮುದ್ರಣದ ದೆವ್ವ

ನಾ ಬರೆದ ಚುಟಕಗಳ ಮಾಡಿ ಮಿಸ್‌ಪ್ರಿಂಟು
ನನ್ನ ಮೋರೆಗೆ ಇವರು ಹಚ್ಚಿದರು ಅಂಟು.
ಮುದ್ರಣದ ದೆವ್ವ ನುಂಗಿತು ಕೃತಿಯ ಭಾವ.
ಏನು ಹೇಳಲಿ, ಮಗನೆ ? ಕವಿಯ ದುರ್ದೈವ.

## ೧೨೯೩. ನನ್ನ ಚುಟಕಗಳು

ನಾ ಬರೆದ ಚುಟಕಗಳು ಸಂಖ್ಯೆ ವಿಪರೀತ
ಸೇಕಡಾ ತೊಂಬತ್ತು ಹೊಡೆಯುವವು ಗೋತಾ.
ಉಳಿದ ಹತ್ತರ ಪೈಕಿ ಏಳೆಂಟು ಸತ್ತು
ಒಂದೆರಡು ಬದುಕಿದರೆ ಅವು ಮಾತ್ರ ಮುತ್ತು.

## ೧೨೯೪. ನನ್ನ ಚುಟಕ

ನಾ ಬರೆದ ಚುಟಕಗಳಿಗುಂಟು ಆಧಾರ.
ಇವು ನನ್ನ ಜೀವನದ ಅನುಭವದ ಸಾರ
ಈ ಸಾರಿನಲಿ, ಗೆಳತಿ, ಹುಳಿ ಸ್ವಲ್ಪ ಜಾಸ್ತಿ
ಆಕೆ ಎಂದಳು; ಹೌದು, ಇದು ನಿಮ್ಮ ಆಸ್ತಿ.

## ೧೨೯೫. ಚುಟಕದ ವ್ಯಾಪ್ತಿ

ನಾ ಬರೆದ ಚುಟಕದಲಿ ಏನುಂಟು ಗೊತ್ತೆ ?
ಭೂಲೋಕದೊಳಗಿರುವ ಪ್ರತಿಯೊಂದು ಕತ್ತೆ
ಮತ್ತೆ ಕತ್ತೆಯ ಮೇಲೆ ಕುಳಿತಿರುವ ಜಾಣ
ಈ ಜಾಣರೆಲ್ಲರೂ ಚಿಟಕಗಳ ಪ್ರಾಣ.

## ೧೨೯೬. ಬರವಣಿಗೆ

ನಾ ಬರೆದುದೆಲ್ಲವೂ ಆದರೆ ವಿಚಿತ್ರ
ಕೊನೆಯವರೆಗೂ ಮೂಡುವುದು ಭಾವಚಿತ್ರ
ನನ್ನ ಬರವಣಿಗೆಯಾದರೆ ಬಹಳ ಸಾದಾ
ಅದರೊಳಗೆ ಹುಟ್ಟುವುದು ಜನಮನದ ನಾದ.

## ೧೨೯೭. ನಾ ಬರೆದುದೆಲ್ಲವೂ

ನಾ ಬರೆದುದೆಲ್ಲವೂ ಬೆಳ್ಳಿ ಬಂಗಾರ.
ಮನದನ್ನೆ, ನಿನಗೇಕೆ ಬೇರೆ ಸಿಂಗಾರ ?
ಸಿಂಗಾರ ಸಾಕೀಗ, ಸ್ನಾನಕ್ಕೆ ಹೋಗಿ,
ಹೀಗೆಂದು ಗದರಿದಳು, ಕವಿಯ ಅರ್ಧಾಂಗಿ.

## ೧೨೯೮. ನನ್ನ ಕೂಸು

ನಾ ಬರೆದುದೆಲ್ಲವೂ ಸಂಪೂರ್ಣ ಸತ್ಯ.
ಸ್ವಲ್ಪವೂ ಕಾಣಿಸದು ಯಾವುದೂ ನೃತ್ಯ
ಭಾಷೆ ಬತ್ತಲೆಯಾಗಿ ಹುಟ್ಟಿದವು ಕೂಸು.
ತಾಯಿ ಎಂದಳು : ಮಗನೆ ಇದು ಬಹಳ ಲೇಸು.

## ೧೨೯೯. ಅರ್ಧಾಂಗಿಗೆ

ನಾ ಬೇರೆ ನೀ ಬೇರೆ ಎನ್ನುವುದು ಸುಳ್ಳು.
ನೀ ಗುಲಾಬಿಯ ಹೂವು, ನಾನದರ ಮುಳ್ಳು.
ನೀ ಕಳಚಿಬಿದ್ದೊಡನೆ ಇನ್ನೊಂದು ಹೂವು
ಯಾವಾಗಲೂ ಹೀಗೆ ಗಂಡಸರು ನಾವು.

## ೧೩೦೦. ನಾ ಮುದುಕನಾದರೂ

ನಾ ಮುದುಕನಾದರೂ ನನ್ನ ತಾಕತ್ತು
ಇವರು ಹೇಳುವ ಹಾಗೆ ಹೋಗಿಲ್ಲ ಸತ್ತು
ಸೇವೆ ಗೈಯುವ ಶಕ್ತಿ ಇಂದಿಗೂ ಉಂಟು
ಕೈಯೊಳಗೆ ನಾನು ಊರುವದಿಲ್ಲ ದಂಟು.

## ೧೩೦೧. ಸಣ್ಣ ಬರವಣಿಗೆ

ನಾ ಮುದುಕನಾದರೂ ಬರವಣಿಗೆ ಸಣ್ಣ
ಮುದಿ ಮರಕೆ ಚಿಗುರೊಡೆದು ಬಂದಂತೆ ಬಣ್ಣ.
ಪ್ರಾಯ ಹೆಚ್ಚಾದಂತೆ ಶಬ್ದಗಳು ಕಡಿಮೆ
ಇದಕೆನ್ನುವರು ಕವಿಯ ಅನುಭವದ ಮಹಿಮೆ.

## ೧೩೦೨. ಷಷ್ಟ್ಯಬ್ಧಿ ಸಮಾರಂಭದ ಫಲಶ್ರುತಿ

ನಾ ಮುದುಕನೆಂದು ಪಡಿಸಿದರು ಜಾಹೀರು.
ಬಾಳಬೇಕೆಂದು ನುಡಿದರು ವರುಷ ನೂರು.
ಶತಮಾನ ಬಾಳಿದರೆ ಔಷಧಿಯ ಕುಡಿದು
ನರಳಬೇಕಾದೀತು ಹಾಸಿಗೆಯ ಹಿಡಿದು.

## ೧೩೦೩. ಬೆಂಗಳೂರಿನ ನ್ಯಾಟ್

ನ್ಯಾಟ್ ಎನ್ನುವುದು ಬೆಂಗಳೂರಿನ ವಿಮಾನ
ರಣರಂಗೊಳಗೆ ಭಾರತದ ಅಭಿಮಾನ
ಪುಟ್ಟದಾದರೂ ದೇಹ ಕೆಚ್ಚೆದೆಯ ಜೆಟ್ಟು
ಎದುರಾಳಿಗಳ ಕುಟ್ಟಿ ಮಾಡುವುದು ಹಿಟ್ಟು.

## ೧೩೦೪. ನಾರದನೆ

ನಾರದನೆ, ದೇವಲೋಕದ ಸುದ್ದಿ ಏನು ?
ಅಲ್ಲಿಯೂ ಶುರುವಾಯ್ತು ತಿನ್ನುವುದು ಮೀನು.
ಸೆಟ್ಲಿ ಪುಡಿಗೂ ಅಲ್ಲಿ ವಿಪರೀತ ರೇಟು.
ಅಲ್ಲಿ ಬಂದಿದ್ದಾನೆ ನಿಮ್ಮೂರ ಸೇಟು.

## ೧೩೦೫. ತೊಡಿಸಿದರು ಖಾದಿ

ನ್ಯಾಯಮೂರ್ತಿಗಳಲ್ಲಿ ಜೋ ಹುಕುಂ ವಾದಿ
ಬೇಕೆಂದು ಆತನಿಗೆ ತೊಡಿಸಿದರು ಖಾದಿ.
ಇದಕೆಂಬೆ ನಮ್ಮ ಸರಕಾರದ ನಮೂನೆ
ಚಪ್ಪಾಳೆ ತಟ್ಟಿ ಹಾಕೋಣ ಶೋಭಾನೆ.

### ೧೩೦೬. ನಾರಿ ಮುನಿದರೆ

ನಾರಿ ಮುನಿದರೆ ಮಾರಿಗಿಂತಲೂ ಹಾಳು
ಗಂಡನಿಗೆ ದೊರಕಲಾರದು ಭರ್ತಿ ಕೂಳು
ಆಗಲಾರದು ಅವನ ತುಟಿಗಳೂ ಒದ್ದೆ
ಬಂಜೆಯಾಗುವುದು ಸಂಸಾರಿಗಳ ಗದ್ದೆ.

### ೧೩೦೭. ನೀನು ಅಪವಾದ

ನಾರಿ ಮುನಿದರೆ ಮಾರಿ; ನೀನು ಅಪವಾದ
ನೀನು ಮುನಿದರೆ ಇಡೀ ಕೇರಿಯಲಿ ನಾದ
ನಿನ್ನ ನಾದಕೆ ಎಲ್ಲ ಜನರು ಮರುಳಾಗಿ
ಐದು ನಿಮಿಷದಲಿ ಬರುವರು ಇಲ್ಲಿ ಸಾಗಿ.

### ೧೩೦೮. ಕೌಶಲ

ನಾರಿಯರ ಮುಡಿಯೊಳಗೆ ಬರಿ ಕೃತಕ ದಂಡೆ
ಗಿಡಬಳ್ಳಿ ಹೂಬಿಡಲು ಕೌಶಲವ ಕಂಡೆ
ಒಂದೊಂದು ವೃಕ್ಷದಲಿ ಒಂದೊಂದು ರೀತಿ
ನವಿಲುಗರಿಯಲಿ ಕಂಡೆ ಆತನ ಕಸೂತಿ.

### ೧೩೦೯. ಚುಟುಕ ಸಾಮ್ರಾಜ್ಯ

ನಾಲ್ಕು ಕಂಬದ ನಡುವೆ ಚುಟಕ ಸಾಮ್ರಾಜ್ಯ
ಈ ರಾಜ್ಯದೊಳಗಿಲ್ಲ ಯಾವುದೂ ಪೂಜ್ಯ.
ದೇವರೂ ತಪ್ಪು ಮಾಡಿದರುಂಟು ಟೀಕೆ
ಬಾರಕೋಲಿನ ಚಿಹ್ನೆ ರಾಜ್ಯದ ಪತಾಕೆ.

### ೧೩೧೦. ನನ್ನ ಚೌಪದಿ

ನಾಲ್ಕು ಕಾಲಿನ ಪ್ರಾಣಿ, ಹೊಟ್ಟೆ ಸಂಕ್ಷಿಪ್ತ
ಇದರ ನಾಲಿಗೆ ಕಣ್ಣು ಮೂಗು ವಿಕ್ಷಿಪ್ತ
ಒಂದೆರಡು ಚಮಚೆ ನಸ್ಯವೆ ಇದರ ಕೂಳು
ಸಾಹಿತ್ಯ ಸಾಮ್ರಾಜ್ಯದೊಳಗೆ ಇದು ಚೇಳು.

### ೧೩೧೧. ಚೌಪದಿಯ ರಚನೆ

ನಾಲ್ಕು ಪಂಕ್ತಿಗೆ ಹತ್ತಿ ನಲವತ್ತು ದಿವಸ
ಸಂಪೂರ್ಣ ಕೆಟ್ಟುಹೋಯಿತು ಕೊನೆಗೆ ಕೆಲಸ
ಇನ್ನೊಮ್ಮೆ ಅರಗಳಿಗೆಯಲಿ ನಾಲ್ಕು ಸಾಲು
ಜೀವಂತವಾಗಿ ಮೂಡಿದವು ಕೈಕಾಲು.

### ೧೩೧೨. ಚುಟಕದ ಬರವಣಿಗೆ

ನಾಲ್ಕು ಪಂಕ್ತಿಯ ಚುಟಕ ಬರೆಯಲಿಕೆ ನಾನು
ಹತ್ತು ಕವಿಗಳಿಗೆ ಮಾಡಿದೆನು ಟೆಲಿಫೋನು
ಎಲ್ಲರೂ ಹೇಳಿದರು : ಇದು ಬಹಳ ಕಷ್ಟ
ಜಾರದಿದ್ದರೆ ಕಾಲು ಕವಿಯ ಅದೃಷ್ಟ.

### ೧೩೧೩. ನಾಲ್ಕು ಪಂಕ್ತಿಗಳು

ನಾಲ್ಕು ಪಂಕ್ತಿಯೊಳಿರಲಿ ನಲವತ್ತು ಕೋಟಿ
ಆ ಕಡೆಗೆ ಸೇರುವೆನು ಈ ವಿಶ್ವ ದಾಟಿ
ಈ ವಿಶ್ವ ಸೇರಿಯೂ ನೆಲದೊಳಗೆ ಇದ್ದೆ
ತಾಯಿ ಎಂದಳು : ಮಗನೆ, ಕವಿಯಾಗಿ ಗೆದ್ದೆ.

### ೧೩೧೪. ಜೋಕಾಲಿ

ನಾವಿಬ್ಬರೂ ಕುಳಿತುಕೊಂಡು ಜೋಕಾಲಿ
ಅಲುಗಾಡಿಸಿದರೆ, ಸಖಿ, ಅರಳುವುದು ಲೀಲೆ.
ಜೋಕಾಲಿ ತೂಗಲಿಕೆ ನನಗಿಲ್ಲ ಹೊತ್ತು.
ಅಡಿಗೆ ಮಾಡುವರಾರು ? ನಿಮಗೇನು ಗೊತ್ತು ?

### ೧೩೧೫. ಪಂಚಶೀಲರ ಪೂಜೆ

ನಾವೆಲ್ಲರೂ ಪೂಜಿಸಿದ ಪಂಚಶೀಲ
ಚೀನಿ ಭಟ್ಟರಿಗಾಯ್ತು ಬಹಳ ಅನುಕೂಲ
ಹರಿವಾಣದಲಿ ಧೂಪ, ಹಣೆಗೆ ಶ್ರೀಗಂಧ.
ಊದಬತ್ತಿಯ ಒಳಗೆ ಸಿಡಿಮದ್ದು ಕಂದ.

## ೧೩೧೬. ಹೊಸ ವರುಷ

ನಾಳೆ ಜನವರಿ ಒಂದು; ಹೊಸ ವರುಷ ಬಂದು
ತಲೆದೋರುವುದು ಮತ್ತೆ ಏನೇನೊ ತಂದು.
ಇದು ತರುವ ಪೊಟ್ಲೆಯೊಳಗಿರುವ ಸಾಮಾನು,
ಕಾಲರಾಯನು ಮಾತ್ರ ಬಿಚ್ಚಿ ನೋಡುವನು.

## ೧೩೧೭. ನಿಗಮಗೋಚರನಿಗೆ

ನಿಗಮಗೋಚರ ಹರಿಯೆ, ವೇಣುಗೋಪಾಲ
ದುಡ್ಡು ತಿಂದದ್ದು ತಿಳಿಯುವುದೆ, ಘನಲೋಲ ?
ಇದು ಕೂಡ ನಿನಗೆ ಗೋಚರವಾಗಬೇಕು
ಆಗದಿದ್ದರೆ ನೀನು ಹರಿಯಲ್ಲ ಜೋಕು.

## ೧೩೧೮. ನಿಜ ಪರಿಸ್ಥಿತಿ

ನಿಜ ಪರಿಸ್ಥಿತಿ ನಿನಗೆ ಗೊತ್ತುಂಟೆ, ಅಜ್ಜ ?
ಮೈಸೂರು ನಗರ, ಕರ್ನಾಟಕವು ರಾಜ್ಯ.
ಆದರೂ ರಾಜ್ಯಕ್ಕೆ ಮೈಸೂರು ಎಂದು
ಕರೆದ ಈ ಜಾಣರಿಗೆ ಕರೆವೆ ಏನೆಂದು ?

## ೧೩೧೯. ರಾಜಕಾರಣ

ನಿಜ ಪರಿಸ್ಥಿತಿ ನಿನಗೆ ಗೊತ್ತಿಲ್ಲ ಅಂದೆ.
ರಾಜಕಾರಣವೆನ್ನುವುದು ದೊಡ್ಡ ದಂಧೆ.
ಆಗಿಬಿಟ್ಟರೆ ನೀನು ಕರ್ತವ್ಯದಕ್ಷ
ಒಂದೆರಡು ವರುಷದಲಿ ಒಂದೆರಡು ಲಕ್ಷ.

## ೧೩೨೦. ವಕೀಲರು ಹೇಳಿದ್ದು

ನಿಜವಾಗಿ ನೋಡಿದರೆ ಶಾಸನದ ರೀತ್ಯ
ಯಾರೊಬ್ಬನೂ ನುಡಿಯಬೇಕುಲ್ಲ ಸತ್ಯ
ಕೋರ್ಟಿನಲಿ ಸುಳ್ಳು ಮಾತಾಡಿದರೆ ಮಾತ್ರ
ವ್ಯವಹಾರದಲಿ ನಿಮಗೆ ಎಲ್ಲಾ ಸೂಸುತ್ರ ?

### ೧೩೨೧. ದುಡ್ಡು

ನಿಜವಾಗಿ ನೋಡಿದರೆ ದುಡ್ಡು ದೊಡ್ಡಪ್ಪ
ತೆಳ್ಳಗಿದ್ದರು ದೇಹ ವರ್ಚಸ್ಸು ದಪ್ಪ
ದುಡ್ಡು ಇದ್ದರೆ ದಿಲ್ಲಿಯಲ್ಲಿಯೂ ಮಾನ
ಹೋದಹೋದಲ್ಲೆಲ್ಲ ಹಾಡುವರು ಗಾನ.

### ೧೩೨೨. ನಿತ್ಯಪೂಜೆಗೆ

ನಿತ್ಯಪೂಜೆಗೆ ಕೊಡ್ರುವನು ಎರಡು ತಾಸು
ಕಳ್ಳ ಬಾಜಾರದಲ್ಲಿ ಗಳಿಸುವನು ಕಾಸು
ಲಕ್ಷಗಟ್ಟಲೆ ಗಳಿಸಿದನು ಇದೇ ರೀತಿ
ದೇವರಿಗೆ ಇಂಥವರ ಮೇಲೆಯೇ ಪ್ರೀತಿ.

### ೧೩೨೩. ಪೊರಕೆಯ ಜವಾಬುದಾರಿ

ನಿತ್ಯ ಮುಂಜಾನೆ ಕಸ ಗುಡಿಸುವುದು ಪೊರಕೆ
ಕಸಬರಿಗೆ ಭಗವಂತ ನಮಗಿತ್ತ ಹರಕೆ
ಈಗಂತು ಇದರ ಹೊಣೆ ಬಹಳ ಗಂಭೀರ
ಪೊರಕೆಯಿಂದಲೆ ಬದುಕಬಹುದು ಸರಕಾರ.

### ೧೩೨೪. ಬ್ರೆಡ್ಡಿನ ಜಾಹೀರಾತು

ನಿತ್ಯ ಮುಂಜಾನೆ ತಿಂದರೆ ನಮ್ಮ ಬ್ರೆಡ್ಡು
ನಿಲಬಹುದು ಯಾವಾಗಲೂ ಹೊಡೆದು ಸೆಡ್ಡು
ಮತ್ತೆ ತಿಂದರೆ ನಮ್ಮ ಶ್ರೇಷ್ಠ ಬಿಸ್ಕತ್ತು
ಸಂಪೂರ್ಣ ಸವಿಯಾಗುವುದು ತುಟಿಯ ಮುತ್ತು

### ೧೩೨೫. ನಸ್ಯದ ಜಾಹೀರಾತು

ನಿತ್ಯ ಮುಂಜಾನೆ ಹಾಕಿದರೆ ಈ ನಸ್ಯ
ಹಾರಿ ಹೋಗುವುದು ಹೆಂಗಸರ ಆಲಸ್ಯ
ನಿಮ್ಮ ಮೂಗಿನ ತುದಿಗೆ ಪರಿಮಳದ ಸುಗ್ಗಿ
ಮುತ್ತು ಕೊಟ್ಟರೆ ಗಂಡ ನಲಿಯುವ ಹಿಗ್ಗಿ.

## ೧೩೨೬. ದೇವರ ಪೂಜೆ

ನಿತ್ಯವೂ ಉಂಟು ದೇವರ ಪೂಜೆ ಉದ್ದ
ನಡತೆ ನೋಡಿದರೆ ಯಾವುದು ಇಲ್ಲ ಶುದ್ಧ
ಪಾಪ ಪರಿಹಾರಕ್ಕೆ ಬೇಕು ಈ ಪೂಜೆ
ಪುಣ್ಯವಂತರಿಗಿಲ್ಲ ದೇವರ ಮುಲಾಜೆ.

## ೧೩೨೭. ಈ ಮಹಾ ಪ್ರಾಣಿ

ನಿತ್ಯವೂ ಕಿರುಚುತಿದೆ ಈ ಮಹಾಪ್ರಾಣಿ
ಇದಕೆನ್ನುವರು, ಮಗನೆ, ಆಕಾಶವಾಣಿ
ಮನರಂಜನೆಯ ಬದಲು ಭರ್ತಿ ತಲೆನೋವು
ಸಹಿಸಬೇಕಂತೆ ಹಣ ತೆತ್ತವರು ನಾವು.

## ೧೩೨೮. ವೃತ್ತಗನ್ನಡಿ

ನಿತ್ಯವೂ ನನಗೆ ಕನ್ನಡಿ ಬೇಕು, ನೀರೆ
ನನ್ನ ಕನ್ನಡಿಯ ಆಕಾರವೇ ಬೇರೆ
ವೃತ್ತಪತ್ರಿಕೆಯೆಂಬ ಕನ್ನಡಿಯ ಒಳಗೆ
ಇಡಿಯ ಲೋಕದ ಭೂತ ಕಾಣುವುದು ನನಗೆ.

## ೧೩೨೯. ಗುಣವಂತಗೆ

ನಿತ್ಯವೂ ರವಿ ಬೆಳಗಾಗುವನು ನಿಯಮದಂತೆ
ಕಲಿಯಬಾರದೆ ಪಾಪ ನೀನು, ಗುಣವಂತೆ ?
ಒಮ್ಮೊಮ್ಮೆ ನೀ ಏಳಲಿಕೆ ಬಹಳ ಹೊತ್ತು
ಆಕೆ ಎಂದಳು : ನಿಮಗೆ ಕಾರಣವು ಗೊತ್ತು

## ೧೩೩೦. ಕವಳ

ನಿತ್ಯವೂ ಹಾಕಿಬಿಟ್ಟರರೆ ಭರ್ತಿ ಕವಳ
ಪ್ರತಿಯೊಂದು ಹಲ್ಲು ಆಗುವುದುಂಟು ಹವಳ
ಇದಕೆನ್ನುವರು ವೀಳ್ಯದೆಲೆಯ ಆದರ್ಶ
ಬಡಬಗ್ಗರೂ ಪಡೆಯಬಹುದು ಉತ್ಕರ್ಷ.

### ೧೩೩೧. ದೇವರ ಗಮನಕ್ಕೆ

ನಿತ್ಯವೂ ಹೇಳುವರು ಮಂತ್ರ ಉದ್ದುದ್ದ
ನಡತೆ ನೋಡಿದರೆ ಯಾವುದು ಇಲ್ಲ ಶುದ್ಧ
ಹೇ ದೇವ, ಈ ಠಕ್ಕುತನ ನಿನಗೆ ಗೊತ್ತೆ ?
ಎಲ್ಲವೂ ನಿನಗೆ ಆಗುವುದಿಲ್ಲ ಪತ್ತೆ.

### ೧೩೩೨. ಸ್ವಪ್ನಲೋಕ

ನಿದ್ದೆಯಲಿ ಇಂದ್ರಲೋಕಕೆ ಹೋಗಿ ಬಂದೆ.
ಬರುವಾಗ ದೇವಕನ್ನೆಯ ಜೊತೆಗೆ ತಂದೆ.
ನಸುಕಿನಲಿ ಕಣ್ಣನೊರಸುತ ನೋಡಲಾಗಿ
ದೇವಕನ್ನೆಯ ಬದಲು ನೆರೆಮನೆಯ ನಾಗಿ.

### ೧೩೩೩. ಇಂದಿನ ರಾಜ್ಯದಲಿ

ನಿನಿಗಿಂತಲೂ ದೇವ, ಪೋಲಿಸು ಠಾಣೆ
ಶ್ರೇಷ್ಠವೆಂಬುದು ನಿಜವು; ನಿನ್ನ ಕೊರಳಾಣೆ
ಪೋಲಿಸರೇ ಜಗವನಾಳುವರು, ದೇವ
ನಮ್ಮಂತೆಯೇ ನೀನು ಸಾಮಾನ್ಯ ಜೀವ.

### ೧೩೩೪. ಎಲ್ಲಮ್ಮನ ಬಸವಿ

ನಿಮಗೆಷ್ಟು ಪ್ರಾಯ ತುಂಬಿದೆ, ಬೀದಿ ಬಸವಿ ?
ನೀನು ಹುಟ್ಟಿದ ವರುಷ ಅದು ಯಾವ ಇಸವಿ ?
ಪ್ರಾಯ ಬೇಕೇ ನಿನಗೆ ? ಹಾಳಾದೆ ನೀನು !
ಹುಟ್ಟಿದಾಗಲೆ ನಾನು ಸಾಯಲಿಲ್ಲೇನು ?

### ೧೩೩೫. ನಿನಗೇಕೆ ಬಂಗಾರ

ನಿನಗೇಕೆ ಬಂಗಾರ ? ನೀನೆ ಬಂಗಾರ
ನಿನಗೆ ಬೇಕಾದದ್ದು ಒಳ್ಳೆ ಆಹಾರ
ಈ ಹೊತ್ತು ಕಡಲೆ ಪಾಯಸ ಮಾಡು, ಚೆನ್ನಿ
ಹೌದು, ಚೆನ್ನಿಯ ಹೆಸರಿನಲಿ ನೀವು ತಿನ್ನಿ.

## ೧೩೩೬. ನಿನಗೇನು ಹೆಸರಿಡಲಿ

ನೀನಗೇನು ಹೆಸರಿಡಲಿ ? ಮೀನಾಕ್ಷಿಯೆಂಬೆ
ನೀನು ಕೋಪಿಸಿದಾಗ ಹೆಸರು ಜಗದಂತೆ
ಎಲೆ ಅಡಿಕೆ ತಿಂದಾಗ ಸುಂದರಬಾಯಿ
ಬಸುರಾಗಿ ನಿಂತಾಗ ಕೆಂಪು ಸೊರೆಕಾಯಿ.

## ೧೩೩೭. ಪ್ರಜಾರಾಜ್ಯದ ಗುಟ್ಟು

ನಿನಗೊಂದು ಗುಟ್ಟು ಹೇಳುವೆನು, ತುಸು ನಿಲ್ಲು:
ಈಗ ಬೇಕಾದದ್ದು ಕುರ್ಚಿ ಟೇಬಲ್ಲು
ಗಾಂಧೀಜಿಯವರು ಮರೆಯಾದ ಲಾಗಾಯ್ತು
ಜಮಖಾನೆಳಿಗೆ ಬಿದ್ದಿದೆ ದೊಡ್ಡ ತೂತು.

## ೧೩೩೮. ಭೂಮಿಯ ಉತ್ತರ

ನಿನಗೆ ಸೋಗುಗಳೆನಿತು, ಹೇಳು ಜಗದಂಬೆ ?
ಪಾರಿಜಾತದ ಬುಡಕೆ ವಿಷದ ಆಳಿಂಬೆ
ಭೂಮಿಯೆಂದಳು : ಮಗನೆ ಇರಲಿ ವೈವಿಧ್ಯ
ಹೂವಿನಲಿ ಜೇನಿರಲು ಹಣ್ಣಿನಲಿ ಮಧ್ಯ.

## ೧೩೩೯. ಕಣ್ಣಿನ ಕಾಂತಿ

ನಿನ್ನ ಕಣ್ಣಿನ ಕಾಂತಿ ನಕ್ಷತ್ರದಂತೆ
ನೀನು ಜೊತೆಯಿದ್ದಾಗ ನನಗಿಲ್ಲ ಚಿಂತೆ.
ನಿನ್ನ ಮೂಗಿನ ರೀತಿ ಸಂಪಗೆಯ ಜಾತಿ
ನೀನು ನಕ್ಕಾಗ ಒಡಮೂಡುವುದು ಜ್ಯೋತಿ

## ೧೩೪೦. ಅಭಿರುಚಿ

ನಿನ್ನ ಕೆನ್ನೆಗೆ ಬೇಡ ತಾವರೆಯ ಕೆಂಪು
ಇರಲೆಂಬೆ ಕಿತ್ತಳೆಯ ಬಣ್ಣ ನಸುಗೆಂಪು
ನಿನ್ನ ತುಟಿಗಳಿಗೇಕೆ ಸಕ್ಕರೆಯ ಪಾಕು ?
ಕಿತ್ತಳೆಯ ಹಾಗೆ ಸಖಿ, ಕೊಂಚ ಹುಳಿ ಬೇಕು.

೧೩೪೧. ಶನಿವಾರ

ನಿನ್ನ ಕೈ ಹಿಡಿದ ದಿನ ಶನಿವಾರ ತಾನೆ
ಹೀಗಾಗಿ ನಿನಗೆ ಹತ್ತುವುದಿಲ್ಲ ಬೇನೆ
ಶನಿರಾಯನಿಗೆ ನಾನು ತಾಕೀತು ಮಾಡಿ
ದೂರದಲಿ ನಿಲಿಸಿದ್ದು ಗೊತ್ತುಂಟೆ, ಲೇಡಿ ?

೧೩೪೨. ಗಲ್ಲದ ಬಣ್ಣ

ನಿನ್ನ ಗಲ್ಲದ ಬಣ್ಣ ಚಕಮಕ ಗುಲಾಬಿ
ನಿನ್ನ ತುಟಿಯೊಳಗುಂಟೆ ರುಚಿಕರ ಜಿಲೇಬಿ ?
ಈ ಬಿಸಿಲಿನಲಿ ನೀನು ಎಲ್ಲಿಂದ ಬಂದೆ ?
ಮರೆತುಹೋಯಿತೆ ನಿಮಗೆ ? ನಾನೇ ಸುನಂದೆ.

೧೩೪೩. ಪ್ರೀತಿಯ ತಮಾಷೆ

ನಿನ್ನ ಗಲ್ಲವ ಚಿವುಟಬೇಕೆಂಬ ಆಸೆ
ಇದಕೆನ್ನುವರು, ಗೆಳತಿ, ಪ್ರೀತಿಯ ತಮಾಷೆ
ಮಲ್ಲಿಗೆಯ ಹೂ ಮುಡಿಸಬೇಕೆಂಬ ಹುಚ್ಚು
ಈ ಹುಚ್ಚಿಗಾಗಿ ನೀ ಜಡೆ ಸ್ವಲ್ಪ ಬಿಚ್ಚು.

೧೩೪೪. ಜೇನುತುಪ್ಪ

ನಿನ್ನ ತುಟಿಯೊಳಗಿರಲು ಹೊಸ ಜೇನುತುಪ್ಪ
ಜೇನ ಸವಿಯಲು ಹೋದನೇಕ ನಾಗಪ್ಪ ?
ಔಷಧಿಯ ಸಲುವಾಗಿ ಹಳತು ಬೇಕೆಂದು
ಓಣಿ ಓಣಿಯ ತಿರುಗಿದನೆ ಹಿಂದು ಮುಂದು ?

೧೩೪೫. ಭೂದೇವಿಗೆ

ನಿನ್ನ ಬಾಲ್ಯವ ನುಲಿಯುತಿದೆ, ಹಸಿರು ಹುಲ್ಲು
ವೃಧ್ಯಾಪ್ಯವನು ಸಾರುತಿದೆ, ಬಂಡೆಗಲ್ಲು
ಹೂವುಗಳ ನಗು, ನಿನ್ನ ತಾರುಣ್ಯವೆಂಬೆ
ನಿನ್ನ ನಿಜ ಪ್ರಾಯವಾವುದು ಹೇಳು, ಅಂಬೆ ?

## ೧೩೪೬. ಸಂಸಾರ ಕ್ಷತಿಜ

ನಿನ್ನ ಮುಖದಲಿ ಚಂದ್ರ, ಕಣ್ಣಿನಲಿ ತಾರೆ
ಹೃದಯದೊಳು ಸಾಗರನ ತೆರೆಗಳಿವೆ. ನೀರೆ
ಬಾನು ಕಡಲುಗಳೆರಡು ಸರಿಯಾಗಿ ಸೇರೆ,
ಸಂಸಾರ ಕ್ಷತಿಜಕ್ಕೆ ಎಣೆಯಿಲ್ಲ ಬೇರೆ.

## ೧೩೪೭. ಪ್ರೀತಿ

ನಿನ್ನ ಮುಖ ನೋಡಿದರೆ ಮೂಡುವುದು ಪ್ರೀತಿ
ನೀನು ಮಾತಾಡಿದರೆ ಕವಿತೆಗಳ ರೀತಿ
ಮುತ್ತು ಕೊಟ್ಟಾಗ, ಸಖಿ, ಭೂಮಿಯಲಿ ಸ್ವರ್ಗ
ಪ್ರೀತಿಯೆಂಬುದು ಜೀವಿಗಳ ರಾಜಮಾರ್ಗ.

## ೧೩೪೮. ತುಟಿಜೇನು

ನಿನ್ನ ಮುತ್ತಿನ ಸವಿಗೆ ಮರುಳಾಗಿ ನಾನು
ನಿತ್ಯವೂ ಸೇವಿಸುವೆ ನಿನ್ನ ತುಟಿ ಜೇನು
ಅಹುದಹುದು ಜೇನು ಖರ್ಚಾಗಿ ತುಟಿ ಬಾಡಿ
ಮುದುಕಿಯಾಗಿದ್ದೇನೆ; ಕೈ ಎಳೆದು ನೋಡಿ.

## ೧೩೪೯. ಗೆಳತಿಯ ಮುತ್ತು

ನಿನ್ನ ಮುತ್ತಿನ ಸವಿಗೆ ಮರುಳಾಗಿ ನಾನು.
ನಿನ್ನಾಣೆ ಗೆಳತಿ ತಿನ್ನುವುದಿಲ್ಲ ಜೇನು.
ಒಂದಲ್ಲ, ಎರಡಲ್ಲ ನೂರಾರು ಮುತ್ತು
ತೆಗೆದುಕೊಂಡರೆ ಮಾತ್ರ ಹೋಗುವುದು ಹೊತ್ತು.

## ೧೩೫೦. ಜೀವನದ ಜೇನು

ನಿನ್ನ ಮುತ್ತಿನ ಸವಿಗೆ ಮರುಳಾಗಿ ನಾನು
ನಿಮಿಷ ನಿಮಿಷಕೆ ತಿಂದೆ ಜೀವನದ ಜೇನು.
ಆದರೂ ಖರ್ಚಾಗಲಿಲ್ಲ, ಮದವಳತಿ.
ತಿಂದಷ್ಟು ಅತಿಯಾಗಿ ಬಲಿಯುತಿದೆ ಪ್ರೀತಿ.

### ೧೩೫೧. ಮುತ್ತಿನ ಸಪಿಗೆ

ನಿನ್ನ ಮುತ್ತಿನ ಸಪಿಗೆ ಮರುಳಾಗಿಬಿಟ್ಟೆ
ಮರುಳಾಗಿ ಮರುಳಾಗಿ ಸಂಪೂರ್ಣ ಕೆಟ್ಟೆ
ಇದಕೆನ್ನುವರು, ಗೆಳತಿ ನಿಜವಾದ ಪ್ರೀತಿ
ಪ್ರೀತಿಯಿದ್ದರೆ ಮುರಿದು ಹೋಗುವುದು ಜಾತಿ.

### ೧೩೫೨. ಮನದನ್ನೆಗೆ

ನಿನ್ನ ಮುತ್ತಿನ ಸಪಿಗೆ ಮರುಳಾಗಿ ನಾನು.
ಹದಿನೆಂಟು ಸರ್ತಿ ಮಾಡಿದೆನು ಟೆಲಿಫೋನು
ಮನದನ್ನೆ, ಮನೆಬಿಟ್ಟು ಎಲ್ಲಿ ಹೋಗಿದ್ದೆ ?
ಕೋಳಿ ಕೂಗುವ ತನಕ ಬರಲಿಲ್ಲ ನಿದ್ದೆ.

### ೧೩೫೩. ಆಕೆಯ ಸೌಂದರ್ಯ

ನಿನ್ನ ಮೂಗಿನ ರೀತಿ ಸಂಪಗೆಯ ಜಾತಿ
ನಿನ್ನ ಮೋರೆಯ ಬಣ್ಣ ಗೋದಿಯ ಚಪಾತಿ
ನಿನ್ನ ಹಲ್ಲಿನ ಬೆಳುಪು ಕಡಲ ನೊರೆಯಂತೆ
ನೀನು ತಿರುಗಾಡಿದರೆ ನೆರೆಯುತಿದೆ ಸಂತೆ.

### ೧೩೫೪. ಮೊಗದಾವರೆ

ನಿನ್ನ ಮೊಗದಾವರೆಯ ರೀತಿಯೇ ಬೇರೆ
ರಾತ್ರಿಯಲ್ಲೂ ಭರ್ತಿ ಅರಳುತಿದೆ, ನೀರೆ,
ಲೈಟ್ಸ್ವಿಚ್ಚು ಹಚ್ಚಿದರೆ ಅರಳಿ ಸಂಪೂರ್ಣ
ಬಲು ಚಂದ ಕಾಣುವುದು ಪಕಳೆಗಳ ವರ್ಣ.

### ೧೩೫೫. ನಿನ್ನ ಲೀಲೆ

ನಿನ್ನ ಲೀಲೆಯ ಕಂಡು ನಗಲಿ ಎಷ್ಟೆಂದು ?
ಪಾರಾಗುವುದು ಕೋಟಿ ಕೋಟಿ ಹಣ ತಿಂದು
ಉಪವಾಸ ಬಿದ್ದವ ಒಂದಿಷ್ಟು ಗೋದಿ
ಕಳವು ಮಾಡಿದರವನು ಆಗುವನು ಕೈದಿ.

## ೧೩೫೬. ಆಕೆಗೆ

ನಿನ್ನ ವರ್ಣನೆಯನ್ನು ಬರೆದು ಇಟ್ಟಿದ್ದೆ
ಅಕ್ಷರಲ್ಲೇ ಬಂತು ವಿಪರೀತ ನಿದ್ದೆ
ವರ್ಣನೆಯ ಕದ್ದು ಒಯ್ದನು ಯಾರೊ ಕಳ್ಳ.
ಅದನೋದಿ ಅವನು ಆಗಿರಬೇಕು ಮಳ್ಳ.

## ೧೩೫೭. ವಿಜಯನಗರದ ಕೃಷ್ಣದೇವರಾಯನಿಗೆ

ನಿನ್ನ ಸಾಮ್ರಾಜ್ಯದಲಿ ಮುತ್ತು ರತ್ನಾದಿ
ಇದ್ದರೂ ಇರಲಿಲ್ಲ ಅಂಬರದ ಖಾದಿ
ಕರ್ತವ್ಯ ಚ್ಯುತಿಯ ಈ ದುಷ್ಕರ್ಮದಿಂದ
ಸಾಮ್ರಾಜ್ಯ ಮರೆಯಾಯ್ತು! ನೃಪತಿ ಕೇಳೆಂದ.

## ೧೩೫೮. ಸೀರೆಯ ಸೆರಗು

ನಿನ್ನ ಸೀರೆಯ ಸೆರಗು ಎಂಬುದು ಪತಾಕೆ
ಗಾಳಿಯಲಿ ಹೆಚ್ಚು ಹಾರಿಸಬೇಡ, ಜೋಕೆ
ಹೆಚ್ಚು ನೇತಾಡಿದರೆ ಆ ತುಂಟ ಜನರು
ಏನೇನೊ ಮಾತಾಡಿ ಇಡಬಹುದು ಹೆಸರು.

## ೧೩೫೯. ಮಂಕುತಿಮ್ಮನಿಗೆ

ನಿನ್ನೆ ಉಂಡಾಡಿ, ಈ ಹೊತ್ತು ಮುಂದಾಳು
ಮಂತ್ರಿಯಾದರೆ ನಾಳೆ ಸುಖಿಯಾಗಿ ಬಾಳು
ಈ ಪ್ರಜಾರಾಜ್ಯದಲಿ ಹದಿನೆಂಟು ಬಣ್ಣ
ಬ್ರಹ್ಮಾನುಭವಿಯಾಗೊ ಮಂಕು ತಿಮ್ಮಣ್ಣ.

## ೧೩೬೦. ಅವನು ಹೇಳಿದ್ದು

ನಿನ್ನೆ ನಾ ಬೆಂಗಳೂರಿಗೆ ಹೋಗಿ ಬಂದೆ.
ಓಕರಿಗೆ ಬಂದು ಸಾಕಾಯ್ತು ಆ ದಂಥೆ.
ಸರಕಾರಿ ಸೌಧದಲ್ಲೂ ಉಂಟು ದೆವ್ವ!
ಜೇಬಿನೊಳಗಿನ ದುಡ್ಡು ಮರೆಯಾಯ್ತು ಅವ್ವ.

## ೧೩೬೧. ಬೆಂಗಳೂರಿನಲ್ಲಿ

ನಿನ್ನೆ ಸಂಜೆಯವರೆಗೆ ಬಲು ದೊಡ್ಡ ನೇತಾ
ಈ ಹೊತ್ತು ಮುಂಜಾನೆ ನಿರ್ಜೀವ ಪ್ರೇತ
ರಾಜಕಾರಣವೆನ್ನುವುದು ಕೆಸರ ದಂಟು
ಬಿಸಿಲು ಬಿದ್ದಾಗಲೇ ಕಟ್ಟಿಕೊಳಿ ಗಂಟು.

## ೧೩೬೨. ನರನ ಸಹವಾ[illegible]ದಲ್ಲಿ

ನಿಬಿಡ ಘೋರಾರಾಣ್ಯದಲ್ಲಿ ವೃಕ್ಷ ದೊಡ್ಡ
ನರನ ಸಹವಾಸದಲ್ಲಿ ಎಲ್ಲವೂ ಗಿಡ್ಡ
ಹುಲಿರಾಯನೂ ತನ್ನ ಕುಲಗೋತ್ರ ಬಿಟ್ಟು
ಬೆಕ್ಕಾಗಿ ತಿನುತಿಹನು ರವೆ ಗೋದಿ ಹಿಟ್ಟು.

## ೧೩೬೩. ಅಡಿಗೆ ಮನೆಯೊಳಗೆ

ನಿಮಗೇಕೆ ಈ ಹುಚ್ಚು ಅಡಿಗೆ ಮನೆಯೊಳಗೆ
ಯಾರೇನು ಹೇಳುವರು ನೋಡಿದರೆ ನಮಗೆ
ಯಾವುದಕ್ಕೂ ಒಂದು ಮಿತಿ ಬೇಕು ಅಂದೆ.
ಹೀಗೆಂದು ಕೆಂಪಗಾದಳು, ಆ ಸುನಂದೆ.

## ೧೩೬೪. ನಿಮ್ಮ ಭಾಷಣ

ನಿಮ್ಮ ಆ ಭಾಷಣವು ಇಂದಿಗೂ ನೆನಪು
ಚೆನ್ನಾಗಿ ತೊಳೆದುಬಿಟ್ಟಿರಿ ಹಚ್ಚಿ ಸೋಪು
ಕಳೆದುಹೋದವು ಇಂದಿಗಿಪ್ಪತ್ತು ವರುಷ
ನೆನಪು ಆದಾಗ ಅದು ಇಂದಿಗೂ ಹರುಷ.

## ೧೩೬೫. ವಿಮರ್ಶಕ ಮತ್ತು ಕವಿ

ನಿಮ್ಮ ಕಾವ್ಯದ ಲತೆಗೆ ಹೂವುಗಳು ರಾಶಿ!
ಪರಿಮಳವೆ ಬರಲಿಲ್ಲ ನೋಡಿದೆನು ಮೂಸಿ
ಸತ್ಯವಾಗಿದೆ ನೀವು ನುಡಿದ ಈ ಮಾತು
ನಿಮ್ಮ ಮೂಗಿನ ರಂಧ್ರ ಸಾಸಿವೆಯ ತೂ[illegible]

### ೧೩೬೬. ವಿಮಾನದಲ್ಲಿ ಕುಳಿತಾಗ

ನಿಮ್ಮ ಕುರ್ಚಿಯು ಕಳೆಗೆ ಜೀವನದ ಬೆಲ್ಟು
ಧೈರ್ಯ ಕೊಟ್ಟರು ನಮಗೆ ಹೀಗೆ ಬರೆದಿಟ್ಟು
ಬಿದ್ದಾಗ ಈ ಬೆಲ್ಟಿಗೇ ಅಂಟಿಕೊಳ್ಳಿ
ಭೂದೇವಿ ನಿಮಗೆ ಹಾಕುವು ಲ್ಲ ತಳ್ಳಿ.

### ೧೩೬೭. ಬಂದಿದ್ದಾಳೆ

ನಿಮ್ಮ ಲಲಿತಾ ಬಂದಿದಾಳ ಊರಿಂದ
ಮೈ ತುಂಬಿ ಹಚ್ಚಿಕೊಳ್ಳಿ ಭರ್ತಿ ಶ್ರೀಗಂಧ
ಈ ಹೊತ್ ಇಲ್ಲಿಯೇ ಇರಬೇಕು ನೀವು
ಸಂಪೂರ್ಣ ತಣ್ಣಗಾಗುವವರೆಗೆ ಕಾ

### ೧೩೬೮. ಬಂದಿದಾಳೆ ಊರಿಂದ

ನಿಮ್ಮ ಲಲಿತಾ ಬಂದಿದಾಳೆ ಊರಿಂದ
ವೀಳ್ಯದೆಲೆಗಳ ತಿನ್ನಿ ಅವಳ ಕೈಯಿಂದ
ಹೊಸ ಸೀರೆ ತಂದು ಕೊಡಿ ಒಳ್ಳೆ ಜರತಾರಿ
ಸೊಗಸಾಗಿ ಕಾಣುವಳು ರಂಭೆಯನು ಮೀರಿ.

### ೧೩೬೯. ಜಂಬೂ ಸವಾರಿಯ ಕಣ್ಮರೆ

ನಿಮಿಷದಲಿ ನೂರು ಶತಮಾನಗಳು ಜಾರಿ
ಈ ವರುಷ ಮರೆಯಾಯ್ತು ಜಂಬೂ ಸವಾರಿ
ಈಗಿಲ್ಲ ಕಾಲರಾಯನ ಹಣೆಗೆ ಗಂಧ
ಜರಿ ರುಮಾಲಿನ ಘನತೆ ಮಾಯೆವಾಯ್ತೆಂದ.

### ೧೩೭೦. ಶಾಮಣ್ಣನ ಕತೆ

ನೀ ಕೂ ಸ್ಥೆ ಎನಿಸಿಕೊಳಬೇಕು, ಕಂದ
ನೋಡು! ಆ ಶಾಮಣ್ಣ ಹೊಸ ಕಾರು ತಂದ!
ಸಣ್ಣ ನೌಕರಿಯಿದ್ದರೂ ದೊಡ್ಡ ಕಾರು!
ಮೈಯೊಳಗೆ ಇರಬೇಕು ಈ ತರದ ನೀರ.

### ೧೩೭೧. ಸರ್ವಜ್ಞ ಕವಿಗೆ

ನೀ ಚುಟಕ ನುಡಿದಾಯ್ತು ನಾನ್ನೂರು ವರುಷ
ನುಡಿಯ ಹೂದೋಟದಲಿ ಇಂದಿಗೂ ಹರುಷ
ಮೂರು ಪಕಳೆಯ ಹೂವು ಊರೂರಿಗೆಲ್ಲಾ
ತಂದಿಟ್ಟ ಮಕರಂದ ಅನುಭವದ ಬೆಲ್ಲ.

### ೧೩೭೨. ಅತಿಥಿಗಳು ಬಂದಾಗ

ನೀನು ಜೇನಿನ ಹಾಗೆ ಬಹಳ ಸವಿ ಹುಡುಗಿ
ಕೂಡ್ರಬಾರದು ಅಡಿಗೆಮನೆಯೊಳಗೆ ಅಡಗಿ
ಅತಿಥಿಗಳು ಬಂದಾಗ ನೀ ಹೊರಗೆ ಬಂದು.
ಸ್ವಾಗತವ ನೀಡುವುದು ಎಲೆ ಅಡಿಕೆ ತಂದು.

### ೧೩೭೩. ಬಂಗಾರ

ನೀನೆಂಬೆ ಬಂಗಾರ, ನಾನೆಂಬೆ ವಿದ್ಯೆ
ಒಕ್ಕಲಿಗ ಹೇಳುವನು ಬೇಕೆಂದು ಗದ್ದೆ
ಕಳವಾದರೂ ನಿನ್ನ ಬಂಗಾರ, ಗೆಳತಿ,
ನನ್ನ ವಿದ್ಯೆಗೆ ಇಲ್ಲ ಈ ತರದ ಭೀತಿ.

### ೧೩೭೪. ಪ್ರಜಾರಾಜ್ಯದ ಭಜನೆ

ನೀನ್ಯಾಕೊ ? ನಿನ್ನ ಹಂಗ್ಯಾಕೊ ಹೇ ರಂಗ ?
ನಮಗೆ ಬೇಕಾದದ್ದು ಮಂತ್ರಿಗಳ ಸಂಗ.
ಸಚಿವರನು ಭಜಿಸಿದರೆ ಸಿಕ್ಕಿ ಕಂತ್ರಾಟು
ಕ್ಷಣದೊಳಗೆ ಝಣರೆನ್ನುವುದು ನಮ್ಮ ಕೋಟು.

### ೧೩೭೫. ಅಹಿಂಸಾವಾದಿಗೆ

ನೀನು ಸಾರುವ ಅಹಿಂಸೆಯ ತತ್ವ ಸಾಕು
ನಿತ್ಯವೂ ಭುಜದ ಮೇಲಿರಲಿ ಬಂದೂಕು
ಮತ್ತೆ ಕಡಲೊಳಗಿರಲಿ ಸಿಡಿಮದ್ದು ಹಡಗ
ಇಲ್ಲದಿದ್ದರೆ ಒಳಗೆ ನುಗ್ಗುವನು ತುಡುಗ.

## ೧೩೭೬. ನಿನ್ನ ಮಾತು

ನೀನು ಹೇಳುವ ಮಾತು ಅತ್ಯಂತ ಸುಳ್ಳು
ಆದರೂ ನನಗೆ ಹಿಡಿಸಿದೆ ಪೂರ್ಣ ಮಳ್ಳು
ಇದಕೆ ಕಾರಣ ನಿನ್ನ ಕಥನ ಕಲೆ ಎಂಬೆ
ಕಲೆಯಿಂದ ಜೀವಂತವಾಗುವುದು ಗೊಂಬೆ.

## ೧೩೭೭. ಜೋಗ ಜಲಪಾತ

ನೀನೆಂಬೆ : ಇದು ಶರಾವತಿ ನದಿಯ ಗಾನ
ನಾನೆಂಬೆ : ಸಹ್ಯಾದ್ರಿ ಪರ್ವತದ ಸ್ನಾನ
ಭುಜದಿಂದ ನೀರು ಬೀಳುವ ಪರಿಯ ನೋಡು
ನಾನು ನುಡಿದದ್ದು ಹುಸಿಯೇನು ? ಮಾತಾಡು.

## ೧೩೭೮. ಕವಿಯ ಪತ್ರ

ನೀ ಬರೆದ ಚುಟಕಗಳು ತುಂಬಾ ವಿಚಿತ್ರ
ಹೀಗೆಂದು ಕವಿಯೊಬ್ಬ ಹಾಕಿದನು ಪತ್ರ
ಬರೆಯಲಿಕೆ ಹೋದೆ ಕೈಯಲಿ ಹಿಡಿದು ಪೆನ್ನು
ಪೆನ್ನು ತಿರುಗಿಸಿ ತೋರೆ ತೋರಿಸಿತು ಬೆನ್ನು.

## ೧೩೭೯. ವಿ. ಸೀ. ಅವರಿಗೆ

ನೀ ಬರೆದುದೆಲ್ಲವೂ ಬೆಳ್ಳಿ ಬಂಗಾರ
ಗದ್ಯ ಪದ್ಯಗಳೆರಡು ನುಡಿಯ ಸಿಂಗಾರ
ನಿನ್ನ ಹೃದಯದ ಛಾಯೆ ಭಾನಿಗೂ ಬಿಳುಪು
ಬೇರೆಲ್ಲಿ ನೋಡೋಣ ಈ ತರದ ಹೊಳಪು !

## ೧೩೮೦. ನನ್ನ ಚುಟಕಕ್ಕೆ

ನೀ ಭತ್ತ, ನೀ ರಾಗಿ, ನೀ ಜೋಳ, ಗೋದಿ
ಎಲೆ ಚುಟಕ, ನೀ ನನ್ನ ಜೀವನದ ವ್ಯಾಧಿ
ನೀ ಬಳ್ಳಿ, ನೀ ಚಿಗುರು, ನೀ ಮೊಗ್ಗು ಹೂವು
ಎಲೆ ಚುಟಕ, ನೀ ನನ್ನ ಜೀವನದ ನೋವು.

## ೧೩೮೧. ನೀ ಮುದುಕಿಯಾದರೂ

ನೀ ಮುದುಕಿಯಾದರೂ ಪರಿಮಳವು ಭರ್ತಿ
ಸುರಗಿ ಹೂವಿನ ಹಾಗೆಯೇ ನಿನ್ನ ಕೀರ್ತಿ
ಈ ಹೂವು ಒಣಗಿದರು ಪರಿಮಳವ ಬೀರಿ
ಕರ್ತವ್ಯದಿಂದ ಕೊಳ್ಳುವುದಿಲ್ಲ ಜಾರಿ.

## ೧೩೮೨. ಎಂಜಲು

ನೀರಡಿಕೆಯಾದರೂ ನಾಗೇಶ ಭಟ್ಟ
ಕೆರೆಯ ನೀರನು ಕುಡಿಯಲಾರದೆಯೆ ಕೆಟ್ಟ
ಮೊಸಳೆಯೆಂಜಲು ಎಂದನಂತೆ ಆ ನೀರು!
ಎಂಜಲಿನ ಮೇಲೆಯೇ ತಾವರೆಯ ತೇರು.

## ೧೩೮೩. ಕುಣಿತ

ನೀರ ಬೊಬ್ಬುಳಿಯೊಂದು ಕನಸಿನಲಿ ಬಂದು
ಹೀಗೆ ನುಡಿಯಿತು ಮಂದಹಾಸದಲಿ ಮಿಂದು
ಅವಸಾನ ಕಾಲದಲ್ಲೂ ನನಗೆ ನೃತ್ಯ
ಕುಣಿತವಿದ್ದರೆ ಸಾಕು; ಬಾಳು ಕೃತಕೃತ್ಯ.

## ೧೩೮೪. ಹನುಮಂತನ ಪರಾಕ್ರಮ

ನೀರು ಕುಡಿದನು ಹನುಮ ಮೋಡಗಳ ಹಿಂಡಿ
ನಾವು ಕುಡಿದರೆ ನಮಗೆ ಆಗುವುದು ಥಂಡಿ
ಒಂದೆ ನೆಗತ ಹಾರಿದನು ಭೂಮಿಯಿಂದ
ನಾವು ನೆಗೆದರೆ ಕಾಲು ಮುರಿಯುವುದು ಕಂದ.

## ೧೩೮೫. ಧುಮುಕಿದರೆ

ನೀರು ಜೋರಾಗಿ ಧುಮುಕಿದರೆ ಅದು ಹಾಲು,
ನಾನು ಧುಮುಕಿದರೆ ಮಗು, ಮುರಿಯುವುದು ಕಾಲು
ಈ ಹಾಲಿನೊಳಗುಂಟು ವಿಪರೀತ ಶಕ್ತಿ
ಜೋಗ ಜಲಪಾತದಲಿ ಪಡೆಯುವುದು ಮುಕ್ತಿ.

## ೧೩೮೬. ತುಟ್ಟಿಕಾಲದ ಸಾರು

ನೀರೊಳಗೆ ಹಾಕಿ ಕೊತಂಬರೀ ಸೊಪ್ಪು
ಬೇಳೆ ಬೇಕಾಗಿಲ್ಲ, ಸಾಕು ತುಸು ಉಪ್ಪು
ಅತ್ಯಂತ ಅಗ್ಗವಾದದ್ದು ಈ ಸಾರು.
ಸಂಪೂರ್ಣ ಸಡಿಲಾಗುವುದು ನಿಮ್ಮ ಬೇರು.

## ೧೩೮೭. ಹಾಲಿನ ಭಜನೆ

ನೀರೊಳಗೆ ಹಾಲುಂಟೆ ? ಹಾಲೊಳಗೆ ನೀರೊ ?
ಸರಿಯಾಗಿ ನಿರ್ಣಯಿಸಲಿಗೆ ನೀನೆ ಬಾರೊ.
ಶ್ರೀ ಪುರಂದರವಿಠಲ, ನೀ ಬಂದ ವಿನಹಾ
ಅರ್ಥವಾಗದು ನಮಗೆ ಈ ದುಗ್ಧ ಕವನ.

## ೧೩೮೮. ಕಾವು

ನೀವು ಗೀಚಿದ ಚುಟಕಗಳಿಗಿಲ್ಲ ಸಾವು.
ಪಂಕ್ತಿ ಪಂಕ್ತಿಗೆ ಉಂಟು ವಿಪರೀತ ಕಾವು
ಹೌದು, ಸಖಿ, ಈ ಕಾವು ಹುಟ್ಟಿಸಿದೆ ನೀನು.
ಪ್ರೀತಿಯಾಕಾಶದಲಿ ತೇಲುವನು ಭಾನು.

## ೧೩೮೯. ಸ್ವರ್ಗಲೋಕಕ್ಕೆ

ನೀವು ತಿಳಿದಷ್ಟು ದೂರದಲ್ಲಿಲ್ಲ ಸ್ವರ್ಗ.
ಸಿದ್ಧವಾಗಿದೆ ಈಗ್ಗೆ ಡಾಂಬರದ ಮಾರ್ಗ
ಮುಂಜಾವಿನಲಿ ಹೊರಟ ಸರಕಾರಿ ಬಸ್ಸು
ಮಧ್ಯಾಹ್ನದಲಿ ತಲುಪಿ ಸಂಜೆ ವಾಪಸ್ಸು.

## ೧೩೯೦. ನೀವು ಮಾತಾಡುವುದು

ನೀವು ಮಾತಾಡುವುದು ತರತರದ ರೀತಿ
ಹೌದು, ಸಖಿ, ಇದಕೆ ಕಾರಣ ನನ್ನ ಪ್ರೀತಿ
ನೀನು ಹೇಳುವುದು ಯಾವಾಗಲೂ ಡೊಂಕು
ಇದಕೆ ಕಾರಣ, ಗೆಳತಿ, ನಾನಲ್ಲ ಮಂಕು.

## ೧೩೯೧. ಅಕ್ಕಮಹಾದೇವಿಯ ವಚನ

ನೀವೆಲ್ಲ ಕಾಣಿರೇ ಚಿಲಿಪಿಲಿಯ ಹಕ್ಕಿ ?
ಯಾವ ಸೆಟ್ಟಿಯ ಚೀಲದೊಳಗುಂಟು ಅಕ್ಕಿ ?
ದುಂಬಿಗಳಿರಾ, ನೀವು ಕಾಣಿರೇ ? ಹೇಳಿ.
ಸಕ್ಕರೆಯ ನುಂಗಿದಳೆ ಆ ಮಹಾಕಾಳಿ ?

## ೧೩೯೨. ಅವಳಿಗೆ

ನೀ ಹಸನ್ಮುಖಿಯಾಗಿ ಇರಬೇಕು ನಿತ್ಯ
ಇದುವೆ ಸಂಸಾರದೊಳಗಿರುವ ಔಚಿತ್ಯ
ಎಂದಿಗೂ ಆಗಬಾರದು ಮೋರೆ ಸಪ್ಪೆ
ಸಪ್ಪೆಯಾದರೆ ನಿನಗೆ ಹೆಸರಿಡುವೆ ಕಪ್ಪೆ.

## ೧೩೯೩. ಸೇವಂತಿ

ನುಡಿಕೊನರು ಬೆಸನಾಗಿ ಕುಡಿಹೂವು ಚಂದ.
ಇದರ ಹೆಸರೇನೆಂದು ಕೇಳಿದನು, ಕಂದ
ನುಡಿವೆಣ್ಣು ಹೇಳಿದಳು ನಾನೇ ಬಾಣಂತಿ
ನನಗೆ ಹುಟ್ಟಿದ ಕೂಸು ಕವಿಯ ಸೇವಂತಿ.

## ೧೩೯೪. ಕವಿಯ ಸಾಧನೆ

ನುಡಿಯ ಖೋವಾದಿಂದ ಮಾಡಿದೆನು ಪೇಡಾ
ಭಾವನೆಯ ಎಲೆಯಿಂದ ಕಟ್ಟಿದೆನು ಬೀಡಾ
ಅನುಭವದ ಗಿಡದಿಂದ ತಂದೆ ತಂಬಾಕು
ಇಷ್ಟರಲ್ಲೇ ಮುಗಿಸು, ಸಾಕಪ್ಪ ಸಾಕು.

## ೧೩೯೫. ಸಮನ್ವಯ

ನುಡಿಯ ನಾಲಗೆಯಾಗಬೇಕು ಉರಿ ಜ್ವಾಲೆ
ಹಲ್ಲು ಮಲ್ಲಿಗೆಯಾಗಿ ಮೊಗ್ಗೆಗಳ ಮಾಲೆ
ಹೀಗೆ ಎರಡೂ ಕೂಡಿ ಹಾಡಿದರೆ ಮಾತ್ರ
ಪರಿಶುದ್ಧವಾಗುವುದು ಕಬ್ಬಿಗನ ಗೋತ್ರ

## ೧೩೯೬. ನುಡಿವೆಣ್ಣು

ನುಡಿವೆಣ್ಣು ಮದವಳತಿ, ಉದ್ರೇಕ ಗಂಡ
ಇಬ್ಬರನು ಕವಿ ತನ್ನ ಮನೆಗೆ ಕರಕೊಂಡ.
ಶೀಘ್ರದಲಿ ನುಡಿವೆಣ್ಣು ಬಸುರಾಗಿ ಬಾಲೆ
ಕವಿಯ ಕೊರಳಲಿ ಹಾಕಿದಳು ಪುಷ್ಪಮಾಲೆ.

## ೧೩೯೭. ಪಂಚಕಜ್ಜಾಯ

ನುಂಗಬೇಕೆಂದಿವರು ಪಂಚಕಜ್ಜಾಯ
ಸರಕಾರಿ ಪಕ್ಷ ಸೇರಿದರು, ಮಾರಾಯ
ಕೊನೆಗೆ ಸಿಕ್ಕಿದ್ದು ಬರಿ ಚುರುಮುಗಿ ಪುಟಾಣಿ
ಬೆಂಗಳೂರಿನ ಬದಲು ನೆರೆಮನೆಯ ಓಣಿ.

## ೧೩೯೮. ನಿಜ ಪರಿಸ್ಥಿತಿ

ನುಂಗಲಿಕೆ ಸಿಗಲೆಂದು ಒಂದಿಷ್ಟು ಭಕ್ಷ
ಎಲ್ಲರೂ ಸೇರಿದರು ಸರಕಾರಿ ಪಕ್ಷ
ನಾ ಮಾತ್ರ ಬಿಡಲಿಲ್ಲ ಹಳೆಯ ಉದ್ಯಾನ
ನನಗಿಲ್ಲವೆನ್ನುವರು ವ್ಯವಹಾರ ಜ್ಞಾನ.

## ೧೩೯೯. ನೂರಾರು ರಸ್ತೆ

ನುಂಗುವವರಿಗೆ ಉಂಟು ನೂರಾರು ರಸ್ತೆ
ಸಂಪೂರ್ಣ ಸಡಿಲು ಸರಕಾರದ ವ್ಯವಸ್ಥೆ
ಸರಕಾರಿ ಪಕ್ಷಕ್ಕೆ ಕಳ್ಳ ಬಾಜಾರಿ
ದೇಣಿಗೆಯ ನೀಡುವನು ತನ್ನ ಶುಭಕೋರಿ.

## ೧೪೦೦. ನಾನಾ ನಮೂನೆ

ನುಂಗುವವರಲ್ಲಿಯೂ ನಾನಾ ನಮೂನೆ
ಬಿಳಿ ಕರಡಿಗಳ ಜೊತೆಗೆ ಉಂಟು ಮದ್ದಾನೆ
ನಮ್ಮ ಭಾರತದಲ್ಲಿ ವೈವಿಧ್ಯ ಜಾಸ್ತಿ
ವೈವಿದ್ಯದಿಂದಲೇ ಗಳಿಸಿದನು ಆಸ್ತಿ.

## ೧೪೦೧. ಪರೀಕ್ಷೆಯ ಫಲಿತಾಂಶ

ನೂರರಲಿ ಇಪ್ಪತ್ತುಮೂರು ಉತ್ತೀರ್ಣ
ಉಳಿದ ಎಪ್ಪತ್ತೇಳು ಉರುಳಿದರು, ಜಾಣ
ಇದಕೆನ್ನುವರು ನಮ್ಮ ಶಿಕ್ಷಣದ ಮೋಡಿ
ಚಿಕ್ಕ ಮಕ್ಕಳು ಹೋಗಬೇಕೇನು ಬಾಡಿ ?

## ೧೪೦೨. ಹಕ್ಕಿಯ ಗೂಡು

ನೂರು ಗೋಪುರದ ಅರಮನೆಯೊಳಗೆ ಹೋದೆ
ಆ ಕೋಣೆ ಈ ಕೋಣೆ : ನಾ ಕಾಣೆಯಾದೆ
ಮರದ ರಂಭೆಯನೇರೆ ಹಕ್ಕಿಗಳ ಗೂಡು
ಕ್ಷಿತಿಜ ರೇಖೆಯವರೆಗೆ ಹಬ್ಬಿತ್ತು ನಾಡು.

## ೧೪೦೩. ರಾಜಕೀಯ ಗೊತ್ತುವಳಿ

ನೆತ್ತಿಯಲಿ ಶೋಭಿಸುವ ಗೊತ್ತುವಳಿಯಿಂದ
ಹೃದಯದೊಳಗಿನ ಗುಟ್ಟು ತಿಳಿಯುವುದೆ, ಕಂದ ?
ಗೊತ್ತುವಳಿ ನಿಜವೆಂದು ನಂಬಿರೆ ಜನರು
ಹೊತ್ತು ಸಾಧಿಸಿ ಬೋಳು ಕೆತ್ತುವರು ಇವರು.

## ೧೪೦೪. ನೆರೆಮನೆಯ ಹುಡುಗಿ

ನೆರೆಮನೆಯ ಆ ಹುಡುಗಿ ನೋಡಲಿಕೆ ಚೆಂದ
ಆಕೆಯನು ಅರಮನೆಗೆ ಕಳಿಸಬೇಕೆಂದ
ಮರುದಿವಸ ಸಾಹುಕಾರನ ಮಗನು ಬಂದು
ಮದುವೆಯಾಗಾನು ಲಕ್ಷಗಟ್ಲೆ ಹಣ ತಂದು.

## ೧೪೦೫. ಆ ಹುಡುಗಿ

ನೆರೆಮನೆಯ ಆ ಹುಡುಗಿ ಬಹಳ ಚಾಣಾಕ್ಷಿ
ಸರಿಯಾಗಿ ಹಿಡಿದುಬಿಟ್ಟಳು ಒಂದು ಪಕ್ಷಿ
ಹೀಗಾಗಿ ತಂದೆ-ತಾಯಿಗೆ ಇಲ್ಲ ತ್ರಾಸ
ತಪ್ಪಿಹೋಯಿತು ಗಂಡು ಹುಡುಕುವ ಪ್ರಯಾಸ.

## ೧೪೦೬. ಗುಂಡಮ್ಮ

ನೆರೆಮನೆಯ ಗುಂಡಮ್ಮ ಚಂಡಿಯವತಾರ
ಗಂಡನಿಗೆ ಹದಿನೆಂಟು ತಾಸು ತಲೆಭಾರ
ಉಳಿದ ತಾಸುಗಳಲ್ಲಿ ಇಲ್ಲ ವಿಶ್ರಾಂತಿ
ಈ ತರದ ಜೀವನಕೆ ನೀನು ಏನಂತಿ ?

## ೧೪೦೭. ತರತರದ ಷೋಕು

ನೆರೆಮನೆಯ ಜಾನಕಿಗೆ ತರತರದ ಷೋಕು
ಹೂವೂ ಹೂ ಮುಡಿಯಲಿಕೆ ಭರ್ತಿ ಬೇಕು
ಯಾವಾಗಲೂ ಮತ್ತೆ ಭರ್ತಿ ಸಿಂಗಾರ
ಇದಕಾಗಿಯೇ ಹೋಯ್ತು ಗಂಡನ ಪಗಾರ.

## ೧೪೦೮. ನೆರೆಮನೆಯ ರಂಗಿ

ನೆರೆಮನೆಯ ರಂಗಿಯಾದಳು ನನ್ನ ನೀರೆ ;
ಇಷ್ಟು ಸನಿಯದೊಳಿರಲು ಬೇಕಿಲ್ಲ ಬೇರೆ.
ಚಿಕ್ಕಂದಿನಲಿ ನಾವು ಇಬ್ಬರೂ ಕೂಡಿ
ಆಟವಾಡಿದ್ದುಂಟು ಸಂಸಾರ ಹೂಡಿ.

## ೧೪೦೯. ನೆರೆಮನೆಯ ಸಂಗೀತ

ನೆರೆಮನೆಯ ಸಂಗೀತ ಗದ್ದಲ ಗಲಾಟೆ
ಇದಕಿಂತ ವಾಸಿ ಎಂಬೆನು ಮೀನು ಪೇಟೆ
ಮೀನು ಪೇಟೆಯಲಿ ಸಿಗುವುದು ಚಿಪ್ಪೆಕಲ್ಲು
ನೆರೆಮನೆಯ ಹಾಡು ಎಂಬುದು ಬರೀ ಗುಲ್ಲು.

## ೧೪೧೦. ನೆರೆಮನೆಯ ಸಾವಿತ್ರಿ

ನೆರೆಮನೆಯ ಸಾವಿತ್ರಿ ಮತ್ತವಳ ಗಂಡ
ಇಬ್ಬರೂ ಜಗಳವಾಡಿದರದು ಪ್ರಚಂಡ
ಅಡಿಗೆ ಮನೆಯಲ್ಲಿ ಸವಟುಗಳ ಹೋರಾಟ
ಬೆಕ್ಕುಗಳ ಕೂಡಿದವು ನೋಡಲಿಕೆ ಆಟ.

## ೧೪೧೧. ನೆರೆಮನೆಯ ಹೆಂಗಸು

ನೆರೆಮನೆಯ ಹೆಂಗಸಿಗೆ ಉಡಿಸಿದರೆ ಸೀರೆ
ಹೊಡೆಯುವರು ಊರು ಜನರೆಲ್ಲ ನಗಾರೆ
ನೆರೆಮನೆಯ ಹೆಂಗಸಿಗೆ ತೊಡಿಸಿದರೆ ನತ್ತು
ಅವಳು ಹೇಳಿದ ಹಾಗೆ ಕೊಡಬೇಕು ಮುತ್ತು.

## ೧೪೧೨. ಕವಿತೆ

ನೆಲಗಟ್ಟು ಕಟ್ಟಿ, ಕವಿ ಭಾಷೆಯ ದಮಾಸು
ಸರಿಯಾಗಿ ಮಾಡಿದರೆ ಆ ಕವಿತೆ ಲೇಸು,
ಇಲ್ಲದಿದ್ದರೆ ಒಂದು ದಿನ ಗೋಡೆ ಬಿದ್ದು
ಕಬ್ಬಿಗನ ಬರವಣಿಗೆಯಾಗುವುದು ರದ್ದು.

## ೧೪೧೩, ನೆಲಗಡಲೆ

ನೆಲಗಡಲೆ ನನಗೆ ಸೇರುತಿದೆ ಮನವಾರೆ
ನೆಲದೊಳಗೆಯೇ ಅಡಗಿ ಬೆಳೆಯುತಿದೆ, ನೀರೆ.
ಇದಕಿಲ್ಲ ಮೇಲೇರಬೇಕೆಂಬ ಜಂಬ
ಬಾಪೂಜಿ ಪ್ರತಿ ದಿವಸ ಪ್ರೀತಿಯಲಿ ತಿಂಬ.

## ೧೪೧೪. ತೆಂಗಿನಕಾಯಿ

ನೆಲದಿಂದ ತಿಳಿನೀರು ಮೇಲೇರಿ, ನೀರೆ
ಅಡಗಿಕೊಂಡಿದೆ ಪಾಪ ನೋಡಲಿಕೆ ಬಾರೆ
ಆಕೆ ಕೇಳಿದಳು : ಈ ಮಾತು ನಿಜವೇನು ?
ಮರದ ತೆಂಗಿನಕಾಯಿ ತೋರಿಸಿದೆ ನಾನು.

## ೧೪೧೫. ಕೇಳು ಆ ಸುದ್ದಿ

ನೆಹರೂಜಿ, ನೆಹರೂಜಿ, ಕೇಳು ಈ ಸುದ್ದಿ
ಈ ಸುದ್ದಿಯೊಳಗುಂಟು ನಮ್ಮ ಅಭಿವೃದ್ಧಿ
ಮಂತ್ರಿ ಸತ್ತಾಗ ಮನೆಯಲಿ ಒಂದು ಕೋಟಿ
ಜೀವಂತವಿದ್ದಾಗ ಇತ್ತು ಕೈರಾಟಿ.

## ೧೪೧೬. ನೇರ ಹಾದಿ

ನೇರ ಹಾದಿಯ ಹಿಡಿದು ಹಾಕಿದೆನು ಹೆಜ್ಜೆ
ಎಂದಿಗೂ ಕಟ್ಟಲಿಲ್ಲವೊ ಯಾವ ಗೆಜ್ಜೆ
ಈ ರೀತಿ ಸಾಗಿದೆನು ವರುಷ ಅರವತ್ತು
ವಿಜಯಾಂಬೆ ನೀಡಿದಳು ಸಂತಸದ ಮುತ್ತು.

## ೧೪೧೭. ನೈವೇದ್ಯ

ನೈವೇದ್ಯ ಸ್ವೀಕರಿಸು, ಹೇ ಅಂಬುಜಾಕ್ಷ
ಪ್ರತಿಯೊಂದು ಹರಿವಾಣದೊಳಗುಂಟು ಭಕ್ಷ
ಈ ಭಕ್ಷವಲ್ಲ ಬರಿ ತರತರದ ಲಾಡು
ವೀಳ್ಯದೆಲೆಗಳ ನಡುವೆ ಏನುಂಟು ನೋಡು.

## ೧೪೧೮. ಕಚೇರಿಯ ನೊಣಗಳು

ನೊಣಗಳನು ಹಿಡಿಯಲಿಕೆ ಸಕ್ಕರೆಯ ಪಾಕು
ಹೆಚ್ಚು ಬೇಕಾಗಿಲ್ಲ ಒಂದಿಷ್ಟು ಸಾಕು
ಸಕ್ಕರೆಯ ಕೊರತೆಯಿದ್ದರೆ ಬೆಲ್ಲದಿಂದ
ನೊಣಗಳನು ವಶಪಡಿಸಿಕೊಳ್ಳಬಹುದೆಂದ.

## ೧೪೧೯. ಸ್ಯಾಂಪಲ್ಲು

ನೋಡಾಯ್ತು ನಾನು ತರತರದ ಸ್ಯಾಂಪಲ್ಲು
ಬೇಕಾದ ರೀತಿಯಲ್ಲಿ ಹೊಡೆಯುವರು ಗುಲ್ಲು
ಈ ಹೊತ್ತು ಈ ಕಡೆಗೆ ನಾಳೆ ಆ ಪಕ್ಷ
ಅಲ್ಲಲ್ಲಿ ಜಾರಿದರು ನುಂಗಲಿಕೆ ಭಕ್ಷ.

## ೧೪೨೦. ಇನ್ನೊಂದು ಸ್ಯಾಂಪಲ್ಲು

ನೋಡಿದೆನು ನಾನು ಇನ್ನೊಂದು ಸ್ಯಾಂಪಲ್ಲು
ತಾನು ಮರವೆಂದು ನುಡಿಯಿತು ಒಂದು ಹುಲ್ಲು
ಇಂಥವರು ಇದ್ದರೇನೇ ನಮ್ಮ ದೇಶ
ತುಂಬಿಕೊಳ್ಳುವುದು ಮೈತುಂಬ ಆವೇಶ.

### ೧೪೨೧. ಜಗದಂಬೆಗೆ

ನೋಡಿದರೆ ಈ ಜಗತ್ತಿನ ರೀತಿ ನೀತಿ
ಉಂಟಾಗುತಿದೆ ನನಗೆ ಜೀವನದ ಭೀತಿ
ನನ್ನ ಮಾತನು ಸ್ವಲ್ಪ ಕೇಳು, ಜಗದಂಬೆ
ಈ ಜಗವು ನಿನ್ನದೆಂಬುದ ನಾನು ನಂಬೆ.

### ೧೪೨೨. ದೇವರು

ನೋಡಿದರೆ ಈ ಜಗದ ರೀತಿಗಳನೆಲ್ಲಾ
ದೇವರಲ್ಲೂ ನನಗೆ ವಿಶ್ವಾಸವಿಲ್ಲಾ
ಭಗವಂತ ಜೀವಂತ ಇದ್ದರೂ ವ್ಯರ್ಥ
ಅವನು ತಪ್ಪಿಸಲಾ᷄ ಲೋಕದ ಅನರ್ಥ.

### ೧೪೨೩. ನೋಡಿರುವೆ

ನೋಡಿರುವೆ ನಾನು ತರತರದ ಸ್ಯಾಂಪಲ್ಲು
ದೊಡ್ಡ ಮರವೆಂದು ನಲಿದಾಡುತಿದೆ ಹುಲ್ಲು
ಏನು ಪರವಾ ಇಲ್ಲ ಇಂಥ ಸಂತುಷ್ಟಿ
ಹುಲ್ಲಿಗೂ ಬರಲಿ ಎಂಬುದೆ ನನ್ನ ದೃಷ್ಟಿ.

### ೧೪೨೪. ಸಮಾಜವಾದಿ ಎಂಬ ಸರಕಾರ

ಪಟ್ಟಣದ ಶ್ರೇಷ್ಠಿಗಳು ಮಂತ್ರಿಗಳ ಕಂಡು
ಸೋಷಲಿಷ್ಟರು ನಿಧಿಗೆ ನೀಡಿದರು ಫಂಡು
ಮರುದಿವಸ ಸೋಷಲಿಸ್ಟ ಸರಕಾರ, ಕಿಟ್ಟು,
ಏರಿತು ಸಕ್ಕರೆಯ ಬೆಲೆ ಮೂರು ಪಟ್ಟು.

### ೧೪೨೫. ತಾವರೆ

ಪಟ್ಟಣದ ನಾರಿಯರು ಸೆಟ್ಟರಿಗೆ ಯೋಗ್ಯ
ನನಗಿರಲಿ ಗ್ರಾಮೀಣ ತಾವರೆಯ ಭಾಗ್ಯ
ಕೆಸರಿನಲ್ಲಿ ಹುಟ್ಟಿಯೂ ಹಸನಾದ ಹುಡುಗಿ
ಅಂಗಡಿಯ ಜರತಾರಿಗಿಂತಲೂ ಬೆಡಗಿ.

## ೧೪೨೬. ಪಶ್ಚಿಮದ ಗಾಳಿ

ಪಡುವ ದಿಕ್ಕಿನ ಗಾಳಿ ಬೀಸಿದರೆ, ಸ್ವಾಮಿ,
ಮಳೆಯಾಗಿ ಕಂಗೊಳಿಸುವುದು ಪುಣ್ಯಭೂಮಿ
ಈ ಗಾಳಿ ಬಿರುಗಾಳಿಯಾದರೆ ಫಜೀತಿ
ತೋಟವೇ ಹಾರಿಹೋಗುವದೆಂಬ ಭೀತಿ.

## ೧೪೨೭. ನಿರ್ದಯ ಜಗತ್ತು

ಪತಿಯಾಗಿ ಸೆಳೆದುಕೊಂಬೆನು ನಿನ್ನ ಮುತ್ತು
ಅಡ್ಡ ಬರುತಿದೆ ನೋಡು ನಿರ್ದಯ ಜಗತ್ತು
ನಾನು ಬ್ರಾಹ್ಮಣನಂತೆ ; ನೀನು ಹೊಲೆಯಾಕಿ
ಈ ಜಗತ್ತಿಗೆ ನಾವು ಹಾಕೋಣ ಬೆಂಕಿ.

## ೧೪೨೮. ಪದಕ ಸಿಕ್ಕಿದರೆ

ಪದಕ ಸಿಕ್ಕಿದರೆ ಕವಿಯಾಗುವನು ಮುದ್ದೆ
ಎಂದಿಗೂ ನೀಡಬಾರದು ಕವಿಗೆ ಹುದ್ದೆ
ಕವಿಗೆ ಬೇಕಾದದ್ದು ಟೀಕೆಗಳ ಮದ್ದು
ಮತ್ತೆ ಆಗಿಂದ್ದಾಗೆ ಕೊಡಬಹುದು ಗುದ್ದು.

## ೧೪೨೯. ಪ್ರಾಯ

ಪದ್ಯಗಳನೋದಿದರೆ ರೇಗುವಳು ಅತ್ತೆ
ಹೆಂಡತಿಗೆ ವಿಪರೀತ ತಲೆನೋವು ಮತ್ತೆ
ಮಕ್ಕಳಿಗೆ ಮಾತ್ರ ಅದು ಪಂಚಕಜ್ಜಾಯ
ಜೀವನವೆ ಗದ್ಯಮಯ ಬಂದೊಡನೆ ಪ್ರಾಯ

## ೧೪೩೦. ಭಾವನೆಯ ಕೂಸು

ಪದ್ಯವೆಂಬುದು, ಮಗನೆ, ಭಾವನೆಯ ಕೂಸು
ಆಗಬಾರದು ಬರೆದ ಪದ್ಯ ಬುರನಾಸು
ಅತ್ಯಲ್ಪ ಬರೆದರೂ ಇರಲಿ ಶ್ರೀಗಂಧ
ಅನವರತವಾಗಿ ಗಮಗಮಿಸುವುದು, ಕಂದ.

## ೧೪೩೧. ಪರರ ಪಾಯಸ

ಪರರ ಪಾಯಸ ತಿಂದು ಬದುಕುವುದಕಿಂತ
ಮನೆಯ ರಾಗಿಯ ತಿನ್ನುವವನೆ ಶ್ರೀಮಂತ
ಈ ಮಾತು ಯಾವಾಗಲೂ ಪೂರ್ಣ ಸತ್ಯ
ಸಂದೇಹ ತಾಳಿದರೆ ಅದು ಆತ್ಮಹತ್ಯ.

## ೧೪೩೨. ಭಾರತದ ಲೋಕಶಾಹಿ

ಪರಿಪಕ್ವವಾಗಿಲ್ಲ ಈ ಲೋಕಶಾಹಿ
ಒಳಗೆ ತಿರುಳೂ ಇಲ್ಲ; ಎಳತು ಮಿಡಿಗಾಯಿ
ಪಾಪ ! ಮಂಗನ ಕೈಲಿ ಸಿಕ್ಕಿ ಹಾಳಾಗಿ
ಹೋಗಬಹುದೆಂದು ಹೇಳಿದನು ರಾಜಾಜಿ.

## ೧೪೩೩. ಅವಿವಾಹಿತೆ

ಪರಿಮಳದ ಹೂ ಪೂರ್ಣ ಅರಳಿದರು, ನೀರೆ,
ನೀರಡಿಕೆ ಬಹಳವಾಗಿ ಬಾಡಿಹುದು ಮೋರೆ
ಜಲವ ಸಿಂಪಡಿಸಲಿಕೆ ಯಾರಿಲ್ಲವೇನೆ ?
ಪಶುಪಕ್ಷಿಗಳಿಗಿಲ್ಲ ಈ ತರದ ಬೇನೆ.

## ೧೪೩೪. ಪರಿಷತ್ತಿನ ಫಲಶ್ರುತಿ

ಪರಿಷತ್ತಿಗಾಗಿ ಸಾವಿರಗಟ್ಲೆ ವೆಚ್ಚ
ಊಟ, ಉಪಚಾರ, ಕೊರಳಿಗೆ ಪುಷ್ಪಗುಚ್ಚ
ಎಲ್ಲರೂ ಹೊರಟುಹೋದರು ತಮ್ಮ ಮನೆಗೆ
ಬಲ್ಲವರೆ, ಹೇಳಿ ! ಉಳಿದದ್ದೇನು ಕೊನೆಗೆ ?

## ೧೪೩೫. ಪಲ್ಲಕ್ಕಿ

ಪಲ್ಲಕ್ಕಿಯಲಿ ಕುಳಿತುಕೊಂಡವರು ಎಲ್ಲಿ ?
ಹುಡುಕಾಡಿ ನೋಡಿದೆನು ಪ್ರತಿಯೊಂದು ಗಲ್ಲಿ
ದೇವನೆಂದನು : ಮಗನೆ, ಇದು ಸ್ವರ್ಗಭೂಮಿ
ಇಲ್ಲಿ ಯಾರೂ ಇಲ್ಲ ಅಂಥಾ ಹರಾಮಿ.

## ೧೪೩೬. ಪೃಥಿವಿ

ಸೂರ್ಯನ ಸುತ್ತು ತಿರುಗುತಿದೆಯೆಂತೆ
ಈ ಮಾತಿನಿಂದ, ಸಖಿ, ನನಗೆ ಕಡು ಚಿಂತೆ.
ಒಂದು ದಿನ ನೆಲ ಕೆಳಗೆ ಬಿದ್ದರೆ ಫಜೀತಿ
ಆಮೇಲೆ ಗತಿಯೇನು ? ನಿನಗಿಲ್ವೆ ಭೀತಿ ?

## ೧೪೩೭ ಸಮಾನತೆ

ಪ್ರಗತಿಪರವಾಗಿರಲು ನಮ್ಮ ಶತಮಾನ
ಪುರುಷನಿಗೆ ಸ್ತ್ರೀ ಜಾತಿ ಅಲ್ಲವೆ ಸಮಾನ ?
ಪ್ರತಿಯೊಂದು ಸಲ ನಾನೆ ಬಸುರಾಗಬೇಕೆ ?
ಹೀಗೆಂದು ಗಂಡನಿಗೆ ಕೇಳಿದಳು ಆಕೆ.

## ೧೪೩೮. ಪ್ರಗತಿಯ ಕೂಸು

ಪ್ರಗತಿಯಾಯ್ತೆಂದು, ಸಖಿ, ಕೂಗಿದರು ಗಟ್ಟಿ
ಈ ಕೂಗು ಕೇಳಿ ಅಲುಗಾಡಿದನಾ ಸೆಟ್ಟಿ
ಕೊನೆಗೆ ನೋಡಲು ಸೆಟ್ಟಿ ಮತ್ತಷ್ಟು ಭದ್ರ
ಜನಕೋಟಿಗಳ ಪಾಡು ಇನ್ನೂ ದರಿದ್ರ.

## ೧೪೩೯. ತರತರದ ಕನಸು

ಪ್ರತಿ ದಿವಸ ಬೀಳುತಿವೆ ತರತರದ ಕನಸು
ಮನದನ್ನೆ ಹೇಳಿದಳು : ಸರಿಯಿಲ್ಲ ಮನಸು
ಈ ಕಡೆಗೆ ಆ ಕಡೆಗೆ ಓಡುತಿದೆ ಜೀವ
ಒಂದೆಡೆಗೆ ಸರಿಯಾಗಿ ನಿಲಿಸಿ ಬಿಡಿ ಭಾವ.

## ೧೪೪೦. ಬಾಳ ಸಂಗಾತಿ

ಪ್ರತಿ ದಿವಸ ಮುಡಿದರೂ ಜಡೆ ತುಂಬ ಹೂವು
ಅಡಿಗೆ ಕಲಿತರೆ ಮಾತ್ರ ಗಂಡನ ಬಚಾವು
ಅತಿ ಸರಸಿಯಾದರೂ ಬಾಳ-ಸಂಗಾತಿ
ಮಾಡಿ ಬಡಿಸಲಿ ನಿತ್ಯ ಗೋದಿಯ ಚಪಾತಿ.

## ೧೪೪೧. ಮುಖ್ಯಮಂತ್ರಿಯ ಪದವಿ

ಪ್ರತಿ ದಿವಸವೂ ಉಂಟು ರಗಳೆ ನೂರಾರು
ಮಧ್ಯ ರಾತ್ರಿಯ ತನಕ ಜನರ ತಕರಾರು
ಮುಖ್ಯಮಂತ್ರಿಯ ಪದವಿ ಮದುವೆ ಇದ್ದಂತೆ
ಮಸಣಕ್ಕೆ ಹೋದರೂ ನೆರೆಯುತಿದೆ ಸಂತೆ.

## ೧೪೪೨. ಸರಕಾರಿ ಕೆಲಸ

ಪ್ರತಿದಿವಸವೂ ಉಂಟು ಹೊಸ ಸುದ್ದಿ ಭರ್ತಿ
ಅಧಿಕವಾಯಿತು, ಮಗಳೆ, ಭಾರತದ ಕೀರ್ತಿ
ಮೊನ್ನೆ ಕಟ್ಟಿದ ಒಡ್ಡು ಬಿತ್ತು ಈ ಹೊತ್ತು
ನೀರೊಳಗೆ ಹರಿದು ಹೋಯಿತು ಲಕ್ಷ ಹತ್ತು.

## ೧೪೪೩. ನನ್ನ ಪ್ರೀತಿ

ಪ್ರತಿ ದಿವಸವೂ ನೀನು ಮಾಡಲು ಚಪಾತಿ
ಮತ್ತಷ್ಟು ವೃದ್ಧಿಯಾಯಿತು ನನ್ನ ಪ್ರೀತಿ
ಹೀಗಾಗಿ ದಿನದಿನಕೆ ಮುತ್ತುಗಳ ಸಂಖ್ಯೆ
ಹೆಚ್ಚಾಗುವುದು ಖಚಿತ, ಇದಕಿಲ್ಲ ಶಂಕೆ.

## ೧೪೪೪. ಜಿಲ್ಲಾ ಪುಢಾರಿ ಹೇಳಿದ್ದು

ಪ್ರತಿಪಕ್ಷದವರು ನೀಡಿದ ಅರ್ಜಿ ತಾನೆ ?
ಕೊಡಬೇಡಿ ಹೈಸ್ಕೂಲಿಗಾಗಿ ಪರವಾನೆ
ಸಿಕ್ಕಿದರೆ ಇವರಿಗೊಂದಿಷ್ಟು ಅವಕಾಶ
ಆಗುವುದು ನಮ್ಮ ಜಿಲ್ಲೆಯ ಸರ್ವ ನಾಶ.

## ೧೪೪೫. ಪ್ರತಿ ಪಕ್ಷದ ಅವಶ್ಯಕತೆ

ಪ್ರತಿ ಪಕ್ಷವಿಲ್ಲದಿದ್ದರೆ ಇಲ್ಲ ಭೀತಿ
ಸರಕಾರದಲ್ಲಿ ಮರೆಯಾಗುವುದು ನೀತಿ
ಮಂತ್ರಿಗಳು ನುಂಗುವರು ಪಂಚಕಜ್ಜಾಯ
ರಾಜ್ಯದಲಿ ಮಟಮಾಯವಾಗುವುದು ನ್ಯಾಯ

## ೧೪೪೬. ಪ್ರತಿಯೊಂದು ಖಾತೆಯಲಿ

ಪ್ರತಿಯೊಂದು ಖಾತೆಯಲಿ ನಾನಾ ಶಿಖಂಡಿ
ಕೆಲಸ ಮಾಡದೆ ಮಲಗುತಿದ್ದಾವೆ ಹಂದಿ
ಜನ ತೆತ್ತ ತೆರಿಗೆಯಲ್ಲಾ ಇದಕೆ ಬಾದು
ಹೀಗಾಗಿ ಆಡಳಿತ ಬಹಳ ಚಲೋದು.

## ೧೪೪೭. ಸರಕಾರಿ ಸಮಿತಿಗಳು

ಪ್ರತಿಯೊಂದು ಟೊಂಗೆಗೂ ಇರಬೇಕು ಸಮಿತಿ
ಇರದೆ ಹೋದರೆ, ಪಾಪ, ಮಂಗನ ಫಜೀತಿ
ಸಮಿತಿಯಿಂದಲೆ ಭತ್ಯಕಾಸಿನ ವಿಕಾಸ
ಮೆಂಬರರ ಮುಖಕಮಲದಲಿ ಮಂದಹಾಸ.

## ೧೪೪೮. ನೇತ್ರ ಶಿಬಿರ

ಪ್ರತಿಯೊಂದು ತಾಲೂಕಿನಲಿ ನೇತ್ರ ಶಿಬಿರ
ತೆರೆಯಬೇಕೆಂದು ಮಾಡಿದರು ನಿರ್ಧಾರ
ಕಣ್ಣಿರದ ದೀನರಿಗೆ ಬರಬಹುದು ದೃಷ್ಟಿ
ಕಣ್ಣಿದ್ದ ಕುರುಡರಿಗೆ ಕಾಣುವುದೆ ಸೃಷ್ಟಿ?

## ೧೪೪೯. ಸಂಪುಟದ ರಚನೆ

ಪ್ರತಿಯೊಂದು ತಾಲ್ಲೂಕಿನಿಂದೊಬ್ಬ ಸಚಿವ
ಆರಿಸುವುದೊಳಿತೆಂದು ಹೇಳಿದನು ಬಸವ
ಸಂಪುಟವು ಆಗಿಬಿಟ್ಟರೆ ಹೀಗೆ ರಚಿತ
ಐದು ವರುಷದ ತನಕ ನಡೆಯುವುದು ಖಚಿತ.

## ೧೪೫೦. ಪರಿಷತ್ತಿನ ಸಂಘಟಕ

ಪ್ರತಿಯೊಂದು ತಿಂಗಳಿಗೆ ಉಂಟು ಪರಿಷತ್ತು
ಹೀಗಾಗಿ ತಿಳಮಾತ್ರವಿಲ್ಲ ಪುರಸತ್ತು
ಪರಿಷತ್ತಿಗಾಗಿ ಕೂಡಿಸಿದ ನಿಧಿಯಿಂದ
ತನ್ನ ಸಂಸಾರವು ಸಾಗಬೇಕೆಂದ.

### ೧೪೫೧. ಪರಿಷತ್ತುಗಳು

ಪ್ರತಿಯೊಂದು ತಿಂಗಳಿಗೆ ಹತ್ತು ಪರಿಷತ್ತು
ಹೀಗಾಗಿ ಯಾರಿಗೂ ಇಲ್ಲ ಪುರಸೊತ್ತು
ಇದಕೆಂಬೆ ಆಧುನಿಕ ಭಾರತದ ಹೆಮ್ಮೆ
ಕರ ಹಾಕಿಯೂ ಹಾಲು ಕೊಡಲಿಲ್ಲ ಎಮ್ಮೆ.

### ೧೪೫೨. ಸರ್ ಚಾರ್ಜು

ಪ್ರತಿಯೊಂದು ತೆರಿಗೆಗೂ ಉಂಟು ಸರ್‌ಚಾರ್ಜು
ಇದಕೆನ್ನುವರು ಪಂಚವಾರ್ಷಿಕದ ಗರ್ಜು
ಖರ್ಚು ಸಿಕ್ಕಾಪಟ್ಟೆ ಮಾಡಿದರೆ ಪ್ರಗತಿ
ಪ್ರಗತಿ ಹೆಚ್ಚಾದಂತೆ ಕಿಸೆಯಾಯ್ತು ಭರ್ತಿ.

### ೧೪೫೩. ತಿದ್ದುವಿಕೆ

ಪ್ರತಿಯೊಂದು ಪಂಕ್ತಿಯನು ತಿರುತಿರುಗಿ ತಿದ್ದಿ
ಕವನ ರಚಿಸಲು ಕಾವ್ಯವಾಗುವುದು ರದ್ದಿ
ಒಂದೆ ರಭಸಕೆ ಕವನ ಮೂಡಿದರೆ ಮಾತ್ರ
ಎಂದಿಗೂ ಚಂದಿಯಾಗದು ಕವಿಯ ಧೋತ್ರ.

### ೧೪೫೪. ಪ್ರತಿಯೊಂದು ಪಂಕ್ತಿಯಲಿ

ಪ್ರತಿಯೊಂದು ಪಂಕ್ತಿಯಲಿ ಹದಿನೆಂಟು ಮಾತ್ರೆ
ನಾಲ್ಕು ಪಂಕ್ತಿಗಳಲ್ಲಿ ಮುಗಿಯುತಿದೆ ಜಾತ್ರೆ
ಜಾತ್ರೆಯಲಿ ತರತರದ ಬೆಂಡು ಬತ್ತಾಸು
ಕೊಳ್ಳಲಕೆ ನಮ್ಮ ಕೈಯೊಳಗಿಲ್ಲ ಕಾಸು.

### ೧೪೫೫. ಸಿಡಿಮದ್ದು

ಪ್ರತಿಯೊಂದು ಪಂಕ್ತಿಯೊಳಗಿರಲಿ ಸಿಡಿಮದ್ದು
ಒಂದೆ ಹೊಡೆತಕೆ ಬೀಳಬೇಕು ರಣಹದ್ದು
ರಣಹದ್ದುಗಳ ಜೊತೆಗೆ ಬಿಳಿ ಕರಡಿ ಸುದ್ದಾ
ಇದಕೆನ್ನುವರು ಕಬ್ಬಿಗನ ಧರ್ಮಯುದ್ಧ.

### ೧೪೫೬. ಚುಟಕ

ಪ್ರತಿಯೊಂದು ಪಂಕ್ತಿಯೊಳಗಿರಲಿ ಹೊಡೆಪೆಟ್ಟು
ಸಂಪೂರ್ಣ ಗಟ್ಟಿಯಾಗುವುದು ನೆಲಗಟ್ಟು
ಸಡಿಲಾಗಿ ಬೀಳಬಾರದು ಕೃತಿಗೆ ತೂತು
ಶತಮಾನ ಕಳೆದರೂ ಚುಟಕ ಸಾಬೀತು.

### ೧೪೫೭. ಮಳ್ಳು

ಪ್ರತಿಯೊಂದು ಪಂಕ್ತಿಯೊಳಗಿರಬೇಕು ಮಳ್ಳು
ಮಳ್ಳು ಬಡಬಡಿಸಿದರೆ ಅದು ಅಲ್ಲ ಸುಳ್ಳು
ಬರವಣಿಗೆಯಲ್ಲಿ ಜಾಣತನವಿರಲು ಘಾತ
ಒಂದೆ ಹೊಡತಕೆ ಕಬ್ಬಿಗನ ಅಧಃಪಾತ.

### ೧೪೫೮. ತಾರತಮ್ಯ

ಪ್ರತಿಯೊಂದು ಪದ್ಯದಲಿ ಇದ್ದರೂ ಚಿನ್ನ
ಕವಿ ಶ್ರೇಷ್ಠನಿಗೆ ಬರೀ ಮಜ್ಜಿಗೆಯ ಅನ್ನ
ಪ್ರತಿಯೊಂದು ಪುಟದೊಳಗೆ ಇದ್ದರೂ ಟಿನ್ನು
ಕಾದಂಬರಿಕಾರನಿಗೆ ಬೆಳ್ಳಿ, ಹೊನ್ನು.

### ೧೪೫೯. ಪ್ರತಿಯಂದು ಬದಿಗೆ

ಪ್ರತಿಯೊಂದು ಬದಿಗೆ ತಿರುಗಿಸಿ ನಿನ್ನ ಬೆನ್ನು
ಎರಡು ಕೈಯಿಂದಲೂ ಸರಿಯಾಗಿ ತಿನ್ನು
ತಿಂದದ್ದು ಪಚನವಾಗಲಿಕೆ ಈ ಕಾಲ
ಮೊದಲಿಗಿಂತಲೂ ಈಗ್ಗೆ ಬಹಳ ಅನುಕೂಲ.

### ೧೪೬೦. ಹಾಲಿನ ಕೆನೆ

ಪ್ರತಿಯೊಂದು ಭಾಷೆ ಹಾಲೆನ್ನುವುದು ಸತ್ಯ
ಈ ಹಾಲಿನೊಳಗಿರುವ ಕೆನೆಯ ಸಾಹಿತ್ಯ
ಸಹೃದಯಿಗಳು ಬೇಕು ರುಚಿ ನೋಡಲಿಕ್ಕೆ
ರುಚಿ ನೋಡಿದರೆ ಭೂಮಿಗಿಳಿಯುವುದು ಚಿಕ್ಕೆ.

### ೧೪೬೧. ಕೂಸು

ಪ್ರತಿಯೊಂದು ಮನೆಯೊಳಗೆ ಇರಬೇಕು ಕೂಸು
ಸಂಪೂರ್ಣ ದಿನವಾಗುವುದು ಒಂದು ತಾಸು
ಕೂಸು ಎಂಬುದು ಲೇಸು, ಮಾನವನ ಆದಿ.
ಭಗವಂತನಿಗೆ ಕೂಡ ಕೂಸೇ ಬುನಾದಿ.

### ೧೪೬೨. ಕಟ್ಟಡವಿ

ಪ್ರತಿಯೊಂದು ಮರಬಳ್ಳಿ ಬಿದಿರು ಗಿಡಗಂಟಿ
ಒಂದಕೊಂದನು ತಬ್ಬಿಕೊಂಡಿಹವು ಅಂಟಿ
ಕಟ್ಟಡವಿಯಲ್ಲಿಯೂ ಬಾಂಧವ್ಯ ನೀತಿ.
ಪಟ್ಟಣದೊಳಿಲ್ಲೇಕೆ ಈ ತರದ ಪ್ರೀತಿ ?

### ೧೪೬೩. ಸಂದೇಹ

ಪ್ರತಿಯೊಂದು ಮಾತಿಗೂ ಬೇಡ ಸಂದೇಹ
ಸಂದೇಹ ತಾಳಿದರೆ ಕೊರಗುವುದು ದೇಹ
ಸಂದೇಹವೆನ್ನುವುದು ಪೂರ್ಣ ಅಮವಾಸ್ಯೆ
ತೆರೆದರೂ ಕಣ್ಣು ಕಾಣದು ಯಾವ ನಕ್ಷೆ.

### ೧೪೬೪. ಇಂದಿನ ಪರಿಸ್ಥಿತಿ

ಪ್ರತಿಯೊಂದು ರಸ್ತೆಯಲಿ ಪೂರ್ಣ ಇಳಿಜಾರು
ಪಾತಳಕಿಳಿಯುತಿದೆ ಮಾನವನ ಕಾರು.
ಈ ಕಡೆಗೆ ಚಂದರಲೋಕದ ಯಾತ್ರೆ ಬೇರೆ.
ಭೂಮಿ ನಿರ್ಜನವಾಗಲಿದೆ ಬೇಗ, ನೀರೆ.

### ೧೪೬೫. ಉಂಟು ರಾಡಿ

ಪ್ರತಿಯೊಂದು ರಾಜ್ಯದಲ್ಲೂ ಉಂಟು ರಾಡಿ
ಇದಕೆಂಬೆ ರಾಜಕೀಯದ ಜೀವನಾಡಿ
ಈ ರಾಡಿ ತೆಗೆಯುವುದು ಯಾರಿಂದ ಸಾಧ್ಯ ?
ಕ್ರಾಂತಿವೀರನೆ ಬೇಕು ಎಂದನು ಉಪಾಧ್ಯ.

## ೧೪೬೬. ಮಂತ್ರಿಯ ಕಾರ್ಯಕ್ರಮ

ಪ್ರತಿಯೊಂದು ಸರ್ತಿ ದಿಲ್ಲಿಗೆ ಹೋಗುವಾಗ
ಅವನ ಸಂಗಡ ಆಕೆಗೂ ಉಂಟು ಜಾಗ
ಇಬ್ಬರೂ ಒಂದು ಕಮಿಟಿಯ ಮೇಲೆ ಇದ್ದು
ಸರಕಾರಿ ಬಂಗ್ಲೆಯಲಿ ಮಾಡುವರು ಮುದ್ದು.

## ೧೪೬೭. ವಿಪರೀತ ತುಟ್ಟಿ

ಪ್ರತಿಯೊಂದು ಸಾಮಾನು ವಿಪರೀತ ತುಟ್ಟಿ
ತುಟ್ಟಿಯಾಗಿ ಸೆಟ್ಟಿ ಮತ್ತಷ್ಟು ಗಟ್ಟಿ
ಸಾಮಾನ್ಯ ಜನರೆಲ್ಲ ಸಂಪೂರ್ಣ ಸೊರಗಿ
ಸರಕಾರ ನೀಗಾಯ್ತು ಮತ್ತಷ್ಟು ಕರಗಿ.

## ೧೪೬೮. ಹಾದಿಯಲ್ಲಿ

ಪ್ರತಿಯೊಂದು ಹಾದಿಯಲ್ಲೂ ಉಂಟು ಹಾವು
ಕಚ್ಚಿದರೆ ನಮಗೆ ತಪ್ಪುವುದಿಲ್ಲ ಸಾವು,
ಆದರೂ ಬಿಡಬಾರದೆಂದಿಗೂ ಹಾದಿ
ಹಾದಿ ಬಿಟ್ಟರೆ ನಮ್ಮ ಜೀವನ ಸಮಾಧಿ.

## ೧೪೬೯. ಗಗನ ವಿಹಾರಿಗೆ

ಪ್ರತಿಯೊಬ್ಬನಿಗೆ ಓದಲು ಸಿಗಬೇಕು ತುತ್ತು
ಆಮೇಲೆ ನಕ್ಷತ್ರಗಳ ಬೆನ್ನು ಹತ್ತು
ಬಿಳಿ ಮೋಡಗಳ ಮೇಲೆ ಬೆಳೆದಿರುವ ಅರಳೆ
ಕೈಗೆ ಸಿಕ್ಕುವುದೆಂದು ಬಗೆದೆಯಾ ಮರುಳೆ?

## ೧೪೭೦. ವ್ಯಕ್ತಿತ್ವ

ಪ್ರತಿಯೊಬ್ಬನೂ ಬೆಳೆಸಿಕೊಳಲಿ ವ್ಯಕ್ತಿತ್ವ
ಪ್ರಾಪ್ತವಾಗಲಿ ಇದಕೆ ಹೆಚ್ಚಿನ ಮಹತ್ವ
ಮಂತ್ರಿ ಬಂದಾಗ ಮುಖಸ್ತುತಿಯ ನಗೆಯಿಂದ
ಹೊರಸೂಸಬೇಕು ವ್ಯಕ್ತಿತ್ವದ ಸುಗಂಧ.

### ೧೪೭೧. ಶ್ರಮದಾನ

ಪ್ರತಿಯೊಬ್ಬನೂ ಸ್ವಲ್ಪ ಶ್ರಮದಾನ ಮಾಡಿ
ಸಹಕರಿಸಿದರೆ ರಸ್ತೆಯೊಳಗಿಲ್ಲ ರಾಡಿ
ಎಲ್ಲರೂ ಗುಡಿಸಿದರೆ ಊರೆಲ್ಲ ಚೊಕ್ಕ
ಉಳಿತಾಯವಾಗುವುದು ಪುರಸಭೆಯ ರೊಕ್ಕ.

### ೧೪೭೨. ಆಗಲಿದೆ ಅಗ್ಗ

ಪ್ರತಿಯೊಂದು ಒಡವೆಯೂ ಆಗಲಿ ಅಗ್ಗ
ಆಮೇಲೆ ಭೂಲೋಕದೊಳಗೆಯೇ ಸಗ್ಗ
ಆ ತನಕ ಕೊರಳಲ್ಲಿ ಕಟ್ಟಿಕೊಳಿ ಹಗ್ಗ
ಅನುಕೂಲವಾಗುವುದು ಸೇರಲಿಕೆ ಸಗ್ಗ.

### ೧೪೭೩. ಪ್ರತಿಯೊಂದು ಕೆಲಸದಲ್ಲೂ

ಪ್ರತಿಯೊಂದು ಕೆಲಸದಲ್ಲೂ ಇವನು ದಡ್ಡ
ಆದರೂ ಉದ್ದವಾಗಿದೆ ಇವನ ಗಡ್ಡ
ಹೆಣ ಸುಡುವ ಕಾರ್ಯದಲಿ ಒಬ್ಬಳ ನಿಷ್ಣಾತ
ಸಂಪೂರ್ಣ ಸಂತುಷ್ಟಿ ಪಡೆಯುವುದು ಪ್ರೇತ.

### ೧೪೭೪. ಹೆಣ್ಣು

ಪ್ರತಿಯೊಂದು ಮನೆಯೊಳಗೆ ಇರಬೇಕು ಹೆಣ್ಣು
ಹೆಣ್ಣು ಇಲ್ಲದ ಜಾಗ ಗಿಡವಿರದ ಮಣ್ಣು
ಈ ಮಣ್ಣು ಸವಿದು ಹೋಗುವುದು ಮಳೆ ಬಿದ್ದು
ಹೆಣ್ಣು ಬರಿ ಹೆಣ್ಣಲ್ಲ, ಜೀವನದ ಮುದ್ದು

### ೧೪೭೫. ಸರಕಾರಿ ಬಜೆಟ್ಟು

ಪ್ರತಿ ವರುಷ ಉಂಟು ಸರಕಾರದ ಬಜೆಟ್ಟು
ಆದರೂ ನಮಗಿನ್ನು ಸಿಗಲಿಲ್ಲ ಹಿಟ್ಟು
ನಾವು ಕುಡಿಯುವುದು ಅರೆಹೊಟ್ಟೆ ತಿಳಿ ಗಂಜಿ
ಈ ಬಜೆಟ್ಟಿನ ತೂಕ ಬರಿ ಒಂದು ಗುಂಜಿ.

### ೧೪೭೬. ಹುಟ್ಟು ಸಾವು

ಪ್ರತಿ ವರುಷ ಹುಟ್ಟುತಿದೆ ಸಾಯುತಿದೆ ಹುಲ್ಲು
ಹುಟ್ಟು ಸಾವುಗಳಿರದೆ ಬದಕುತಿದೆ ಕಲ್ಲು
ಸತ್ತು ಹುಟ್ಟಿದ ಗರಿಕೆ ಚಿಗುರಾಯ್ತು, ಅವ್ವ
ಸಾಯಲಾರದ ಕಲ್ಲು ಜೀವಂತ ಒವ್ವ.

### ೧೪೭೭. ಕಾರವಾರ ಬಂದರ ವಿಕಾಸ

ಪ್ರತಿ ವಾರವೂ ಉಂಟು ಬಂದರದ ಸುದ್ದಿ
ಮಂತ್ರಿಗಳು ಬಂದಾಗ ಪೂರ್ಣ ಅಭಿವೃದ್ಧಿ
ಹಿಂಟರುಗಿದೊಡನೆಯೇ ಗಾಳಿಯಲಿ ತೇಲಿ
ಕಾರವಾರದ ಕಡಲು ಸಂಪೂರ್ಣ ಖಾಲಿ.

### ೧೪೭೮. ಪ್ರತಿ ವಾರವೂ

ಪ್ರತಿ ವಾರವೂ ಉಂಟು ಮಂತ್ರಿ ಸಂಚಾರ
ಹೋದ ಹೋದಲ್ಲಿ, ಸಖಿ, ಜನರ ಉದ್ಧಾರ
ತಿನ್ನಲಿಕೆ ಸಿಗದಿದ್ದರೂ ಉಂಟು ಭೇಟಿ
ಇದರಿಂದ ತೃಪ್ತವಾಗಿರಲಿ ಜನಕೋಟಿ.

### ೧೪೭೯. ರೈಲು ಅಪಘಾತಗಳು

ಪ್ರತಿ ವಾರವೂ ಉಂಟು ರೈಲು ಅಪಘಾತ
ಹೀಗಾಗಿ ಭಾಗತದ ಜನಸಂಖ್ಯೆ ಖೋತಾ
ಆಹಾಗ [illegible]ಳಿಸಲಿಕೆ ಇ[illegible] ಒಳ್ಳೆ ಮಾರ್ಗ
ಸತ್ತವರಿಗೂ ಫಾಯ್ದೆ! ಸುಲಭದಲಿ ಸ್ವರ್ಗ!

### ೧೪೮೦. ತೆರಿಗೆಗಳ ಮಟ್ಟ

ಪಂಚವಾರ್ಷಿಕಕಾಗಿ ತೆರಿಗೆಗಳ ಮಟ್ಟ
ಮತ್ತಷ್ಟು ಮೇಲೇರಿ ಇನ್ನೊಂದು ಘಟ್ಟ
ಈ ಘಟ್ಟ ಮುಗಿದಾಗ ಬಿಗಿದು ಹಿಡಿ ಶ್ವಾಸ
ಗೌರಿಶಂಕರ ತಲುಪಿ ಕೊನೆಗೆ ಕೈಲಾಸ.

## ೧೪೮೧. ವಿಕಾಸದ ವಿವರ

ಪಂಚವಾರ್ಷಿಕದಿಂದ ನಾಡಿನುದ್ಧಾರ
ರಾಜಕಾರಣಿಗಳಿಗೆ ಮಾಣಿಕದ ಹಾರ
ಕಂಟ್ರಾಕ್ಟುದಾರನಿಗೆ ದಿನಕೊಂದು ಕೋಟಿ
ಬಡವರಿಗೆ ಸಿಕ್ಕಿದ್ದು ಹರಕು ಲಂಗೋಟಿ

## ೧೪೮೨. ಯೋಜನೆಯಿಂದ

ಪಂಚವಾರ್ಷಿಕದಿಂದ ಬಂತು ಸಮೃದ್ಧಿ
ಸಮೃದ್ಧಿ ಹೆಚ್ಚಾಗಿ ಬಂತು ಸದ್ಬುದ್ಧಿ
ಸದ್ಬುದ್ಧಿ ಹೆಚ್ಚಾಗಿ ಬಂದು ದುಷ್ಕಾಳ
ಜನಕೋಟಿಗಳ ತಲೆಯ ಮೇಲೆ ಬೇತಾಳ.

## ೧೪೮೩. ಸೌಲಭ್ಯ

ಪಂಚವಾರ್ಷಿಕದಿಂದ ಬಂತು ಸೌಲಭ್ಯ
ಅವರವರ ಯೋಗ್ಯತೆಗೆ ತಕ್ಕಂತೆ ಲಭ್ಯ
ಕೆಲವರಿಗೆ ಲಕ್ಷ, ಕೆಲವರಿಗೆ ದಶಲಕ್ಷ
ಎಲ್ಲಾದರೂ ಉಂಟೆ ಈ ತರದ ಭಕ್ಷ್ಯ ?

## ೧೪೮೪. ನಮ್ಮ ಲೋಕಸತ್ತೆ

ಪಂಚವಾರ್ಷಿಕದಿಂದ ಬಂದದ್ದು ಏನು ?
ಹತ್ತು ವರುಷದ ಮೇಲೆ ನೂತನ ತುಫಾನು
ಬಿರುಗಾಳಿಯಲಿ ಕೋಟಿ ಕೋಟಿ ನಾಪತ್ತೆ
ಇದಕೆನ್ನುವರು ಭಾರತದ ಲೋಕಸತ್ತೆ.

## ೧೪೮೫. ಶುಭ್ರ ಬಂಗಾರ

ಪಂಚವಾರ್ಷಿಕದಿಂದ ಶುಭ್ರ ಬಂಗಾರ
ಹುಟ್ಟಿಸಿದೆ ನೋಡಯ್ಯಾ, ನಮ್ಮ ಸರಕಾರ !
ಈ ಸುದ್ದಿ ನಿನಗೆ ಗೊತ್ತಿಲ್ವೆ, ಎಲೆ ಪಾಪಿ ?
ಶುಭ್ರ ಬಂಗಾರವೆನ್ನುವುದು ಬಿಳಿ ಟೋಪಿ.

## ೧೪೮೬. ಪಂಚವಾರ್ಷಿಕದಲ್ಲಿ

ಪಂಚವಾರ್ಷಿಕದಲ್ಲಿ ಖರ್ಚಾಗಿ ಕೋಟಿ
ಸಿಕ್ಕ ಸಿಕ್ಕವರು, ಸಖಿ, ಹಾಕಿದರು ಲೂಟಿ
ಹೀಗಾಗಿ ತುಟ್ಟಿಯಾಯಿತು ದವಸಧಾನ್ಯ
ಎರಡು ಕೈಗಳ ಬೀಸಿ ತಿಂದವರು ಧನ್ಯ.

## ೧೪೮೭. ಪಂಚವಾರ್ಷಿಕದ ಬೆಳೆ

ಪಂಚವಾರ್ಷಿಕದ ಹೊಲದಲ್ಲಿ ಭರ್ತಿ ಪೀಕು
ಎರಡು ಕೈಯಿಂದಲೂ ಸ್ವೀಕರಿಸಬೇಕು
ಕೊಟ್ಟವನಿಗೂ ಸಿಗಲಿ ದೇವರ ಪ್ರಸಾದ
ಇಬ್ಬರೂ ಹಂಚಿಕೊಂಡರೆ ಇಲ್ಲ ವಾದ.

## ೧೪೮೮. ಯೋಜನೆಯ ಗಾತ್ರ

ಪಂಚವಾರ್ಷಿಕ ಯೋಜನೆಗೆ ದೊಡ್ಡ ಗಾತ್ರ
ಊಟ ಮಾಡಲಿಕೆ ಉತ್ತಮ ಅನ್ನಛತ್ರ
ರಾಜಕಾರಣಿ ಮತ್ತು ಸಗಟು ವ್ಯಾಪಾರಿ
ಮಣಿಹಾಕಿ ಕುಳಿತುಕೊಂಡರು ಜೊತೆಗೆ ಸೇರಿ.

## ೧೪೮೯. ಯೋಜನೆಯ ಕಾಮಧೇನು

ಪಂಚವಾರ್ಷಿಕ ಯೋಜನೆಯ ಕಾಮಧೇನು
ಕರ ಹಾಕಿತೆಂದು ಮಾಡಿದರು ಟೆಲಿಫೋನು
ಮೇವು ಪೂರೈಸಲಿಕೆ ದಶಕೋಟಿ ದುಡ್ಡು
ಮೊಲೆ ಹಿಂಡಿ ನೋಡಿದರೆ ಹಾಲಿಲ್ಲ ಗೊಡ್ಡು!

## ೧೪೯೦. ಪಂಚವಾರ್ಷಿಕ ಯೋಜನೆ

ಪಂಚವಾರ್ಷಿಕ ಯೋಜನೆಯ ರೂಪರೇಷೆ
ನೋಡಿದರೆ ನೆನಪಾಗುವುದು ಗಲ್ಲ–ಮೀಸೆ
ಅರೆಹೊಟ್ಟೆಗಿರದಿದ್ದರೂ ಪೂರ್ಣ ಶಾಂತಿ
ಈ ಮೀಸೆಯಿಂದ ಬಂದಿದೆ ಮುಖಕೆ ಕಾಂತಿ.

## ೧೪೯೧. ತಿಂದರು ಚಿರೋಟಿ

ಪಂಚವಾರ್ಷಿಕವೆಂದು ತಿಂದರು ಚಿರೋಟಿ
ಇದಕಾಗಿ ಸಾಲ ತೆಗೆದರು ನೂರು ಕೋಟಿ
ತಿಂದವರು ಹತ್ತು ಜನ; ಉಳಿದ ತೊಂಬತ್ತು
ನಿತ್ರಾಣರಾಗಿ ಬಿಟ್ಟರು ಸಾಲ ಹೊತ್ತು.

## ೧೪೯೨. ಯೋಜನೆಯ ಬಸ್ಸು

ಪಂಚವಾರ್ಷಿಕವೆಂಬ ಯೋಜನೆಯ ಬಸ್ಸು
ಕೊನೆಗೆ ನೋಡಿದರೆ, ಸಖಿ, ಪೂರ್ಣ ಬೋಗಸ್ಸು
ಚಕ್ಕಡಿಯ ವೇಗದಲಿ ಚಲಿಸುತಿದೆ ಪಾಪ!
ಈ ಮಾತು ಹೇಳಿದರೆ ಸಚಿವರಿಗೆ ಕೋಪ.

## ೧೪೯೩. ತಕಡ ಧಿನ್ನ

ಪಂಚವಾರ್ಷಿಕವೆನ್ನುವುದು ತಕಡ ಧಿನ್ನ
ಕೋಟಿ ಖರ್ಚಾದರೂ ಸಿಗಲಿಲ್ಲ ಅನ್ನ
ಪೋಲಾಗಿ ಹೋದ ದುಡ್ಡಿನ ಲೆಕ್ಕ ಸಿಕ್ಕ
ಸರಕಾರಿ ಬೊಕ್ಕಸದ ತಳಪಾಯ ಚೊಕ್ಕ.

## ೧೪೯೪. ಯೋಜನೆಯ ಪಾಯಸ

ಪಂಚವಾರ್ಷಿಕವೆನ್ನುವುದು ದೊಡ್ಡ ಜಾತ್ರೆ
ಮಂತ್ರಿಗಳ ಕೈಯೊಳಗೆ ಪಾಯಸದ ಪಾತ್ರೆ
ಭಕ್ತರೆಲ್ಲರು ಪಾಯಸವ ಸುರಿದು ಸುರಿದು
ಭಾರತಾಂಬೆಯ ಮಡಕೆ ಸಂಪೂರ್ಣ ಬರಿದು.

## ೧೪೯೫. ಪಂಚವಾರ್ಷಿಕ ಡೋಲು

ಪಂಚವಾರ್ಷಿಕವೆನ್ನುವುದು ದೊಡ್ಡ ಡೋಲು
ನಡುವೆಯೇ ಮುರಿದು ಹೋಯಿತು ಅದರ ಕೋಲು
ಸರಕಾರಿ ಬೊಕ್ಕಸದ ತಳಪಾಯ ಖೋತಾ
ಹೀಗಾಗಿ ಯೋಜನೆಗೆ ಅರ್ಧಾಂಗ ವಾತಾ.

## ೧೪೯೬. ದೊಡ್ಡ ಪ್ಲಾನು

ಪಂಚವಾರ್ಷಿಕವೆನ್ನುವುದು ದೊಡ್ಡ ಪ್ಲಾನು
ಈ ಪ್ಲಾನಿನಿಂದ ಕೆಳಗಿಳಿಯುತಿದೆ ಬಾನು
ಕೆಳಗಿಳಿದು ಕೆಳಗಿಳಿದು ಕೊನೆಗೆ ಪಾತಾಳ
ಜನಕೋಟಿಗಳ ತಲೆಯ ಮೇಲೆ ಬೇತಾಳ.

## ೧೪೯೭. ಭಾಷೆಗಳು

ಪಂಜಾಬಿ ಗುಜರಾತಿ ಬಂಗಾಲಿ ಭಾಷೆ
ಕಲಿಯಬೇಕೆನ್ನುವುದು ಇವಳ ಅಭಿಲಾಷೆ
ನಾನೆಂದೆ : ಈ ಎಲ್ಲ ಭಾಷೆಗಳಿಗಿಂತ
ಪ್ರೀತಿ ಎಂಬುವ ಭಾಷೆ ಬಹಳ ಶ್ರೀಮಂತ.

## ೧೪೯೮. ಭಾಷಾ ಬಾಂಧವ್ಯ

ಪಂಜಾಬಿ, ಬಂಗಾಲಿ, ಕನ್ನಡ, ಮರಾಠಿ
ತೆಲಗು, ತಮಿಳೂ, ಉರ್ದು, ಜನ ಕೋಟಿ ಕೋಟಿ
ಗುಜರಾತಿ, ಮಳೆಯಾಳಿ, ಕಾಶ್ಮೀರಿ, ಹಿಂದಿ
ಎಲ್ಲರೂ ಸೇರಿದರೆ ಭಾರತದ ಮಂದಿ.

## ೧೪೯೯. ರವೀಂದ್ರರ ಗೀತಾಂಜಲಿ

ಪಂಡಿತರು ತೆಗಳಿದರು ಹುಳಿಯೆಂದು ಹಣ್ಣು
ದುಗುಡದಿಂದೊರಗಿತ್ತು ಮರದಡಿಯ ಮಣ್ಣು
ಕಡಲಾಚೆಯಿಂದ ಬೇಡಿಕೆ ಬಂದ ನಿಮಿಷ
ಹುಳಿ ಹಣ್ಣು ಸವಿಯಾಗಿ ರಸಿಕರಿಗೆ ಹರುಷ.

## ೧೫೦೦. ಪಂಡಿತ ಮತ್ತು ಕವಿ

ಪಂಡಿತರು ಹೇಳಿದರು ಬೇಕೆಂದು ಪ್ರಾಸ
ಕವಿ ಹೇಳಿದನು : ನನಗೆ ಬೇಕು ಉಲ್ಲಾಸ
ಪಂಡಿತರು ಹೇಳಿದರು ಇರಲೆಂದು ಅರ್ಥ.
ಕವಿಯೆಂದ : ಅರ್ಥವಿದ್ದರೆ ಕವನ ವ್ಯರ್ಥ.

## ೧೫೦೧. ಚೀನೀ ಮಿಠಾಯಿ

ಪಾಕಿಗಳು ಬಯಸಿದ್ದು ಚೀನೀ ಮಿಠಾಯಿ
ಮಾವೊ ಕೊಟ್ಟನು ಕೊನೆಗೆ ಹಸಿ ಬಾಳೆಕಾಯಿ
ಬಾಳೆಕಾಯಿಯ ಜೊತೆಗೆ ಬೇಯದ ಬಟಾಟೆ
ಕೊಟ್ಟ ಭರವಸೆಯಾಯ್ತು ಪೂರ್ಣ ಉಪರಾಟೆ.

## ೧೫೦೨. ದಣಪೆ

ಪಾಗಾರಕಿರಬೇಕು ದಣಪೆ, ಗುಣವಂತೆ
ಇಲ್ಲದಿದ್ದರೆ ನೆರೆಯುವುದು ಹೇಗೆ ಸಂತೆ?
ಎಂದಿಗೂ ಮುಚ್ಚಬಾರದು ಯಾವುದನ್ನೂ
ನೆರಮನೆಯ ಕಡೆಗೆ ತೋರಿಸಬೇಡ ಬೆನ್ನು.

## ೧೫೦೩. ಭಾರಿ ಸರ್ಕಸ್ಸು

ಪಾಪ! ಆ ಡೊಂಬರವನಿಗೆ ನಿರುದ್ಯೋಗ
ಅವನ ಆಟವ ನೋಡುವವರಾರು ಈಗ
ಅಂತರಿಕ್ಷದ ಮೇಲೆ ಭಾರಿ ಸರ್ಕಸ್ಸು
ನೋಡಲಿಕೆ ಹೊರಡಬೇಕೆನ್ನುತಿದೆ ಬಸ್ಸು.

## ೧೫೦೪. ಪಾರಿಜಾತದ ಹೂವು

ಪಾರಿಜಾತದ ಹೂವು ಮುಂಜಾನೆ ನಿತ್ಯ
ತಪ್ಪದೆಯೆ ನೆಲಕುರುಳಿ ಸಾರುತಿದೆ ಸತ್ಯ:
ಕೊನೆಗೆಲ್ಲರೂ ನೆಲವ ಸೇರುವರು, ಕಂದ.
ಭೂಮಾತೆ ಅಪ್ಪಿಕೊಳ್ಳುವುದು ಆನಂದ.

## ೧೫೦೫. ಪಟ್ಟಣದ ಬೀದಿಯಲ್ಲಿ

ಪಾರಿಜಾತವ ಮುಡಿದು ಇಲ್ಲಿ ಬಾ, ನಾರಿ
ಇಂದ್ರಲೋಕದ ಹಾಗೆ ಕಾಣುವುದು ಕೇರಿ
ಪರಿಮಳವ ಬೀರಿದೊಡನೆಯೆ ಪಾರಿಜಾತ
ದೂರಾಗುವುದು ಚರಂಡಿಯ ಹೊಲಸು ನಾತ.

## ೧೫೦೬. ಮೊನ್ನೆ ಕೇಳಿದ್ದು

ಪಾರ್ಲಿಮೆಂಟಿಗೆ ಇವನು ಹೋದಂದಿನಿಂದ
ಯಾರ್‍ಯಾರಿಗೂ ಇಲ್ಲ ತುಸುವು ಆನಂದ
ಮತ್ತಷ್ಟು ಹೆಚ್ಚಾಯ್ತು ಜೀವನದ ವೆಚ್ಚ
ಇವನು ಮಾಡಿದ್ದೇನು ? ಈ ಮಹಾ ಲುಚ್ಚ !

## ೧೫೦೭. ಸಾಹಿತ್ಯ ಚರಿತ್ರೆ

ಪ್ರಾಚೀನ ಕಾವ್ಯ ರಸದೂಟಗಳ ಸುಗ್ಗಿ
ಮಂಡಿಗೆಯ ಹೊರತು ನಾನಾ ತರದ ಹುಗ್ಗಿ
ಆಮೇಲೆ ಸರ್ವಜ್ಞ ಬಡಿಸಿದನು ಚಟ್ನಿ
ಆಧುನಿಕ ಭೋಜನಕೆ ಬೇಕು ಬಿರಿಯಾನಿ.

## ೧೫೦೮. ಜಗತ್ತಿನ ನಡತೆ

ಪ್ರಾಯ ತುಂಬಿರುವಾಗ ಇವಳ ದರಬಾರು
ಮುದುಕಿಯಾಗಲು ಸೂಳೆ ಕೇಳುವವರು ಯಾರು ?
ಇದು ಜಗತ್ತಿನ ನಡತೆ, ಮಾನವನ ನೀತಿ
ಹೀಗೆಂದು ಚೇಷ್ಟೆ ಮಾಡಿತು ಮರದ ಕೋತಿ.

## ೧೫೦೯. ಪ್ರಾಯದಲಿ

ಪ್ರಾಯದಲಿ ನಮ್ಮ ಕೇರಿಗೆ ಇವನೆ ದೊಡ್ಡ
ಬುದ್ಧಿಯಲಿ ಮಾತ್ರ ಎಲ್ಲರಿಗಿಂತ ಹೆಡ್ಡ
ಏನು ಪರವಾ ಇಲ್ಲ, ಬೇಕು ಇಂಥವರು
ಎಲ್ಲರೂ ಜಾಣರಾದರೆ ನಮಗೆ ಬೆವರು.

## ೧೫೧೦. ಪ್ರಾಯದವನಿದ್ದಾಗ

ಪ್ರಾಯದವನಿದ್ದಾಗ ಹೂಡಿದನು ಕ್ರಾಂತಿ
ಮುಪ್ಪಿನಲ್ಲಾದರೂ ಸಿಗಲಿ ವಿಶ್ರಾಂತಿ
ವಿಶ್ರಾಂತಿ ಎನ್ನುವುದು ಅಲ್ಲ ಆಲಸ್ಯ
ಯಾವಾಗಲೂ ಬೆಳೆಯುತಿರಬೇಕು, ಸಸ್ಯ.

## ೧೫೧೧. ಆಸೆ

ಪ್ರಾಯ ಬಂದೊಡನೆಯೇ ಮೂಡಿದವು ಮೀಸೆ
ಒಂದೊಂದು ಕೂದಲಿಗೆ ಒಂದೊಂದು ಆಸೆ
ಕತ್ತರಿಸಿಕೊಂಡರೂ ಒಳಗುಂಟು ಬೇರು
ದಿನಕೊಮ್ಮೆ ಕುಡಿಯೊಡೆದು ಮತ್ತಷ್ಟು ಜೋರು.

## ೧೫೧೨. ಇಳಿಪ್ರಾಯ

ಪ್ರಾಯ ಹೆಚ್ಚಾದಂತೆ ಜಾಣತನ ಹೆಚ್ಚು
ಮೂಲೆಗುಂಪಾಗುವುದು ಯೌವನದ ಹುಚ್ಚು
ಮುಂಜಾವ ಕನಸುಗಳು ಮರೆಯಾಗಿ ಸಂಜೆ
ಸಂಜೆಯಾಗಲು ಜೀವನದ ವೃಕ್ಷ ಬಂಜೆ.

## ೧೫೧೩. ಪ್ರಾಸ ಬಂಧನ

ಪ್ರಾಸಗಳ ಎಳೆತಂದು ಕಟ್ಟಿದರೆ, ಜಾಣಾ
ಹಾರಿ ಹೋಗುವುದು ಪದ್ಯದ ಪಂಚಪ್ರಾಣ
ಎಂದಿಗೂ ಕಾವ್ಯವಾಗದು ಬಲಾತ್ಕಾರ
ಹೂವರಳಿದರೆ ಮಾತ್ರ ಕಲೆಯ ಉದ್ಧಾರ.

## ೧೫೧೪. ಪ್ರಾಸ

ಪ್ರಾಸದೊಳಗಿರಬೇಕು ನಾನಾ ನಮೂನೆ
ಓದುವವರಿಗೆ ಇಲ್ಲ ಬೇಸರದ ಬೇನೆ
ಭಾಷೆಯೊಳಗಿರಬೇಕು ನೂತನ ತಮಾಷೆ
ಸರಿಯಾಗಿ ಸುಡಬೇಕು ಪ್ರತಿಯೊಂದು ದೋಸೆ

## ೧೫೧೫. ಕಾಗೆ ಮತ್ತು ಕೋಗಿಲೆ

ಪಿಂಡವನು ಸ್ವರ್ಗಕೊಯ್ಯುವ ಜನರ ಕೆಲಸ
ಕಾಗೆಯೇ ಸರಿಯಾಗಿ ಮಾಡುತಿರುವಾಗ
ಕೋಗಿಲೆಯ ಮಾತೆತ್ತುವುದು ಯೋಗ್ಯವಲ್ಲ
ಕಾಕರಾಯನ ದೃಷ್ಟಿ ಕೋಗಿಲೆಗೆ ಇಲ್ಲ

### ೧೫೧೬. ಪ್ರೀತಿ

ಪ್ರೀತಿ ಎಂಬುದು ಜ್ಯೋತಿ, ಪ್ರೀತಿಯೇ ಬೆಳಕು.
ಒಮ್ಮೊಮ್ಮೆ ಪ್ರೀತಿಯಾಗುವುದುಂಟು ಥಳಕು.
ಆಗಿಬಿಟ್ಟರೆ ಥಳಕು ಅದಕಿಲ್ಲ ಕಿರಣ.
ಜೀವಂತ ಎಂದಿದ್ದರೂ ಅದಕೆ ಮರಣ.

### ೧೫೧೭. ಬಂದರೂ ಕೋಪ

ಪ್ರೀತಿಯೊಂದಿಗೆ ನನಗೆ ಬಂದರೂ ಕೋಪ
ತಾಳಬಾರದು, ಲಲನೆ, ಮನದಿ ಸಂತಾಪ
ಬೇಸಗೆಯ ಪ್ರಖರ ಸೂರ್ಯನ ಸಿಟ್ಟಿನಲ್ಲಿ
ಅರಳುವುದು ಪರಿಪೂರ್ಣ ಮಲ್ಲಿಗೆಯ ಬಳ್ಳಿ.

### ೧೫೧೮. ಭೇದ ಭಾವನೆ

ಪುಣ್ಯಕ್ಷೇತ್ರಗಳಲ್ಲಿ ಇಲ್ಲ ಮಡಿ ಭೇದ.
ಲೋಕಸಭೆಯೊಳಗೇಕೆ ಈ ಹಾಳು ವಾದ ?
ಭಾಷೆಗಳು ಹಲವಾದರೂ ಭೂಮಿ ಒಂದು
ರವಿ ರೇಗಿದರೆ ಎಲ್ಲರೂ ಬೂದಿ ಬೆಂದು.

### ೧೫೧೯. ಪುಣ್ಯ ಕ್ಷೇತ್ರಗಳಲ್ಲಿ

ಪುಣ್ಯಕ್ಷೇತ್ರಗಳಲ್ಲಿ ಮಾಡಿದರೆ ಪಾಪ.
ಭಸ್ಮವಾಗುವುದು ! ಇದು ದೇವರ ಪ್ರತಾಪ.
ಪುಣ್ಯ ಕ್ಷೇತ್ರಗಳಲ್ಲಿ ಪಾಪಗಳ ರಾಶಿ.
ಹೆಚ್ಚಾಗುವುದು ಸಹಜವೆಂದ ಋಷಿಕೇಶಿ.

### ೧೫೨೦. ವಿಧಾನ ಸೌಧದ ಮುಂದೆ

ಪುಣ್ಯಪುರುಷನ ಪ್ರತಿಮೆಯನು ಇಡುವ ಬದಲು
ನಿಲುಗನ್ನಡಿಯ ಹಚ್ಚಿ ಬಿಡಬೇಕು ಮೊದಲು
ಪ್ರತಿಯೊಬ್ಬ ನೋಡಿಕೊಳ್ಳಲಿ ತನ್ನ ಮೋರೆ.
ಅಂದರೇನೆ ಬದುಕುವನು ಗಾಂಧಿ, ನೀರೆ.

### ೧೫೨೧. ಸಹಕಾರಿ ಸಂಘ

ಪುಣ್ಯವಂತರು ಕಟ್ಟಿ ಸಹಕಾರಿ ಸಂಘ
ಹಣ ಗಿಳಂಕೃತ ಮಾಡಿದರು, ಪಾಂಡುರಂಗ !
ಮಾಳಿಗೆಯ ಮನೆ ಕಟ್ಟಿದನು ಕಾರ್ಯದರ್ಶಿ
ಒಳಗಿರುವ ಫರ್ನಿಚರು ಬಲು ಹೃದಯಸ್ಪರ್ಶಿ.

### ೧೫೨೨. ನಮಸ್ಕಾರ

ಪುನಹ ಪುನಹಾ ಮಾಡಿದರೆ ನಮಸ್ಕಾರ
ನಿಮಿಷದಲಿ ಗೊತ್ತಾಗುವುದು ಚಮತ್ಕಾರ
ಈ ನಮಸ್ಕಾರಗಳು ಪೀಠಿಕಾ ಸಂಧಿ
ಎಂದರಿಯದಿದ್ದವನು ನರನಲ್ಲ, ಹಂದಿ.

### ೧೫೨೩. ಪೂರ್ಣ ಬಂದೋಬಸ್ತು

ಪೂರ್ಣ ಬಂದೋಬಸ್ತು ಮಾಡಿದರು ಕೊನೆಗೆ.
ಆದರೂ ಕಾಳೆಲ್ಲ ವರ್ತಕರ ಮನೆಗೆ.
ಹೀಗಾಗಲಿಕ್ಕೆ ಕಾರಣವೇನು, ಸ್ವಾಮಿ ?
ಇದಕೆನ್ನುವರು ಜನರು ಜೇಬಿನ ಹರಾಮಿ.

### ೧೫೨೪. ಪಂಚವಾರ್ಷಿಕದ ಉದ್ದೇಶ

ಪೂರ್ತಿಯಾಗಲು ಯೋಜನೆಯ ಕೊನೆಯ ಹಂತ
ಪ್ರತಿಯೊಬ್ಬ ವ್ಯಕ್ತಿಯಾಗುವುನು ಶ್ರೀಮಂತ
ಮತ್ತೆ ರಾಷ್ಟ್ರೀಯ ಉತ್ಪಾದನೆಯ ರೇಟು
ಹೆಚ್ಚಾಗಿ ಮೈಗೆ ಬಿಗಿಯಾಗುವುದು ಕೋಟು.

### ೧೫೨೫. ಪೂರ್ವ–ಪಶ್ಚಿಮದ ಸಂಗಮ

ಪೂರ್ವ–ಪಶ್ಚಿಮದ ಸಂಗಮ ಬೇಕು, ನೀರೆ.
ಮೇಲೆ ಹ್ಯಾರ್–ಕಟ್ಟು, ಕೆಳಗಡೆಗೆ ಸೀರೆ
ಮತ್ತೆ ಬೆನ್ನಿಗೆ ಇರಲಿ ರವಕೆಯ ಬಟನ್ನು
ಈ ವೇಷಕೆನ್ನುವರು ಕೊಸ್ಮೊಪೊಲಿಟನ್ನು

## ೧೫೨೬. ಪೂರ್ವಪುಣ್ಯದ ಮಹಿಮೆ

ಪೂರ್ವಪುಣ್ಯದ ಮಹಿಮೆ ಅಲ್ಲ ಸಾಮಾನ್ಯ!
ಇದನು ಗಳಿಸಿದ ವ್ಯಕ್ತಿ ಜಗದೊಳಗೆ ಧನ್ಯ
ಒಮ್ಮೊಮ್ಮೆ ಬಿಳಿ ಕರಡಿಯೂ ಪುಣ್ಯದಿಂದ
ರಾಜಾಕಾರಣಿಯಾಗಿ ಹುಟ್ಟುವುದು ಕಂದ.

## ೧೫೨೭. ಪೆನ್‌ಸಿಲಿನ ತುದಿಯಿಂದ

ಪೆನ್‌ಸಿಲಿನ ತುದಿಯಿಂದ ಸಾಮ್ರಾಜ್ಯ ಕಟ್ಟಿ
ಅನುಭವದ ತುದಿಯಿಂದ ಮಾಡಿದೆನು ಗಟ್ಟಿ
ಆಕೆ ಎಂದಳು : ಕೊನೆಗೆ ತಾಳಬಹುದೇನು?
ಕೇಳುವೆನು ಕಾಲನಿಗೆ ಮಾಡಿ ಟೆಲಿಫೋನು.

## ೧೫೨೮. ಪೆನ್ಸಿಲಿನ ಮೊನೆಯಿಂದ

ಪೆನ್ಸಿಲಿನ ಮೊನೆಯಿಂದ ಚುಚ್ಚಿದೆನು ಗಲ್ಲ.
ಆಕೆ ಎಂದಳು : ನಿಮಗೆ ಈ ನಡತೆ ಸಲ್ಲ.
ನನ್ನ ಬಣ್ಣಿಸಬೇಕು ಇದರ ಮೊನೆಯಿಂದ
ನಾನೆಂದೆ : ಈ ಗುಲಾಬಿಯ ಪಕಳೆ ಚಂದ.

## ೧೫೨೯. ಪೆಂಡಾರಿಗಳ ರಾಜ್ಯ

ಪೆಂಡಾರಿಗಳ ರಾಜ್ಯ ಶುರುವಾಯ್ತು ಮತ್ತೆ
ಇದ್ದಲ್ಲಿಯೇ ಅಕ್ಕಿ ಜೋಳ ನಾಪತ್ತೆ
ಮರೆಯಬಾರದು ನಾವು ನಮ್ಮ ಇತಿಹಾಸ
ಎಂದು ಹೇಳಿದನು ಕೀರ್ತನೆಯ ಹರಿದಾಸ.

## ೧೫೩೦. ಪೇಚಾಟದಲಿ ಬಿದ್ದ

ಪೇಚಾಟದಲಿ ಬಿದ್ದ ನಮ್ಮೂರ ಸೆಟ್ಟಿ
ಮಧ್ಯರಾತ್ರಿಗೆ ಬಂದು ಹಾಕಿದರು ಕಟ್ಟಿ
ಹೇಳಿದರು : ಮಿತಿಯಿರಲಿ ಲಾಭಕ್ಕೆ ನಿನ್ನ
ಗಳಿಸಬಾರದು ಕಳ್ಳಪೇಟೆಯಲಿ ಚಿನ್ನ.

## ೧೫೩೧. ರಂಗನಿಗೆ ಎಚ್ಚರಿಕೆ

ಪೋಗಬೇಡಲೊ, ರಂಗ, ಬಾಗಿಲನು ದಾಟಿ
ಕಳವಾಗಿ ಹೋಗುವುದು ನಿನ್ನ ಲಂಗೋಟಿ.
ಪ್ರತಿಯೊಂದು ಒಡವೆಗೂ ಘೋರ ಬರಗಾಲ
ಶ್ರೀ ಪುರಂದರವಿಠಲ, ಇದು ಪರ್ವಕಾಲ.

## ೧೫೩೨. ಅನುಭವದ ಬರಹ

ಪೋಯಟ್ರಿ ಎನ್ನುವುದು ಅನುಭವದ ಬರಹ
ಒಮ್ಮೊಮ್ಮೆ ಕವಿತೆ ಎಂಬುದು ಕವಿಯ ವಿರಹ
ಕವಿತೆಯೊಳಗುಂಟು ಸಖಿ, ನಾನಾ ಪ್ರಕಾರ
ಎಂದಿಗೂ ಆಗಬಾರದು ಕವಿತೆ ಭಾರ.

## ೧೫೩೩. ಕವಿ ಹೇಳಿದ್ದು

ಪೋಯಟ್ರಿ ಬರೆದಿಟ್ಟು ಹೋಗುವೆನು ಸತ್ತು
ಆಮೇಲೆ ಏನಾಗುವುದು ಇಲ್ಲ ಗೊತ್ತು
ಅವು ಸತ್ತರೂ ಮಗನೆ, ನನಗಿಲ್ಲ ದುಃಖ
ತನ್ನ ಸಂತೋಷಕ್ಕೆ ಬರೆದದ್ದೆ ಲೆಕ್ಕ.

## ೧೫೩೪. ಸಚಿವರ ವಶೀಲಿ

ಫಲಕಾರಿಯಾದೊಡನೆ ಸಚಿವರ ವಶೀಲಿ
ಒಂದೆ ನೆಗೆತಕೆ ಇವರು ಹಾರಿದರು ಬೇಲಿ
ಸರಕಾರಿ ಸೌಧದಲಿ ಗಳಿಸಿದರು ಹುದ್ದೆ
ಬಿಸಿ ಕಾಫಿ ಕುಡಿ ಕುಡಿದು ಮಾಡಿದರು ನಿದ್ದೆ.

## ೧೫೩೫. ಸರಕಾರದ ಸಾಧನೆ

ಬಡತನಕೆ ಬೆಲೆಯೇರಿಕೆಯ ಮದ್ದು ಹಾಕಿ
ಯಾವುದನ್ನೂ ಇವರು ಇಡಲಿಲ್ಲ ಬಾಕಿ
ದಿನ ಹೋದ ಹಾಗೆ ಹೆಚ್ಚಿಸಿ ನಿರುದ್ಯೋಗ
ಯುವಕರಿಗೆ ಹೇಳಿದರು : ಮಾಡಿ ತುಸು ತ್ಯಾಗ.

## ೧೫೩೬. ಸ್ಲೋಗನ್ನಿನ ಮಹಿಮೆ

ಬಡತನ ನಿವಾರಣೆಗೆ ಒಂದೇ ಉಪಾಯ :
ಕುಡಿಸಿದರು ಜನಕೆ ಸ್ಲೋಗನ್ನಿನ ಕಷಾಯ.
ಈ ಕಷಾಯದ ಮೇಲೆ ವೋಟುಗಳು ಸಿಕ್ಕಿ
ಅಗ್ಗವಾಯಿತು ಸ್ವಪ್ನಲೋಕದಲಿ ಅಕ್ಕಿ.

## ೧೫೩೭. ರಾಜಕೀಯ ಗೊತ್ತುವಳಿ

ಬಡಜನರ ಹಸಿವೆ ರದ್ದಾಗಬೇಕೀಗ
ಆಗದಿದ್ದರೆ ನಮಗೆ ಹಿಡಿಯುವುದು ರೋಗ
ಭಾರತದ ಜನಕೋಟಿ ನಮ್ಮ ಕಿವಿ ಹಿಂಡಿ,
ಮುಂದಿನ ಚುನಾವಣೆಗೆ ತಿನಿಸುವುದು ತಿಂಡಿ.

## ೧೫೩೮. ಪೇದೆ ಮತ್ತು ಮಂತ್ರಿ

ಬಡ ಪೇದೆ ಗಳಿಸಿದರೆ ಪೈಸೆ ಒಂದೆರಡು
ಹೇಳುವರು : ಈಗಲೇ ಇಲ್ಲಿಂದ ಹೊರಡು.
ಗಳಿಸಿದರೆ ಮಂತ್ರಿ ಹೇರಳ ಆಸ್ತಿಪಾಸ್ತಿ
ಈ ಫಂಟಿಗನಿಗಿಲ್ಲ ಯಾವುದೂ ಶಾಸ್ತಿ

## ೧೫೩೯. ಬಡಬಗ್ಗರಿಗೆ

ಬಡಬಗ್ಗರಿಗೆ ನಿತ್ಯ ಕೋಳಿಯ ಪಲಾವು
ಸಿಗಲೆಂದು ಸ್ವೀಕರಿಸಿದರು ಹೊಸ ಠರಾವು
ಗೊತ್ತುವಳಿಯಿಂದ ಸಕಲರಿಗೆ ಆನಂದ
ಚಪ್ಪಾಳೆ ತಟ್ಟಿದರು ಉಲ್ಲಾಸದಿಂದ.

## ೧೫೪೦. ಬಡಬಡನೆ ಮಾತು

ಬಡಬಡನೆ ಬಡಬಡನೆ ಬಡಬಡನೆ ಮಾತು,
ಇವಳ ನಾಲಗೆಗೆ ಬಿದ್ದಿರಬೇಕು ತೂತು.
ಈ ತೂತಿನಿಂದ ಪ್ರತಿ ನಿಮಿಷ ಮಳೆ ಸುರಿದು,
ನೆರೆಯ ಹಾವಳಿಯಾಗಿ ಹೋಗುತಿದೆ ಹರಿದು,

### ೧೫೪೧. ತಾಲೂಕು ಕಚೇರಿಯಲ್ಲಿ

ಬಡರೈತನಿಗೆ ಇವರು ಕೊಟ್ಟರು ತಗಾವಿ
ಕೈ ಮುಂದೆ ಮಾಡಿದವು ಹದಿನೆಂಟು ಬಾಯಿ
ಒಂದೊಂದು ಬಾಯೊಳಗೆ ಒಂದೊಂದು ಚಲ್ಲಿ
ಇವನ ಪಾಲಿಗೆ ಬಂತು ಬರಿ ಹತ್ತು ಬಿಲ್ಲಿ.

### ೧೫೪೨. ಪ್ರಾಚೀನ ಕಾಲದಲ್ಲಿ

ಬಣ್ಣ ಬಣ್ಣದ ಚಿಟ್ಟೆ ಮೈಮೇಲೆ ಹಾರಿ
ಜಿಂಕೆ ಮೊಲ ಕುಳಿತುಕೊಂಡವು ತೊಡೆಯನೇರಿ
ತರತರದ ಮೊಗ್ಗುಗಳು ತೇಲಾಡಿ ಬಂದು
ಕೆನ್ನೆಗಳ ಚುಂಬಿಸುತ ಅರಳಿದವು ಅಂದು.

### ೧೫೪೩. ಬದನೆಕಾಯಿಯ ಬಜ್ಜಿ

ಬದನೆಕಾಯಿಯ ಬಜ್ಜಿ ಮಾಡಿದಳು ಅಜ್ಜಿ.
ಮರುದಿವಸ ಮರಿಮಕ್ಕಳಿಗೆ ಭರ್ತಿ ಕಜ್ಜಿ,
ಕಾರಣವು ರಾಮಸೆಟ್ಟಿಯ ತೆಂಗಿನೆಣ್ಣೆ
ತೆಂಗಿನೆಣ್ಣೆಯ ಹಾಗೆಯೇ ಅವನ ಬೆಣ್ಣೆ.

### ೧೫೪೪. ಕೋಟು

ಬದಲಾಯ್ತು ಪ್ರತಿಯೊಂದು ಸಲ ಇವನ ಕೋಟು
ಆದರೂ ಸಿಗಲಿಲ್ಲ ಶಾಸಕನ ಸೀಟು.
ಹರಿದುಹೋಯಿತು ಕೊನೆಗೆ ಪ್ರತಿಯೊಂದು ಗುಂಡಿ
ಗುಂಡಿ ಹರಿಯಲು ಪಾಪ ಜ್ವರ ಮತ್ತು ಥಂಡಿ.

### ೧೫೪೫. ಶಬ್ದ ಲಾಲಿತ್ಯ

ಬರವಣಿಗೆಗಿರಬೇಕು ಶಬ್ದ ಲಾಲಿತ್ಯ
ಇದಕಿಂತಲೂ ಮುಖ್ಯವಾದದ್ದು ಸತ್ಯ
ಹೀಗೆ ಮೂಡಿದ್ದು ಆಗುವುದಿಲ್ಲ ಬೆಂಡು
ಪುಟಿಪುಟಿದು ನಲಿದಾಡುವುದು ಭಾವ ಚಂಡು.

### ೧೫೪೬. ಜನಮನದ ಆಸೆ

ಬರವಣಿಗೆಯೊಳಗಿರಲಿ ಅತಿ ಸುಲಭ ಭಾಷೆ
ಇದಕೆನ್ನುವರು, ಮಗಳೆ, ಜನಮನದ ಆಸೆ,
ಬರವಣಿಗೆಯಾಗಿರಲಿ ನರನ ಸಂಸಾರ.
ಹಗಲ ಸನ್ಯಾಸಿಗೂ ಇದುವೆ ಆಹಾರ.

### ೧೫೪೭. ನಾವಿನ್ಯ

ಬರವಣಿಗೆಯೊಳಗಿರಲಿ ಭರ್ತಿ ನಾವಿನ್ಯ
ಕನ್ನಡಕೆ ಬರಬೇಕು ಹೊಸ ತರದ ಧಾನ್ಯ
ನವಧಾನ್ಯದಿಂದ ಮಾಡಿದರೆ ಅವಲಕ್ಕಿ
ರಸಿಕರೆಲ್ಲಾ ಸುಖಿಸುವರು ಮುಕ್ಕಿ ಮುಕ್ಕಿ.

### ೧೫೪೮. ಚುಟಕದ ವಿಧಾನ

ಬರಿ ನಾಕು ಚೆಂಬಿನಲಿ ಮಾಡಿದರೆ ಸ್ನಾನ
ಇದಕೆನ್ನುವರು ಚುಟಕ ಬರೆಯುವ ವಿಧಾನ
ಅತ್ಯಲ್ಪ ನೀರಿನಲಿ ಮಾಡಿದರು ಸ್ನಾನ
ರಾಡಿ ಹೊರ ಬೀಳುವುದು, ಬೇಡ, ಅನುಮಾನ.

### ೧೫೪೯. ನಾಕು ಪಂಕ್ತಿಯಲಿ

ಬರಿ ನಾಕು ಪಂಕ್ತಿಯೊಳಗಿರಲಿ ನಾನ್ನೂರು
ಅರ್ಧ ಪುಟದೊಳಗಿರಲಿ ಸಂಪೂರ್ಣ ಊರು.
ಕವಿಯ ಕೈಯೊಳಗಿರಲಿ ದಶಕೋಟಿ ತಾರೆ
ಇವುಗಳನು ಪೋಣಿಸಲು ಹತ್ತಿರಕೆ ಬಾರೆ.

### ೧೫೫೦. ಬರಿ ವಿಡಂಬನವಲ್ಲ

ಬರಿ ವಿಡಂಬನವಲ್ಲ, ಇನ್ನೊಮ್ಮೆ ಓದಿ.
ಅಲ್ಲಲ್ಲಿ ಕಾಣುವುದು ಅಕ್ಕಿ, ರವೆ, ಗೋದಿ.
ತುಸು ಹಣಕಿ ನೋಡಿದರೆ ಕಾಣುವುದು ಮಾವು.
ಮೂಸಿ ನೋಡಿದರೆ ಗಮಗಮಿಸುವುದು ಹೂವು.

### ೧೫೫೧. ದೇವರಿಗೆ

ಬರಿ ವಿಡಂಬನೆ ಬರೆದು ಹಾಳಾದೆ, ದೇವ
ಸಂಪೂರ್ಣ ಮರೆತು ಹೋಯಿತು ನಿನ್ನ ಭಾವ
ದೇವನೆಂದನು : ವಿಡಂಬನೆ ಬೇಕು ಸದ್ಯ
ಮುಂದುವರಿಯಲಿ ನಿನ್ನ ಚೂಪಾದ ಪದ್ಯ.

### ೧೫೫೨. ಬರೆದದ್ದು

ಬರೆದದ್ದು ಓರೆಯಾಯಿತು ಸ್ವಲ್ಪ ಜಾರಿ.
ಹದಿನೆಂಟು ಸರ್ತಿ ನಾ ಮಾಡಿದೆ ರಿಪೇರಿ.
ಆದರೂ ಸರಿಹೋಗಲಿಲ್ಲ ಆ ಸಾಲು.
ಕೊನೆಯವರೆಗೂ ಮುರಿದು ಹೋಗಿತ್ತು ಕಾಲು.

### ೧೫೫೩. ಉಳಿದದ್ದು ಮೂರು

ಬರೆದದ್ದು ನೂರಾರು, ಉಳಿದದ್ದು ಮೂರು,
ಕಾಲರಾಯನ ಕಂಕುಳಲಿ ಕರಗಿ ನೀರು.
ಉಳಿದದ್ದು ಮಿನುಗುತಿವೆ ನಕ್ಷತ್ರವಾಗಿ.
ಸಾಹಿತ್ಯದಲಿ ಇದರ ಆಕಾರ ರಾಗಿ.

### ೧೫೫೪. ಈ ಕೂಸು

ಬರೆದರೂ ಹರಿತ ಲೇಖನಿಯ ಮೊನೆಯಿಂದ
ಮೂಡಿ ಬರಬೇಕು ಹೂವಿನ ಹೃದಯದಿಂದ
ಹೀಗೆ ಹುಟ್ಟಿದ ಕೂಸು ಕಂಡರೂ ಬಿರುಸು
ಇದು ವಿಡಂಬನ ಜಗದ ಕರುಣಾಳು ಅರಸು.

### ೧೫೫೫. ನನ್ನ ಶೀಘ್ರಲಿಪಿ

ಬರೆಬರೆದು ಬರೆಬರೆದು ಬರಿ ನಾಕು ಪಂಕ್ತಿ
ಶೀಘ್ರದಲಿ ಹೇಳುವೆನು ತರತರದ ಸಂಗ್ತಿ
ಒಂದೊಂದು ಸಂಗ್ತಿಯಲಿ ಒಂದೊಂದು ಚೋದ್ಯ
ಇದಕೆನ್ನುವರು ಕೆಲರು ನೂತನ ಕುಚೋದ್ಯ.

### ೧೫೫೬. ಲೇಖನಿಯ ಕಥೆ

ಬರೆಬರೆದು ಲೇಖನಿಯ ಮೇಜಿನೊಳಗಿಟ್ಟೆ
ಆರು ತಿಂಗಳ ತನಕ ವಿಶ್ರಾಂತಿ ಕೊಟ್ಟೆ.
ಆಮೇಲೆ ನೋಡಿದರೆ ಬಸುರಾಗಿ ಪೆನ್ನು
ಜನುಮವೆತ್ತಿದ ಕವನ ಅನುಭವದ ಹೊನ್ನು.

### ೧೫೫೭. ಬರೆಯಬೇಕಣ್ಣ

ಬರೆಯಬೇಕಣ್ಣ ಅನುಭವದ ತುದಿಯೇರಿ.
ಇದರ ತುದಿ ಎನ್ನುವುದು ಪ್ರತಿಯೊಂದು ಕೇರಿ.
ಮತ್ತೆ ಅನುಭವ ನದಿಯ ಆಳದಲ್ಲಿ ಮುಳುಗಿ,
ಮೇಲೇರಿ ಗೌರಿಶಂಕರದಲ್ಲಿ ಬೆಳಗಿ.

### ೧೫೫೮. ಚುಟಕದ ಹುಟ್ಟು

ಬರೆಯಬೇಕೆನಲು ಲೇಖನಿಯಾಯ್ತು ಬಂಜೆ
ಈ ರೀತಿ ಕಳೆದುಹೋದವು ಮೂರು ಸಂಜೆ
ನಾಲ್ಕನೆಯ ರಾತ್ರೆ ಬಸುರಾಗಿ ಈ ಪೆನ್ನು
ಚುಟಕ ಹುಟ್ಟಿತು; ಅದಕೆ ಹೆಸರಿಟ್ಟೆ ಹೊನ್ನು.

### ೧೫೫೯. ಕೋಳಿಮೊಟ್ಟೆ

ಬರೆಯಲಿಕೆ ಹೊಸದು ಇಲ್ಲಾದಾಗ ಕೆಟ್ಟೆ
ಪುನಹ ಪುನಹಾ ಗೀಚಿದೆನು ಕೋಳಿಮೊಟ್ಟೆ
ಮೊಟ್ಟೆಯಾಗುವ ಬದಲು ಆದದ್ದು ಶೂನ್ಯ
ಸಸಿ ಹುಟ್ಟಿಯೂ ಕೊನೆಗೆ ಬರಲಿಲ್ಲ ಧಾನ್ಯ.

### ೧೫೬೦. ವಿಘ್ನಗಳು

ಬಲ ಬದಿಗೆ ಬೇತಾಳ, ಎಡಕೆ ಸೈತಾನ
ಇಬ್ಬರೂ ನನಗೆ ನೀಡಿದರು ಆಹ್ವಾನ
ಧಿಕ್ಕರಿಸಿ ಪ್ರತಿಭಟಿಸಿ ಸಾಗಿದೆನು ಮುಂದೆ
ನನ್ನ ಕಾರ್ಯವ ಮುಗಿಸಿ ಹಿಂದಿರುಗಿ ಬಂದೆ.

### ೧೫೬೧ ಬಾರಕೋಲು

ಬಲು ಸಿಟ್ಟಿನಿಂದ ಗೀಚಲು ನಾಕು ಸಾಲು
ನಿಮಿಷದಲಿ ಹುಟ್ಟಿಕೊಂಡಿತು ಬಾರಕೋಲು
ಬಾರಕೋಲಿಗೆ ಇಲ್ಲ ಯಾರದೂ ಭೀಡೆ
ಮಂತ್ರಿಗಳು ಅನ್ನುವರು : ಇದು ಒಂದೆ ಪೀಡೆ.

### ೧೫೬೨. ಬಲ್ಲವರು ಹೇಳುವರು

ಬಲ್ಲವರು ಹೇಳುವರು, ಎಲ್ಲರೂ ಕೇಳಿ :
ಸರಿಯಾಗಿ ತೂರಿಕೊಳಿ ಬಂದಾಗ ಗಾಳಿ.
ಈಗ್ಗೆ ಬೀಸುವ ಗಾಳಿ ಬಹಳ ಅನುಕೂಲ.
ರಾಜಕಾರಣಿಗಳಿಗೆ ಇದು ಪರ್ವಕಾಲ.

### ೧೫೬೩. ಮೀನುಗಾರನ ಹೇಳಿಕೆ

ಬಲೆಯ ಬೀಸುವೆ ನಾನು ಬರಿ ಮೀನಿಗಾಗಿ.
ಆತ ಬಲೆ ಬೀಸುವನು ಮೀನಾಕ್ಷಿಗಾಗಿ.
ತೇಲಾಡಿದರೆ ನಾನು ಆಗಸದ ಕೆಳಗೆ,
ಹೊರಳಾಡುವನು ಆತ ನೆರೆಮನೆಯ ಒಳಗೆ.

### ೧೫೬೪. ಬಸ್ಸುಗಳ ಢಿಕ್ಕಿ

ಬಸ್ಸು ಹೊಡೆದರೆ ಢಿಕ್ಕಿ ಗಳಿಸುವೆನು ರೊಕ್ಕ!
ಇದು ಹೇಗೆ ಎಂದು ಕೇಳಿದಳು ನಮ್ಮಕ್ಕ.
ಬಸ್ಸುಗಳು ಹೋರಾಡಿದರೆ ಬಂದು ಸೊಕ್ಕು
ವಿಮೆಯ ಹಣ ಪಡೆಯಲಿಕೆ ನನಗುಂಟು ಹಕ್ಕು.

### ೧೫೬೫. ಬಹಳ ದಿನದಿಂದ

ಬಹಳ ದಿನದಿಂದ ಬಂದಿರಿ, ಕುಳಿತುಕೊಳ್ಳಿ.
ಬಹಳ ದೂರಾಯ್ತೇನು ಈಗ್ಗೆ ಈ ಹಳ್ಳಿ?
ರಂಭೆ ಸಿಕ್ಕಿರಬೇಕು, ಈಗೇಕೆ ನಾನು?
ನಾನಂದೆ : ರಂಭೆಗಿಂತಲೂ ಚೆಲುವೆ ನೀನು.

### ೧೫೬೬. ದುಂಡಗೆ ಮೋರೆ

ಬಹಳ ದುಂಡಗೆ ಮೋರೆ, ನೋಡಲು ಬಟಾಣೆ
ಮತ್ತೆ ವಿದ್ಯಾಭ್ಯಾಸದಲಿ ಬಹಳ ಜಾಣೆ.
ಬಣ್ಣ ನಿಂಬೆಯ ಹಣ್ಣು, ಮೈಕಟ್ಟು ಗಿಡ್ಡ.
ಇಂಥ ಹುಡುಗಿಗೆ ಗಂಡ ಸಿಗಬೇಕೆ ದಡ್ಡ?

### ೧೫೬೭. ಮೋಜಿನ ಸುದ್ದಿ

ಬಹಳ ಮೋಜಿನದುಂಟು, ಕೇಳು ಈ ಸುದ್ದಿ
ಶಾಮನಿಗೆ ಮೀನಾಕ್ಷಿ ಕಲಿಸಿದಳು ಬುದ್ಧಿ.
ಕೈಲಿ ಚಪ್ಪಲಿ ಹಿಡಿದು ಬಾಜಾರದಲ್ಲಿ
ಪೂಜೆಗೈಯಲು ಒಂದುಗೂಡಿದವು ಗಲ್ಲಿ.

### ೧೫೬೮. ಪ್ರಧಾನಿಯ ಅಭಿಮಾನಿ ಹೇಳಿದ್ದು

ಬಹಳ ಯೋಗ್ಯಳು ಭರತಖಂಡದ ಪ್ರಧಾನಿ.
ಆದರೂ ದೇಶಕ್ಕೆ ವಿಪರೀತ ಹಾನಿ.
ಇದಕೆ ಕಾರಣ ಉಳಿದ ಸಚಿವರ ಪ್ರತಾಪ.
ನೀಡಬಾರದು ಪ್ರಧಾನಿಗೆ ನೀವು ಶಾಪ.

### ೧೫೬೯. ನಮ್ಮ ಪುಟ್ಟು

ಬಹಳೇ ಚಲಾಕಿ ಎಂಬರು ನಮ್ಮ ಪುಟ್ಟು
ಯಾರಿಗೂ ಪತ್ತೆಯಾಗದು ಇವನ ಗುಟ್ಟು
ಮುಖ್ಯಮಂತ್ರಿಯ ತನಕವೂ ಇವನ ದೋಸ್ತಿ
ತಿಳಿದು ಕೊಳಿ, ಹೇಳಬಾರದು ನಾನು ಜಾಸ್ತಿ.

### ೧೫೭೦. ಆಹ್ವಾನ

ಬ್ರಹ್ಮಾಂಡಗಿಂತಲೂ ನರನ ತಲೆ ದೊಡ್ಡ
ಇದರ್ಥ ತಿಳಿಯದಿದ್ದರೆ ನೀನು ಹೆಡ್ಡ
ಹೀಗೆಂದು ದೇವರಿಗೆ ಆಹ್ವಾನ ಕೊಡಲು
ಅಡಗಿಕೊಂಡಿತು ನನ್ನ ತಲೆಯೊಳಗೆ ಕಡಲು.

### ೧೫೭೧. ಬ್ರಹ್ಮಾಂಡ

ಬ್ರಹ್ಮಾಂಡವೆನ್ನುವುದು ಕೋಳಿಗಳ ತತ್ತಿ.
ನೋಡಿದರೆ ಕಾಣುವುದು ಶಿಖರವನು ಹತ್ತಿ.
ಶಿಖರವನು ಹತ್ತಲಿಕೆ ಕೈಲಾಸಕೇರಿ
ತುಸು ಕೆಳಗೆ ಜಾರಬೇಕೆಂದನು, ಮುರಾರಿ.

### ೧೫೭೨. ಬಂಗಾರ

ಬಂಗಾರಕಾಗಿ ಬಾಯ್ಬಿಡುವ ಅಭಿಮಾನಿ,
ಬಂಗಾರದಿಂದ ಈ ಧರೆಯೊಳಗೆ ಖೂನಿ.
ಬಂಗಾರವೆನ್ನುವುದು ತರತರದ ಕೇಡು
ಸುಳ್ಳು ಹೇಳುವುದಿಲ್ಲ, ಸರಿಯಾಗಿ ನೋಡು.

### ೧೫೭೩. ಬಂಗಾರದೊಳಗಿಲ್ಲ

ಬಂಗಾರದೊಳಗಿಲ್ಲ ಯಾವುದೂ ಕುಂದು.
ಜೀವಂತವಾಗುವುದು ಸರಿಯಾಗಿ ಬೆಂದು.
ಆಕೆ ಎಂದಳು : ಹೌದು, ಇದಕಾಗಿ ನಾನು
ಚಿನ್ನ ಬೇಕೆಂದು ಹೇಳುವುದಿಲ್ಲವೇನು ?

### ೧೫೭೪. ನನ್ನ ಬಂಗಾರ

ಬಂಗಾರವೆನ್ನುವುದು ಕನ್ನಡದ ಭಾಷೆ
ನುಡಿಯಲ್ಲಿ ಒಡಮೂಡುವುದು ನನ್ನ ಆಸೆ
ನನ್ನ ಮಡದಿಗೆ ಕೂಡ ಕನ್ನಡವೆ ಚೆನ್ನ
ಕನ್ನಡದ ನುಡಿ ನನ್ನ ಜೀವಿತದ ಅನ್ನ.

### ೧೫೭೫. ಬಂಗಾರ

ಬಂಗಾರವೆನ್ನುವು ಸಿಂಗಾರ ತಾನೆ ?
ಬಂಗಾರದಿಂದ, ಸಖಿ, ತರತರದ ಬೇನೆ
ಬಂಗಾರಕಾಗಿ ನಡೆಯುವುದುಂಟು ಖೂನಿ
ಮರೆಯಬಾರದು ಇದನು ಚಿನ್ನದಭಿಮಾನಿ.

### ೧೫೭೬. ಮಾನವನ ಬೇನೆ

ಬಂಗಾರ ಬಂಗಾರವೆನ್ನುವರು ತಾನೆ?
ಬಂಗಾರದೊಳಗುಂಟು ಮಾನವನ ಬೇನೆ.
ಬಂಗಾರ ಬೇಕೆಂದು ಮಾಡಿದರು ಖೂನಿ.
ಬಂಗಾರದಿಂದ, ಸಖಿ, ತರತರದ ಹಾನಿ.

### ೧೫೭೭. ಬಂಗಾರ

ಬಂಗಾರ ಬಂಗಾರವೆನ್ನುವುರು, ನಾಗಿ,
ಕೋಲಾರ ಗಣಿಯೊಳಗೆ ಬೆಳೆಯುವುದೆ ರಾಗಿ?
ಮಳೆಹನಿಯ ಬದಲಾಗಿ ಹನಿಸಿದರೆ ಚಿನ್ನ
ಬಂಗಾರ ಬೇಡೆಂದು ಕೈಮುಗಿವರಣ್ಣ.

### ೧೫೭೮. ಸಂಕಟದ ಬೇರು,

ಬಂಗಾರವೆನ್ನುವುದು ಸಂಕಟದ ಬೇರು,
ಬಂಗಾರಕಾಗಿ ನಡೆದವು ಖೂನಿ ನೂರು
ಬಂಗಾರಕಾಗಿಯೇ ತರತರದ ವ್ಯಾಜ್ಯ
ಬಂಗಾರ ಸಿಗಲೆಂದು ಕಟ್ಟಿದರು ರಾಜ್ಯ.

### ೧೫೭೯. ಬಂಗಾರ

ಬಂಗಾರವೆನ್ನುವುದು ಸಿಂಗಾರ ಅಹುದು
ಮೇಲಾಗಿ ಯಾವಾಗಲೂ ನಂಬಬಹುದು
ಉರುಳಿದರು ಸರಕಾರಗಳ ನೋಟು–ನಾಣ್ಯ
ಬಂಗಾರ ಮಾತ್ರ ಯಾವಾಗಲೂ ಗಣ್ಯ.

### ೧೫೮೦. ಕಾಂಗ್ರಸ್ಸಿನ ಧ್ಯೇಯ ಸಾಧನೆ

ಬಂಡವಾಳಶಾಹಿಯನು ಸಂಪೂರ್ಣ ನಾಶ
ಗೊಳಿಸಬೇಕೆನ್ನುವುದೆ ನಮ್ಮ ಉದ್ದೇಶ.
ಇದನು ಸಾಧಿಸಲಿಕ್ಕೆ ಶ್ರೀಮಂತರಿಂದ
ಪಾರ್ಟಿ ಫಂಡಿಗೆ ಹಣವ ಪಡೆಯಬೇಕೆಂದ.

## ೧೫೮೧. ಒಡೆಯನ ತಕರಾರು

ಬಂತಲ್ಲ ಈ ಹಾಳು ಗೇಣಿ ಕಾನೂನು
ಜೇನ್ನೊಣಕೆ ಮಾತ್ರ ಸಿಗಬೇಕಂತೆ ಜೇನು!
ಜೇನು ಸಾಕಿದ ನಮ್ಮ ಗತಿಯೇನು, ಸ್ವಾಮಿ?
ಎಲ್ಲಾದರೂ ಉಂಟೆ ಇಂಥಾ ಹರಾಮಿ?

## ೧೫೮೨. ಹೊಸ ಕವಿಗೆ

ಬಂದಿಹುದು, ನಿಂತಿಹುದು, ಕುಳಿತಿಹುದು ಎಂದ.
ಈ ಇಹುದು, ಶೈಲಿ ಎಲ್ಲಿಯವರೆಗೆ ಕಂದ?
ಕನ್ನಡದ ಬಿಸಿ ಅನ್ನ ಮುಂದೆ ಇರುವಾಗ
ತಂಗಳವ ತಿಂದು ಬೆಳೆಸುವುದೇಕೆ ರೋಗ?

## ೧೫೮೩. ಮಹಾತ್ಮಾ ಗಾಂಧಿ

ಬಂಧನದೊಳಿದ್ದರೂ ಉಗಿ ಮಹಾಶಕ್ತಿ
ಸ್ವೇಚ್ಛೆಯಿಂದಿದ್ದಾಗ ಮುಗಿಲೇರಿ ವೃಷ್ಟಿ.
ಯಾವ ಸ್ಥಿತಿಯಲ್ಲಿಯೂ ಲೋಕೋಪಕಾರ
ರಾಷ್ಟ್ರಪಿತನಾಗಿದ್ದ ಉಗಿಯ ಅವತಾರ.

## ೧೫೮೪. ಬಾಜಾರದಲಿ

ಬಾಜಾರದಲಿ ಕುಳಿತುಕೊಂಡವರು ಯಾರು?
ಹೇಳಿದರೆ ನಿಮಗೆ ಕೇಳಲಿಕೆ ಬೇಜಾರು.
ಮುಂದೆ ಕುಳಿತಿದ್ದಾನೆ ಸಗಟು ವ್ಯಾಪಾರಿ
ಇವನ ಬೆನ್ನಿಗೆ ಉಂಟು ದೊಡ್ಡ ಅಧಿಕಾರಿ.

## ೧೫೮೫. ಸ್ವರ್ಗದಿಂದ ಬಾಪು ನುಡಿದದ್ದು

ಬಾಪು ನುಡಿದರು : ನಾನು ಇಲ್ಲಿ ಬಂದಾಗ
ಸಂಪೂರ್ಣ ನಿಂತುಹೋಯಿತು ಅವರ ತ್ಯಾಗ
ಹೇ ದೇವ, ಅದು ಎಂಥ ತ್ಯಾಗವಾಗಿತ್ತು
ಎನ್ನುವುದು ನನಗೀಗ್ಗೆ ಚೆನ್ನಾಗಿ ಗೊತ್ತು.

## ೧೫೮೬. ಬಾಪೂಜಿ ಉತ್ತರ

ಬಾಪೂಜಿ, ಒಯ್ದುಬಿಟ್ಟರು ನಿನ್ನ ಬೂದಿ
ಗೊತ್ತುಂಟೆ ಈ ಜನರು ಹಿಡಿದಂಥ ಹಾದಿ ?
ಬಾಪೂಜಿ ಹೇಳಿದರು : ನನಗೆಲ್ಲ ಗೊತ್ತು.
ಮತ್ತೆ ಹುಟ್ಟಿದ್ದೇನೆ ನೂರು ಸಲ ಸತ್ತು.

## ೧೫೮೭. ಸ್ವಾತಂತ್ರ್ಯ ಪ್ರಾಪ್ತಿ

ಬಾಪೂಜಿ ತಂದುಕೊಟ್ಟರು ನಮಗೆ ಸೇಬು.
ತುಂಬಿಹೋಯಿತು ರಾಜಕಾರಣಿಯ ಜೇಬು
ನೂರು ಮಡಿಯಾಯ್ತು ಬಿರ್ಲಾಜಿಗಳ ಆಸ್ತಿ
ಇದಕೆಂಬೆ ಭಾರತದ ಸ್ವಾತಂತ್ರ್ಯ ಪ್ರಾಪ್ತಿ

## ೧೫೮೮. ನಮ್ಮ ನಿದ್ರೆ

ಬಾಪೂಜಿ ನಮ್ಮನ್ನೆಚ್ಚರಿಸಿರು; ಆದ್ರೆ
ಇಂದಿಗೂ ಮಾಯವಾಗಿಲ್ಲ ಆ ನಿದ್ರೆ.
ಸ್ವಲ್ಪ ಕಣ್ದೆರೆದು ಮಲಗಿದೆವು ಮುಸುಕೆಳೆದು,
ಮುಸುಕಳೆದುಕೊಂಡ ಚದ್ದರು ಮಾತ್ರ ಬಿಳಿದು.

## ೧೫೮೯. ಬಾಪೂಜಿಯ ಕೋಲು

ಬಾಪೂಜಿ, ನಿನ್ನ ಕೈಯೊಳಗಿದ್ದ ಕೋಲು
ಕೋಲ್ಮಿಂಚಿಗೂ ತರಿಸಬಹುದಲ್ವೆ ಸೋಲು ?
ಸಾಮ್ರಾಜ್ಯಶಾಹಿಗೂ ಕಲಿಸಿತ್ತು ಬುದ್ಧಿ
ಇದಕೆ ಕಾರಣ ನಿನ್ನ ಆಂತರಿಕ ಶುದ್ಧಿ.

## ೧೫೯೦. ಬಾಪೂಜಿಯ ಶಾಲು

ಬಾಪೂಜಿ, ನಿನ್ನ ಹೆಗಲಿನ ಶಾಲು ಮಿಗಿಲು
ಅದರೊಳಗೆ ಅವ್ಯಕ್ತವಾಗಿತ್ತು ಹಗಲು,
ಅದಕಿಲ್ಲದಿದ್ದರೂ ಜರತಾರಿ ಅಂಚು
ಒಳಗೆ ಸಂಚರಿಸಿತ್ತು ಆಗಸದ ಮಿಂಚು.

## ೧೫೯೧. ಗಾಂಧೀಜಿಯ ನಂತರ

ಬಾಪೂಜಿ, ನೀ ನಸುಕಿನಲಿ ನಡೆದುಬಿಟ್ಟೆ
ಈ ರಾಜ್ಯವನು ಇವರ ಕೈಯೊಳಗೆ ಕೊಟ್ಟೆ
ಈ ಲಫಂಗರು ಮಾರಿ ನಿನ್ನ ಲಂಗೋಟಿ
ಕಿಸೆಯೊಳಗೆ ಹಾಕಿದರು ಹಣ ಕೋಟಿ ಕೋಟಿ.

## ೧೫೯೨. ಬಾಪೂಜಿಗೆ

ಬಾಪೂಜಿ, ನೀ ಹಾಕುತಿರಲಿಲ್ಲ ಟೋಪಿ
ಎಂದಿಗೂ ಕುಡಿದಿಲ್ಲ ಚಾ ಮತ್ತೆ ಕಾಫಿ
ಪ್ರಗತಿಯಾಗಿದೆ ಈಗ್ಗೆ, ಮೊದಲಿನಂತಿಲ್ಲಾ
ಬಹಳ ಮಟ್ಟಿಗೆ ತುಟ್ಟಿಯಾದರೂ ಬೆಲ್ಲಾ,

## ೧೫೯೩. ಬಾಪೂಜಿ ಹೇಳಿದ್ದು

ಬಾಪೂಜಿ ಬಂದು ಹೇಳಿದರು : ದೇಸಾಯಿ,
ಹೀಗೆಯೇ ಚೂಪಾಗಿ ಇರಬೇಕು ಬಾಯಿ.
ಅಗಲ ಬಾಯಿಯ ದೇಶಭಕ್ತರನು ನೀನು
ಎಂದಿಗೂ ನಂಬಬಾರದು, ತಿಳಿಯಿತೇನು ?

## ೧೫೯೪. ಬಾಪೂಜಿಯ ಶಕ್ತಿ

ಬಾಪೂಜಿ, ಬಿದ್ದು ಹೋದವು ನಿನ್ನ ಹಲ್ಲು
ಆದರೂ ತ್ರಿಭುವನಕೆ ಕೇಳಿಸಿತು ಸೊಲ್ಲು.
ನಿನ್ನ ಮೈ ಕೃಶವಾದರೂ ಬಹಳ ಗಟ್ಟಿ
ನಿನಗಂಜಿ ಓಡಿದನು ಬಿಳಿ ಮೊಗದ ಸೆಟ್ಟಿ.

## ೧೫೯೫. ಬಾಪೂಜಿಯ ಶತಾಬ್ಧಿ

ಬಾಪೂಜಿ ಹುಟ್ಟಿ ಇಂದಿಗೆ ವರುಷ ನೂರು
ಬೆಳಗಲಿದೆ ಭಾರತದ ಪ್ರತಿಯೊಂದು ಊರು.
ಬೆಳಕು ಎಂಬುದು ವಿದ್ಯೆ; ಅಲ್ಲ ವಿದ್ಯುತ್ತು
ಮತ್ತೆ ಪ್ರತಿಯೊಬ್ಬನಿಗೆ ಬಾಯ್ತುಂಬ ತುತ್ತು.

## ೧೫೯೬. ಬಾಪೂಜಿ ಹೇಳಿದ್ದು

ಬಾಪೂಜಿ ಹೇಳಿದ್ದು ಮರೆಯುವಂತಿಲ್ಲ.
ಇಬ್ಬರೂ ಒಂದೆಂಬೆ ಹರಿ ಮತ್ತೆ ಅಲ್ಲಾ,
ಸಾಧು, ಅಂದರೆ ಮಗನೆ, ಅಲ್ಲಾ–ಫಕೀರ
ಬಾಪೂಜಿಗಿರಲಿಲ್ಲ ಯಾವ ಜನಿವಾರ.

## ೧೫೯೭. ಸ್ವರ್ಗಲೋಕದಲ್ಲಿ ಕೇಳಿದ್ದು

ಬಾಪೂಜಿ ಹೇಳಿದರು : ಏನಿದು ಅನರ್ಥ ?
ಭೂಲೋಕದಲ್ಲಿ ನಾನು ಹುಟ್ಟಿದ್ದು ವ್ಯರ್ಥ.
ಜೊತೆಗಿದ್ದ ಬುದ್ಧ ನುಡಿದನು ಸ್ವಲ್ಪ ನಕ್ಕು ;
ನೀ ಕೂಡ ನನ್ನ ಜೊತೆಯಲಿ ಮಣ್ಣು ಮುಕ್ಕು.

## ೧೫೯೮. ಬಾಪೂಜಿ ಹೇಳಿದರು

ಬಾಪೂಜಿ ಹೇಳಿದರು : ಮಂತ್ರಿಗಳ ಸಂಖ್ಯೆ
ವಿಪರೀತವಾಗಿ ಬಿಟ್ಟಿದೆ, ಇಲ್ಲ ಶಂಕೆ.
ಸಂಖ್ಯೆ ಹೆಚ್ಚಾದಷ್ಟು ರಾಜ್ಯದಾಡಳಿತ
ಹದಿಮೂರು ದಿನದೊಳಗೆ ಹೊಡೆಯುವುದು ಗೋತಾ.

## ೧೫೯೯. ಬಾಪೂಜಿ ಹೇಳಿದರು

ಬಾಪೂಜಿ ಹೇಳಿದರು : ಮೊದಲಿತ್ತು ತ್ಯಾಗ.
ಈಗ್ಗೆ ನೋಡಿದರೆ ನುಂಗುವ ಮಹಾ ರೋಗ.
ಬರಬೇಕೆ ಇಂಥ ದುರ್ದಸೆ, ರಾಮ ರಾಮಾ !
ಭಾರತಾಂಬೆಗೆ ಎಳೆದು ಬಿಡಬೇಕೆ ನಾಮಾ ?

## ೧೬೦೦. ನುಂಗಲಿಕೆ

ಬಾಯ್ತುಂಬಿ ನುಂಗಲಿಕೆ ತರತರದ ಯುಕ್ತಿ
ಒಮ್ಮೊಮ್ಮೆ ಇದಕೆನ್ನುವರು ದೇಶಭಕ್ತಿ.
ದೇಶಭಕ್ತಿಯ ಚೀಲದಲಿ ತುಂಬಿದವರು
ಯಾರೆನ್ನುವುದು ನಿನಗೆ ಗೊತ್ತುಂಟೆ, ನೆಹರು ?

## ೧೬೦೧. ಬಾಲ್ಯ ಮತ್ತು ಪ್ರಾಯ

ಬಾಲಕನ ತಲೆಯೊಳಗೆ ಏನುಂಟು, ಕಂದ ?
ಮುಂಜಾವ ಹೂವಿನೊಳಗಿರುವ ಮಕರಂದ.
ದೊಡ್ಡವರ ತಲೆಯೊಳಗೆ ಏನುಂಟು ಹೇಳು ?
ತುಂಬಿಕೊಂಡಿದೆಯಂತೆ ತರತರದ ಚೇಳು.

## ೧೬೦೨. ಮರಳ ಮನೆ

ಬಾಲಕರು ಮರಳ ಮನೆ ಕಟ್ಟಿದರೆ ಚಂದ
ದೊಡ್ಡವರು ಕಟ್ಟಿದರೆ ಶ್ರಮ ವ್ಯರ್ಥವೆಂದ.
ಪಂಚವಾರ್ಷಿಕದ ಮಂದಿರ ಕಟ್ಟುವಾಗ
ಮಕ್ಕಳಾದರೆ ನಾವು ಯೋಜನೆಗೆ ರೋಗ.

## ೧೬೦೩. ಜೀವನ

ಬಾಲ್ಯವೆನ್ನುವುದು, ಸಖಿ ತರತರದ ಆಟ
ಆಮೇಲೆ ಶುರುವಾಯ್ತು ಒಂದೊಂದು ಕಾಟ
ಈ ಕಾಟ ಅತಿಯಾಗುವುದು ಮುಪ್ಪಿನಲ್ಲಿ
ನರನ ಜೀವನವೆನ್ನುವುದು ಮೂರು ಬಿಲ್ಲಿ.

## ೧೬೦೪. ಮನೆ

ಬಾಲ್ಯವೆಂಬುದು, ಮಗನೆ, ಮನೆಯ ತಳಪಾಯ,
ಸುತ್ತಲೂ ಗೋಡೆ ಕಟ್ಟಿದ ಬಳಿಕ ಪ್ರಾಯ.
ಕೋಣೆಗಳ ಕಟ್ಟಿ ಮಲಗಿದ ಮೇಲೆ ಮುಪ್ಪು.
ಬಾಗಿಲನು ಮುಚ್ಚಿದ್ದು ಇನ್ನೊಂದು ತಪ್ಪು.

## ೧೬೦೫. ಜೀವನ ಚಕ್ರ

ಬಾಲ್ಯವೇ ಮುಂಜಾವು, ಪ್ರಾಯ ನಡು ಹಗಲು.
ಮುಚ್ಚಂಜೆಯೇ ಮುಪ್ಪು ಮೋಡ ತುಂಬಿರಲು
ಅಕ್ಷುಬ್ಧ ತಾರೆಗಳ ಶಾಂತಿಯೇ ಮರಣ,
ಮರಳಿ ಜನಿಸಲು ಮತ್ತೆ ಮುಂಜಾವ ಕಿರಣ.

## ೧೬೦೬. ಆಂದೋಲನ

ಬಾವುಟದ ಮೆರವಣಿಗೆ, ದೊಡ್ಡ ಜಯಘೋಷ
ನಿದ್ರೆಯಿಂದೆಚ್ಚರಾಗಿದೆ ನಮ್ಮ ದೇಶ.
ದೇಶಭಕ್ತಿಯ ಹುರುಪು ಸೀಮೆಯನು ದಾಟಿ,
ಮುಂದೆ ಸಾಗಿದ ಬಳಿಕ ಅಂಗಡಿಯ ಲೂಟಿ.

## ೧೬೦೭. ಬಾಸಿಂಗ ಕಟ್ಟಲಿಕೆ

ಬಾಸಿಂಗ ಕಟ್ಟಲಿಕೆ ಬೇಕಷ್ಟು ಜನರು.
ಸಂಸಾರ ನಡೆಸಲಿಕೆ ಗಂಡನಿಗೆ ಬೆವರು.
ಪ್ರತಿಯೊಂದು ವರುಷಕ್ಕೆ ಹುಟ್ಟಿದರೆ ಕೂಸು.
ಸಂಸಾರವಾಗುವುದು ಮತ್ತಷ್ಟು ಲೇಸು.

## ೧೬೦೮. ಇಂದಿನ ಜೀವನ

ಬಾಸಿಂಗ ಕಟ್ಟುವಾಗಲೆ ಬಂತು ಮುಪ್ಪು
ಮಕ್ಕಳಾಗುವ ಮೊದಲೆ ಒಳಗಿಲ್ಲ ಉಪ್ಪು,
ಹೂವು ಅರಳುವ ಮುನ್ನ ಬಾಡಿದವು ಮೊಗ್ಗೆ.
ಸರಕಾರ ಏನು ಮಾಡಿತು ಇದರ ಬಗ್ಗೆ?

## ೧೬೦೯. ಬಾಳು

ಬಾಳು ಹೂವಾಗಿ ಗಮಗಮಸಿದರೆ, ಕಂದ,
ತೋಟದೊಳಗಿರುವ ಜೇನ್ನೊಣಕೆ ಮಕರಂದ.
ಬಾಳು ಕಾಳಾಗಿ ಫಲಿಸಿದರೆ ಸಣ್ಣಕ್ಕಿ
ಮಿನುಮಿನುಗಿ ಕೊನೆಗೆ ಆಕಾಶದಲಿ ಚಿಕ್ಕಿ.

## ೧೬೧೦. ಸ್ವಾದ

ಬಾಳೆಹಣ್ಣಿಗೆ ಸ್ವಾದ ಬಂತು ಎಲ್ಲಿಂದ?
ಪ್ರತಿಯೊಂದು ಸ್ವಾದವೂ ಆ ಸೂರ್ಯನಿಂದ.
ನಿನ್ನ ಮುತ್ತಿನ ಸ್ವಾದವೂ ಇದೇ ರೀತಿ
ಸೂರ್ಯನಿಂದಲೆ ಬಂತು ಜಗದೊಳಗೆ ಪ್ರೀತಿ.

## ೧೬೧೧. ನನ್ನ ನಿಲುಮೆ

ಬ್ರಾಹ್ಮಣನ ಮಗ ನಾನು ಇಲ್ಲ ಜನಿವಾರ
ನಾಗರಿಕ ನಾನು; ನನಗಿಲ್ಲ ಸರಕಾರ
ಯಾರ ದರಕಾರವಿಲ್ಲದ ವ್ಯಕ್ತಿ ನಾನು
ಭಗವಂತನಿಗೆ ಮಾತ್ರ ಮಾಡುವೆನು ಫೋನು.

## ೧೬೧೨. ತಾಯಿ ಸಂಕೋಲೆ

ಬಿಡಿಸಬೇಕೆಂದಾಗ ತಾಯ ಸಂಕೋಲೆ
ಎಲ್ಲರಿಗೂ ಮುಂದಾಯ್ತು ನಮ್ಮ ಅಂಕೋಲೆ
ನಾವು ಬೆಳೆಸಿದ ಮಾವು ಪರಿಪಕ್ವವಾಗೆ
ಎಲ್ಲರೂ ಕೈಹಾಕಿದರು ಬುಟ್ಟಿಯೊಳಗೆ.

## ೧೬೧೩. ಕವಿಯ ಜೀವನ

ಬಿಡಿಸಲಾಗದ ಒಗಟು ಜೀವನ ರಹಸ್ಯ.
ಇದಕೆ ದೃಷ್ಟಾಂತ ಕಬ್ಬಿಗನ ಆಯುಷ್ಯ.
ತಲೆ ಕೆಟ್ಟು ಹೋದಾಗ ಕವಿಗೆ ತಾಕತ್ತು.
ಬುದ್ಧಿ ಹೆಚ್ಚಾದಂತೆ ಹೋಗುವನು ಸತ್ತು.

## ೧೬೧೪. ಇದು ಪ್ರಜಾಸತ್ತೆ

ಬಿರುಗಾಳಿ ಕೋಲ್ಮಿಂಚು ಮೆರವಣಿಗೆ ಗುಲ್ಲು
ಕೊನೆಕೊನೆಗೆ ಮುಖ್ಯಮಂತ್ರಿಯ ಹಣೆಗೆ ಕಲ್ಲು
ಇದರರ್ಥವೇನೆಂದು ಕೇಳಿದಳು ಅತ್ತೆ
ಕಿರಿಯ ಸೊಸೆ ಹೇಳಿದಳು; ಇದು ಪ್ರಜಾಸತ್ತೆ.

## ೧೬೧೫. ಕಡಪಾ ರಾಘವೇಂದ್ರ ರಾಯರುಹೇಳಿದ್ದು

ಬಿರುಗಾಳಿಯಾಗಿ ತಿರುಗಾಡಿದೆನು, ಕಂದ.
ನವನವೋದಯ ಗಾಳಿ ಹತ್ತು ಕಡೆಯಿಂದ
ಈಗ್ಗೆ ಬರಿ ತಂಗಾಳಿ, ನಿಮಗೆಲ್ಲ ನಿದ್ದೆ,
ಮತ್ತೆ ಕೆಲವರ ಕಂಕುಳಲಿ ದೊಡ್ಡ ಹುದ್ದೆ.

### ೧೬೧೬. ಮಳೆರಾಯ

ಬಿಸಿಲನಲ್ಲೇ ಬಂದುಬಿಟ್ಟ ಮಳೆರಾಯ
ಇಂಥ ಅವಸರವೇಕೆ ? ಹೇಳು, ಮಾರಾಯ,
ಮೇಲೆ ಕಾಮನಬಿಲ್ಲು, ಬಣ್ಣಗಳ ಮಕರ.
ಕೆಳಕಡೆಗೆ ಹಸುರಾದ ಸಹ್ಯಾದ್ರಿ ಶಿಖರ.

### ೧೬೧೭. ಒಂದು ಅನುಭವ

ಬಿಳಿ ಟೋಪಿಯಿದ್ದರೂ ತಲೆಯಿಲ್ಲ ಅಂದೆ !
ಬೆಂಗಳೂರಿನ ಸೌಧದಲಿ ನೋಡಿ ಬಂದೆ !
ಒಮ್ಮೊಮ್ಮೆ ತಲೆಯಿದ್ದರೂ ಒಳಗೆ ಪೊಳ್ಳು !
ನಿಮ್ಮಾಣೆ ! ನಾನು ಹೇಳುವುದಿಲ್ಲ ಸುಳ್ಳು !

### ೧೬೧೮. ಪುಢಾರಿಯ ಕಣ್ಮರೆ

ಬಿಳಿ ಟೋಪಿ ಹಾಕಿದ ಪುಢಾರಿ ನಾಪತ್ತೆ
ಕೇರಿ ಕೇರಿಗಳಲ್ಲಿ ಹುಡುಕಿ ಬೇಸತ್ತೆ.
ಪಾಪ ! ಕಣ್ಮರೆಯಾಗಲಿಕೆ ಏನು ಬಂತು ?
ಹಣ ಕಬಳಿಸಿರಬಹುದೆ ಆ ಶುಭ್ರ ಜಂತು ?

### ೧೬೧೯. ಪುಢಾರಿಯ ಮೇಲ್ಮೆ

ಬಿಳಿ ಟೋಪಿ ಹಾಕಿ ಮೇಲೇರಿದ ಪುಢಾರಿ
ಎಂದಿಗೂ ಕೆಳಗೆ ಬೀಳುವುದಿಲ್ಲ ಜಾರಿ.
ಈ ಮಹಾಶಯ ಯಾವ ತ್ಯಾಗಕ್ಕು ಸಿದ್ಧ.
ಯಾವಾಗಲೂ ಇವನ ಕಿಸೆ ಬಹಳ ಉದ್ದ.

### ೧೬೨೦. ಬಿಂಬಿ

ಬಿಂಬಿಯನು ಹಾರಾಡುತಿರುವಾಗಲೇನೆ
ಚುಂಬಿಸಲು ದೂರಾಗುವುದು ನನ್ನ ಬೇನೆ.
ಹಿಡಿದು ಅಂಗಳದೊಳಗೆ ಹಾಕಿದರೆ ಕಟ್ಟಿ
ಹುತ್ತದಿಂದೇಳುವುದು ಹಾವು ಬುಸುಗುಟ್ಟಿ.

### ೧೬೨೧. ಚುಟಕ ಸಂಗ್ರಹ

ಬೀದಿ ಬೀದಿಯ ಹರಟೆ ಸಂಗ್ರಹಿಸಿಕೊಂಡೆ
ಬಣ್ಣ ಸಾರಿಸಿದೊಡನೆ ಅರಳಿದವುಗೊಂಡೆ.
ಈ ಗೊಂಡೆ ಹೂಗಳಿಗೆ ಬರಿ ನಾಕು ಪಕಳೆ.
ಮುಡಿದ ಹೆಂಗಸರೆಲ್ಲ ಹೊಡೆಯುವರು ಪೊಕಳೆ.

### ೧೬೨೨. ಬೀಳು ಬಿದ್ದರೆ

ಬೀಳು ಬಿದ್ದರೆ ಭೂಮಿ ದೇಶವೇ ಹಾಳು.
ತೋಟದಲಿ ಹೂವಿಲ್ಲ, ಹೊಲದೊಳಗೆ ಕಾಳು.
ಎಲೆ ರಮಣಿ, ನಿನ್ನ ಕೆಂದುಟಿ ಕೆನ್ನೆ ಎರಡೂ
ಬೀಳು ಬಿದ್ದರೆ ನಮ್ಮ ಸಂಸಾರ ಬರಡು.

### ೧೬೨೩. ಒಂದು ಸ್ವಪ್ನ

ಬುದ್ಧನನು ತಾವರೆಯ ಮೇಲೆ ಕುಳ್ಳಿರಿಸಿ
ಹೊರಟಿತ್ತು ಮೆರವಣಿಗೆ ಚಿಲಖತ್ತು ಧರಿಸಿ.
ಪೂಜಾರಿಗಳ ಹೆಗಲ ಮೇಲೆ ಬಂದೂಕು
ಭಿಕ್ಷುಗಳು ಬಳಿಯಲ್ಲಿಯೂ ಇತ್ತು ಚಾಕು.

### ೧೬೨೪. ನನ್ನ ಬುದ್ಧಿಹೀನತೆ

ಬುದ್ಧಿವಂತರು ಸೇರಿದರು ಗೆದ್ದ ಪಕ್ಷ.
ಲೋಕಸಭೆಯಲಿ ಕುಳಿತು ಗಳಿಸಿದರು ಮೋಕ್ಷ.
ಬುದ್ಧಿಯಿಲ್ಲದ ನಾನು ಬಿಸಿಲೊಳಗೆ ದುಡಿದು
ತಾವರೆಯನರಳಿಸಿದೆ ಬೆವರಹನಿ ಕುಡಿದು.

### ೧೬೨೫. ಜಾತಕ

ಬುಧ ಶುಕ್ರ ಶನಿ ಬೃಹಸ್ಪತಿ ಮಂಗಳಾದಿ
ನರನ ಜಾತಕದಲ್ಲಿ ಅವತರಿಸಲಾಗಿ,
ರಕ್ತ ಮಾಂಸದ ಮುದ್ದೆಯಾದ ಈ ಪಿಂಡ
ಆಗಬಾರದು ಏಕೆ ಅಖಿಲ ಬ್ರಹ್ಮಾಂಡ ?

### ೧೬೨೬. ತ್ರಿಭಾಷಾ ಸೂತ್ರ

ಬುರುಡೆಗಿಳಿಯಲು ಮೂರು ಭಾಷೆಗಳ ಸೂತ್ರ
ಗರುಡಪಕ್ಷಿಯ ಹಾಗೆ ನಮ್ಮ ಕುಲಗೋತ್ರ
ಕನ್ನಡದ ಹೊರತಾಗಿ ಕಲಿತು ಇನ್ನೆರಡು
ಜಾಣತನ ಹೆಚ್ಚಾಗಿ ತಲೆಯಾಯ್ತು ಬರಡು

### ೧೬೨೭. ಸಿಮೆಂಟಿನ ಮಾರಾಟ

ಬೂದಿಯೊಂದಿಗೆ ಬೆರೆಸಿ ಕೊಟ್ಟರೆ ಸಿಮೆಂಟು
ಅದೆನ್ನುವರು ವರ್ತಕರು 'ಸಪ್ಲಿಮೆಂಟು'
ಸಪ್ಲಿಮೆಂಟಿನ ಹೊರತು ಸಪ್ಲೈ ಅಸಾಧ್ಯ
ಮುಖ್ಯಮಂತ್ರಿಯೆ, ಹೇಗೆ ಉಂಟು ಈ ಚೋದ್ಯ!

### ೧೬೨೮. ಬೆಕ್ಕು

ಬೆಕ್ಕು ಅಂದರೆ ನನಗೆ ವಿಪರೀತ ಪ್ರೀತಿ
ಆದರ್ಶಪ್ರಾಯವಾದುದು ಅದರ ರೀತಿ
ವ್ಯಕ್ತಿ ಸ್ವಾತಂತ್ರ್ಯಕ್ಕೆ ಆದರ್ಶ ಪ್ರಾಣಿ.
ಮಾರ್ಜಾಲ ನಿಜವಾಗಿಯೂ ಮನೆಯ ರಾಣಿ.

### ೧೬೨೯. ಬೆಕ್ಕು ಕಂಡರೆ

ಬೆಕ್ಕು ಕಂಡರೆ ನನಗೆ ಪೂರ್ಣ ಅಭಿಮಾನ
ಎಂದಿಗೂ ಬಿಟ್ಟು ಹೋಗದು ತನ್ನ ಸ್ಥಾನ
ಮನೆಯೊಳಗೆ ನಿಂತು ಇಲಿ ಹಿಡಿಯುವುದು, ಮಗಳೆ,
ಇದಕೆಂದಿಗೂ ಬೇಡ ಯಾರ ಒಣ ರಗಳೆ.

### ೧೬೩೦. ಅಸತ್ಯ

ಬೆಟ್ಟದಡಿಯಲಿ ಕಂಡೆ ರಮಣೀಯ ಬಳ್ಳಿ
ಪ್ರತಿಯೊಂದು ಎಲೆಗಿತ್ತು ಬಂಗಾರ ಬೆಳ್ಳಿ,
ಮುಟ್ಟಿದೊಡನೆಯ, ಮಗನೆ, ಚುಚ್ಚಿದವು ಮುಳ್ಳು.
ಕಣ್ಣ ಮುಂದಿನ ಸತ್ಯ ಕೈಯೊಳಗೆ ಸುಳ್ಳು.

### ೧೬೩೧. ಜನರ ಔದಾರ್ಯ

ಬೆಟ್ಟದಡಿಯಲ್ಲಿ ಕೆಲವು ಹಣತೆಗಳ ಹಚ್ಚಿ
ಬೆಳಕು ಬೀರಲು ಹರಸಿದಳು ತಾಯಿ ಮೆಚ್ಚಿ.
ಜನಮಾತ್ರ ಮೆಚ್ಚಲಿಲ್ಲವೋ ನನ್ನ ಕಾರ್ಯ
ಕೆಡವಿದರು ನನ್ನ ! ಇದು ಅವರ ಔದಾರ್ಯ !

### ೧೬೩೨. ಮಂಗನ ನ್ಯಾಯಬುದ್ಧಿ

ಬೆಟ್ಟದಲಿ ವೃಕ್ಷಗಳ ನೆಡಲು ವನಮಾಲಿ
ಮಾನವನು ಕಟ್ಟಿದನು ಸುತ್ತಲೂ ಬೇಲಿ.
ಕಂಗೊಳಿಸಿ ಹಣ್ಣುಹಂಪಲದಿಂದ ತೋಟ
ಮಂಗಗಳು ಒಳನುಗ್ಗಿ ವಿಪರೀತ ಕಾಟ.

### ೧೬೩೩. ಬೆಲೆ ನಿಯಂತ್ರಣ

ಬೆಲೆ ನಿಯಂತ್ರಣ ಉಂಟು ಕಾಗದದ ಮೇಲೆ
ಕತ್ತಲಲಿ ನಡೆಯುತಿದೆ ವರ್ತಕರ ಲೀಲೆ.
ಹಗಲ ಹೊತ್ತಿಗೆ ನಡೆಯುತಿದೆ ಹಗಲ ವೇಷ.
ಧರೆಗಿಳಿದು ಬರಬೇಕು ನೋಡಲಿಕೆ ಈಶ.

### ೧೬೩೪. ಮರಿದುಂಬಿಗಳು

ಬೆಲೆಯುಳ್ಳ ಕೃತಿರಚನೆ ನನಗಿಲ್ಲ ಸಾಧ್ಯ.
ತುಟ್ಟಿಯಾಗಿದೆ ಬೆಳ್ಳಿ, ಬಂಗಾರ ಸದ್ಯ.
ನನ್ನ ಕೈಯೊಳಗುಂಟು ಒಂದಿಷ್ಟು ಮೇಣ.
ಮರಿದುಂಬಿಗಳ ಕಟ್ಟಿ ತುಂಬುವೆನು ಪ್ರಾಣ.

### ೧೬೩೫. ಬೆಲೆಯೇರಿಕೆ

ಬೆಲೆಯೇರಿಕೆಗೆ ಮೊದಲು ಹಾಕಿರಿ ಲಗಾಮು.
ಹಾಕದಿದ್ದರೆ ಹಚ್ಚಿಕೊಳ್ಳಿರಿ ಮುಲಾಮು.
ತುರಿ ನಿಲ್ಲಬಹುದು ಬರಿ ಒಂದೆರಡು ನಿಮಿಷ
ಆಮೇಲೆ ಮತ್ತೆ ವಿಪರೀತ ಆವೇಶ.

## ೧೬೩೬. ನಾಪತ್ತೆ

ಬೆಳಕು ಹರಿಯುವ ಮೊದಲೆ ಆದನು ಪರಾರಿ
ಅವಳ ಬೆನ್ನಿಗೆ ಓಡಿ ಹೋದನು, ಮುರಾರಿ.
ಈ ತನಕ ತಿರುಗಿ ಬಂದಿಲ್ಲ, ಮಾರಾಯ.
ಏನು ಹೇಳುವುದು! ಇಬ್ಬರಿಗು ಎಳೆಪ್ರಾಯ!

## ೧೬೩೭. ಮರಾಠಿಗರ ಘೋಷಣೆ

ಬೆಳಗಾವಿ ಹಳಗಾವಿ ಮಳಗಾವಿ ಎಲ್ಲಾ
ಕೊನೆಯವರೆಗೂ ನಾವು ಬಿಡುವ ಹಾಗಿಲ್ಲಾ.
ಇದು ಎಲ್ಲವೂ ಮರಾಠಿಗರ ಒಳಸೀಮೆ
ನಮ್ಮ ಬದಿಗಿದ್ದಾಳೆ ಆ ಸತ್ಯಭಾಮೆ.

## ೧೬೩೮. ಮರಾಠಿಗ ಹೇಳಿದ್ದು

ಬೆಳಗಾಂವಿ ಸಿಗಲಿಲ್ಲ ಗೋವೆಯೂ ಬಾದು.
ದಿಲ್ಲಿಯಲಿ ಯಾರೊ ಮಾಡಿರಬೇಕು ಜಾದು.
ಕಾರವಾರವೂ ಕೂಡ ಸಿಗಲಿಲ್ಲ ನಮಗೆ.
ಪರಮಾತ್ಮ ಬರಿಗೈಲಿ ಮರಳಿದೆವು ಮನೆಗೆ.

## ೧೬೩೯. ಪ್ರಜಾರಾಜ್ಯದ ಸಂಕಥಾ ವಿನೋದ

ಬೆಳದಿಂಗಳಲಿ ತಿಂದೆ ಬೇಕಷ್ಟು, ಬೆಣ್ಣೆ
ಮನೆಯೊಳಗೆ ಒಗ್ಗರಣೆಗೂ ಇಲ್ಲ ಎಣ್ಣೆ,
ಇಡ್ಲಿಗೂ ಸಿಗಲಿಲ್ಲ ರೇಷನ್ನಿನಕ್ಕಿ
ಕ್ಯೂನಲ್ಲಿ ಎಣಿಸಿದೆನು ದಶಕೋಟಿ ಚಿಕ್ಕಿ.

## ೧೬೪೦. ನನ್ನ ಕುನ್ನಿ

ಬೆಳ್ಳಿ ಬಂಗಾರಗಳು ಸಿಗಬಹುದು, ಚೆನ್ನಿ.
ಹೊನ್ನಿಗೂ ಮಿಗಿಲಾಗಿ ಇತ್ತು ಆ ಕುನ್ನಿ.
ಪೂರ್ಣ ಅವತರಿಸಿದ್ದ ಆ ಸ್ವಾಮಿಭಕ್ತಿ
ಭಗವಂತನಿಗೆ ಕೂಡ ಕೊಡಬಹುದು ಮುಕ್ತಿ.

### ೧೬೪೧. ಸರಕಾರಿ ಕಂತು

ಬೆಳೆ ಬಾರದಿದ್ದರೂ ಬಿಸಿಲೊಳಗೆ ನಿಂತು
ಪ್ರತಿವರುಷ ಕೊಡಬೇಕು ಸರಕಾರಿ ಕಂತು
ಇದುವೆ ಸುಗ್ಗಿಯ ಕಾಲ; ಕೋಲೆನ್ನಿ ಕೋಲೆ.
ನಿಮಿಷ ನಿಮಿಷಕೆ ನೋಡಿ ಆಗಸದ ಲೀಲೆ.

### ೧೬೪೨. ರೈತರ ಗೋಳು

ಬೆಳೆ ಭರ್ತಿ ಬಂದರೂ ದರ ಕಡಿಮೆಯಂತೆ
ಹೀಗಾಗಿ ರೈತರಿಗೆ ವಿಪರೀತ ಚಿಂತೆ.
ಮಳೆ ಕಡಿಮೆ ಬಂದಾಗಲೂ ಉಂಟು ಕಷ್ಟ
ಆ ಕಷ್ಟ, ಈ ಕಷ್ಟ, ತಪ್ಪಿಲ್ಲ ನಷ್ಟ.

### ೧೬೪೩. ಪಾಕಿಗಳ ಪಲಾಯನ

ಬೆಂಕಿ ಕಾರಲು ಭಾರತೀಯರ ತುಬಾಕಿ
ಪ್ರಾಣ ಕೈಯಲಿ ಹಿಡಿದು ಓಡಿದನು ಪಾಕಿ.
ನೂರಾರು ಟ್ಯಾಂಕುಗಳು ಪೂರ್ಣ ತಲೆ ಕೆಳಗೆ
ವೈರಿಗಳ ಸಿಡಿಮದ್ದು ನಮ್ಮ ಕೈಯೊಳಗೆ.

### ೧೬೪೪. ಅಠರಾ ಕಚೇರಿ

ಬೆಂಗಳೂರಿಗೆ ಉಂಟು ಅಠರಾ ಕಚೇರಿ.
ಮಂಗಳೂರಿಗೆ ಉಂಟು ಕಡಲ ಹೆದ್ದಾರಿ.
ನಮ್ಮೂರಿನೊಳಗೆ ಏನುಂಟು ಗೊತ್ತುಂಟೆ?
ಸ್ಥಾನಿಕ ಪುಢಾರಿಗಳು ಬಾರಿಸುವ ಗಂಟೆ.

### ೧೬೪೫. ಮರಳಿದನು ಮನೆಗೆ

ಬೆಂಗಳೂರಿಗೆ ನಡೆದು ಮರಳಿದನು ಮನೆಗೆ
ಮೇಲ್ಮನೆಯ ಜಾಗವೂ ಸಿಗಲಿಲ್ಲ ಕೊನೆಗೆ
ಮಡದಿ ಎಂದಳು : ನಿಮ್ಮ ಹಣೆಬರಹ ಚೊಕ್ಕ
ಬಿಳಿ ಟೋಪಿ ಧರಿಸಿದ್ದು ವೇಷಕ್ಕೆ ತಕ್ಕ.

## ೧೬೪೬. ಹೌಸಿಂಗ್–ಬೋರ್ಡು

ಬೆಂಗಳೂರಲಿ ಉಂಟು ಹೌಸಿಂಗ್–ಬೋರ್ಡು
ಬರೆದುಕೊಂಡರೆ ಸಾಕು ನೀವೊಂದು ಕಾರ್ಡು.
ಲಭಿಸುವುದು ನಿಮಗೆ ಉತ್ತಮ ವಾಸಸ್ಥಾನ
ಬೇಕಾದ ಸಮಯ ಬರಿ ಒಂದು ಶತಮಾನ!

## ೧೬೪೭. ಬೆಂಗಳೂರಿನ ಅಗರಬತ್ತಿ

ಬೆಂಗಳೂರಿನ ಅಗರಬತ್ತಿ ಪ್ರಖ್ಯಾತ.
ಈಗಂತು ಇದಕೆ ಮಾರಾಟ ವಿಪರೀತ.
ತೀವ್ರವಾಗಲು ರಾಜ್ಯದೊಳಗೆ ದುರ್ಗಂಧ
ಬೇಡಿಕೆಯ ಪತ್ರಗಳು ಹತ್ತು ಕಡೆಯಿಂದ.

## ೧೬೪೮. ಲೆಕ್ಕಾಚಾರ

ಬೆಂಗಳೂರಿನ ಪೇಟೆಯಲಿ ಸುಬ್ರಮಣ್ಯ
ಕ್ಷಣಕ್ಷಣಕೆ ಎಣಿಸೆಣಿಸಿ ನೋಡಿದನು ನಾಣ್ಯ.
ಕೊನೆಯ ಕಾಲಕೆ ಹೊರಗೆ ತೆಗೆದಾಗ ಪ್ರೇತ
ಹಣಹಣಕಿ ಹಣೆಯ ನೋಡಿದನು ಯಮದೂತ.

## ೧೬೪೯. ಪ್ರಜಾವಾಣಿ ಪತ್ರಿಕೆ

ಬೆಂಗಳೂರಿನ ಸಿಂಗರವೆ ಪ್ರಜಾವಾಣಿ
ನಮ್ಮ ಈ ರಾಜ್ಯಕ್ಕೆ ಸುದ್ದಿಗಳ ರಾಣಿ.
ರಾಣಿಯರ ಬೊಗಸೆಯಲಿ ಪದ್ಯಮಯ ಚುಟುಕು
ನೀರಡಿಕೆಯಾದ ಪ್ರಜೆಗಳಿಗೊಂದು ಗುಟುಕು.

## ೧೬೫೦. ಬಸ್ ಸರ್ವೀಸು

ಬೇಕಾದ ಕಡೆಗೆ ಒಯ್ಯುವುದು ಕಾಂಗ್ರೆಸ್ಸು
ರಾಜಕಾರಣದೊಳಗೆ ಇದು ಒಂದು ಬಸ್ಸು.
ಬೇಕೆನಿಸಿದರೆ ಲೋಕ ಸಭೆಯೊಳಗೆ ಸೀಟು
ಮೊದಲು ಹಾಸಲು ಕಟ್ಟಿ ಪಡೆಯಿರಿ ತಿಕೇಟು.

### ೧೬೫೧. ಬಾಪೂಜಿ ಹೇಳಿದ್ದು

ಬೇಕಿಲ್ಲ ನವಭಾರತಕೆ ಹರಿಯ ಹರಕೆ.
ಮೊದಲು ಬೇಕಾದದ್ದು ಗುಡಿಸಲಿಕೆ ಪೊರಕೆ.
ಈ ಪೊರಕೆಯಿಂದ ಕಸಗುಡಿಸಲಿಕೆ ದೇವ,
ಭೂಮಿಗಿಳಿದರೆ ಉಳಿಯುವುದು ನನ್ನ ಜೀವ.

### ೧೬೫೨. ಕಿಂದರಿ ಜೋಗಿ

ಬೇಕು ಕಿಂದರಿ ಜೋಗಿ ಆದಷ್ಟು ಬೇಗ
ಬಿಳಿ ಹೆಗ್ಗಣದ ಕಾಟ ತಡೆಯಲಿಕ್ಕಾಗ,
ಸಿಕ್ಕಿದೆಲ್ಲಾ ತಿಂದು ಹಾಕುವವು ಮುಕ್ಕಿ.
ನೋಟುಗಳ ಹೊರತಾಗಿ ನೆಲಗಡಲೆ, ಅಕ್ಕಿ.

### ೧೬೫೩ ರೇಶಿಮೆಯ ಸೀರೆ

ಬೇಕೇನು, ಸಖಿ, ನಿನಗೆ ರೇಶಿಮೆಯ ಸೀರೆ ?
ಈ ಪ್ರಶ್ನೆ ಕೇಳಿದಿರಿ ಹದಿನೆಂಟು ಸಾರೆ.
ಪ್ರಥಮ ದರ್ಜೆಯ ಸೀರೆ ಬರಲಿಲ್ಲ ಇನ್ನೂ,
ಬಂದಾಗ ನೀವು ತೋರಿಸಬೇಡಿ ಬೆನ್ನು.

### ೧೬೫೪. ತ್ರಿಭಾಷಾ ಸೂತ್ರ

ಬೇಕೆಮಗೆ ಹಿಂದಿ ಭಾಷೆಯ ರೇನುಕೋಟು
ಮತ್ತೆ ಕಾಲಿಗೆ ಬೇಕು ಇಂಗ್ರೇಜಿ ಬೂಟು.
ನಮ್ಮ ಬಡ ಕನ್ನಡದ ಗತಿಯೇನು, ತಂಗಿ ?
ಸುತ್ತಿಕೊಂಡರೆ ಸಾಕು ಮೂರು ಮೊಳ ಲುಂಗಿ.

### ೧೬೫೫. ವಿಜ್ಞಾನಿಯ ಘೋಷಣೆ

ಬೇಗನೆಯೆ ಕರಗಲಿದೆ ಚಂದಿರನ ಬೆಣ್ಣೆ.
ಧರೆಗಿಳಿಯಲಿದೆ ಧವಳ ಮೋಡಗಳ ಉಣ್ಣೆ.
ನನ್ನ ಕೈಯೊಳಗಿದ್ದ ಈ ಉದ್ದ ಕೋಲು
ತಾರೆಗಳನುದುರಿಸಲು, ದೇವರಿಗು ಸೋಲು.

## ೧೬೫೬. ಇಲ್ಲ ಪತ್ತೆ

ಭಗವಂತ ಓಡಿ ಹೋದನು, ಇಲ್ಲ ಪತ್ತೆ
ಹುಡುಕಾಡಿ ಹುಡಕಾಡಿ ಪೂರ್ಣ ಬೇಸತ್ತೆ.
ಈ ಲೋಕ ಬೇಡೆಂದು ಆದನು ಪರಾರಿ
ನರನ ವರ್ತನೆಗೆ ಬೇಸತ್ತನು ಮುರಾರಿ.

## ೧೬೫೭. ಭಗವಂತನ ಪತ್ರ

ಭಗವಂತ ನನಗೆ ಬರೆದನು ಒಂದು ಪತ್ರ
ಅದರೊಳಗೆ ಬರೆದಿದ್ದ : ಓ ನನ್ನ ಮಿತ್ರ,
ಸ್ವರ್ಗದಲ್ಲೂ ಲಫಂಗರ ಕಾಟ ಉಂಟು
ಏನೇನೂ ಮಾಡಿ ಕಟ್ಟಿದ್ದಾರೆ ಗಂಟು.

## ೧೬೫೮. ಭಗವಂತನ ಗೊಂಬೆ

ಭಗವಂತ, ನಿನ್ನ ಆಟದ ಗೊಂಬೆ ಮನುಜ
ನೀನು ಆಡಿಸಿದಂತೆ ಕುಣಿಯುವುದು ಸಹಜ
ಕಳ್ಳಪೇಟೆಯ ಜನನವೂ ನಿನ್ನ ಆಟ
ಬಕುತನಲ್ಲವೆ ನಾನು ? ಕೊಡು ನನಗೆ ಕೋಟಾ.

## ೧೬೫೯. ಕವಿ ಹೇಳಿದ್ದು

ಭಗವಂತನಿಗೆ ಕೂಡ ಕೊಟ್ಟು ಆಹ್ವಾನ
ಕುಸ್ತಿ ಹಿಡಿಯುವ ದೈತ್ಯನೇ ಪೈಲವಾನ.
ದೇವನಾದರೆ ಏನು ? ಮಾಡಿದರೆ ತಪ್ಪು
ಅವನಿಗೂ ತಿನಿಸೋಣ ಒಂದಿಷ್ಟು ಉಪ್ಪು.

## ೧೬೬೦. ಭಗವಂತನಿಗೆ ಆಹ್ವಾನ

ಭಗವಂತನಿಗೆ ನಾನು ಆಹ್ವಾನ ಕೊಟ್ಟೆ,
ನೆರೆದ ಪುರಸಭೆಯಲ್ಲಿಯೇ ಹೇಳಿಬಿಟ್ಟೆ
ಬಡ ಜನರ ಕಲ್ಯಾಣ ಆಗದಿದ್ದಲ್ಲಿ
ನೀ ರಾಜಿನಾಮೆ ಕೊಡು, ನೀನೇಕೆ ಇಲ್ಲಿ ?

## ೧೬೬೧. ಭಗವಂತನಿಗೆ

ಭಗವಂತನಿಗೆ ಬೇಕು ಅಖಿಲ ಬ್ರಹ್ಮಾಂಡ
ಮತ್ತೆ ನಭದೊಳಗೆ ಮಿನುಗುವ ಕೋಟಿ ಕೆಂಡ.
ಬಡವರಿಗೆ ಒಂದು ಗುಡಿಸಲು ಸಾಕು ಅಂದೆ
ಇದು ಕೂಡ ಸಿಗಲಿಲ್ಲ, ನಾ ನೋಡಿ ಬಂದೆ.

## ೧೬೬೨. ಭಗವಂತನೂ

ಭಗವಂತನೂ ಮಾಡಿದರೆ ಯಾವ ತಪ್ಪು
ಅವನ ಮೋರೆಗೆ ನಾನು ಹಚ್ಚುವೆನು ಕಪ್ಪು.
ನನಗಿಲ್ಲ ಯಾರದೂ ಭೀಡೆ ಮುರವತ್ತು.
ನಾನಿರುವೆ ಈ ರೀತಿ ಹೋದರೂ ಸತ್ತು.

## ೧೬೬೩. ಭಗವಂತನ ಕಾಣಿಕೆ

ಭಗವಂತನೇ ಚುಟಕ ಬರೆದು ಸಾಕಷ್ಟು
ನಮ್ಮ ಕರ್ನಾಟಕಕೆ ಮಾಡಿದನು ಪೋಸ್ಟು
ನಾ ಬರೆದೆ ಎನ್ನುವುದು ಬರಿ ಒಂದು ಭ್ರಾಂತಿ
ದೇವ ಔಷಧಿ ಕೊಡಲು ನನಗಾಯ್ತು ವಾಂತಿ.

## ೧೬೬೪. ಮುರಗೀ ಮಸಾಲಾ

ಭಟ್ಟರೂ ತಿನ್ನುವರು ಮುರಗೀ ಮಸಾಲಾ
ಇದಕೆನ್ನುವರು, ಮಗನೆ, ಆಧುನಿಕ ಕಾಲ.
ಉದಯವಾಗಿದೆ, ಈಗ್ಗೆ ಕೋಳಿಗಳ ಭಾಗ್ಯ
ಎಲ್ಲರೂ ಬಿಟ್ಟು ಬಿಡಬೇಕು ವೈರಾಗ್ಯ.

## ೧೬೬೫. ನಿಜವಾದ ಬುತ್ತಿ

ಭತ್ತ ಬಿತ್ತಲಿಕೆಂದು ಗರಿಕೆಯನು ಕೊಂದ
ನರನ ಸಲುವಾಗಿಯೇ ನರ ಹುಟ್ಟಿ ಬಂದ.
ಏನು ಹುಟ್ಟಿದ ಮರಳಿನಲಿ ಬೀಜ ಬಿತ್ತಿ
ಕೃಷಿ ಮಾಡಿದರೆ ಮಾತ್ರ ನಿಜವಾದ ಬುತ್ತಿ.

## ೧೬೬೬. ಸಚಿವರ ಭತ್ತೆ

ಭತ್ತೆ ಕಾಸಿಗೆ ಇವರು ಗೈದು ಸಂಚಾರ
ಕಿಸೆಯೊಳಗೆ ಹಾಕಿದರು ಜನರ ಉದ್ಧಾರ.
ಮತ್ತೆ ಹೇಳುವುದುಂಟು, ಕೇಳಿ ಕಿವಿಗೊಟ್ಟು
ಒಮ್ಮೊಮ್ಮೆ ಭತ್ತೆ, ಸಂಬಳದ ದುಪ್ಪಟ್ಟು.

## ೧೬೬೭. ಭತ್ಯ ಕಾಸಿಗೆ

ಭತ್ಯ ಕಾಸಿಗೆ ನೀನು ಮರುಳಾಗಬೇಡ
ಎಲೆ ಮನವೆ, ಸಾರ್ವಜನಿಕರ ಹಿತವ ನೋಡಾ.
ಹೀಗೆಂದು ಪದ ಹಾಡಿ ತಂಬೂರಿ ದಾಸ
ಕೈಮುಗಿದು ಸೇರಿದನು ಮಂತ್ರಿಯ ನಿವಾಸ.

## ೧೬೬೮. ನೂತನ ಪತಾಕೆ

ಭರ್ತಿ ಓಡಾಡುತಿದೆ ನೂತನ ಪತಾಕೆ
ಆಗಾಗ್ಗೆ ಸರಕಾರಿ ಸೌಧದಲಿ ಈಕೆ.
ಈ ಪತಾಕೆಯ ಹಿಂದೆ ಉಪಮಂತ್ರಿ ಸುಬ್ಬ,
ಓಡಾಡುವನು ; ಮತ್ತೆ ಉಂಟು ಇನ್ನೊಬ್ಬ.

## ೧೬೬೯. ಮಾಡುವಳು ಶೋಭೆ

ಭರ್ತಿ ಮಲ್ಲಿಗೆ ಮುಡಿದು ಮಾಡುವಳು ಶೋಭೆ.
ಎಷ್ಟು ಮಾಡಿದರೇನು ? ನೋಡಲಿಕೆ ಗೂಬೆ.
ಈ ರೀತಿ ಮಾಡಬಾರದು ಚೇಷ್ಟೆ ಪಾಪ
ಮಾಡಿದರೆ ನಿಮಗೆ ಹತ್ತುವದು ಶನಿ–ಶಾಪ.

## ೧೬೭೦. ಬಿಚ್ಚಿದನು ಕೋಟು

ಭರ್ತಿ ಸೆಕೆಯಾಯ್ತೆಂದು ಬಿಚ್ಚಿದನು ಕೋಟು
ಕೂಡಲೇ ಕೆಳಗೆ ಬಿದ್ದವು ನೂರು ನೋಟು
ಹೀಗಾಗಿ ಪಾಪ ಆ ಮಂತ್ರಿಯ ಫಜೀತಿ
ನೋಟುಗಳ ತುಂಬಿಡುವ ಇದು ಯಾವ ರೀತಿ ?

### ೧೬೭೧. ರಾಮರಾಜ್ಯದ ಎಂಜನಿಯರು

ಭದ್ರಯ್ಯ ರಾಮರಾಜ್ಯದ ಎಂಜನಿಯರು,
ಕೈಯೊಳಗೆ ಕೊಟ್ಟುಬಿಡಿ ಟೆಂಡರಿನ ಕವರು.
ಅತ್ಯಧಿಕ ತಿಂಡಿಯಿಟ್ಟರೆ ಬೆರಳಿನೊಳಗೆ
ಧನಲಕ್ಷ್ಮಿ ಓಡಿ ಬರುವಳು ನಿಮ್ಮ ಮನೆಗೆ.

### ೧೬೭೨. ಕೋಟಿ ದೇವರು

ಭರತ ಖಂಡದ ಕೋಟಿ ದೇವರುಗಳಲ್ಲಿ
ಸೇಕಡಾ ಅರವತ್ತು ಹೊಸದಿಲ್ಲಿಯಲ್ಲಿ,
ಉಳಿದ ದೇವರ ಪೈಕಿ ಸೇಕಡಾ ಎಂಟು
ವಿವಿಧ ರಾಜ್ಯಗಳಲ್ಲಿ ಬೀಳುತಿವೆ ಗಂಟು.

### ೧೬೭೩. ಪುಢಾರಿಗಳ ಭರವಸೆ

ಭರವಸೆಯ ನೀಡಿದರು ಪ್ರತಿಯೊಂದು ಸರ್ತಿ.
ಕೊನೆಗೆ ಆದದ್ದು ನಾಡಿನ ಮಂಗಳಾರ್ತಿ.
ಆಧುನಿಕ ಇತಿಹಾಸವಿದು, ಭಾರತಾಂಬೆ
ಈ ಲಫಂಗರನೆಂದಿಗೂ ನಾನು ನಂಬೆ.

### ೧೬೭೪. ಹಣೆಯ ನಕ್ಷತ್ರ

ಭಾಗ್ಯದೇವತೆ ಇವನ ಹಣೆಯ ನಕ್ಷತ್ರ
ಒಂದೆರಡು ವರುಷದಲಿ ಏಳೆಂಟು ಲಕ್ಷ
ಇದಕೆ ಕಾರಣ ರಾಜಕಾರಣದ ಘನತೆ
ಮಂತ್ರಿಯಾದರೆ ಬೆಳಗುವುದು ಮನೆಯ ಹಣತೆ.

### ೧೬೭೫. ಅಮೇರಿಕ ಹೇಳಿದ್ದು

ಭಾರತಕೆ ಕೋಟಿಗಟ್ಟಲೆ ಸಾಲಕೊಟ್ಟೆ
ಆದರೂ ತುಂಬಿಲಿಲ್ಲವೊ ಜನರ ಹೊಟ್ಟೆ
ಮತ್ತಷ್ಟು ಹಸಿವಾಗಿ ಹೊರೆಯಾಯ್ತು ಸಾಲ,
ಮಳೆ ಬಿದ್ದ ವರುಷವೂ ಬಂತು ಬರಗಾಲ.

## ೧೬೭೬. ಸ್ವಾವಲಂಬನದ ಸ್ಯಾಂಪಲ್ಲು

ಭಾರತಕೆ ಬೇಕು ಅಮೇರಿಕದ ಔದಾರ್ಯ.
ಕೈಗೂಡುವುದು ಪಂಚವಾರ್ಷಿಕದ ಕಾರ್ಯ.
ಔದಾರ್ಯ ತಪ್ಪಿದರೆ ಬಂದಾಗಿ ಪುಂಗಿ
ಖಾಲಿ ಕೋಟಿನ ಕೆಳಗೆ ಸುತ್ತುವರು ಲುಂಗಿ.

## ೧೬೭೭. ಪೊರಕೆಯ ಅವಶ್ಯಕತೆ

ಭಾರತಕೆ ಮೊದಲು ಬೇಕಾದದ್ದು ಪೊರಕೆ
ಈ ಪೊರಕೆಯೆನ್ನುವುದು ಈಶ್ವರನ ಹರಕೆ.
ಸರಕಾರಿ ಸೌಧಗಳ ನಡುಮಧ್ಯದಿಂದ
ಸಗಣಿ ನೀರನು ಹಾಕಿ ಗುಡಿಸಬೇಕೆಂದ.

## ೧೬೭೮. ಸರಕಾರದ ಪ್ರಕಟನೆ

ಭಾರತಕೆ ಮೊದಲು ಬೇಕಾದದ್ದು ಶಿಸ್ತು
ಆಮೇಲೆ ಕಾಳುಕಡಿ ಮುಂತಾದ ವಸ್ತು
ಕಾಳುಕಡಿಯಿಂದ ಬರಿ ಉದರ ನಿರ್ವಹಣ
ಶಿಸ್ತಿನಿಂದಲೆ ನಮ್ಮ ರಾಷ್ಟ್ರ ನಿರ್ಮಾಣ.

## ೧೬೭೯. ಸ್ವಾತಂತ್ರ್ಯ ಬಂದಾಗ

ಭಾರತಕೆ ಸ್ವಾತಂತ್ರ್ಯ ಬಂದಾಗ ಗಾಂಧಿ
ಹೇಳಿದರು : ಅರಿತುಕೊಳ್ಳಲಿ ನಮ್ಮ ಮಂದಿ.
ನಿಜವಾದ ಸ್ವಾತಂತ್ರ್ಯ ಬರಲಿಲ್ಲ ಇನ್ನು
ಮಂತ್ರಿಗಳು ನಮಗೆ ತೋರಿಸಬಹುದು ಬೆನ್ನು.

## ೧೬೮೦. ಸ್ವಾತಂತ್ರ್ಯದ ನಂತರ

ಭಾರತಕೆ ಸ್ವಾತಂತ್ರ್ಯ ಬಂದು ಮಧ್ಯಾಹ್ನ.
ಆದರೂ ಬಡವರಿಗೆ ಸಿಗಲಿಲ್ಲ ಅನ್ನ.
ಲಕ್ಷಾಧಿಪತಿಗಳಿಗೆ ದಶಕೋಟಿ ಸಿಕ್ಕಿ
ದೀನರಿಗೆ ಸಿಗಲಿಲ್ಲ ಹಿಡಿ ತುಂಬ ಅಕ್ಕಿ.

## ೧೬೮೧. ಪೆಡಂಭೂತ

ಭಾರತಕೆ ಹಿಡಿದುಬಿಟ್ಟಿದೆ ಪೆಡಂಭೂತ
ಹೀಗಾಗಿ ಪಂಚವಾರ್ಷಿಕದಿಂದ ಖೋತಾ.
ಈ ಪರಿಸ್ಥಿತಿಯೊಳಗೆ ಮಂತ್ರಿಗಳು ಪಾಪ
ಏನು ಮಾಡುತ್ತಾರೆ ? ಈಶ್ವರನ ಶಾಪ.

## ೧೬೮೨. ಮಂತ್ರಿಗಳ ಭಾಷಣ

ಭಾರತಕೆ ಹೊಸದಾಗಿ ಬಂದಿದೆ ಸ್ವರಾಜ್ಯ.
ಮಾಡಬಾರದು ನೀವು ಯಾವುದು ವ್ಯಾಜ್ಯ.
ನಾವು ಹೇಳಿದ ಹಾಗೆ ಸರಿಯಾಗಿ ನಡೆದು
ಸೇವೆ ಸಲ್ಲಿಸಬೇಕು ಹಗಲಿರುಳು ದುಡಿದು.

## ೧೬೮೩. ಪ್ರಧಾನಿಗಳ ಕರೆ

ಭಾರತದ ಆದ್ಯಂತ ಆಹಾರ ಧಾನ್ಯ
ಸಾಕಷ್ಟು ಬೆಳೆಯಲಿದೆ ನಾಳೆ ಮಧ್ಯಾಹ್ನ
ಆ ತನಕ ಪ್ರತಿಯೊಬ್ಬನೂ ತಾಳ್ಮೆಯಿಂದ
ಊಟ ಮಾಡದೆ ರಾತ್ರೆ ಮಲಗಬೇಕೆಂದ.

## ೧೬೮೪. ದೇಶಭಕ್ತರ ತ್ಯಾಗ

ಭಾರತದ ಆದ್ಯಂತ ಸಂಚರಿಸಿ ಬಂದೆ.
ದೇಶಭಕ್ತರ ತ್ಯಾಗಕೆಣೆಯಿಲ್ಲ ಅಂದೆ.
ಸರಕಾರಿ ಹಣ ನುಂಗುವುದು ಇವರ ಧರ್ಮ
ಹೊಗಳುವಂಥಾದ್ದು ಈ ನಿಷ್ಕಾಮ ಕರ್ಮ.

## ೧೬೮೫. ದಿಲ್ಲಿಯ ನೃತ್ಯ ಸಂಗೀತ

ಭಾರತದ ಜನಕೋಟಿ ಕೊಡಬೇಕು ಗಮನ :
ಈಗ ಜೋರಾಗಲಿದೆ ತಕ ಧಿನ್ನ ತನನ.
ಮುಂದುಗಡೆ ಕುಣಿಯಲಿಕೆ ಇದ್ದಾಳೆ ನೀರೆ
ಹಿಂದೆ ತಂಬೂರಿ ನುಡಿಸಲಿಕೆ ಜನ ಬೇರೆ.

## ೧೬೮೬. ಜನಸಂಖ್ಯೆ

ಭಾರತದ ಜನಸಂಖ್ಯೆ ಆದಂತೆ ಜಾಸ್ತಿ
ಹಾಲಿಗೂ ನೀರಿಗೂ ಮತ್ತಷ್ಟು ದೋಸ್ತಿ.
ಹೀಗೆಂದು ಪದ ಹಾಡಿದನು ಮಾಣಿಭಟ್ಟ,
ಮೊಸರೆಂದು ತಿಳಿ ಮಜ್ಜಿಗೆಯ ಕುಡಿದುಬಿಟ್ಟ.

## ೧೬೮೭. ಗಂಡ ಹೇಳಿದ್ದು

ಭಾರತದ ಜನಸಂಖ್ಯೆ ಬೆಳೆದು ಮಿತಿ ಮೀರಿ
ತುಂಬಿಹೋಗಿದೆಯಂತೆ ಪ್ರತಿಯೊಂದು ಕೇರಿ.
ಈ ಪರಿಸ್ಥಿತಿಯೊಳಗೆ ಬಸುರಾಗಿ ನೀನು
ಮತ್ತೊಂದು ಕೂಸು ಹುಟ್ಟಿದರೆ ಗತಿಯೇನು ?

## ೧೬೮೮. ಭಾಷಣಬಾಜಿ

ಭಾರತದ ತುಂಬ ಭಾಷಣಬಾಜಿ ಭರ್ತಿ
ಹೀಗಾಗಿ ಕೃತಿಗೆ ಧೂಪದ ಮಂಗಳಾರ್ತಿ.
ಡೋಲು ಬಾರಿಸಿ ನುಡಿಸಿದರು ಮಹಾ ವಾದ್ಯ
ಯಾರಿಗೂ ಸಿಗದೆ ಹೋಯಿತು ಪಂಚಖಾದ್ಯ.

## ೧೬೮೯. ಈ ಪ್ರಜಾರಾಜ್ಯದಲಿ

ಭಾರತದ ಸಚಿವರೆಲ್ಲಾ ಒಂದು ಕಡೆಗೆ
ಕೂಡಿದರೆ ಜನ ಸಾಕು ಸೈನಿಕರ ಪಡೆಗೆ.
ಈ ಸೇನೆಯೊಂದಿರಲು ನಮಗಿಲ್ಲ ಭೀತಿ
ಈ ಪ್ರಜಾರಾಜ್ಯದಲಿ ಇದು ಜೀವ ಜ್ಯೋತಿ.

## ೧೬೯೦. ಹೆಂಗಸರ ಅಸಹಕಾರ

ಭಾರತದ ಹೆಂಗಸರು ಪತಿಗಳ ವಿರುದ್ಧ
ಅಸಹಕಾರವ ಸಾರಿ ಹೂಡಿದರು ಯುದ್ಧ.
ಹೀಗಾಗಿ ಬಂದಾಯ್ತು ಕೂಸು ಹುಟ್ಟುವುದು
ರಾಷ್ಟ್ರಪತಿ ಸಾರಿದನು : ಒ[illegible]ಕೇ ಚಲೋದು.

## ೧೬೯೧. ಭಾರತದ ಪ್ರಗತಿ

ಭಾರತವು ಇದುವರೆಗೆ ಸಾಧಿಸಿದ ಪ್ರಗತಿ
ನೋಡಿದರೆ ಆಶ್ಚರ್ಯವೆನಿಸುವುದು, ಗೆಳತಿ.
ಹೀಗೆಯೇ ಮುಂದುವರಿದರೆ ಈ ವಿಕಾಸ
ಶೀಘ್ರದಲಿ ಬಂದಾಗುವುದು ನಮ್ಮ ಶ್ವಾಸ.

## ೧೬೯೨. ಭಾರತಾಂಬೆಯ ಸೀರೆ

ಭಾರತಾಂಬೆಗೆ ಇವರು ಉಡಿಸಿದರು ಸೀರೆ
ಏನು ಹೇಳಲಿ! ಅದರ ಬಣ್ಣವೇ ಬೇರೆ!
ಶ್ವೇತ ಸೀರೆಯ ಬದಲು ಉಡಿಸಿದರು ಕಂದು
ತಂದ ನೈವೇದ್ಯವನು ಹಾಕಿದರು ತಿಂದು.

## ೧೬೯೩. ಸಚಿವರ ಸೇನೆ

ಭಾರತಾಂಬೆಯ ಒಟ್ಟು ಮಂತ್ರಿಗಳ ಸಂಖ್ಯೆ
ಎಷ್ಟೆಂದು ಗೊತ್ತಿಲ್ಲವೇನೂ, ಏ ಮಂಕೆ?
ಒಟ್ಟುಗೂಡಿದರೆ ಆಗುವುದೊಂದೆ ಸೇನೆ.
ಯುದ್ಧದಲಿ ಹೋರಾಡಲಿಕೆ ಬೇಕು ತಾನೆ?

## ೧೬೯೪. ಸತ್ಕಾರ ಸಮಾರಂಭ

ಭಾಷಣದ ಮೇಲೆ ಭಾಷಣಗಳು ಅಪಾರ
ಬಾಯ್ತುಂಬ ಹೊಗಳಾಡಿ ಹಾಕಿದರು ಹಾರ.
ಸಾಸಿವೆಗೆ ಹೇಳಿದರು, ನೀನೆ ಸಹ್ಯಾದ್ರಿ
ಮರುದಿವಸ ವೃತ್ತಪತ್ರಿಕೆಯಲ್ಲಿ ವರದಿ.

## ೧೬೯೫. ಭಾಷಣದ ಮಳೆ

ಭಾಷಣದ ಮೇಲೆ ಭಾಷಣ ಮಾಡುವವರು.
ಇಂಥ ಭಟರಿಗೆ ನಮ್ಮ ಭಾರತವೇ ತವರು.
ನಿತ್ಯವೂ ಭಾಷಣದ ಮಳೆಗರೆದು ಭರ್ತಿ
ಪೃಥವಿಯಲಿ ಹರಡಿಕೊಂಡಿದೆ ನಮ್ಮ ಕೀರ್ತಿ.

## ೧೬೯೬. ಭಾಷೆ

ಭಾಷೆ ಎಂಬುದು ಆಸೆ, ಕವಿಗಳ ತಮಾಷೆ
ಭಾಷೆಯೊಳಗಿರಬೇಕು ನರನ ಅಭಿಲಾಷೆ.
ಭಾಷೆ ಮಾನವ ಶಕ್ತಿ ಪವನಗಳ ಉಕ್ತಿ.
ಭಾಷೆಯಿಂದಲೆ ನಮಗೆ ಜೀವನದ ಮುಕ್ತಿ.

## ೧೬೯೭. ಕವಿಗಳ ತಮಾಷೆ

ಭಾಷೆ. ಎಂಬುದು ಮಗನೆ, ಕವಿಗಳ ತಮಾಷೆ,
ಸಾಹಿತ್ಯದಿಂದ ಭಾಷೆಗೆ ಬಂತು ಮೀಸೆ.
ಕವಿಯ ಬಲೆಯಲಿ ಬೆಂದ ಭಾಷೆ ಕರಿಗಡಬು
ಭಾಷೆಯಲಿ ಅಡಗಿಕೊಂಡಿದೆ ಮಿಂಚು, ಗುಡುಗು.

## ೧೬೯೮. ಮಾನವನ ಆಸೆ

ಭಾಷೆ ಎಂಬುದು, ಮಗನೆ ಮಾನವನ ಆಸೆ.
ಭಾಷೆಯೊಳಗುಂಟು, ಜೀವನದ ಅಭಿಲಾಷೆ.
ಭಾಷೆ ಎಂಬುದು ವಿಡಂಬನದ ಬಂದೂಕು.
ಹಾರಿಸಲು ಪ್ರತಿಯೊಬ್ಬ ಕವಿ ಕಲಿಯಬೇಕು.

## ೧೬೯೯. ಭಾಷೆ

ಭಾಷೆ ಎಂಬುದು, ಮಗಳೆ, ಮಾನವನ ಆಸೆ.
ಅಭಿಲಾಷೆಯೂ ಹೌದು, ಕವಿಗಳ ತಮಾಷೆ.
ಭಾಷೆ ತಪ್ಪಿದ ಮೀಸೆಗಿಲ್ಲ ಮರಿಯಾದೆ.
ಭಾಷೆ ಅರಳಿದರೆ ಅದು ಆಗುವುದು ಗಾದೆ.

## ೧೭೦೦. ಭಾಷೆ ಕುಣಿದರೆ

ಭಾಷೆ ಕುಣಿದರೆ ಮಾತ್ರ ಕವಿತೆ ಕಾಯಮ್ಮು
ಕುಣಿಯದಿದ್ದರೆ ಪಾಪ ಹಿಡಿಯುವುದು ದಮ್ಮು.
ಭಾಷೆಗಿರಬೇಕು, ಸಖಿ, ಸುಗ್ಗಿಯ ತುರಾಯಿ.
ಬೋಳುತಲೆ ಕಾಣಿಸಲು ಬೊಗಳುವುದು ನಾಯಿ.

### ೧೭೦೧. ಭಾಷೆಯನು ತಿರುಪಿ

ಭಾಷೆಯನು ತಿರುಪಿ ಬರೆದರೆ ಆಗಿ ವಕ್ರ
ಚುಟಕವಾಗುವುದು, ಸಖಿ, ರಮಣೀಯ ಚಕ್ರ.
ಸಾಹಿತ್ಯದಲಿ ಇದಕೆ ಕೊಂಕುನುಡಿ ಹೆಸರು.
ಗುರಿ ತಪ್ಪಿದರೆ ಮಾತ್ರ ಕೈ ತುಂಬ ಕೆಸರು.

### ೧೭೦೨. ಶಬ್ದ ನಾವಿನ್ಯ

ಭಾಷೆಯೊಳಗಿರಬೇಕು ಶಬ್ದ ನಾವಿನ್ಯ
ರಸಿಕರಿಗೆ ಬರವಣಿಗೆಯಾಗುವುದು ಮಾನ್ಯ.
ಪ್ರತಿಯೊಂದು ಪಂಕ್ತಿ ಕುಣಿಯಲಿ ತಾಳ ಹಾಕಿ
ಹೊಸ ಪ್ರಾಸಗಳು ಬರಲಿ; ಇಡಬೇಡ ಬಾಕಿ.

### ೧೭೦೩. ಭಾಷೆ ವಿದ್ಯುತ್ತಾಗಿ

ಭಾಷೆ ವಿದ್ಯುತ್ತಾಗಿ ಕೊಡಬೇಕು ಷಾಕು.
ಶೀಘ್ರದಲಿ ಗಟ್ಟಿಯಾಗುವುದು ರಸಪಾಕು.
ಬೇಕಾದ ಹಾಗೆ ಪಂಕ್ತಿಗಳಲ್ಲಿ ತೂರಿ
ಹದಗೊಳಿಸಿದರೆ ವಿಡಂಬನವೆಂಬ ಚೂರಿ.

### ೧೭೦೪. ಭಾಷೆ

ಭಾಷೆ ಶೈಲಿಯ ಜೊತೆಗೆ ಕೂಡಿ ಕುಣಿದಾಡಿ
ಮೂಡಿದರೆ ಚುಟಕ ಹೋಗುವುದಿಲ್ಲ ಬಾಡಿ
ಶತಮಾನ ಕಳೆದರೂ ಉಳಿಯುವುದು ಜೀವ
ನಿತ್ಯ ಕಂಗೊಳಿಸಿ ಗಮಗಮಿಸುವುದು ಭಾವ.

### ೧೭೦೫. ಭೂಮಾತೆಯೂ ಅಂಜಿ

ಭೂಮಾತೆಯೂ ಅಂಜಿ ನಡುಗಿತ್ತು ಮೊನ್ನೆ
ಇದಕೆ ಕಾರಣವೇನು ? ಹೇಳು, ಮನದನ್ನೆ.
ಇದಕೆ ಕಾರಣವೇನು ? ಬಾಂಬು ಆಟಮ್ಮು
ಭೀತಿ ಅತಿಯಾಗಿ ನೆಲತಾಯಿಗೂ ಕೆಮ್ಮು.

### ೧೭೦೬. ದೊಡ್ಡವರು

ಭೂಮಿಗುರುಳಿತು ವೃಕ್ಷ ಬಿರುಗಾಳಿ ಬಂದು,
ಕಂಗೊಳಿಸಿದವು ಗರಿಕೆ ಹಸಿರೊಳಗೆ ಮಿಂದು,
ಬಿರುಗಾಳಿ ಬರುವನಕ ದೊಡ್ಡವರ ಜಂಬ
ಹೀಗೆಂದು ಬಾಯ್ಕಿಸಿದು ನಗಬೇಕೆ ಮಂಗ ?

### ೧೭೦೭. ಭೂಮಿ ತಾಯಿಯ ಸೀರೆ

ಭೂಮಿ ತಾಯಿಯ ಸೀರೆ ಎಂಬುದು ಅರಣ್ಯ
ಗಿಡಮರಗಳಿಂದ, ಸಖಿ, ನೆಲಕೆ ತಾರುಣ್ಯ
ಭೂಮಿತಾಯಿಯ ವಸನದಂತಿರಲಿ ಸಸ್ಯ
ಈ ಸಸ್ಯವೆನ್ನುವುದು ಜೀವನ ರಹಸ್ಯ.

### ೧೭೦೮. ಅರಸನಿಗೆ

ಭೂಮಿಪತಿ, ನೀ ಸ್ವಲ್ಪ ದೂರದಲೆ ನಿಲ್ಲು
ಸನಿಯ ಬಂದರೆ ಬೀದಿನಾಯಿಗಳ ಗುಲ್ಲು
ತಲೆಯ ಮುಕುಟದ ವಿಚಿತ್ರವ ನೋಡಿ ಶ್ವಾನ
ಮೈಮೇಲೆ ಹಾರಿದರೆ ನಿನ್ನ ಅವಮಾನ.

### ೧೭೦೯. ಮಿದುತ್ವ

ಭೂಮಿ ಮಿದುವಾದಾಗ ಹುಟ್ಟುವುದು ಕಾಳು.
ಗಟ್ಟಿಯಾದರೆ ನೆಲವು ಬೆಳೆಯೆಲ್ಲ ಹಾಳು
ಮನಸು ಮಿದುವಾದಾಗ ಗೌತಮನ ಉದಯ
ಹೂವಾಗಿ ಗಮಗಮಿಸಬೇಕು ಈ ಹೃದಯ.

### ೧೭೧೦. ಕಾಮನಬಿಲ್ಲು

ಭೂಲೋಕದಿಂದ ಗಗನದ ವರೆಗೆ ಸಂಕ
ಕಾರು ಪಾಸಾಗಲಿಕೆ ಇಲ್ಲ ಆತಂಕ.
ಪಂಚವಾರ್ಷಿಕ ಯೋಜನೆಯ ಕಾಮಗಾರಿ
ಚಂದ್ರಲೋಕದ ವರೆಗೆ ನೇರ ಹೆದ್ದಾರಿ.

## ೧೭೧೧. ಚಂದ್ರನ ತಕರಾರು

ಭೂಲೋಕದಲ್ಲಿ ದೊಡ್ಡ ಗುದ್ದಾಟವೆದ್ದು
ಅಮರಲೋಕದವರೆಗೆ ಕೇಳಿಸಿತು ಸದ್ದು.
ಚಂದ್ರನೆಂದನು : ನನ್ನ ಮೈಮೇಲೆ ಧೂಳು.
ಇವರ ಜಗಳಾಟದಲಿ ನಾನಾದೆ ಹಾಳು.

## ೧೭೧೨. ಈಶ್ವರನ ಕವನ

ಭೂಲೋಕವೆನ್ನುವುದು ಈಶ್ವರನ ಕವನ
ರಚನೆ ಮಾಡಿದ ಕವಿಗೆ ನಿತ್ಯವೂ ನಮನ.
ಧರೆಯ ನಿರ್ಮಿಸಲಿಕ್ಕೆ ವರುಷಗಳು ಕೋಟಿ
ಮೂರು ದಿನ ಸಾಕಲ್ವೆ ಹಾಕಲಿಕೆ ಲೂಟಿ ?

## ೧೭೧೩. ವ್ಯಕ್ತಿ ಸ್ವಾತಂತ್ರ್ಯ

ಭೂವನಿತೆಗಿರಲೆಂದು ಮುಗುಳುನಗೆ, ಲಾಸ್ಯ
ಬಂಧನದೊಳಿರಬೇಕೆ ಪ್ರತಿಯೊಂದು ಸಸ್ಯ ?
ಬೇರುಗಳ ಕಿತ್ತೊಗೆದು ಗಿಡಬಳ್ಳಿ ಗರಿಕೆ
ಕುಣಿದಾಡಬೇಕೆಂಬುದೇ ನನ್ನ ಅರಿಕೆ.

## ೧೭೧೪. ರಾಷ್ಟ್ರದ ಗಡಿಗಳು

ಮಜಬೂತು ಬೇಲಿಯಿಲ್ಲದೆ ಕಾಯಿಪಲ್ಲೆ
ನೆಟ್ಟರೇನಾಗುವುದು ? ನೀನಂತು ಬಲ್ಲೆ.
ಒಳನುಗ್ಗದಿರಬಹುದೆ ಆ ಕಾಡು ಹಂದಿ ?
ತಿಳಿದಿರಲಿ ಯಾವಾಗಲೂ ನಮ್ಮ ಮಂದಿ.

## ೧೭೧೫. ಈ ಗಂಡ

ಮಡದಿ ಹೇಳಿದ ಹಾಗೆ ಕೇಳಿ ಈ ಗಂಡ
ಸಂಸಾರದಲಿ ಪಾಪ ಕೈ ಸುಟ್ಟುಕೊಂಡ.
ಆದರೂ ಬಂದಿಲ್ಲ ಬುದ್ಧಿ ಲವಲೇಶ
ಆಕೆ ಹೇಳಿದ ಹಾಗೆ ಹಾಕುವನು ವೇಷ.

### ೧೭೧೬. ಮಡಿದವರು ಸತ್ತಿಲ್ಲ

ಮಡಿದವರು ಸತ್ತಿಲ್ಲ ರಣರಂಗದೊಳಗೆ
ನಕ್ಷತ್ರಗಳ ಬೆಳಕು ಅವರ ಮಡಿಲೊಳಗೆ
ಈ ಬೆಳಕು ಸ್ವಾತಂತ್ರ್ಯ ಜ್ಯೋತಿಯ ರಹಸ್ಯ
ನಮಗೆಂದಿಗೂ ಇಲ್ಲ ಶೃಂಖಲೆಯ ದಾಸ್ಯ.

### ೧೭೧೭. ಪರಿಶುದ್ಧತೆ

ಮಡಿವಂತ ನಾಯಕರು ರಾಜ್ಯವನ್ನಾಳಿ
ಪರಿಶುದ್ಧವಾಗಿಹುದು ಭಾರತದ ಗಾಳಿ.
ಬೀದಿಬೀದಿಗೆ ಮಡಕೆ ಕೊಡುತಿರೆ ಸುಗಂಧ
ಕರ್ಪೂರ ಊದಬತ್ತಿಗಳೇಕೆ, ಕಂದ ?

### ೧೭೧೮. ಪುಣ್ಯ ಪುರುಷ

ಮಣಗಟ್ಲೆ ಅನ್ನ! ಮುಟ್ಟುವುದಿಲ್ಲ ರಾಗಿ
ಕಾಣುವನು ಬೂದು-ಗುಂಬಳಕಾಯಿಯಾಗಿ.
ಈ ವೇಷ ಕಂಡಾಗ ಮಕ್ಕಳಿಗೆ ಹರುಷ
ಭಾರತಾಂಬೆಯ ಹೆಮ್ಮೆ ಈ ಪುಣ್ಯ ಪುರುಷ.

### ೧೭೧೯. ನನ್ನ ಗೊಂಬೆಗಳು

ಮಣ್ಣು ಗೊಂಬೆಯ ಮಾಡಿ ಹಚ್ಚಿದೆನು ಬಣ್ಣ
ಸರಸರನೆ ದಾರ ಎಳೆಯಲು ಕುಣಿಯಿತಣ್ಣ.
ಈ ರೀತಿ ಕುಣಿಸಿದನು ಗೊಂಬೆಗಳ ಹತ್ತು
ಕಳಚಿ ಹೋಗಲು ದಾರ ನೆಲಕುರುಳಿ ಬಿತ್ತು.

### ೧೭೨೦. ಮಣಗಟ್ಲೆ ಪಾಪ

ಮಣಗಟ್ಲೆ ಪಾಪ ಗೈಯುವರು ಹಣಕಾಗಿ
ತೊಳೆದು ಹಾಕುವರು ಗಂಗಾನದಿಗೆ ಹೋಗಿ.
ಹಿಂದಿರುಗಿದಾಗ ಸಿಗುವುದು ಚಕ್ರಬಡ್ಡಿ
ಭಗವಂತ ಇದಕೆ ಮಾಡುವುದಿಲ್ಲ ಅಡ್ಡಿ.

## ೧೭೧. ಈ ಪರ್ವಕಾಲದಲಿ

ಮಣ್ಣು ಪಾಲಾಗಿ ಹೋಯಿತು ಎಲ್ಲ ತತ್ವ
ಈ ಪರ್ವಕಾಲದಲಿ ಕುರ್ಚಿಗೆ ಮಹತ್ವ
ಈ ಕುರ್ಚಿಯೊಳಗುಂಟು ತರತರದ ತಗಣಿ
ಚೊಕ್ಕಗೊಳಿಸಲಿಕೆ ಹಾಕುವರಾರು ಸಗಣಿ ?

## ೧೭೨. ಮಣ್ಣು ಹೆಟ್ಟೆಯ ಗಣಪನಿಗೆ

ಮಣ್ಣು ಹೆಟ್ಟೆಯ ಗಣಪನಿಗೆ ನಮಸ್ಕಾರ
ಮಣ್ಣಿಂದಲೇ ನಮ್ಮ ಜಗದ ಉದ್ಧಾರ.
ಮಣ್ಣುಹೆಟ್ಟೆಯ ಗಣಪನಿಗೆ ಬೇಡ ಅನ್ನ
ಅವನ ಹೆಸರಲ್ಲಿ ಮನುಜನಿಗೆ ಮೃಷ್ಟಾನ್ನ.

## ೧೭೩. ಚುನಾವಣೆಯ ಭಜನೆ

ಮತ ಚೀಟಿಗಳ ಹಾಕಿ ಪೆಟ್ಟಿಗೆಯ ಒಳಗೆ
ಮೂರ್ಖರಾದರು ಜನರು ಈ ಲೋಕದೊಳಗೆ.
ವೋಟು ಪಡೆದವರು ಗಳಿಸಿದವರು ದಶಲಕ್ಷ
ಜನರ ಬಾಯೊಳಗೇನು ? ಪುಂಡರೀಕಾಕ್ಷ !

## ೧೭೪. ಮೇಲೇರಿ

ಮತ್ತಷ್ಟು ಮೇಲೇರಿ ಮೇಲೇರಿ ಮತ್ತೆ
ಕುದುರೆಯಾಯಿತು ಕೊನೆಗೆ ನಮ್ಮೂರ ಕತ್ತೆ.
ಈ ಪ್ರಜಾರಾಜ್ಯದಲಿ ಎಲ್ಲವೂ ಸಾಧ್ಯ.
ಮೇಲೇರಲಿಕೆ ನೀವು ಬಾರಿಸಿರಿ ವಾದ್ಯ.

## ೧೭೫. ಮದುವೆ ಚಪ್ಪರದೊಳಗೆ

ಮದುವೆ ಚಪ್ಪರದೊಳಗೆ ಕುಳಿತಾಗ ನೀನು
ಇಣಿ ಇಣಿಕಿ ಕಣ್‌ತುಂಬ ನೋಡಿದನು ಭಾನು.
ಈ ನೋಟ ಎಂದಿಗೂ ಮರೆಯುವಂತಿಲ್ಲ
ನಿನ್ನಾಣೆ ! ಇದಕೆಂಬೆ ಜೀವನದ ಬೆಲ್ಲ.

## ೧೭೨೬. ಪ್ರಜಾರಾಜ್ಯದ ರಂಗೋಲಿ

ಮದುವೆ ಚಪ್ಪರದೊಳಗೆ ಭರ್ತಿ ರಂಗೋಲಿ
ಊಟಕ್ಕೆ ಕೂತಾಗ ಎಲೆ ಮಾತ್ರ ಖಾಲಿ!
ಇದಕೆನ್ನುವರು ಭಾರತದ ಕಾರಭಾರ.
ಸಂಭ್ರಮಗಳಿದ್ದರೂ ಇಲ್ಲ ಆಹಾರ.

## ೧೭೨೭. ಮದುವೆ ಮಂಟಪದಲ್ಲಿ

ಮದುವೆ ಮಂಟಪದೊಳಗೆ ಕುಳಿತುಕೊಂಡಾಗ
ನೂರಾರು ಜನ ಬಂದು ವಹಿಸಿದರು ಭಾಗ.
ಪೂರ್ಣ ಮುಗಿದೊಡನೆ ಭಟ್ಟರ ಮಂತ್ರವಿದ್ಯೆ
ಸಂಸಾರ ಸಾಗರದ ನೀರೊಳಗೆ ಬಿದ್ದೆ.

## ೧೭೨೮. ಉಂಡಾಡಿ ಹೇಳಿದ್ದು

ಮದುವೆಯಾದರೆ, ನನಗೆ ಅನುದಿನವು ಕಷ್ಟ
ಪೂರೈಸಬೇಕೆಂತೆ ನಾನವಳ ಇಷ್ಟ
ನನ್ನಂಥ ಉಂಡಾಡಿಗಳಿಗೆ ಈ ರಗಳೆ
ಸಂಸಾರವೆನ್ನುವುದು ಜೀವನದ ಜಿಗಳೆ.

## ೧೭೨೯. ಒಂದು ಆತ್ಮ ಕಥನ

ಮದುವೆಯಲ್ಲೂ ಕಟ್ಟಲಿಲ್ಲ ಬಾಸಿಂಗ
ಮಕರಂದ ಸೇತುವೆಗೆ ಬರಲಿಲ್ಲ ಭಂಗ
ಮಕ್ಕಳಾದರು; ಕೊನೆಗೆ ಅದೆ ಮುತ್ತಾತ
ಯಾವ ತೊಂದರೆಯಿಲ್ಲ, ಗಾಡಿ ಸುರಳೀತ.

## ೧೭೩೦. ಮದುವೆಯಾಗುವ ಮೊದಲೆ

ಮದುವೆಯಾಗುವ ಮೊದಲೆ ಹುಟ್ಟಿದಳು ಬಾಲೆ.
ಏನು ಪರವಾ ಇಲ್ಲ, ಕೋಲೆನ್ನಿ ಕೋಲೆ.
ಸರಿಯಾಗಿ ಉಂಟು ಕಿವಿ ಮೂಗು ಕೈಕಾಲು
ತುಂಬಿಕೊಂಡಿದೆ ತಾಯ ಮೊಲೆಯೊಳಗೆ ಹಾಲು.

## ೧೭೩೧. ತೋಳದ ಹಾವಳಿ

ಮಧ್ಯರಾತ್ರಿಗೆ ಸಂತೆಯಲಿ ನುಗ್ಗಿ ತೋಳ
ಸಂಪೂರ್ಣ ತಿಂದುಹಾಕಿತು ಬಂದ ಜೋಳ
ಮುಂಜಾನೆ ಕ್ಯೂನಲ್ಲಿ ನಿಂತವರು ಪಾಪ
ತೋಳ ಸಾಯಲಿ ಎಂದು ಹಾಕಿದರು ಶಾಪ.

## ೧೭೩೨. ಮಂತ್ರಿಗಳ ಲೀಲೆ

ಮಧ್ಯರಾತ್ರಿಯ ತನಕ ಮಾಡಿ ಮೀಟಿಂಗು
ಜಾರಿಗಿಳಿಸಿದರು ರಾಷ್ಟ್ರೀಯ ಪ್ಲಾನಿಂಗು
ಇದಕೆಂಬೆ ಮಂತ್ರಿಗಳ ಅಪ್ರತಿಮ ಲೀಲೆ
ಜಾರಿಗಿಳಿದದ್ದು ಬರಿ ಕಾಗದದ ಮೇಲೆ.

## ೧೭೩೩. ಮಧುರ ಚುಂಬನ

ಮಧುರ ಚುಂಬನಕೆ ಸಪ್ಪಳವೇಕೆ ಅನ್ನಿ?
ರಸಿಕ ಮಂದಾನಿಲನ ಪರಿ ನೋಡಿ ಬನ್ನಿ.
ನಿಮ್ಮ ಈ ಬಿರುಗಾಳಿಯಲಿ ನನ್ನ ನತ್ತು
ಕಳಚಿಬಿದ್ದರೆ ನಿಮಗೆ ಸವಿಯೇನು ಮುತ್ತು?

## ೧೭೩೪. ಕವಿತೆಯ ವ್ಯಾಖ್ಯೆ

ಮನದನ್ನೆ, ಕವಿತೆ ಎಂಬುದು ನಿನ್ನ ಒಲವು.
ನಿತ್ಯವೂ ಮುತ್ತು ಕೊಟ್ಟರೆ ಕವಿಗೆ ಗೆಲವು.
ನೀನು ಮುನಿದರೆ, ನಲ್ಲೆ, ಅದು ಮಹಾಕಾವ್ಯ.
ಒಮ್ಮೊಮ್ಮೆ ಮಹಾಭಾರತದಷ್ಟು ಭವ್ಯ.

## ೧೭೩೫. ದೇವರಲಿ ವಿಶ್ವಾಸ

ಮನದನ್ನೆ, ದೇವರಲಿ ನಿನಗೆ ವಿಶ್ವಾಸ.
ಒಮ್ಮೊಮ್ಮೆ ದೇವರೂ ಮಾಡುವನು ಘಾತ.
ಕಲಿಯುಗವೆ ಇದಕೆ ಕಾರಣವೆಂದು ಭಟ್ಟ
ಭಗವಂತನನು ಹೊಗಳಿ ತೀರ್ಮಾನ ಕೊಟ್ಟ.

## ೧೭೩೬. ನೀನು ಜೊತೆಗಿದ್ದಾಗ

ಮನದನ್ನೆ, ನನ್ನ ಮಾತನು ಸ್ವಲ್ಪ ಕೇಳು
ನೀನು ಜೊತೆಗಿದ್ದಾಗ, ಕವಿತೆಗೂ ಕೂಳು.
ನೀನು ನುಸು ನಕ್ಕಾಗ ವಿಪರೀತ ಸ್ಫೂರ್ತಿ
ಮುತ್ತು ಕೊಟ್ಟಾಗ ಕೃತಿಯಾಗುವುದು ಭರ್ತಿ.

## ೧೭೩೭. ಕಡಿಮೆ ಸಂಬಳ

ಮನದನ್ನೆ, ನೀ ನೋಡಲಿಕೆ ಬಹಳ ಚಂದ.
ಊಟಕ್ಕೆ ಕುಳಿತಾಗ ಇಲ್ಲ ಆನಂದ.
ನಿನ್ನ ಅಡಿಗೆಯ ಪರಾಕ್ರಮ ಬಹಳ ಹಿರಿದು.
ನಾಲಗೆಯ ಸೊಕ್ಕು ಹಾಕಿದೆ ನೀನು ಮುರಿದು.

## ೧೭೩೮. ಸಂಸಾರ

ಮನದನ್ನೆ, ನಾವಿಬ್ಬರೂ ಎಷ್ಟು ವರುಷ
ಅನುಭವಿಸಬೇಕೆಂಬೆ ಸಂಪೂರ್ಣ ಹರುಷ ?
ಆಕೆ ಎಂದಳು : ನಿಮಗೆ ಇಲ್ಲದ ವಿಚಾರ.
ಸುಖದುಃಖಗಳ ಬೆರಕೆ ನರನ ಸಂಸಾರ.

## ೧೭೩೯. ನಿನಗೇಕೆ

ಮನದನ್ನೆ, ನಿನಗೇಕೆ ಚಿನ್ನದಾಭರಣ ?
ನಿನ್ನ ಕೊರಳಿಗೆ ಕಟ್ಟುವೆನು ರವಿಯ ಕಿರಣ.
ಮತ್ತೆ ತೊಡಿಸುವ ನಿನಗೆ ತಾರೆಗಳ ಹಾರ.
ಗೊತ್ತಿಲ್ವೆ ಕವಿಯ ಹೆಂಡತಿಯ ಸಂಸಾರ ?

## ೧೭೪೦. ಮನದನ್ನೆಗೆ

ಮನದನ್ನೆ, ನಿನಗೆ ನರಕವು ಬೇಕೆ ಸ್ವರ್ಗ ?
ಆಕೆ ಎಂದಳು : ನೀವು ಹಿಡಿದಂಥ ಮಾರ್ಗ
ನಾನಂದೆ : ಇಬ್ಬರೂ ನರಕಕ್ಕೆ ಹೋಗಿ
ನಿತ್ಯವೂ ಮೀನು ತಿನ್ನೋಣ ಸರಿಯಾಗಿ.

## ೧೭೪೧. ಬೇಕಾಗಿಲ್ಲ ಚಿನ್ನ

ಮನದನ್ನೆ, ನಿನಗೆ ಬೇಕಾಗಿಲ್ಲ ಚಿನ್ನ,
ನಿನ್ನ ಮುಖ ನೋಡಲಿಕೆ ಬಹಳ ಸಂಪನ್ನ.
ಆಕೆ ಎಂದಳು : ನನಗೆ ಗೊತ್ತಾಯ್ತು ಯುಕ್ತಿ
ನಿಮ್ಮ ವರ್ಣನೆಯಿಂದ ಪಡೆಯುವೆನು ಮುಕ್ತಿ.

## ೧೭೪೨. ಮನದನ್ನೆಗೆ

ಮನದನ್ನೆ, ನೀ ನೋಡಲಿಕೆ ಬಹಳ ಚಂದ.
ಊಟಕ್ಕೆ ಕುಳಿತಾಗ ಇಲ್ಲ ಆನಂದ.
ನಿನ್ನ ಅಡಿಗೆಯ ಪರಾಕ್ರಮ ಬಹಳ ಹಿರಿದು.
ನಾಲಗೆಯ ಸೊಕ್ಕು ಹಾಕಿದೆ ನೀನು ಮುರಿದು.

## ೧೭೪೩. ವಿಧಾನಸೌಧ

ಮನದನ್ನೆ, ನೋಡು ಇದು ಸರಕಾರಿ ಸೌಧ.
ಮಂತ್ರಿಗಳು ಕುಳಿತುಕೊಳ್ಳುವ ಜಾಗ ಹೌದಾ ?
ಹೌದು, ಸಖಿ ! ಮಲಗಲಿಕ್ಕೂ ಉಂಟು ಜಾಗ.
ಫೈಲುಗಳು ಕೂಡ ಏಳುವುದಿಲ್ಲ ಬೇಗ.

## ೧೭೪೪. ಬಿಸಿ ದೋಸೆ

ಮನದನ್ನೆ, ಬಿಸಿ ದೋಸೆ ಮಾಡು ಈ ಹೊತ್ತು
ಒಂದಲ್ಲ ಎರಡಲ್ಲ ತಿನ್ನುವೆನು ಹತ್ತು
ಆಕೆ ಎಂದಳು: ಬಕಾಸುರನ ಅವತಾರ.
ಆಗಿಬಿಟ್ಟರೆ ನೀವು ಮನೆಯ ಉದ್ಧಾರ.

## ೧೭೪೫. ಚಿಟ್ಟೆಗೆ

ಮನ ಬಂದ ಹಾಗೆ ಹಾರಾಡಿ ನೀ, ಚಿಟ್ಟೆ
ಪಂಚವಾರ್ಷಿಕದಲ್ಲಿ ನಮ್ಮ ಕೈಬಿಟ್ಟೆ.
ನಡೆದುಕೊಂಡರೆ ಹೀಗೆ ಬೇಶಿಸ್ತಿನಿಂದ
ಅಧಿಕವಾಗುವುದೆಂತು ಹೂವ ಮಕರಂದ ?

## ೧೭೪೬. ಈ ಪಕ್ಷದೊಳಗೆ

ಮನುಜನಿಗೆ ಈ ಪಕ್ಷದೊಳಗಿಲ್ಲ ಜಾಗ.
ಕೋತಿಗಳೆ ಹೆಚ್ಚಾಗಿ ವಹಿಸುವವು ಭಾಗ.
ಕರಡಿಗಳಿಗೂ ಉಂಟು ಸಾಕಷ್ಟು ಸ್ಥಾನ.
ಸುಳ್ಳು ಹೇಳುವುದಿಲ್ಲ; ಬೇಡ ಅನುಮಾನ.

## ೧೭೪೭. ಪ್ರೀತಿ

ಮನುಜನಿಗೆ ಮೊದಲು ಬೇಕಾದದ್ದು ಪ್ರೀತಿ.
ಪ್ರೀತಿಯಿದ್ದರೆ ನಡೆಯುವುದು ಯಾವ ಜಾತಿ.
ಹೊಲೆಯ ಚಮಗಾರ ಮಾದಿಗರ ಹೆಣ್ಣೆಂದು
ಕಡೆಗಣಿಸಿದಾಗ ಹೋಗುವೆ ನೀನು ಬೆಂದು.

## ೧೭೪೮. ತಂದೆ ಮತ್ತು ಮಗ

ಮನುಜರಲ್ಲೂ ಬೇಕು ಭರ್ತಿ ವೈವಿಧ್ಯ
ಎರಡು ವೈವಿಧ್ಯಗಳು ಸಿಕ್ಕಿದವು ಸದ್ಯ.
ಒಂದು ಸ್ಯಾಂಪಲ್ಲು ಮನರಂಜನೆಗೆ ಲೇಸು.
ಇನ್ನೊಂದು ಹಾಗೆಯೇ: ಇದು ಅವನ ಕೂಸು.

## ೧೭೪೯. ಹಳೆಯ ಕಾಂಗ್ರೆಸಿನವರು ಹೇಳಿದ್ದು

ಮನೆ ಮುರಿದು ಹಾಕಿದಳು ಈ ಮಹಾ ಚಂಡಿ
ಚಳಿಯಲ್ಲಿ ಮೈ ನಡುಗಿ ಜ್ವರ ಮತ್ತೆ ಥಂಡಿ
ಎಲ್ಲವೂ ಬೆಚ್ಚಗಾಗಿತ್ತು ಈ ತನಕ.
ದಯವಿಟ್ಟು ಕಾಪಾಡಬೇಕು, ಹೇ ಬೆನಕ.

## ೧೭೫೦. ಕಲ್ಯಾಣ ರಾಜ್ಯದಲ್ಲಿ

ಮನೆಯ ಅಂಗಳ ಕೂಡ ಹೊಲಸು ನಾರಿದರೆ
ಬೆಂಗಳೂರಿಗೆ ತಂತಿ ಕಳಿಸುವರು, ನೀರೆ.
ಕಲ್ಯಾಣ ರಾಜ್ಯದಾ ಎಲ್ಲ ಕಸವನ್ನು
ಸರಕಾರವೇ ಗುಡಿಸಬೇಕಂತೆ ಇನ್ನೂ.

### ೧೭೫೧. ಒಂದು ಪ್ರಶ್ನೆ

ಮನೆಯ ಮುಂದಿನ ದೇವರಿಗೆ ನಮಸ್ಕಾರ
ರಾಜ್ಯದಲಿ ಹೀಗೇಕೆ? ಈ ಚಮತ್ಕಾರ?
ದೇವನೆಂದನು! ಮಂತ್ರಿಗಳ ಸಂಖ್ಯೆ ಜಾಸ್ತಿ
ಆಡಳಿತ ಪಕ್ಷದಲಿ ಪ್ರತಿ ದಿವಸ ಕುಸ್ತಿ

### ೧೭೫೨. ವಿರಳತೆ

ಮನೆಯ ಮೊಗಸಾಲೆಯಲಿ ಮಾವುಗಳ ರಾಶಿ
ಉಸುರುಗಟ್ಟಿತು ಮೂಗು ವಾಸನೆಯ ಮೂಸಿ.
ಮಾಮರದ ಮೇಲಿತ್ತು ಬರಿ ಒಂದು ಹಣ್ಣು
ನೋಡಿ ಸಂತೋಷದಲಿ ನಲಿದಿತ್ತು ಕಣ್ಣು.

### ೧೭೫೩. ಇವನ ಕತೆ

ಮನೆಯಲ್ಲಿ ಕುಳಿತು ತಿಂಬುವುದಕ್ಕೆ ಇವನು,
ಮಾರಿಬಿಟ್ಟನು ಪವನುಗಳ ಮೇಲೆ ಪವನು,
ಈ ಪವನು ನಾಣ್ಯ ಪೂರ್ವಾರ್ಜಿತರ ಆಸ್ತಿ
ತಿಂಬುರಾಯನ ಕಾಲದೊಳಗಾಯ್ತು ನಾಸ್ತಿ.

### ೧೭೫೪. ವೈವಿಧ್ಯ

ಮನೆಯೊಳಗೆ ಇದ್ದಾಳೆ ರೂಪವತಿ ಸೋಮಿ
ಸೋಮಶೇಖರ ರಾಯರಿಗೆ ಏಕೆ ಓಮಿ?
ವೈವಿಧ್ಯ ಎನ್ನುವುದು ಜೀವನದ ಸಾರ.
ಮತ್ತೆ ಕೆಲವರಿಗೆ ಅದು ಮಧುರ ಆಹಾರ.

### ೧೭೫೫. ಅರ್ಥಮಂತ್ರಿಯ ವಿವೇಚನೆ

ಮನೆಯೊಳಗೆ ಎಮ್ಮೆ ಇದ್ದಂತೆ ಕಂದಾಯ
ಪ್ರಜೆಗಳೆಲ್ಲರೂ ಹಿಂಡಬಹುದು ಆದಾಯ
ಎಂದಿಗೂ ವ್ಯರ್ಥವಾಗುವುದಿಲ್ಲ ತೆರಿಗೆ.
ಒಂದು ದಿನ ಹಾಲಾಗಿ ಸೂಸುವುದು ಹೊರಗೆ.

## ೧೭೫೬. ಆ ಕಡೆಗೆ ಸೇರಿ

ಮನೆ ಹೆಂಗಸನು ಬಿಟ್ಟು ಆ ಕಡೆಗೆ ಸೇರಿ.
ಹೆಸರು ಗಳಿಸಿದನು ಆ ದೊಡ್ಡ ಅಧಿಕಾರಿ.
ಆಕೆ ಎಂದಳು : ನಿಮಗೆ ಏಕೆ ಈ ಮಾತು ?
ಹುಡುಕಿ ತೆಗೆಯುವುದೇಕೆ ಬೀದಿಗಳ ತೂತು ?

## ೧೭೫೭. ಮರಕಾಲು

ಮರಕಾಲು ಕಟ್ಟಿದರೆ ಉದ್ದಳತೆ ಹೆಚ್ಚಿ
ಕೂಡಲೇ ಗಿಡ್ಡತನ ಹೋಗುವುದು ಮುಚ್ಚಿ
ಕೆಲವರಿಗೆ ಮಂತ್ರಿಪದವಾಗಿ ಮರಕಾಲು
ನಿಮಿಷ ನಿಮಿಷಕೆ ಇವರು ಹೊಡೆಯುವರು ಡೋಲು.

## ೧೭೫೮. ಆಮರಣ ಉಪವಾಸ

ಮರಣ–ಸತ್ಯಾಗ್ರಹದ ವೀರರಿರುವಾಗ
ಭಾರತಕೆ ಮೋಕ್ಷಪದ ಲಭಿಸುವುದು ಬೇಗ.
ಉಪವಾಸ ವ್ರತದಿಂದ ಎಲ್ಲವೂ ಸಾಧ್ಯ
ಪಂಚವಾರ್ಷಿಕವೆನ್ನುವುದು ಬೇಡ. ಸದ್ಯ.

## ೧೭೫೯. ಅರ್ಥಮಂತ್ರಿಯ ಹೇಳಿಕೆ

ಮರದ ಭಾರವು ಹೇಗೆ ಈ ವಸುಂಧರೆಗೆ
ಹಾಗೆಯೇ ಕರಭಾರ ನರಜೀವಿಗಳಿಗೆ,
ಮರಭಾರದಿಂದಲೇ ಧರೆಯೊಳಗೆ ಹಸುರು;
ಕರಭಾರದಿಂದಲೇ ಪ್ರಜೆಗಳಿಗೆ ಮೊಸರು.

## ೧೭೬೦. ಪಕ್ಷಾಂತರ

ಮರದಿಂದ ಮರಕೆ ಶಾಸಕರ ಹಾರಾಟ
ಇದಕೆಂಬೆ ತೋಟದಲಿ ಕೋತಿಗಳ ಕಾಟ
ಈ ಕಾಟದಿಂದ ನೆಲಕುದುರಿ ಮಿಡಿಗಾಯಿ
ಪಕ್ಷವಾಗದೆ ಹೋಯ್ತು ಈ ಲೋಕಶಾಹಿ.

## ೧೭೬೧. ಮುಳ್ಳು

ಮರದೆಲೆಗೆ ಮುಳ್ಳಿದ್ದರೂ ನೆರಳು ತಂಪು
ಬರವಣಿಗೆ ಹರಿತವಾದರೂ ಚುಟಕ ಸೊಂಪು
ಸಾಹಿತ್ಯ ಲೋಕದಲಿ ಈ ತರದ ಮುಳ್ಳು
ಚುಚ್ಚಿದರೆ ವೃದ್ಧಿಯಾಗುವುದಿಲ್ಲ ಸುಳ್ಳು.

## ೧೭೬೨. ಪ್ರಜಾರಾಜ್ಯದ ಸಾಧನೆ

ಮರದೊಳಗೆ ಹಣ್ಣುಗಳ ಬದಲಾಗಿ ಸೊಪ್ಪು
ಮನೆಯೊಳಗೆ ಸಕ್ಕರೆಯ ಬದಲಾಗಿ ಉಪ್ಪು
ಪೇಟೆಯಲಿ ತಕ್ಕಡಿಯ ಬದಲಾಗಿ ಕಪ್ಪು
ಪಂಚವಾರ್ಷಿಕದಿಂದ ಬಂದದ್ದು ಮುಪ್ಪು.

## ೧೭೬೩. ನರನ ಜ್ಞಾನ

ಮರಳ ಹುಡಿಯೊಳಗಿದ್ದ ಪರಿಪೂರ್ಣ ಜ್ಞಾನ
ನರನ ತಲೆಯೊಳಗಿಲ್ಲ ! ಬೇಡ ಅನುಮಾನ.
ಅಣುಶಕ್ತಿಯನು ಹುಡುಕಿ ತೆಗೆದರೂ ನರನು.
ಮಣ್ಣ ಹುಡಿಯಲ್ಲಿಯೇ ಕೊನೆಗೆ ಮರಳುವನು.

## ೧೭೬೪. ಪ್ರಗತಿಯ ಸ್ಯಾಂಪಲ್ಲು

ಮಲ್ಲಿಗೆಯ ದಂಡೆಗೂ ಬಂತು ದುಷ್ಕಾಳ
ಅಂತೆಯೇ ನನ್ನ ಮುಡಿಯಲಿ ದಾಸವಾಳ
ದೇವರಿಗೆ ಬಹಳ ಪ್ರೀತಿಯ ಹೂವು ಅಂದ್ರೆ
ನನಗಿಲ್ಲ ದಂಡೆ ಕಟ್ಟುವ ಯಾವ ತೊಂದ್ರೆ.

## ೧೭೬೫. ತಂದೆಯ ಪ್ರಶ್ನೆ

ಮಲ್ಲಿಗೆಯ ದಂಡೆಗೂ ಮಾರಾಟ ತೆರಿಗೆ.
ಒಂದೊಂದು ಚುಂಬನಕೆ ಒಂದೊಂದು ಹೆರಿಗೆ
ಈ ರೀತಿ ಭಾರತವು ಸಾಗಿದರೆ ಮುಂದೆ
ಗತಿಯೇನು ? ಎಂದು ಕೇಳಿದನೊಬ್ಬ ತಂದೆ.

## ೧೭೬೬. ಕವಿ ಸಮಯ

ಮಲೆನಾಡ ನಾರಿಯರ ಕೆನ್ನೆ ನಾರಂಗ
ಎಂದು ಭಾವಿಸಿ ಮೂಸಿ ನೋಡಿದನು ಮಂಗ.
ಮಂಗನೂ ಕವಿಯಾದನೆಂದು ಸಾಂಭಟ್ಟ
ಬೆಂಗಳೂರಿನ ಪತ್ರಿಕೆಗೆ ವರದಿ ಕೊಟ್ಟ.

## ೧೭೬೭. ಮಲೆನಾಡ ರಮಣಿಗೆ

ಮಲೆನಾಡ ರಮಣಿ, ಕೇಳ್ ಸೊಗಸಾದ ಕನಸು;
ನಿನ್ನ ಮಂಗಳಸೂತ್ರದಲ್ಲಿ ಕರಿಮೆಣಸು
ಮತ್ತೆ ಕೊರಳಿನ ಸರವ ಯಾಲಕ್ಕಿಯಿಂದ
ಪೋಣಿಸಲು ಇಂದ್ರನೂ ಧರೆಗಿಳಿದು ಬಂದ.

## ೧೭೬೮. ಮಲೆನಾಡ ಹುಡುಗಿಗೆ

ಮಲೆನಾಡ ಹುಡುಗಿ, ಮದುವೆಯ ಮೂರ್ತ ನಾಳೆ.
ಮಂಟಪವ ಸಿಂಗರಿಸಲಿಕೆ ಉಂಟು ಬಾಳೆ
ಚಪ್ಪರಕೆ ಹಿಂಗಾರ ನಿಂಬೆ ನಾರಂಗ.
ಅಡಿಕೆಗೊನೆ ಮದುಮಗನ ತಲೆಗೆ ಬಾಸಿಂಗ.

## ೧೭೬೯. ಮಳೆಗಾಲದ ಬಿಸಿಲು

ಮಳೆಗಾಲದಲಿ ಬಿಸಿಲು ರಕರಕನೆ ಬಿದ್ದು
ನಭದೊಳಗೆ ಓಡತೊಡಗಿದವು ರಣಹದ್ದು
ಈ ಬಿಸಿಲು ಅವಲಕ್ಷಣದ ಹಾಳು ಚಿಹ್ನ.
ಬರಗಾಲ ಬಿದ್ದು ಮರೆಯಾಗುವುದು ಅನ್ನ.

## ೧೭೭೦. ಅಸೂಯೆ

ಮಳೆಗಾಲದಲಿ ಹೊರಗೆ ಕುಳಿತಿದ್ದೆ ನಾನು
ಮಂದಹಾಸದಲಿ ಕಂಗೊಳಿಸಿದನು ಭಾನು
ಮೇಘರಾಜನಿಗೆ ದೊಡ್ಡ ಅವಮಾನ
ಕುಳಿತಲ್ಲಿಯೇ ನನಗೆ ತಣ್ಣೀರ ಸ್ನಾನ.

### ೧೭೭೧. ಮಳೆ ಬಿದ್ದರೂ

ಮಳೆಬಿದ್ದರೂ ಹವೆಗೆ ಬರಲಿಲ್ಲ ತಂಪು
ಆಸ್ಪತ್ರೆಯಲ್ಲಿಯೂ ಡಾಕ್ಟರರ ಸಂಪು
ರೋಗಿಗಳು ತಡ ಮಾಡದೆಯೇ ಸ್ವರ್ಗವೇರಿ
ವಿಶ್ರಾಂತಿ ಹೊಂದಿದರು ದೇವರಲಿ ದೂರಿ.

### ೧೭೭೨. ಪ್ರಜಾರಾಜ್ಯದ ಮಳೆ

ಮಳೆಯಾಗಿ ರೈತರಿಗೆ ಬಹಳ ಆನಂದ
ಪ್ರತಿಯೊಂದು ಜಿಲ್ಲೆಯಲಿ ಬೀಳುತಿದೆ, ಕಂದ.
ಈ ವರುಷ ನಮಗಿಲ್ಲ ಯಾವುದೂ ತ್ರಾಸ,
ಮಳೆ ಎನ್ನುವುದು ಮಂತ್ರಿಗಳ ಉಪನ್ಯಾಸ.

### ೧೭೭೩. ಮಿಂಚುಹುಳುವಿಗೆ

ಮಳೆಯಿಂದ ಆರಲಾರದು ನಿನ್ನ ದೀಪ
ಎಣ್ಣೆಯೂ ಬೇಕಿಲ್ಲ; ಅದ್ಭುತ ಪ್ರತಾಪ
ಕೆಡಿಸಿಕೊಳಬೇಡ ನೀ ನಿನ್ನ ಕುಲಗೋತ್ರ
ಗಗನವನ್ನೇರಿ ನೀನಾಗು ನಕ್ಷತ್ರ.

### ೧೭೭೪. ಮಳೆಯಿಲ್ಲ

ಮಳೆಯಿಲ್ಲ, ಹಾಳಾದ್ದು ಒಣ ಗಾಳಿ ಮಾತ್ರ
ಆಗಲಿಲ್ಲವೊ ಒದ್ದೆ ಆಗಸದ ಧೋತ್ರ
ಧರೆಯೊಳಗೆ ಹನಿ ಬರದೆ ಬಂತು ದುಷ್ಕಾಳ.
ವ್ಯಾಪಾರಿಗಳು ಮಾತ್ರ ಹಾಕಿದರು ಗಾಳ.

### ೧೭೭೫. ಮಳೆರಾಯ

ಮಳೆರಾಯನಿಗೆ ಇಲ್ಲ ತುಸುವು ಪುರಸತ್ತು
ಗಿಡಬಳ್ಳಿಗಳಿಗೆಲ್ಲ ನೀಡುವನು ಮುತ್ತು
ಪುನಹ ಪುನಹಾ ಮುತ್ತು ನೀಡಿದ್ದರಿಂದ
ಹಸುರಾಗಿ ಗಿಡಬಳ್ಳಿಗಳಿಗೆ ಆನಂದ.

## ೧೭೭೬. ಅಂತರಿಕ್ಷದಲ್ಲಿ ಕೇಳಿದ್ದು

ಮೃತ್ಯುಲೋಕದ ದೆವ್ವಗಳು ನಭಕೆ ಹಾರಿ.
ಅಂತರಿಕ್ಷಕೆ ಕಾಟ ಕೊಡುತಿವೆ, ಮುರಾರಿ.
ಈ ದೆವ್ವಗಳು ಕೊನೆಗೆ ದಂಡೆತ್ತಿ ಬಂದು
ಕೊಬ್ಬುವವು ಚಂದಿರನ ನವನೀತ ತಿಂದು.

## ೧೭೭೭. ಪುಢಾರಿ ಸತ್ತಾಗ

ಮರ್ತ್ಯಲೋಕದ ಧರ್ಮ ಗಗನಲೋಕಕ್ಕೆ
ಅನ್ವಯಿಸದೆಂದು ಶ್ರುತುಪಡಿಸಿದಳು, ಚಿಕ್ಕೆ.
ಈಗಲೇ ಹೊರಡು ಇಲ್ಲಿಂದ, ಎಲೆ ಪಾಪಿ.
ಸಕಲರಿಗೆ ಗೊತ್ತುಂಟು ನಿನ್ನ ಬಿಳಿ ಟೋಪಿ.

## ೧೭೭೮. ಜನತಾ ಭೋಜನ

ಮೃಷ್ಟಾನ್ನ ಭೋಜನಕೆ ಕರೆಬಂತು, ಕಂದ.
ಎಲ್ಲರೂ ಹಾಜರಾದೆವು ಪ್ರೀತಿಯಿಂದ.
ಊಟಕ್ಕೆ ಕುಳಿತಾಗ ತುಂಬಾ ಫಜೀತಿ.
ಯಾರಿಗೂ ಸಿಗಲಿಲ್ಲ ಒಂದೂ ಚಪಾತಿ.

## ೧೭೭೯. ಚಂದ್ರಲೋಕ ಪ್ರಯಾಣ

ಮಂಕಾಳಿ, ಕೇಳಮ್ಮ ಪತ್ರಿಕೆಯ ಸುದ್ದಿ
ಸರಿಯಾಗಿ ಕುಳಿತುಕೋ! ತಲೆ ತಿರುಗಿ ಬಿದ್ದಿ.
ಚಂದ್ರದೇವನ ಹೆಗಲ ಮೇಲೇರಿ ಭೂಪ
ಬೂಟಿನಿಂದಲೆ ಹೊಡೆದ! ಏನಿದು ಪ್ರತಾಪ!!

## ೧೭೮೦. ದಿವಾಕರರು ಹೇಳಿದ್ದು

ಮಂಡೂಕದಂತೆ ಮಾನವ ಸಣ್ಣಜೀವಿ
ರಾಜಕಾರಣವೆನ್ನುವುದು ದೊಡ್ಡ ಬಾವಿ
ಮುಳು-ಮುಳುಗಿ ಮೇಲೆದ್ದು ಈ ಬಾವಿಯೊಳಗೆ
ಆದರೂ ಕಂಡಿಲ್ಲ ಸಂಪೂರ್ಣ ಒಳಗೆ.

## ೧೭೮೧. ಮಂತ್ರ

ಮಂತ್ರವಾದರೆ ಮಾತ್ರ ಕಬ್ಬಿಗನ ಮಾತು
ಕಾಲರಾಯನು ಸದಾ ಕೇಳುವನು ಕೂತು
ಅನುಭವದ ಗಿಡದೊಳಗೆ ಅರಳಿದರೆ ಹೂವು
ಸಾಹಿತ್ಯ ಸಾಮ್ರಾಜ್ಯದೊಳಗಿಲ್ಲ ಸಾವು.

## ೧೭೮೨. ಸರಕಾರ ಹೇಳಿದ್ದು

ಮಂತ್ರಿ ಉಪಮಂತ್ರಿಗಳ ಸಂಬಳ ಪ್ರಮಾಣ
ಅಧಿಕವಾದರೆ ನಮ್ಮ ರಾಜ್ಯಕ್ಕೆ ತ್ರಾಣ
ಕಡಿಮೆಯಾದರೆ ರಾಜ್ಯವೇ ಕುಸಿದು ಬಿದ್ದು
ಅರಗಳಿಗೆಯಲಿ ತಿಂದುಹಾಕುವುದು ಹದ್ದು.

## ೧೭೮೩. ಮಂತ್ರಿಗಳ ಕಿಸೆಯೊಳಗೆ

ಮಂತ್ರಿಗಳ ಕಿಸೆಯೊಳಗೆ ಎರಡು ಪಾಕೀಟು
ಒಂದರಲಿ ತುಂಬಿಕೊಂಡಿವೆ ಭಾರಿ ನೋಟು.
ಈ ನೋಟುಗಳ ಲೆಕ್ಕ ಯಾರಿಗೂ ಸಿಗದು.
ಇದಕೆನ್ನುವರು ರಾಜಕಾರಣದ ನಗದು.

## ೧೭೮೪. ಮಂತ್ರಿಗಳ ಕೈಯೊಳಗೆ

ಮಂತ್ರಿಗಳ ಕೈಯೊಳಗೆ ಬಂತು ಅಧಿಕಾರ
ಉದ್ದವಾಯಿತು ರಾಜಕಾರಣದ ದಾರ.
ಈ ದಾರದಿಂದ, ಸಖಿ, ಗಾಳಿಪಟ ಹಾರಿ
ನೋಡುವವರಿಗೆ ಹರುಷ ಆಕಾಶಕೇರಿ.

## ೧೭೮೫. ಕಂಟ್ರೋಲುಗಳ ವಿವೇಚನೆ

ಮಂತ್ರಿಗಳ ಕೈಲಿ ಕಂಟ್ರೋಲುಗಳ ಕೋವಿ
ಆಹಾರ ಧಾನ್ಯಗಳ ಬೆಲೆ ಬಹಳ ಸೋವಿ !
ಆದರೂ ನಮಗಿಲ್ಲ ಕೊಳ್ಳಲಿಕೆ ಶಕ್ತಿ.
ಜಯಶಾಲಿಯಾಯ್ತು ವ್ಯಾಪಾರಿಗಳ ಯುಕ್ತಿ.

### ೧೭೮೬. ಮಂತ್ರಿಗಳ ಜೊತೆಗೆ

ಮಂತ್ರಿಗಳ ಜೊತೆಗೆ ಕೈಕೊಂಡೆ ಸಂಚಾರ
ನೋಡಿದೆನು ಕನ್ನಡದ ರಾಜ್ಯವಿಸ್ತಾರ
ಪ್ರತಿಯೊಂದು ಹಳ್ಳಿಯಲಿ ಕಣ್ಣೀರ ಕಂಡೆ.
ಆದರೂ ಮೃಷ್ಟಾನ್ನ ಭೋಜನವನುಂಡೆ.

### ೧೭೮೭. ಮಂತ್ರಿಗಳ ಭಾಷಣಕೆ

ಮಂತ್ರಿಗಳ ಭಾಷಣಕೆ ಹದಿಮೂರು ಮಂದಿ
ಅರ್ಪಿಸಿದ ಹಾರಗಳು ಬಹಳೇ ಸುಗಂಧಿ.
ಹದಿಮೂರರಲ್ಲಿ ಅಧಿಕಾರಿಗಳು ಹತ್ತು
ಉಳಿದ ಮೂವರು ಯಾರು ? ನನಗಿಲ್ಲ ಗೊತ್ತು

### ೧೭೮೮. ಅಭಿವೃದ್ಧಿಯ ಸ್ಯಾಂಪಲ್ಲು

ಮಂತ್ರಿಗಳ ಮಗನ ಹೆಸರಲಿ ಕಾರಖಾನೆ
ಇದಕಾಗಿ ಉಂಟು ಸರಕಾರದ ಖಜಾನೆ
ಟೆಂಡರಿಲ್ಲದೆ ನೀಡಿದರು ಆರು ಕೋಟಿ
ಅಭಿವೃದ್ಧಿ ಎಂಬ ಹೆಸರಲಿ ಜನರ ಲೂಟಿ.

### ೧೭೮೯. ಮುಖ್ಯಮಂತ್ರಿಗಳ ಘೋಷಣೆ

ಮಂತ್ರಿಗಳ ಸಂಖ್ಯೆ ಇಳಿಸುವುದು ಬಲು ಕಷ್ಟ
ಇಳಿಸಿದರೆ ಲೋಕಶಾಹಿಗೆ ದೊಡ್ಡ ನಷ್ಟ
ನಿಜವಾಗಿ ನೋಡಿದರೆ ನಡೆದಾಗ ಯುದ್ಧ
ಸಚಿವ ಸಂಪುಟ ಆಗಬೇಕು ತುಸು ಉದ್ದ.

### ೧೭೯೦. ಒಂದು ಭಜನೆ

ಮಂತ್ರಿಗಳ ಸಂಗದೊಳಗಿರಿಸೆನ್ನ, ರಂಗ.
ಈ ಸಂಗದಿಂದ ನನಗಿಲ್ಲ ಭವಭಂಗ
ಎಲ್ಲವೂ ಸುರಳಿತ ಸಾಗುವುದು, ದೇವ
ಕಲ್ಲುಸಕ್ಕರೆಯಾಗಿ ರಮಿಸುವುದು ಜೀವ.

## ೧೭೯೧. ನೂತನ ಇಲಾಖೆ

ಮಂತ್ರಿಗಳ ಸಂಚಾರದಲಿ ಯಾರು ಈಕೆ ?
ಗೊತ್ತಿಲ್ವೆ ಸ್ವಾಮಿ ? ಇದು ನೂತನ ಇಲಾಖೆ.
ತಿರುಪತಿಗೆ ಹೋದರೂ ಉಂಟು ಈ ಫೈಲು
ಈ ಇಲಾಖೆಯ ಹೆಸರು : ಕಾರು ಪ್ಲಸ್ ರೈಲು.

## ೧೭೯೨. ಪ್ರಧಾನಿಯ ತೀರ್ಪು

ಮಂತ್ರಿಗಳು ಗಳಿಸಿದರೆ ವಿಪರೀತ ಫಾಯ್ದೆ
ಇದರಿಂದ ಕೆಟ್ಟುಹೋಗುವುದಿಲ್ಲ ಕಾಯ್ದೆ.
ಮಂತ್ರಿಗಳ ಕಂಪನಿಗೆ ಜಾಸ್ತಿ ಸವಲತ್ತು
ನೀಡಿದರೆ ಸರಕಾರಕಿಲ್ಲ ಆಪತ್ತು.

## ೧೭೯೩. ಮಂತ್ರಿಗಳ ಭಾಷಣ

ಮಂತ್ರಿಗಳು ನುಡಿದಾಗ ಭಾಷಣದ ಬುರುಗು
ಆದರೂ ಮುಗಿದಿಲ್ಲ ಜನಮನದ ಕೊರಗು.
ಗೊತ್ತುಂಟೆ ನಿಮಗೆ ಈ ಭಾಷಣದ ಗೂಢ ?
ಮಾತುಗಳ ಮಳೆ ಸುರಿದು ಬೆಳೆ ಬಂತು ನೋಡಾ.

## ೧೭೯೪. ಊದುವರು ಶಂಖ

ಮಂತ್ರಿಗಳು ಪ್ರತಿ ದಿವಸ ಊದುವರು ಶಂಖ.
ಈ ಮಹಾಕಾರ್ಯಕ್ಕೆ ಇಲ್ಲ ಆತಂಕ
ಆಮೇಲೆ ಮತ್ತೆ ಊದುವರು ತುತ್ತೂರಿ
ಕೇಳಲಿಕೆ ಓಡಿ ಬರುವವು ಎಲ್ಲ ಹೋರಿ.

## ೧೭೯೫. ಹೊಸ ಲೋಕಶಾಹಿ

ಮಂತ್ರಿಗಳು ಬಂದಾಗ ತರತರದ ಜನರು
ಬೇಳೆ ಬೇಯಿಸಲಿಕ್ಕೆ ಸುರಿಸಿದರು ಬೆವರು.
ಈ ಬೆವರಿನಲಿ ಕಂಡೆ ಹೊಸ ಲೋಕಶಾಹಿ
ಸಿಕ್ಕಿ ಸಿಕ್ಕಿದ ಕಡೆಗೆ ಹಚ್ಚಿದರು ಬಾಯಿ.

## ೧೭೬. ಮಂತ್ರಿಗಳು ಬಂದಾಗ

ಮಂತ್ರಿಗಳು ಬಂದಾಗ ಹಾಕಿದನು ಹಾರ
ಆದರೂ ಸಿಗಲಿಲ್ಲ ಹೊಸ ಫಲಹಾರ
ಬೆಂಗಳೂರಿಗೆ ಹೋಗಿ ಬಂದದ್ದು ವ್ಯರ್ಥ
ಈ ರೀತಿ ಮಾಡಬಾರದು ಸೃಷ್ಟಿಕರ್ತ.

## ೧೭೭. ಧಾನ್ಯದ ಅಂಕಿ ಮಗ್ಗಿ

ಮಂತ್ರಿಗಳು ಲೋಕಸಭೆಯಲಿ ಕೊಟ್ಟ ಅಂಕೆ.
ನಂಬಿದರೆ ಹೊಟ್ಟೆ ತುಂಬುವುದಿಲ್ಲ ಮಂಕೆ.
ಲಕ್ಷ ದಶಲಕ್ಷ ಕೋಟಿಯ ಅಂಕಿ ಮಗ್ಗಿ.
ಜಾಹೀರು ಪಡಿಸಿಯೂ ಸಿಗಲಿಲ್ಲ ಹುಗ್ಗಿ.

## ೧೭೮. ಮಂತ್ರಿಗಳು ಹೇಳಿದ್ದು

ಮಂತ್ರಿಗಳು ಹೇಳಿದರು : ಮಾಡಿದರೆ ಟೀಕೆ,
ಸರಕಾರಿ ಗ್ರ್ಯಾಂಟು ರದ್ದಾಗುವುದು ಜೋಕೆ
ಅರ್ಥವಿಲ್ಲದೆ ನೀವು ಹಾಕಿದರೆ ಗುಲ್ಲು
ಮೂಡಿ ಬಂದಂತೆ ಹೊಲದಲ್ಲಿ ಜಡ್ಡಿ ಹುಲ್ಲು.

## ೧೭೯. ಇವಳ ಪರಾಕ್ರಮ

ಮಂತ್ರಿ ಬಂದರೆ ಇವಳ ಆದರಾತಿಥ್ಯ
ಮಧ್ಯರಾತ್ರಿಯ ತನಕ ಕೋಣೆಯಲಿ ನೃತ್ಯ
ಸರಕಾರಿ ಸೌಧದಲ್ಲೂ ಇವಳ ಹೆಜ್ಜೆ
ಮುಖ್ಯಮಂತ್ರಿಗೆ ಕೂಡ ಕಟ್ಟಿದಳು ಗೆಜ್ಜೆ

## ೧೮೦೦. ಮಂತ್ರಿಗೆ ಮುಗುದಾಣಿ

ಮಂತ್ರಿ ಬಂದಾಗ ಜನರೆಲ್ಲರೂ ಸೇರಿ
ಒತ್ತಾಯಪಡಿಸಿದರು ಕೊನೆಗೆ ಜಯಭೇರಿ
ಮಂತ್ರಿವರ್ಯನಿಗೆ ಹಾಕಿದರೆ ಮುಗುದಾಣಿ
ಸರಿಯಾಗಿ ಕೆಲಸ ಮಾಡುವುದು ಈ ಪ್ರಾಣಿ.

## ೧೮೦೧. ಮಂತ್ರಿ ಬಂದಾಗ

ಮಂತ್ರಿ ಬಂದಾಗ ವಿಪರೀತ ಮಳೆ ಸುರಿದು
ನೀರಿನ ಪ್ರವಾಹದಲಿ ಕೃತಿ ಹೋಯ್ತು ಹರಿದು
ಕೃತಿ ಹರಿದು ಹೋದರೂ ಕೆಲವರಿಗೆ ಕಾವು
ಸರಕಾರಿ ಬಂಗ್ಲೆಯಲಿ ಕೋಳಿಯ ಪುಲಾವು.

## ೧೮೦೨. ಸರಕಾರದ ಅರಿಕೆ

ಮಂತ್ರಿಮಂಡಲವನ್ನು ಹೊಗಳಿ ಪ್ರತಿ ದಿವಸ
ಸಹಕರಿಸವುದು ವೃತ್ತಪತ್ರಿಕೆಯ ಕೆಲಸ
ಮತ್ತೆ ಲೇಖನಗಳನು ಆದಷ್ಟು ಉದ್ದ
ಗೀಚಿದರೆ ಆಡಳಿತವಾಗುವುದು ಶುದ್ಧ.

## ೧೮೦೩. ವಾರ್ಷಿಕ ಬಜೆಟ್ಟು

ಮಂತ್ರಿಮಂಡಲದ ಕೈಯಲಿ ನಮ್ಮ ಜುಟ್ಟು
ಇದಕೆನ್ನುವರು ಮಗನೆ ವಾರ್ಷಿಕ ಬಜೆಟ್ಟು
ಯಾರಾದರೂ ಬೆಳೆಸಿದರೆ ಗಡ್ಡ ಮೀಸೆ
ಪೂರ್ಣ ಕತ್ತರಿಸಬೇಕೆಂಬ ಅಭಿಲಾಷೆ.

## ೧೮೦೪. ಶ್ರಮಜೀವಿ ಹೇಳಿದ್ದು

ಮಂತ್ರಿಮಂಡಲ ರಚನೆ ಕರಡಿಗಳ ಆಟ.
ಪ್ರತಿ ವರುಷ ಹೆಚ್ಚಾಗುತಿದೆ ಇದರ ಕಾಟ
ದಿನ ಹೋದ ಹಾಗೆಲ್ಲ ಸಂಸಾರ ತುಟ್ಟಿ
ಹಗಲಿರುಳು ದುಡಿದರೂ ಸಿಗಲಿಲ್ಲ ರೊಟ್ಟಿ.

## ೧೮೦೫. ಕೈಕಮಾಂಡ್ ಹೇಳಿದ್ದು

ಮಂತ್ರಿಮಂಡಲ ರಚನೆಯೊಂದು ಕಸರತ್ತು
ಪಗಡೆಯಾಟದಲ್ಲಿ ತಜ್ಞರಿಗೆ ಮಾತ್ರ ಗೊತ್ತು
ರಾಜಕಾರಣದಲ್ಲಿ ತರತರದ ಪ್ರಾಣಿ
ಪುಸಲಾಯಿಸುವ ಕೆಲಸ ಬಲು ಕಷ್ಟ ಸ್ವಾಮಿ.

### ೧೮೦೬. ಹೂವಿನ ಅಪಾತ್ರತೆ

ಮಂತ್ರಿಮಂಡಲ ಸೇರಬೇಕೆಂಬ ಬಯಕೆ
ಜಾಜಿ ಮಲ್ಲಿಗೆ ಬಕುಲ ಸೇವಂತಿಗೇಕೆ ?
ನೀರುಳ್ಳಿ ಹುಣಸೆ ಕುಂಬಳಕಾಯಿಗಳಿಗೆ
ರಾಜಕಾರಣ ಯೋಗ್ಯ; ಅಲ್ಲ ಹೂಗಳಿಗೆ.

### ೧೮೦೭. ಪೆಟ್ರೋಲು ಪಂಪು

ಮಂತ್ರಿಯಾಗಿದ್ದಾಗ ಪಂಪು ಏಳೆಂಟು
ಇವನ ಕೈಯಿಗೆ ಸಿಕ್ಕಿ ಕಾಯಮ್ಮು ಗಂಟು.
ಮಂತ್ರಿಪದ ಮುಗಿದಾಗ ಪೆಟ್ರೋಲು ಪಂಪು
ದಿನದಿನಕೆ ನೀಡುತಿದೆ ಕಿಸೆ ತುಂಬ ತಂಪು.

### ೧೮೦೮. ಮಂತ್ರಿ ಸಿದ್ಧವೀರಣ್ಣ

ಮಂತ್ರಿಯಾಗಲು ನಮ್ಮ ಸಿದ್ಧವೀರಣ್ಣ
ತನ್ನ ಪಕ್ಷದ ಹಣೆಗೆ ಹಚ್ಚಿದನು ಬಣ್ಣ
ಹೆಂಡತಿಯ ಹೆಸರಿನಲಿ ಎಕರೆ ನೂರಾರು
ಒಳಗೆ ಹಾಕಿದನೆಂದು ಬಂತು ತಕರಾರು.

### ೧೮೦೯. ನಿರಾಶೆ

ಮಂತ್ರಿಯಾಗುವ ಛಾನ್ಸು ಉಂಟೆಂದು ಭರ್ತಿ
ಇಂಡಿಕೇಟಿಗೆ ಸೇರಿದನು ಕೃಷ್ಣಮೂರ್ತಿ
ಶಾಸಕನ ಜಾಗವೂ ಸಿಗಲಿಲ್ಲ ಕೊನೆಗೆ
ಕೈಲಿ ಚುರುಮುರಿ ಕೊಟ್ಟು ಕಳಿಸಿದರು ಮನೆಗೆ.

### ೧೮೧೦. ಶಾಖಾ ರಹಿತ ಸಚಿವ

ಮಂತ್ರಿಯಾದನು ಇವನು ಕೇಂದ್ರದಲಿ ಪುನಹಾ
ಏನೆಂಬೆ ? ಈ ಸರ್ತಿ ದಫ್ತರದ ವಿನಹಾ
ದಫತ್ತರವು ಇಲ್ಲದಿದ್ದರೆ ಬಹಳ ಲೇಸು
ಯಾವಾಗಲೂ ಎರಡು ಕೈಗಳನು ಬೀಸು.

## ೧೮೧೧. ಮಂತ್ರಿಯಾದನು

ಮಂತ್ರಿಯಾದನು ಕೊನೆಗೆ ಈ ಮಹಾರಾಯಾ
ಒಂದಲ್ಲ ಎರಡು ನಾನಾ ಉಪಾಯ
ಮಂತ್ರಿಪದ ಮುಗಿದಾಗ ಇವನ ಕಿಸೆ ಬಾದಿ
ಇದಕೆನ್ನುವರು ಜನರು ನೂತನ ಯುಗಾದಿ.

## ೧೮೧೨. ನಮ್ಮ ಶ್ಯಾಮಣ್ಣ

ಮಂತ್ರಿಯಾದನು ಕೊನೆಗೆ ನಮ್ಮ ಶಾಮಣ್ಣ
ನಿಮಿಷದಲಿ ಸಂಪೂರ್ಣ ಬದಲಾಯ್ತು ಬಣ್ಣ
ಓರೆ ಟೋಪಿಯ ಧರಿಸಿ ಜಿಲ್ಲಾ ಪ್ರವಾಸ
ದೊಡ್ಡ ಸೆಟ್ಟಿಯ ಜೊತೆಗೆ ಈತನ ನಿವಾಸ.

## ೧೮೧೩. ಹೊಸ ರೈಲುಮಂತ್ರಿ

ಮಂತ್ರಿಯಾದನು, ಮಗನೆ, ನಮ್ಮ ಭೈರಪ್ಪ
ಬೆಣ್ಣೆಯಿದ್ದುದು ಕೊನೆಗೆ ಆದಂತೆ ತುಪ್ಪ.
ಕಾರವಾರದ ವರೆಗೆ ಬರಬಹುದು ರೈಲು
ಹುಬ್ಬಳ್ಳಿಯಿಂದ ಬರಿ ಹದಿನೆಂಟು ಮೈಲು!

## ೧೮೧೪. ಕಂತ್ರಾಟುದಾರ ಹೇಳಿದ್ದು

ಮಂತ್ರಿಯೊಲಿದರೆ ಮಾತ್ರ ಕೊನರುವುದು ಕೊರಡು
ಒಲಿಯದಿದ್ದರೆ ಬಸುರು ಹೆಂಗಸೂ ಬರಡು
ಬರಿ ಟೆಂಡರಿನ ಮೇಲೆ ಉಂಟೇನು ಆಸೆ?
ತೃಪ್ತಿ ಹೊಂದಲೆಬೇಕು ಸಚಿವರ ಪಿಪಾಸೆ.

## ೧೮೧೫. ಮಂತ್ರಿಗಳ ಸಂಖ್ಯೆ

ಮಂತ್ರಿವರ್ಯರ ಸಂಖ್ಯೆ ಇರಬೇಕು ಹೆಚ್ಚು
ಅಧಿಕವಾಗುವುದು ನವ ಭಾರತದ ಕೆಚ್ಚು
ಆಮೇಲೆ ಸೇನೆಯೂ ಬೇಕಿಲ್ಲ ಕಂದ
ರಾಷ್ಟ್ರೀಯ ಉಳಿತಾಯವಾಗಿ ಆನಂದ.

## ೧೮೧೬. ಸಂಚಾರಗಳ ಫಲಶ್ರುತಿ

ಮಂತ್ರಿವರ್ಯರಿಗೆ ಸಂಚಾರ ಅನಿವಾರ್ಯ
ಸಂಚಾರದಲಿ ಸಫಲವಾಗುವುದು ಕಾರ್ಯ
ಬೇಲೇಕೇರಿಯ ಬಂಗಲೆಗೆ ಬಂದು ನೋಡಿ
ಸಂಜೆಯಾಗಲು ಪಾರಿವಾಳಗಳ ಜೋಡಿ.

## ೧೮೧೭. ವ್ಯಾಪಾರಿ ಹೇಳಿದ್ದು

ಮಂತ್ರಿವರ್ಯರೆ, ನಿಮಗೆ ಶರಣು ಶರಣೆಂಬೆ
ಈ ಪ್ರಜಾರಾಜ್ಯದಲಿ ನಾನೊಂದು ಗೊಂಬೆ
ಈ ಗೊಂಬೆ ಕುಣಿಯದಿದ್ದರೆ ನಿಮಗೆ ಸಿಟ್ಟು
ರದ್ದಾಗುವುದು ನನಗೆ ಕೊಟ್ಟ ಪರ್ಮಿಟ್ಟು

## ೧೮೧೮. ಮಂತ್ರಿವರ್ಯರೆ

ಮಂತ್ರಿವರ್ಯರೆ, ನೀವು ಸಿಟ್ಟಾಗಬೇಡಿ
ಈ ರೀತಿ ಗೀಚುವುದು ನನಗೊಂದು ರೂಢಿ
ಗೀಚದಿದ್ದರೆ ನಾನು ಹೋಗುವೆನು ಸತ್ತು
ಆಮೇಲೆ ನಿಮಗೆ ಬರಬಹುದು ತಾಕತ್ತು.

## ೧೮೧೯. ವಂಶ ಪರಂಪರೆ

ಮಂತ್ರಿ ಸತ್ತಾಗ ಮಗನೂ ಮಂತ್ರಿಯಾದ
ಈ ಬಗ್ಗೆ ಎತ್ತಬಾರದು ಯಾವ ವಾದ.
ವಂಶದ ಪರಂಪರೆಗೆ ಹೆಚ್ಚಿನ ಮಹತ್ವ
ನೀಡಬೇಕೆನ್ನುವುದು ಪ್ರಾಚೀನ ತತ್ವ.

## ೧೮೨೦. ಕವಿಯ ಸೃಷ್ಟಿ

ಮಂದಿರವ ಕಟ್ಟಲಿಕೆ ಬೇಡ ಇಟ್ಟಂಗಿ
ಗಾಳಿಗೋಪುರದಲ್ಲಿ ಹೊಲಿಯುವನು ಅಂಗಿ.
ಚಿನ್ನವಿಲ್ಲದೆ ಮನೋರಮೆಗೆ ಬೆಂಡೋಲೆ
ಮಾತಿನಲಿ ಬ್ರಹ್ಮಾಂಡ! ಇಲ್ಲ ಸಂಕೋಲೆ!

## ೧೮೨೧. ಮಾಜಿ ಮಂತ್ರಿಗಳು

ಮಾಜಿ ಮಂತ್ರಿಗಳೆಲ್ಲರೂ ಜಾರಿ ಕೆಳಗೆ
ಬಿಳಿ ಟೋಪಿ ಸಹಿತ ಬಿದ್ದರು ಹಳ್ಳದೊಳಗೆ
ಹಳ್ಳದಲಿ ಹರಿ ಹರಿದು ಅರಬೀ ಸಮುದ್ರ
ಭೂಲೋಕದೊಳಗಿಲ್ಲ ಯಾವುದೂ ಭದ್ರ.

## ೧೮೨೨. ನಾನಾ ತಮಾಷೆ

ಮಾಡಬೇಕೆನ್ನುವೆನು ನಾನಾ ತಮಾಷೆ
ಓ ಗೆಳತಿ, ಇದು ನನ್ನ ಜೀವನದ ಆಸೆ.
ಈ ತಮಾಷೆಗೆ ನೀನು ಮೆಚ್ಚದಿದ್ದಾಗ
ನನ್ನ ಲೇಖನಿಗೆ ಹಿಡಿಯುವುದು ಕ್ಷಯರೋಗ.

## ೧೮೨೩. ಸಗಟು ವ್ಯಾಪಾರಿಗೆ

ಮಾಡಬೇಕೆನಿಸಿದರೆ ಧಾನ್ಯದ ಖರೀದಿ
ನಖಶಿಖಾಂತದ ವರೆಗೆ ಧರಿಸಿಕೊಳಿ ಖಾದಿ
ಪೋಲಿಸರಿಂದಲೂ ನಿಮಗಿಲ್ಲ ತ್ರಾಸ
ಇದಕೆನ್ನುವರು ದೇಶಭಕ್ತಿಯ ವಿಕಾಸ.

## ೧೮೨೪. ಸರಕಾರಿ ಕಾಮಗಾರಿಗಳು

ಮಾಡಿದರು ಕೋಟಿ ರೂಪಾಯಿ ಮಂಜೂರು
ಕಾಮಗಾರಿಯ ಕೆಲಸ ವಿಪರೀತ ಜೋರು
ಕೆಲಸ ಜೋರಾದಂತೆ ನುಂಗುವುದು ಜಾಸ್ತಿ
ಸಿಬ್ಬಂದಿಗಳಿಗಾಯ್ತು ವಿಪರೀತ ಆಸ್ತಿ.

## ೧೮೨೫. ವಿದ್ಯಾರ್ಥಿಗೆ

ಮಾಡಿದರೆ ಚೈನಿ ಅತ್ತರು ಹಚ್ಚಿ ಕೈಗೆ
ನಿನ್ನ ವಿದ್ಯಾಭ್ಯಾಸ ಆಗುವುದು ಹೇಗೆ ?
ತಂದೆ ಮಾಡಿದ ಆಸ್ತಿ ಎಷ್ಟು ದಿನ ತಿಂಬೆ ?
ಮೂರು ದಿನದೊಳಗೆ ಮುಗಿಯುವುದು ಆಳಂಬೆ.

## ೧೮೨೬. ಮಾತನಾಡಿದನು

ಮಾತನಾಡಿದನು ಸರಕಾರದ ವಿರುದ್ಧ
ಮರುದಿವಸ ಕಿವಿ ಹಿಂಡಿ ಅದು ಆಯ್ತು ಉದ್ದ.
ಹಿಡಿದುಬಿಟ್ಟರು ಪಾಪ ಹಾಕಿ ಆರೋಪ.
ಹೀಗುಂಟು ಈ ಲೋಕಶಾಹಿಯ ಸ್ವರೂಪ.

## ೧೮೨೭. ಮಾತನಾಡುವ ಶೈಲಿ

ಮಾತನಾಡುವ ಶೈಲಿಯಲಿ ಬರೆದುಬಿಟ್ಟೆ
ಗಟ್ಟಿಯಾಯಿತು ನನ್ನ ಚೌಪದಿಯ ರಟ್ಟೆ
ಡೊಳ್ಳು ಹೊಟ್ಟೆಯ ವ್ಯಾಧಿ ಬರಲಿಲ್ಲ ತುಸುವು
ಹೀಗಾಗಿ ಚೌಪದಿಗೆ ವಿಪರೀತ ಕಸುವು.

## ೧೮೨೮. ಯಂತ್ರತಂತ್ರ

ಮಾತಾಡಬೇಕೆನಲು ಮುಂದೆ ಧ್ವನಿಯಂತ್ರ
ಹಾಡಬೇಕೆಂದಾಗ ಬಾನುಲಿಯ ತಂತ್ರ
ಯಂತ್ರಮಂತ್ರಗಳಲ್ಲೆ ಮಾನವನ ಜೀವ,
ನೇತಾಡುತಿರಬೇಕೆ ? ಮಾತಾಡು, ದೇವ.

## ೧೮೨೯. ಮಾತಾಡಿ

ಮಾತಾಡಿ ಮಾತಾಡಿ ನಡೆಸಿದರು ಗಾಡಿ
ಇದಕೆನ್ನುವೆನು ನಮ್ಮ ಭಾರತದ ನಾಡಿ
ಹೋದಲ್ಲಿ ಬಂದಲ್ಲಿ ನಿಂತಲ್ಲಿ ಮಾತು
ಮತ್ತಷ್ಟು ಅಗಲವಾಯಿತು ಕಿವಿಯ ತೂತು.

## ೧೮೩೦. ದೊಡ್ಡ ಪರಿಷತ್ತು

ಮಾತಾಡಿ ಮಾತಾಡಿ ಮಾತಾಡಿ ಇವರು
ಮಧ್ಯರಾತ್ರಿಯ ತನಕ ಸುರಿಸಿದರು ಬೆವರು
ಇದಕೆನ್ನುವರು ಜನರು ದೊಡ್ಡ ಪರಿಷತ್ತು
ಮಾತು ಹೆಚ್ಚಾಗಿ ವೇದಿಕೆ ಕುಸಿದು ಬಿತ್ತು.

## ೧೮೩೧. ಅಧಿವೇಶನಗಳ ಫಲಶ್ರುತಿ

ಮಾತಾಡಿ ಮಾತಾಡಿ ಮಾತಾಡಿ ಇವರು,
ಲೋಕಶಾಹಿಗೆ ಬಂತು ವಿಪರೀತ ಬೆವರು.
ಈ ಬೆವರಿನಲ್ಲಿ ದೇಶದ ಪ್ರಗತಿ ಕಂಡೆ.
ಮಾತಿನಲಿ ಕಟ್ಟಿದರು ಸಕ್ಕರೆಯ ಉಂಡೆ.

## ೧೮೩೨. ಮಾತು

ಮಾತಾಡಿ ಮಾತಾಡಿ ಮಾತಾಡಿ ಕೊನೆಗೆ
ಎಲ್ಲರೂ ಹೊರಟು ಹೋದರು ತಮ್ಮ ಮನೆಗೆ
ಇರುವೆ ಎಂದಿತು : ನಾನು ಮಾತಾಡಲಿಲ್ಲ
ನಾನು ಮಾಡಿದ ಕೆಲಸ ಭಗವಂತ ಬಲ್ಲ.

## ೧೮೩೩. ಮಾತಾಡು ಹೆಚ್ಚು

ಮಾತಾಡು ಮಾತಾಡು ಮಾತಾಡು ಹೆಚ್ಚು
ನಮ್ಮ ಭಾರತದಲ್ಲಿ ಇದು ಒಂದು ಹುಚ್ಚು
ನಡೆದಾಗ ನಿಂತಾಗ ನಡುರಸ್ತೆಯಲ್ಲಿ
ಮೆಲ್ಲಮೆಲ್ಲನೆ ಸಾಗು ಮಾತುಗಳ ಚೆಲ್ಲಿ.

## ೧೮೩೪. ನನ್ನ ಗೆಳೆಯ

ಮಾತಾಡುವುದು ಕಡಿಮೆ, ತಿನ್ನಲಿಕೆ ಜೋರು.
ಮೀನು ತಂದರೆ ಬೇಕು ಹದಿನೆಂಟು ಸೇರು,
ಮೈಕಟ್ಟು ಬಲುದಪ್ಪ, ದಾಂಡಗಿ ಮನುಷ್ಯ
ಅಪ್ರತಿಮವಾದದ್ದು ಇವನ ಆಲಸ್ಯ.

## ೧೮೩೫. ಮಾತು

ಮಾತು ಕವಿಗಳ ಗೊಂಬೆ, ಮಾತು ಜಗದಂಬೆ
ಮಾತು ಹೂವಾದೊಡನೆ ಮುಡಿಯುವಳು ರಂಭೆ.
ಮಾತಿನಿಂದಲೆ, ಮಗಳೆ, ಮೆಚ್ಚುವನು ಗಂಡ
ಮಾತು ಜ್ಯೋತಿರ್ಲಿಂಗ, ಮಾತು ಬ್ರಹ್ಮಾಂಡ.

### ೧೮೩೬. ಮಾತುಗಾರಿಕೆ

ಮಾತುಗಾರಿಕೆ ನಮ್ಮ ಮುಖ್ಯ ವ್ಯವಸಾಯ.
ಮಾತುಗಳು ಮುಗಿದಾಗ ತರತರದ ಪೇಯ.
ಆಮೇಲೆ ಶುರುವಾಗಿ ತರತರದ ಹರಟೆ
ಮನೆಗೆ ಮುಟ್ಟುವ ಮೊದಲೆ ಕೈಯೊಳಗೆ ಗೆರಟೆ.

### ೧೮೩೭. ಮಾತು

ಮಾತು ಜ್ಯೋತಿರ್ಲಿಂಗ, ಭಾವನೆಯ ಮಿಂಚು.
ಮಾತು ಬಿರುಸಾಗಿ ಹಾರಾವುದುಂಟು ಹಂಚು.
ಮಾತು ಮಾನವ ಶಕ್ತಿ, ಜೀವನದ ಶ್ವಾಸ
ಮಾತಾಗುವುದು ರಾಜಕೀಯದಲಿ ಮೋಸ.

### ೧೮೩೮. ಮಾತಿನ ಮಹಿಮೆ

ಮಾತು ಜ್ಯೋತಿರ್‌ಲಿಂಗವೆನ್ನುವುದು ಸತ್ಯ.
ಮಾತಾಡಿ ಮಾತಾಡಿ ಗಳಿಸಿದರು ಭತ್ಯ.
ಮಾತಿನಲಿ ಸಾಮ್ರಾಜ್ಯ ಕಟ್ಟಿದರು ಇವರು.
ಮಾತು ಅರಿಯದ ಮಂದಿ ಸುರಿಸಿದರು ಬೆವರು.

### ೧೮೩೯. ಜ್ಯೋತಿ

ಮಾತು ಜ್ಯೋತಿರ್‌ಲಿಂಗ ಹೌದೆ, ಚುಟಕಮ್ಮಾ?
ಮಾತು ಮಾನವ ಜಾತಿ ತಿಳಿತೇನು, ತಮ್ಮಾ?
ಜ್ಯೋತಿಯಿಂದಲೆ ಮನುಜ, ಜ್ಯೋತಿಯೇ ಪ್ರಾಣ.
ಪ್ರತಿಯೊಂದು ಜೀವಿಗೂ ಜ್ಯೋತಿಯೇ ತ್ರಾಣ.

### ೧೮೪೦. ಕನ್ನಡಾಭಿಮಾನಿ ಹೇಳಿದ್ದು

ಮಾತು ಮಾತಿಗೆ ಲೈಟು, ಟೇಬಲ್ಲು, ರೂಮು,
ಪೆನ್ನು, ಪೇಪರು, ಬುಕ್ಕು, ಕರ್ಚೀಫು, ಗೇಮು,
ಮುಂದುವರಿದರೆ ಇಂಥ ಶಬ್ದಗಳ ದಾಳಿ
ಶೀಘ್ರದಲಿ ತೆಗೆಯುವುದು ಕನ್ನಡ ದಿವಾಳಿ.

## ೧೮೪೧. ಮಾತು

ಮಾತು ಮಾತಿಗೆ ಸೇರಿ ಜನಿಸಿದ್ದು ಪ್ರೀತಿ
ಮಾತು ಮಾತಿಗೆ ತಾಗಿ ಹುಟ್ಟಿದ್ದು ಭೀತಿ
ಮಾತು ಅರಿದಾತನಿಗೆ ಮಾನ-ಮರಿಯಾದೆ
ಮಾತನರಿಯದ ಮನಕೆ ನಾನಾ ತಗಾದೆ.

## ೧೮೪೨. ಭರವಸೆ

ಮಾನವನ ಆತ್ಮವೆಂದರೆ ಒಂದು ಗ್ಯಾಸು
ಸ್ವರ್ಗವೇರಲು ಅದಕೆ ಬರಿ ಒಂದು ತಾಸು
ಹೀಗೆಂದು ಭರವಸೆಯ ನೀಡೆ ವಿಜ್ಞಾನಿ
ಚಿಂತೆಯಿಲ್ಲದೆ ಪ್ರಾಣ ನೀಗಿದನು ಜ್ಞಾನಿ.

## ೧೮೪೩. ಗೊಂಬೆಯ ಹೇಳಿಕೆ

ಮಾನವನ ಕೂಸಂತೆ! ಸಾಕು ಬಡಿವಾರ!
ಗೊಂಬೆಗಳ ನಿರ್ಮಲತೆ ಎಂದಿಗೂ ಭಾರ
ಮಲಮೂತ್ರಗಳ ಮುದ್ದೆ ಮಾನವನ ಪಿಳ್ಳಿ
ಇದಕಿಂತಲೂ ಶುದ್ಧವೆಂಬೆ ನೀರುಳ್ಳಿ.

## ೧೮೪೪. ದೇವರ ಹೇಳಿಕೆ

ಮಾನವನ ಮುತ್ತಜ್ಜಿ ಈ ಕಾಡುಕೋತಿ
ಬಸುರಾದ ಕೂಡಲೇ ಹುಟ್ಟಿದವು ಜಾತಿ,
ಬಲು ಪುರಾತನ ಕಾಲದೀ ಸಂಪ್ರದಾಯ
ಮುಂದುವರಿಯುವುದು ಖಾತ್ರಿ ನನ್ನ ತರುವಾಯ.

## ೧೮೪೫. ಮಾನವರ ಹಾರಾಟ

ಮಾನವನ ಹಾರಾಟವಿದು ವ್ಯರ್ಥವಯ್ಯಾ
ಮೂರು ದಿನ ಕುಣಿಯುವರು ತಕಧಿನ್ನ ಥಯ್ಯಾ
ಅಂತರಿಕ್ಷಕೆ ಹಾರಿ ಚಂದಿರನ ಚಾಂದಿ
ಧರೆಗಿಳಿಸುವುದು ಸಾಧ್ಯವಿಲ್ಲೆಂದ ಗಾಂಧಿ.

## ೧೮೪೬. ಮಾನವನಿಗೂ ಮಿಗಿಲು

ಮಾನವನಿಗೂ ಮಿಗಿಲು ಮರ ಸಾಗವಾನಿ
ಮುಖ್ಯಮಂತ್ರಿಗೆ ಬೆಟ್ಟದಲಿ ಮೇಜವಾನಿ
ರಾಜ್ಯಪಾಲರು ಬರಲು ಹುಲಿ ಕರಡಿ ಹಂದಿ
ಸ್ವಾಗತಕೆ ಬಂದು ನಿಂತವು; ಇಲ್ಲ ಮಂದಿ.

## ೧೮೪೭. ಒಂದಾಗಬೇಕು

ಮಾನವರು ಎಲ್ಲರೂ ಒಂದಾಗಬೇಕು
ಎನ್ನುವುದು ಧರೆಯೊಳಗೆ ಬಲು ದೊಡ್ಡ ಜೋಕು
ಎಲ್ಲರೂ ಒಂದಾಗಬೇಕೆಂಬ ಗಂಟೆ
ಬಾರಿಸಿದ ಕೂಡಲೇ ಹೆಚ್ಚಾಯ್ತು ತಂಟೆ.

## ೧೮೪೮. ರಸ್ತೆಯಲಿ ಬಿದ್ದ

ಮಾರಾಯ ಕುಡಿಕುಡಿದ ರಸ್ತೆಯಲಿ ಬಿದ್ದ.
ಆದರೂ ರಾಜಕಾರಣದಲ್ಲಿ ಗೆದ್ದ.
ಮೊನ್ನೆ ಆರಸಿ ಬಂದು ಗಳಿಸಿದನು ಸೀಟು.
ಇಂಥವರಿಗೇ ಇವರು ಕೊಟ್ಟರು ತಿಕೀಟು.

## ೧೮೪೯. ಆಸ್ಪತ್ರೆಯಲ್ಲಿ ಕೇಳಿದ್ದು

ಮಾರಾಯ, ಕೇಳು, ಇದು ಅಲ್ಲ ಆಸ್ಪತ್ರೆ
ಇದಕೆನ್ನುವರು ರೋಗಿಗಳ ಮಹಾಯಾತ್ರೆ
ಪುಣ್ಯವಂತರಿಗೆ ಶೀಘ್ರದಲಿ ಕೈಲಾಸ
ಬದುಕಿದವರಿಗೆ ಪಾಪ ಸಾಯದೆಯೆ ತ್ರಾಸ.

## ೧೮೫೦. ಚುಟಕಮ್ಮ ಹೇಳಿದ್ದು

ಮಾರಾಯ, ಗೊತ್ತುಂಟೆ ನನ್ನ ಒಳಗುಟ್ಟು ?
ಎಂದಿಗೂ ನಾನು ಆಗುವುದಿಲ್ಲ ಮುಟ್ಟು,
ನಿತ್ಯವೂ ಬಸುರಾಗುವೆನು ಮಧ್ಯರಾತ್ರಿ
ಮುಂಜಾನೆ ಚುಟಕ ಮರಿ ಜನಿಸುವುದು ಖಾತ್ರಿ.

### ೧೮೫೧. ಮಾನಪತ್ರ

ಮಾರಾಯ, ನನಗೇಕೆ ಈ ಮಾನಪತ್ರ
ನಾನುಟ್ಟುಕೊಂಡಿಲ್ಲ ಮಂತ್ರಿಗಳ ಧೋತ್ರ
ತಲೆಗಿಲ್ಲ ದೇಶಭಕ್ತರ ಶುಭ್ರ ಟೋಪಿ
ಮಾನಪತ್ರದ ಬದಲು ಕೊಡಿ ಸ್ವಲ್ಪ ಕಾಫಿ.

### ೧೮೫೨. ಹೆಂಡತಿಗೆ

ಮಾರಾಯ್ತಿ, ಈಗಿಲ್ಲ ಯಾವುದೂ ಅಗ್ಗ;
ಈ ಪರಿಸ್ಥಿತಿಯೊಳಗೆ ತರಲೇನು ಹಗ್ಗ?
ನಾವಿಬ್ಬರೂ ಕೂಡಿ ಈ ಹಗ್ಗದಿಂದ
ಸಂಸಾರ ಸಾಗರವ ದಾಟಬಹುದೆಂದ.

### ೧೮೫೩. ಗಾಂಧೀ ಜಯಂತಿ

ಮಾರಾಯ್ತಿ ಈ ಹೊತ್ತು ಗಾಂಧೀ ಜಯಂತಿ
ಯೋಗ್ಯ ರೀತಿಯಲ್ಲಿ ಆಚರಿಸಬೇಕಂತಿ
ಬಾಪೂಜಿಗಿಲ್ಲ ಮನುಜನ ಹುಟ್ಟು ಸಾವು
ಬಾಪೂಜಿ ಎನ್ನುವುದು ಭೂತಲದ ಕಾವು.

### ೧೮೫೪. ಬೇಹುಗಾರಿಕೆ

ಮಾರುತನು ವಿಶ್ರಮಿಸುವಾಗಲೂ ಕೂಡ
ಕಾವಲಿಡುವುದು ಒಳಿತು ಪ್ರತಿಯೊಂದು ಮೋಡ
ಮಂದಮಾರುತನೆಂದು ವಿಶ್ವಾಸವಿಡಲು
ಬಿರುಗಾಳಿಯೆದ್ದು ಗರ್ಜಿಸಬೇಕೆ ಕಡಲು?

### ೧೮೫೫. ನಿಸರ್ಗ

ಮಾವಿಗೂ ಬಾಳೆಗೂ ಬಲು ದೊಡ್ಡ ವ್ಯಾಜ್ಯ
ಮಾವು ಅಂದಿತು; ನಿನಗೆ ಒಳಗಿಲ್ಲ ಬೀಜ
ಬಾಳೆ ಅಂದಿತು; ಸದಾ ಸವಿ ನನ್ನ ಬಾಳು
ನಿನ್ನ ಬೀಜದ ಹಣ್ಣು ಹುಳಿಯೇಕೆ, ಹೇಳು?

### ೧೮೫೬. ಜೀವನದ ಕಾವು

ಮಾವು ಹುಲ್ಲಿನೊಳಿರಲು ಹಣ್ಣು ಪರಿಪೂರ್ಣ
ಬಣ್ಣವೂ ಬದಲಾಗಿ ಕಾಂಚನದ ವರ್ಣ
ಕಾವಿನಲಿ ಬೆಂದರೇನೇ ಪಕ್ವ ಬಾಳು
ಇಲ್ಲದಿರೆ ಹುಳಿಯಾಗಿ ಮಾಂಗಾಯಿ ಹಾಳು.

### ೧೮೫೭. ರಷ್ಯ-ಚೀನ ವ್ಯಾಜ್ಯ

ಮಾವೊ ಅಂದನು : ನಾನೆ ಎತ್ತರದ ಒಂಟೆ
ಹೀಗೆನಲು ಕೆಂಪಣ್ಣನವರಲ್ಲಿ ತಂಟೆ
ರಷ್ಯವೆಂದಿತು; ಇವನ ತಲೆಯೊಳಗೆ ಮುಳ್ಳು
ಕುಳ್ಳನೆಂದಿಗೂ ಒಂಟೆಯಾಗುವುದು ಸುಳ್ಳು.

### ೧೮೫೮. ಮಾವೋನ ತರಕಾರಿ

ಮಾವೊ ತಿನ್ನುವುದು ಬರಿ ಕೆಂಪು ಸೊರೆಕಾಯಿ
ಬೇರೆ ಯಾವುದಕೆ ಹಚ್ಚುವುದಿಲ್ಲ ಬಾಯಿ
ಕ್ಯಾಬೇಜು ಮುಂತಾದ ಹೆಸರು ತರಕಾರಿ
ಪ್ರತಿಗಾಮಿಗಳೆಂದು ಹೇಳುವನು, ನಾರಿ.

### ೧೮೫೯. ಎಚ್ಚತ್ತ ಭಾರತ

ಮಾವೊ ಬಂದರೆ ಬರಲಿ! ಅವನಿಗೂ ಸುದ್ದಾ
ಪೂರ್ಣ ಬಿಸಿಯಾಗುವುದು ಭಾರತದ ಯುದ್ಧ
ಎಚ್ಚೆತ್ತ ಭಾರತಕೆ ಉಂಟೇನು ಸಾಟಿ ?
ಮಡಿಯಲಿಕ್ಕೂ ಸಿದ್ಧ ಜನ ಕೋಟಿ ಕೋಟಿ.

### ೧೮೬೦. ಆಧುನಿಕ ಚಿತ್ರಕಾರ

ಮಾಸಪತ್ರಿಕೆಗಾಗಿ ಬರೆ ಬರೆದು ಚಿತ್ರ
ಕುಲಗೆಟ್ಟು ಭ್ರಷ್ಟವಾಯಿತು ನನ್ನ ಗೋತ್ರ
ವಂಶವನು ಉದ್ಧಾರಗೊಳಿಸಲಿಕೆ ಹೊರಟೆ
ಬಂದುಬಿಟ್ಟಿತು ಮಗನೆ, ಕೈಯೊಳಗೆ ಗೆರಟೆ.

## ೧೮೬೧. ನಮ್ಮ ಆಡಳಿತ

ಮಾಳಿಗೆಯ ಮೇಲುಗಡೆ ಬಿಳಿ ರಂಗವಲ್ಲಿ
ಕೆಳಗಡೆಗೆ ನೋಡಿದರೆ ನಾರುತಿದೆ ಗಲ್ಲಿ
ಹೊರಬದಿಗೆ ಪರಿಮಳದ ಧೂಪ ಕರ್ಪೂರ
ಒಳಬದಿಗೆ ಒಳ ಚರಂಡಿಯ ಕಾರಭಾರ.

## ೧೮೬೨. ವರುಷದ ಭವಿಷ್ಯ

ಮಿಥುನ ರಾಶಿಗೆ ನಿತ್ಯ ಉಲ್ಲಾಸ ಭಂಗ
ಮೀನ ರಾಶಿಗೆ ದೊಡ್ಡ ಮೊಸಳೆಗಳ ಸಂಗ
ವೃಷಭ ರಾಶಿಗೆ ಮಂತ್ರಿಮಂಡಲದ ಜಾಗ
ಕುಂಭರಾಶಿಗೆ ಕಳ್ಳಭಟ್ಟಗಳ ಯೋಗ.

## ೧೮೬೩. ಕವಿ ಮಿರ್ಜಾ ಗಾಲೀಬ್

ಮಿರ್ಜಾ ಗಾಲೀಬ್ ಕೊನೆಗೆ ಸಾಲದಲ್ಲಿ ಸತ್ತ
ಆದರೂ ಶ್ರೀಮಂತವಾಗಿತ್ತು ಚಿತ್ತ.
ಸಾಲದಲಿ ಸತ್ತರೂ ಅವನ ದೌಲತ್ತು
ದಶಕೋಟಿ ರೂಪಾಯಿಗಿಂತಲೂ ಹೆಚ್ಚು.

## ೧೮೬೪. ಮಿಂಚಲಿಕೆ

ಮಿಂಚಲಿಕೆ ನಮ್ಮ ಹಳ್ಳಿಯಲಿ ವಿದ್ಯುತ್ತು
ಬೇಕಾಗಬಹುದು ಶತಮಾನ ಐವತ್ತು
ಆತನಕ ಮಂತ್ರಿಗಳ ಭಾಷಣದ ಬೆಳಕು
ಈ ಬೆಳಕಿನಲಿ ಎಮ್ಮೆ ಹಾಕುವುದು ಮೆಲಕು.

## ೧೮೬೫. ಮೀನ ಪಳದಿ

ಮೀನ ಪಳದಿಯ ಜೊತೆಗೆ ಕೊರಸಕ್ಕಿ ಅನ್ನ
ಕನ್ನಡ ಕರಾವಳಿಯ ನಿತ್ಯ ಪಕ್ವಾನ್ನ
ಇದರ ರುಚಿ ನೋಡಿದರೆ ದೇವರೂ ಕೊನೆಗೆ
ಸ್ವರ್ಗವನ್ನಿಳಿದು ಬರುವನು ನಮ್ಮ ಮನೆಗೆ.

## ೧೮೬೬. ಮೀಸೆ ಬರುವಾಗ

ಮೀಸೆ ಬರುವಾಗ ಕಾಣುವುದಿಲ್ಲ ದೇಶ.
ಹಾಕದಿದ್ದರೆ ವೇಷ ಭರ್ತಿ ಆವೇಶ
ಮೊಲೆ ಮೂಡುವಾಗ ನೆಲ ಕಾಣುವುದು ವಿರಳ
ಚಿಕ್ಕಂದಿನಲಿ ನೋಡೆ ಎಲ್ಲವೂ ಸರಳ.

## ೧೮೬೭. ಸ್ಫೂರ್ತಿ

ಮುಖ ಕಮಲ ನೋಡಿದರೆ ಕವಿಗೆ ಬಲು ಸ್ಫೂರ್ತಿ
ಸಿಗದೆ ಹೋದರೆ ಮುತ್ತು ಮೈ ಬೆವರು ಭರ್ತಿ
ಬೆವರು ಬಂದಾಗ ಹುಟ್ಟುವದಿಲ್ಲ ಪದ್ಯ
ಆಗ್ಗೆ ಹುಟ್ಟುವುದು ಈ ಚುಟಕದ ಕುಚೋದ್ಯ.

## ೧೮೬೮. ಮಂತ್ರಿಗಳ ನಿರ್ಮಲತೆ

ಮುಖ್ಯಮಂತ್ರಿಗಳ ಅಳಿಯ ಕಂಪನಿಯ ಕಟ್ಟಿ
ಆರು ತಿಂಗಳ ಅವಧಿಯಲ್ಲಿ ದೊಡ್ಡ ಸೆಟ್ಟಿ
ಮತ್ತೆ ಮಗ ಬೇಕಷ್ಟು ಗಳಿಸಿದರು ಕೂಡ
ಮುಖ್ಯಮಂತ್ರಿಯ ಕೈಲಿ ಕಾಸಿಲ್ಲ, ನೋಡಾ!

## ೧೮೬೯. ವೃತ್ತಪತ್ರಿಕೆ

ಮುಖ್ಯಮಂತ್ರಿಯ ಜತೆಗೆ ಕೊಲೆಗಡುಕನಿದ್ದ
ನಟಿಯ ಸಂಗಡ ಪೆದ್ದರಾಯ ಕೂತಿದ್ದ
ಎಲ್ಲರನ್ನೂ ಒಂದೆ ಪುಟದೊಳಗೆ ಹಾಕಿ
ಯಾವುದನ್ನೂ ಕೊನೆಗೆ ಇಡಲಿಲ್ಲ ಬಾಕಿ.

## ೧೮೭೦. ತರತರದ ಪ್ರಾಪ್ತಿ

ಮುಖ್ಯಮಂತ್ರಿಯ ಮನೆಯ ಮಾಡಿದರೆ ಜಪ್ತಿ
ನಿಮಿಷದಲಿ ಸಿಗಬಹುದು ತರತರದ ಪ್ರಾಪ್ತಿ
ಕ್ರಾಂತಿಯಾದಾಗ ಇದು ಆಗುವುದು ಖಾತ್ರಿ
ಗಾಳಿಯಲಿ ಹಾರುವುದು ಮಂತ್ರಿಗಳ ಛತ್ರಿ.

## ೧೮೭೧. ಮಂತ್ರಿಯ ಮೋರೆ

ಮುಖ್ಯಮಂತ್ರಿಯ ಮೋರೆ ನೋಡಿದಕೆ ಭಟ್ಟ
ಅಭ್ಯಂಗ ಸ್ನಾನ ಮಾಡಿಯೆ ಬಂದು ಬಿಟ್ಟ
ಅಜ್ಜಿಗೂ ನಗು ಬಂತು ಈ ನಡತೆ ನೋಡಿ
ಕೇಳಿದಳು : ಭಟ್ಟರೇ, ಹೋಯ್ತೇನು ರಾಡಿ ?

## ೧೮೭೨. ಮುಖ್ಯಮಂತ್ರಿಗೆ

ಮುಖ್ಯಮಂತ್ರಿಯೆ, ಸ್ವಲ್ಪ ಕೇಳು ಕಿವಿಗೊಟ್ಟು
ನೀನೆಂಬೆ ನಿನ್ನ ಆಡಳಿತ ನೆಲಗಟ್ಟು
ನಿನ್ನ ಆಡಳಿತವೆಂಬುದು ಒಂದು ಛತ್ರಿ
ಗಾಳಿ ಬಂದರೆ ಹಾರಿ ಹೋಗುವುದು ಖಾತ್ರಿ.

## ೧೮೭೩. ಮುಗುಳುನಗೆ

ಮುಗುಳುನಗೆ, ಎನ್ನುವುದು ಹೂ-ಮೊಗ್ಗೆ, ಗೆಳತಿ
ಮುಗುಳುನಗೆ ಬೀರಿ ನಿಲ್ಲುವಳು ಮದುವಳತಿ,
ಹಾಸ್ಯದೊಳಗಿಲ್ಲ ಈ ತರದ ನಾಜೂಕು
ನೀನೆಂದಿಗೂ ಮುಗುಳು ನಗೆ ಬೀರಬೇಕು.

## ೧೮೭೪. ಬೂರಲ ಮರ

ಮುಡಿ ತುಂಬ ನಡು ತುಂಬ ಹೂಗಳನು ತೊಟ್ಟು
ನಗ್ನವಾಯಿತು ವೃಕ್ಷ ವಸನವನು ಬಿಟ್ಟು,
ಬೂರಲವು ಬಸುರಾಗೆ ಮೈತುಂಬ ತತ್ತಿ
ರೆಕ್ಕೆಗಳು ಬಲಿತೊಡನೆ ಹಾರುತಿದೆ ಹತ್ತಿ.

## ೧೮೭೫. ಮುತ್ತಜ್ಜಿಯ ಆಶೀರ್ವಾದ

ಮುತ್ತಜ್ಜಿಯನು ಭೇಟಿಯಾದಾಗ ಮೊನ್ನೆ
ಮುದ್ದಾಡಿ ಮುದುಕಿ ಚಿವುಟಿದಳೆನ್ನ ಕೆನ್ನೆ
ಮೈದಡವಿ ಹೇಳಿದಳು; ನಿರ್ಭೀಡ ಮೋರಾ,
ನಾಟಕಗಳ ಬರೆಬರೆದು ಕಳಿಸು ಪ್ರತಿವಾರ.

### ೧೮೭೬. ಮುತ್ತು

ಮುತ್ತಿನೊಳಗೂ ಉಂಟು, ಎರಡು ವಿಧ ನೀರೆ ?
ಕದ್ದರೂ ಕಾಣೆಯಾಗದ ಮುತ್ತು ಬೇರೆ.
ಕಾಣೆಯಾಗದ ಮುತ್ತು ನೀಡುವೆನು ಭರ್ತಿ
ಸ್ವೀಕರಿಸಿದರೆ ಹಬ್ಬುವುದು ನಮ್ಮ ಕೀರ್ತಿ.

### ೧೮೭೭. ಮುತ್ತು

ಮುತ್ತಿನೊಳಗೂ ಉಂಟು ನಾನಾ ನಮೂನೆ
ಎಲ್ಲಾ ನಮೂನೆಗಳ ನೋಡಬೇಕೇನೆ ?
ಆಕೆ ಎಂದಳು : ಮುತ್ತು ಹಲವಾರು ರೀತಿ.
ಇದ್ದರೂ, ಪ್ರಾಣೇಶ, ಒಂದಲ್ವೆ ಪ್ರೀತಿ ?

### ೧೮೭೮. ನಾಚುವುದೇಕೆ

ಮುತ್ತು ಎನ್ನುವುದು, ಸಖಿ, ಜೀವನದ ಮೊದಲು
ಇದಕೆಂಬೆ ಗಂಡಹೆಂಡಿರ ಅದಲು-ಬದಲು
ಮುತ್ತು ಕೊಡುವಾಗ ನಾಚುವುದೇಕೆ ನೀನು ?
ಸಕಲ ಲೋಕಕೆ ಮುತ್ತು ನೀಡುವನು ಭಾನು.

### ೧೮೭೯. ನವ್ಯರೀತಿ

ಮುತ್ತು ಕೊಟ್ಟರೆ ಎಲ್ಲರೂ ಕೊಟ್ಟ ರೀತಿ
ವೈಶಿಷ್ಟ್ಯವಿಲ್ಲೆಂದು ಮರುಗುವುದು ಪ್ರೀತಿ
ತುಟಿಯ ತುದಿಯಿಂದ ನೀಡಿದ ಮುತ್ತು ಚಂದ
ನಾನಿದನು ಕಲಿತದ್ದು ನವ್ಯಕವಿಯಿಂದ.

### ೧೮೮೦. ನನ್ನ ಬರವಣಿಗೆ

ಮುತ್ತು ಮಾಣಿಕ್ಯವಲ್ಲ, ನಾನು ಬರೆದದ್ದು
ಇಡ್ಲಿ ದೋಸೆಯ ಒಳಗೆ ಅಡಗಿರುವ ಉದ್ದು
ನಾಡ ಜನರೆಲ್ಲರೂ ನಿತ್ಯ ಮುಂಜಾನೆ
ಖಾರ ಚಟ್ನಿಯ ಜೊತೆಗೆ ತಿನ್ನುವರು ತಾನೆ ?

## ೧೮೮೧. ಬಿತ್ತಿಗೆ

ಮುತ್ತೊಂದು ಬಿತ್ತಿದರೆ ಬರಿ ಬ್ರಹ್ಮದಂಡ
ಭತ್ತವನ್ನು ಬಿತ್ತಿದರೆ ಕೋಟಿ ಬ್ರಹ್ಮಾಂಡ.
ಒಂದೊಂದು ಕವಚದಲಿ ಒಂದೊಂದು ಚಿಕ್ಕಿ
ದೇವನೆಂದನು : ಮಗನೆ, ಹೆಸರಿದಕೆ ಅಕ್ಕಿ.

## ೧೮೮೨. ಕವಿ ಮುದ್ದಣ್ಣ

ಮುದ್ದಣನು ಶಾಲೆಯಲಿ ಕಲಿಸಿ ವ್ಯಾಯಾಮು
ರಸಿಕರಿಗೆ ಬಡಿಸಿದನು ಭಾವನೆಯ ಜ್ಯಾಮು.
ಶತಮಾನ ಕಳೆದರೂ ಈ ಜೇನು ತಾಜಾ
ರುಚಿ ನೋಡಿದವನ ಮೋರೆಯ ಮೇಲೆ ತೇಜ.

## ೧೮೮೩. ಮುದಿ ಗೂಬೆಗಳಿಗೇಕೆ

ಮುದಿ ಗೂಬೆಗಳಿಗೇಕೆ ಚಿಕ್ಕವರ ಮಾತು ?
ಇಬ್ಬರೂ ಹೋಗೋಣ ಗಾಡಿಯಲಿ ಕೂತು.
ನಲಿಯೋಣ, ನಗಿಸೋಣ ಮಾತು ಮಾತಾಡಿ
ಇದು ಒಂದು ಹೊಸ ಪಾರಿವಾಳಗಳ ಜೋಡಿ.

## ೧೮೮೪. ಮುಪ್ಪು

ಮುದುಕನ ಪರಿಸ್ಥಿತಿಯ ನೀನೇನು ಬಲ್ಲೆ ?
ಅವನ ಸಂಸಾರ ಒಣಗಿದ ಕಾಯಿಪಲ್ಲೆ
ರಸವೆಲ್ಲವೂ ಹೋಗಿ ಸಂಪೂರ್ಣ ಬೆಂಡು
ಮುಪ್ಪಿನಲಿ ಮನುಜ ಹೆಸರಿಗೆ ಮಾತ್ರ ಗಂಡು.

## ೧೮೮೫. ನನ್ನ ಆಕಾಂಕ್ಷೆ

ಮುದುಕನಾಗಿದ್ದೇನೆ, ಕಡಿಮೆ ಮೈ ಕಸುವು
ಆದರೂ ಉತ್ಸಾಹ ಉಡುಗಿಲ್ಲ ತುಸುವು.
ಏನೇನೊ ಕಟ್ಟ ಬೇಕೆಂಬೆ, ಜಗದಂಬೆ
ಇದುವರೆಗೆ ಕಟ್ಟಿದ್ದು ಅತ್ಯಲ್ಪವೆಂಬೆ

## ೧೮೮೬. ನನ್ನ ಮುಪ್ಪು

ಮುದುಕ ಬಂದಾನೆಂದು ಹಾಕಿದರು ಭಿಕ್ಷೆ
ಈ ಭಿಕ್ಷೆಯಿಂದ ಬರೆದೆನು ಒಂದು ನಕ್ಷೆ
ನಕ್ಷೆಯಲಿ ಮೆರೆಯುತಿದೆ ಶಾಲೆಗಳ ಚಿತ್ರ
ಶಾಲೆಯೆಂಬುದು ಮಕ್ಕಳಿಗೆ ಅನ್ನ-ವಸ್ತ್ರ.

## ೧೮೮೭. ಸ್ಯಾಂಪಲ್ಲುಗಳು

ಮುದುಕಾಗಿ ಉದುರಿ ಬೀಳುವ ತನಕ ಹಲ್ಲು
ನಾನು ನೋಡಿದ್ದೇನೆ ನೂರು ಸ್ಯಾಂಪಲ್ಲು
ಇವುಗಳಿಗೆ ನಾನು ಮಾಡುವೆ ನಮಸ್ಕಾರ
ಚುಟಕಗಳ ಗೀಚಲಿಕೆ ಆಯ್ತು ಆಧಾರ.

## ೧೮೮೮. ಮುದುಕಾಗಿ

ಮುದುಕಾಗಿ ಮುದುಕಾಗಿ ನಾನಾದೆ ಜೀರ್ಣ
ಕವಿತೆ ಗೀಚಿದರೆ ಲೇಖನಿಗೂ ಅಜೀರ್ಣ
ನಾಲ್ಕು ಪಂಕ್ತಿಯ ಚುಟಕ ಬರೆದರೂ ಜಡ್ಡು
ನೀರು ಹರಿಯುವುದಿಲ್ಲ ಭಾವನೆಗೆ ಒಡ್ಡು.

## ೧೮೮೯. ಸ್ವಚ್ಛತೆ

ಮುದುಕಿಯೊಬ್ಬಳು ಕೈಲಿ ಹಿಡಕೊಂಡು ಪೊರಕೆ
ಈ ರೀತಿ ಹೇಳುತ್ತಾ ಹಾರಿದಳು ನಭಕೆ :
ಹೊಲಸಾದ ಆಗಸವ ಗುಡಿಸುವೆನು, ಮಗನೆ
ಈ ವಿಮಾನಗಳೆಲ್ಲ ಭೂಮಿಗಿಳಿದೊಡನೆ.

## ೧೮೯೦. ಮುಪ್ಪಿನಲಿ

ಮುಪ್ಪಿನಲಿ ಮುತ್ತಿಡುವ ಹುಚ್ಚು ಹೆಚ್ಚಾಗಿ
ನಿನ್ನ ಬೆನ್ನಿಗೆ ಸದಾ ಇದ್ದೇನೆ, ನಾಗಿ.
ನಾಗಿ ಎಂದಳು : ನಿಮಗೆ ಮುತ್ತಿನ ಕಷಾಯ.
ನೂರು ಸಲ ಕೊಟ್ಟರೂ ಬರದು ಹೊಸ ಪ್ರಾಯ.

## ೧೮೯೧. ಮುಪ್ಪಿನಲ್ಲೂ

ಮುಪ್ಪಿನಲ್ಲೂ ಚಲುವೆಯಾಗಿರುವೆ ನೀನು
ಇದಕೆ ಕಾರಣ ನಿನ್ನ ಕಣ್ಣಿನಲಿ ಮೀನು
ಆಕೆ ಎಂದಳು : ಹೌದು, ಇದು ನನ್ನ ಪುಣ್ಯ
ಮುಪ್ಪಿನಲ್ಲೂ ನಿಮಗೆ ಭರ್ತಿ ತಾರುಣ್ಯ.

## ೧೮೯೨. ಹುಟ್ಟುತಿವೆ ಕೂಸು

ಮುಪ್ಪಿನಲ್ಲೂ ನನಗೆ ಹುಟ್ಟುತಿವೆ ಕೂಸು.
ಮಡದಿ ಎಂದಳು : ಕವಿಯ ಸಂಸಾರ ಲೇಸು
ತುಂಬಿ ತುಳಕಲು ಭಾವನೆ ಗರ್ಭಕೋಶ
ಸಂತತಿ ನಿಯಂತ್ರಣಕೆ ಇಲ್ಲ ಅವಕಾಶ.

## ೧೮೯೩. ಮುಪ್ಪು

ಮುಪ್ಪು ಎಂಬುದು, ಮಗನೆ, ಜೀವನದ ಕಪ್ಪು
ದಿನದಿನಕೆ ತೊಳೆದು ಹೋಗುವುದು ತುಸು ಉಪ್ಪು
ತೆಳ್ಳಗಾಗುವುದು ಮೈಯೊಳಗಿರುವ ವೀರ್ಯ
ಬೆಳ್ಳಗಾಗುವುದು ಕೂದಲು ಮತ್ತು ಧೈರ್ಯ.

## ೧೮೯೪. ಮುರಗಿ

ಮುರಗಿ ಎಂದರೆ ಕೋಳಿ, ರುಚಿಕರ ಪದಾರ್ಥ
ಹರಗಿ ಎಂದರೆ ಸೊಪ್ಪು, ಏನಿಲ್ಲ ಅರ್ಥ
ಆಧುನಿಕ ಭಟ್ಟರಿಗೆ ಮುರುಗಿಯೇ ಲೇಸು
ಕೊಳ್ಳಲಿಕೆ ಇರಬೇಕು ಸಾಕಷ್ಟು ಕಾಸು.

## ೧೮೯೫. ಪಠ್ಯ ಪುಸ್ತಕಗಳ ರಾಷ್ಟ್ರೀಕರಣ

ಮುರಿದುಬಿಡಬೇಕೆಂದು ಶಿಕ್ಷಕನ ಸೊಕ್ಕು
ಸರಕಾರ ಪ್ರಕಟಿಸಿದೆ ಹೊಸ ಟೆಕ್ಸ್ಟ ಬುಕ್ಕು
ಪಠ್ಯ ಪುಸ್ತಕದೊಳಗೆ ಇದ್ದರು ದೋಷ
ತಿದ್ದಿಕೊಳ್ಳಬಹುದೆಂದು ಬಂತು ಸಂದೇಶ.

## ೧೮೯೭. ಮುಂಜಾವ ಚಳಿ

ಮುಂಜಾವ ಚಳಿಯೊಳಗೆ ಹಾಸಿಗೆಯಲ್ಲಿದ್ದೂ
ಇಂದ್ರಲೋಕವ ಕೂಡ ಜಯಿಸಿ ಬರಬಹುದು.
ಕಂಬಳಿಯ ಹೊದ್ದುಕೊಂಡರೆ ಕೇಳಬೇಕೆ?
ರಂಭೆಯೂ ಧರೆಗಿಳಿದು ಬರಬಹುದು, ಜೋಕೆ.

## ೧೮೯೭. ಅಭ್ಯರ್ಥಿ ಹೇಳಿದ್ದು

ಮುಂದಿನ ಚುನಾವಣೆಗೆ ನಾನೆ ಅಭ್ಯರ್ಥಿ.
ಯಾವಾಗಲೂ ನನಗೆ ವೋಟುಗಳು ಭರ್ತಿ.
ಈ ವೋಟುಗಳು ನನ್ನ ಯೋಗ್ಯತೆಗೆ ತಕ್ಕ
ಅಲ್ಲ ಮಾರಾಯ, ಕಾರಣ ನಿನ್ನ ರೊಕ್ಕ.

## ೧೮೯೮. ಮಂತ್ರಿಗಳ ಗಮನಕ್ಕೆ

ಮುಂದಿನ ಚುನಾವಣೆಯ ನಂಬಿಲಿಕ್ಕಾಗ
ಕುಸಿದು ಬಿದ್ದರೆ ನಿಮಗೆ ಎಲ್ಲುಂಟು ಜಾಗ?
ಮಂತ್ರಿ ಪದವಿಯ ಅವಧಿ ಮುಗಿಯಲಿಕೆ ಬಂತು.
ಕಿಸೆಯೊಳಗೆ ಬೇಗ ಬೀಳಲಿ ಕೊನೆಯ ಕಂತು.

## ೧೮೯೯. ಮಂತ್ರಿ ಬಂದಾಗ

ಮುಂದುಗಡೆ ನಿಂತ ಹೆಂಗಸು ಯಾರು ಆಕೆ?
ಮಂತ್ರಿಗಳು ಬಂದಾಗ ಇವಳೇ ಪತಾಕೆ.
ಈ ಪತಾಕೆಯ ಸೆರಗು ಗಾಳಿಯಲಿ ಹಾರಿ
ಮನಕೆ ಚೇತೋಹಾರಿಯಾಗುವುದು ಭಾರಿ.

## ೧೯೦೦. ಮುಂದೆ

ಮುಂದೆ ಸರಿದರೆ ಮಾತ್ರ ನರನ ಕಿಮ್ಮತ್ತು
ಹಿಂದೆ ಬಿದ್ದರೆ ಮನುಜ ಹೋದಂತೆ ಸತ್ತು.
ಜೀವಂತವಿದ್ದರೂ ಜೀವನಕೆ ಜಖಮು.
ಮುಂದೆಯಿದ್ದರೆ ಸೊನ್ನೆಯೂ ದೊಡ್ಡ ರಕಮು.

## ೧೯೦೧. ಮೂಗು

ಮೂಗು ಆನೆಯ ಹಾಗೆ ಇರಬೇಕು ಉದ್ದ.
ಉದ್ದವಿದ್ದರೆ ಮೂಗು ಅವನು ಪರಿಶುದ್ಧ
ಎಂದಿಗೂ ಕದ್ದು ತಿನ್ನುವುದಿಲ್ಲ ಆನೆ
ಮುಂದೆಯೇ ತಿಂದು ಅದು ಮುಂದಕೆ ರವಾನೆ.

## ೧೯೦೨. ರಾಮ ರಾಜ್ಯದ ಭಜನೆ

ಮೂರು ಜಿಲ್ಲೆಯಲಿ ಭೀಕರ ಕ್ಷಾಮ ಬಾಧೆ
ಆರು ಜಿಲ್ಲೆಗಳಲ್ಲಿ ಕಾಳಿನ ತಗಾದೆ.
ಉಳಿದೆಡೆಗೆ ಕಾಳಿದ್ದರೂ ಕಾಳಸಂತೆ
ಶ್ರೀ ಪುರಂದರ ವಿಠಲ ! ಅನುಗಾಲ ಚಿಂತೆ !

## ೧೯೦೩. ತವರಿಗೆ ಹೋದಾಗ

ಮೂರು ತಿಂಗಳ ತನಕ ಬರಲಿಲ್ಲ ನಿದ್ರೆ
ಕಾರಣವ ಕೇಳಿದಳು ನೆರೆಮನೆ ಸುಭದ್ರೆ
ನಾನಂದೆ : ಅವಳ ಜೊತೆ ಇಲ್ಲದ್ದರಿಂದ
ಬೆಸನಾಗಲಿಕೆ ತವರು ಸೇರಿದ್ದರಿಂದ.

## ೧೯೦೪. ಯೋಜನಾ ಭಾರತ

ಮೂರು ಯೋಜನೆ ಮುಗಿಸಿ ಥೈ ತಕಡ ಧಿನ್ನ.
ಹರಿಜನರ ಮಕ್ಕಳಿಗೆ ಅರೆಹೊಟ್ಟೆ ಅನ್ನ.
ದೀನ ದಲಿತರ ಬಗ್ಗೆ ಹಾಡಿದರು ಗಾನ.
ಲಕ್ಷಾಧಿಪತಿಗಳಿಗೆ ಕೋಟಿ ವರಮಾನ.

## ೧೯೦೫. ಮೂರು ಸಾವಿರ

ಮೂರು ಸಾವಿರ ಚುಟಕಗಳ ಬರೆದು ಬಿಟ್ಟೆ
ಕಾಲರಾಯನು ನಗಲು ಕೈಯೊಳಗೆ ಕೊಟ್ಟೆ
ಅವನೆಂದ : ದೇಸಾಯಿ, ನಿನಗೊಂದು ಹುಚ್ಚು.
ಶೇಕಡಾ ತೊಂಬತ್ತು ಆಗುವವು ನುಚ್ಚು.

## ೧೯೦೬. ಮೂರು ಸಾವಿರ

ಮೂರು ಸಾವಿರ ಪದ್ಯ ಬರೆದದ್ದು ಸತ್ಯ.
ಎರಡು ಸಾವಿರ ಮಾಡಿದವು ಆತ್ಮಹತ್ಯ.
ಉಳಿದ ಸಾವಿರದೊಳಗೆ ಐನೂರು ಸೀಕು.
ಕೊನೆಯ ಕಾಲಕೆ ಮೂರು ಬದುಕಿದರೆ ಸಾಕು.

## ೧೯೦೭. ವಧು ಪರೀಕ್ಷೆ

ಮೂರು ಹುಡುಗಿಯರ ನೋಡಿದ್ದಾಯ್ತು ಇಂದು
ಯಾರೊಬ್ಬಳೂ ಬೀಳಲಿಲ್ಲವೋ ಪಸಂದು
ಈತನಿಗೆ ಬೇಕಂತೆ ಹುಡುಗಿ ಬಲು ಚಂದ
ತರಬೇಕು ನಾವು ಮೇನಕೆಯ ಎಲ್ಲಿಂದ ?

## ೧೯೦೮. ದೃಷ್ಟಿಕೋನ

ಮೂವರೂ ಹೊರಗೆ ನೋಡಲು ಕಿಟಕಿಯಿಂದ
ಕವಿಯ ಕಣ್ಣಿಗೆ ಬಿತ್ತು ಹೂವಿನಾನಂದ.
ಸಸ್ಯಜ್ಞಾನಿ, ಕಂಡನು ಮುಳ್ಳುಗಳ್ಳಿ.
ಸೆಟ್ಟಿ ಕಂಡದ್ದೇನು ? ಹುಣಸೆ ನೀರುಳ್ಳಿ.

## ೧೯೦೯. ನಮ್ಮ ಇತಿಹಾಸ

ಮೂಲದ ನಿವಾಸಿಗಳು ಸೇರಿದರು ಮೂಲೆ.
ಇದು ನಮ್ಮ ಇತಿಹಾಸ ! ಕೋಲೆನ್ನಿ ಕೋಲೆ.
ಹೊರಗಿಂದ ಬಂದವರು ಸಿಕ್ಕಿದ್ದು ನುಂಗಿ
ಒಳಗಿನವರಿಗೆ ಪಾಪ ಗೇಣುದ್ದ ಲುಂಗಿ.

## ೧೯೧೦. ಸಚಿವರು ಹೇಳಿದ್ದು

ಮೆರವಣಿಗೆ ಉಪವಾಸ ಸಂಪು ಪ್ರತಿಭಟನೆ
ಹರತಾಳ ಮುಂತಾದ್ದು ಕಲಿಯುಗದ ಬೇನೆ
ವಿದ್ಯಾರ್ಥಿಗಳು ಮಾಡಬಾರದು ಪ್ರಚಾರ
ಜನರು ಸತ್ತರು ಉಳಿಯಬೇಕು ಸರಕಾರ.

## ೧೯೧೧. ಇಲ್ಲ ಪರವಾನೆ

ಮೆರವಣಿಗೆ ತೆಗೆಯಲಿಕೆ ಇಲ್ಲ ಪರವಾನೆ
ಸಚಿವರಿಗೆ ಸದ್ಬುದ್ಧಿ ಕೊಡಬೇಕು ನೀನೆ.
ಹೇ ದೇವ, ಇದಕೆನ್ನುವರು ಲೋಕಶಾಹಿ
ನವಭಾರತದ ಮೋರೆಗಿದು ಕಪ್ಪು ಶಾಹಿ.

## ೧೯೧೨. ಮೆರವಣಿಗೆ ತೆಗೆಯಲಿಕೆ

ಮೆರವಣಿಗೆ ತೆಗೆಯಲಿಕೆ ಈಗಿಲ್ಲ ಹುಕುಮು.
ಲೋಕಶಾಹಿಬೆ, ಮಗನೆ, ಇದು ದೊಡ್ಡ ಜಖಮು.
ಮೆರವಣಿಗೆ ತೆಗೆದಾಗ ಚಲಿಸಿದರು ಲಾಠಿ
ಮೆರವಣಿಗೆಯೊಳಗಿತ್ತು ಜನ ಮೂರು ಕೋಟಿ.

## ೧೯೧೩. ಜ್ಯೋತಿಯ ಗುಟ್ಟು

ಮೆರವಣಿಗೆಯಲಿ ಜವಹರಲಾಲ ಜ್ಯೋತಿ.
ವೇದಿಕೆಯ ಮೇಲೆ ಮಾತಾಡಿದರು ನೀತಿ.
ಕೋಣೆಯಲಿ ಒಳಗಡೆಗೆ ನೋಟುಗಳ ಕಟ್ಟು.
ಬ್ಯಾಂಕಿನೊಳಗಿಡಲಿಲ್ಲ! ಏನಿದರ ಗುಟ್ಟು?

## ೧೯೧೪. ಮೇಲಾಟ ಈಗಿಲ್ಲ

ಮೇಲಾಟ ಈಗಿಲ್ಲ ಹಾರಾಟ ಹೆಚ್ಚು
ವಿಪರೀತವಾಗಿಬಿಟ್ಟಿದೆ ಹೊಟ್ಟೆಕಿಚ್ಚು.
ಈಗ್ಗೆ ಸಿಕ್ಕಿದೆ ವಶೀಲಿಗೆ ಪ್ರಥಮ ಸ್ಥಾನ.
ಮತ್ತೆ ಪ್ರತಿ ದಿವಸ ಮಂತ್ರಿಗಳ ಗುಣಗಾನ.

## ೧೯೧೫. ಸೂರ್ಯ

ಮೈ ಒರಸಲಿಕೆ ಟವಲು, ಇದಕ್ಕಿಲ್ಲ ನೂಲು.
ಇದನು ನೇಯ್ದವರಿಲ್ಲ, ಆಕಾರ ಗೋಲು.
ಇದಕಿಲ್ಲ ಜವಳಿ ಅಂಗಡಿಯ ವ್ಯಾಪಾರ.
ಯಾವ ಮಡಿವಾಳನೂ ಇದನೊಗೆಯಲಾರ.

### ೧೯೧೬. ಮೈ ಒರಸಲಿಕೆ

ಮೈ ಒರಸಲಿಕೆ ಬೇಕು ಒಂದು ಟಾವೆಲ್ಲು
ರಾಜಕಾರಣ ಒರಸಲಿಕೆ ಬೇಕು ಹುಲ್ಲು.
ಬಾಪು ನುಡಿದರು : ಹುಲ್ಲಿನಿಂದಲೂ ಆಗ
ಮೈಯೊಳಗೆ ಅಂಟಿಕೊಂಡಿದೆ ಭರ್ತಿ ರೋಗ.

### ೧೯೧೭. ಚೊಕ್ಕತನ

ಮೈ ಚೊಕ್ಕಗೊಳಿಸುವನು ಧವಳ ನೊರೆಯಣ್ಣ.
ಮನ ಚೊಕ್ಕಗೊಳಿಸುವವ ಈಗ್ಗೆ ಇಲ್ಲಣ್ಣ.
ಎಲ್ಲವನ್ನೂ ಚೊಕ್ಕಗೊಳಿಸಿದರು ಬಾಪು,
ಅವರ ಕೈಯೊಳಗಿತ್ತು ವೈಭವದ ಸೋಪು.

### ೧೯೧೮. ಮೈಯೊಳಗೆ

ಮೈಯೊಳಗೆ ಇರದಿದ್ದರೂ ತುಸುವು ಶಕ್ತಿ
ರಾಜಕಾರಣದಲ್ಲಿ ಬಹಳ ಆಸಕ್ತಿ.
ಕೊನೆಗೆ ನೋಡಿದರೆ, ಸಖಿ, ಎಲ್ಲವೂ ಹಗುರ.
ಕುಳಿತಲ್ಲಿ ತುಂಬಬೇಕೆನ್ನುವನು ಉದರ.

### ೧೯೧೯. ಸಾಹಿತ್ಯ ಸಮ್ಮೇಳನ

ಮೊದಲ ದಿನ ಮೆರವಣಿಗೆ ಮತ್ತೆ ಜಯಘೋಷ
ಮರುದಿವಸ ಭಾಷಣದ ತುಂಬ ಆವೇಶ
ಆಮೇಲೆ ಬಿಸಿ ಬಿಸಿ ಠರಾವುಗಳ ಕಾವು.
ಕೊನೆಯ ದಿನ ಆಭಾರ ಮನ್ನಣೆಯ ಹೂವು.

### ೧೯೨೦. ಮೊದಲ ಸಲ

ಮೊದಲ ಸಲ ನಾವಿಬ್ಬರೂ ಕೂಡಿದಾಗ,
ನಮ್ಮ ಪ್ರೀತಿಗೆ ಬಂತು ವಿಪರೀತ ವೇಗ.
ನಿಮಿಷದಲಿ ಚಂದ್ರಲೋಕಕೆ ತಲುಪಿ, ಗೆಳತಿ,
ಗಳಿಗೆಯಲಿ ನೀನಾದೆ ನನ್ನ ಮದುವಳತಿ.

### ೧೯೨೧. ರಾಜಾಜಿ ಹೇಳಿದ್ದು

ಮೊದಲು ಆಗಲಿ ಇವರ ಬುರುಡೆಯ ರಿಪೇರಿ
ಆಮೇಲೆ ಸುತ್ತಿಕೊಳಬಹುದು ಜರತಾರಿ.
ಮೊದಲು ಆಗಲಿ ಪುಢಾರಿಯ ಕಿಸೆಯ ಝಡತಿ
ಆಮೇಲೆ ನೋಡೋಣ ಯೋಜನೆಯ ಪ್ರಗತಿ.

### ೧೯೨೨. ವ್ಯವಹಾರ ಜ್ಞಾನ

ಮೊದಲು ಬೇಕಾದದ್ದು ವ್ಯವಹಾರ ಜ್ಞಾನ.
ಒಮ್ಮೊಮ್ಮೆ ನರಿಯಾಗಿ ಒಮ್ಮೊಮ್ಮೆ ಶ್ವಾನ.
ಕಾಲಕ್ಕೆ ತಕ್ಕಂತೆ ಹೊಸ ಹಗಲ ವೇಷ.
ಧರಿಸಿದರೆ ಲಕ್ಷ್ಮಿಗೂ ಬಹಳ ಸಂತೋಷ.

### ೧೯೨೩. ಪ್ರಗತಿ

ಮೊದಲು ಹುಟ್ಟಿದ ಹಕ್ಕಿ ಪುಟ್ಟ ಗುಬ್ಬಚ್ಚಿ.
ಮನುಜನೆಂದನು : ಇದಕೆ ಸಾಕು ತುಸು ಅಕ್ಕಿ.
ಕೊನೆಗೆ ಜನಿಸಿದ ವಿಹಗ ದೊಡ್ಡ ರಣಹದ್ದು.
ಬದುಕಬೇಕೆನ್ನುತಿದೆ ಮಾಂಸವನೇ ಮೆದ್ದು.

### ೧೯೨೪. ಮೊದಲು ಹೇಳಿದರು

ಮೊದಲು ಹೇಳಿದರು ಮಾಡುವೆವೆಂದು ತ್ಯಾಗ
ಆಮೇಲೆ ಎಲ್ಲರೂ ಹಾಕಿದರು ಲಾಗ.
ನಿಮಿಷದಲಿ ಸೇರಿದರು ಸರಕಾರಿ ಪಕ್ಷ
ಆದರೂ ಸರ್ವರಿಗೆ ಸಿಗಲಿಲ್ಲ ಭಕ್ಷ.

### ೧೯೨೫. ಮೊನ್ನೆ ಕೇಳಿದ್ದು

ಮೊನ್ನೆ ಕೇಳಿದ ಒಂದು ಮಾತು ನಿಜವೆನ್ನಿ
ಮನಹ ಪುನಹಾ ಬರುವುದೇಕೆ ಆ ಚೆನ್ನಿ ?
ನಿತ್ಯವೂ ನಿಮ್ಮ ಆಫೀಸಿನಲಿ ಆಕೆ
ತಾಸುಗಟ್ಟಲೆ ಕುಳಿತುಕೊಳ್ಳುವುದು ಏಕೆ ?

## ೧೯೨೬. ರಾಜಕೀಯ ಅಧಿವೇಶನ

ಮೊನ್ನೆ ನಡೆದದ್ದೇನೆ ? ಹೊಸ ಕೋಳಿ ಆಟ.
ಹುಂಜದ ತುರಾಯಿಗೂ ಕಟ್ಟಿದರು ಪೇಟ.
ಆದರೂ ಹಾಕಲಿಲ್ಲವೋ ಹೇಟೆ ಮೊಟ್ಟೆ,
ಸಂಪೂರ್ಣ ಬರಿದಾಯ್ತು ಬಡ ಜನರ ಹೊಟ್ಟೆ.

## ೧೯೨೭. ಸಂಪುಟ ರಚನೆ

ಮೊನ್ನೆ ನಡೆಯಿತು ಸಚಿವ ಸಂಪುಟದ ರಚನೆ.
ಕೆಲವು ಹಳೆ ಮಂತ್ರಿಗಳು ಮಾಡಿದರು ಭಜನೆ.
ಆದರೂ ನೆರವಾಗಲಿಲ್ಲ ಪರಮಾತ್ಮ,
ತಳಮಳಿಸಿ ಸುಮ್ಮನಾಯಿತು ಇವರ ಆತ್ಮ.

## ೧೯೨೮. ಸರಕಾರಿ ಸೌಧದಲಿ

ಮೊನ್ನೆಯೇ ಅಖಿಲ ಭಾರತ ಸುತ್ತಿ ಬಂದೆ.
ರಾಜಕಾರಣದಲ್ಲಿ ತರತರದ ದಂಧೆ
ಸರಕಾರಿ ಸೌಧದಲಿ ಈ ದಂಧೆ ಜಾಸ್ತಿ
ದರಕಾರವಿಲ್ಲದೆಯೆ ಮಾಡಿದರು ಆಸ್ತಿ.

## ೧೯೨೯. ಬಾಪೂಜಿ ಹೇಳಿದ್ದು

ಮೊನ್ನೆಯೇ ನವಭಾರತವ ಸುತ್ತಿ ಬಂದೆ.
ರಾಜಕಾರಣವೆನ್ನುವುದು ದೊಡ್ಡ ದಂಧೆ.
ಕೆಲವರಿಗೆ ಲಕ್ಷ ದಶಲಕ್ಷ ರೂಪಾಯಿ
ಬಡವರಿಗೆ ಹಸಿವೆ; ಕೇಳುವುದಿಲ್ಲ ನಾಯಿ.

## ೧೯೩೦. ಪ್ರಜಾರಾಜ್ಯದ ಅನುಭವ

ಮೊನ್ನೆಯೇ ಬೆಂಗಳೂರಿಗೆ ಹೋಗಿ ಬಂದೆ.
ಅಲ್ಲಿಯೂ ನಡೆಯುತಿದೆ ಸೂಳೆಯರ ದಂಧೆ.
ದುಡ್ಡು ಕೊಟ್ಟರೆ ಮಾತ್ರ ಒಳಗಡೆ ಪ್ರವೇಶ
ಅನ್ನುವರು : ಬನ್ನಿ, ಸಾರ್; ಬಹಳ ಸಂತೋಷ.

### ೧೯೩೧. ಭಾರತದ ಪೀಡೆ

ಮೊನ್ನೆಯೇ ಹರಿದು ಹಾಕಿದೆನು ಜನಿವಾರ.
ಜನಿವಾರ ಜಾತಿವಾದಿಯ ಸೂತ್ರಧಾರ.
ಜಾತಿ ಎಂಬುದು ಕೋತಿ, ಮಾನಸಿಕ ಗೋಡೆ.
ಈ ಗೋಡೆ ಎನ್ನುವುದು ಭಾರತದ ಪೀಡೆ.

### ೧೯೩೨. ಕಾವ್ಯ ಸಾಮ್ರಾಜ್ಯ

ಮೊಮ್ಮಗನು ಕಟ್ಟಿದನು ಕಾವ್ಯ ಸಾಮ್ರಾಜ್ಯ
ಎಂದು ಅಭಿಮಾನಪಟ್ಟನು ಕವಿಯ ಅಜ್ಜ
ಅಜ್ಜ ಸಾಯುವ ಮೊದಲೆ ಸಾಮ್ರಾಜ್ಯ ಉರುಳಿ
ದಪ್ಪ ಪುಸ್ತಕ ಹರಿದು ಮಾಡಿದರು ಸುರುಳಿ.

### ೧೯೩೩. ಹೆಣ್ಣು ಮಕ್ಕಳು

ಮೊಮ್ಮಗಳಿಗೂ ಮೊನ್ನೆ ಹುಟ್ಟಿದಳು ಮಗಳು.
ಇದಕಾಗಿ ಮುತ್ತಜ್ಜಿಯನು ಭರ್ತಿ ಹೊಗಳು.
ಮುಂದುವರಿಯಲಿ ಹೀಗೆ ನರನ ಸಂತಾನ.
ಘನ ಪುಣ್ಯವೆನ್ನುವೆನು ಕನ್ಯೆಯರ ದಾನ.

### ೧೯೩೪. ಖಗೋಲ ವಿಜ್ಞಾನ

ಮೊಲವು ಕಾಣುವುದಿಲ್ವೆ ಚಂದಿರನ ಮೇಲೆ ?
ಕಾಣುತಿದೆ ಎಂದು ಶ್ರುತಪಡಿಸಿದಳು ಬಾಲೆ.
ಮೊಲದ ಪಕ್ಕದಲಿ ಕಾಣುವುದಿಲ್ವೆ ಬೆಕ್ಕು ?
ಅದಕೆನ್ನುವರು ನಾವು ಬಿಟ್ಟ ಸ್ಫುಟ್‌ನಿಕ್ಕು.

### ೧೯೩೫. ಪ್ರಜಾರಾಜ್ಯದ ತೆರಿಗೆಗಳು

ಮೊಸರನ್ನ ಊಟ ಮಾಡಿದರೆ ಕಂದಾಯ
ನೂರು ಪೈಸೆಗಳಂತೆ ಕೊಡಬೇಕು, ಜೀಯ.
ಮಜ್ಜಿಗೆಗೆ ಹದಿನೆಂಟು ಪೈಸೆಗಳ ರೇಟು.
ಗಂಜಿ ಕುಡಿದರೆ ಮಾತ್ರ ಸಿಗುವುದು ರಿಬೇಟು.

## ೧೯೩೬. ನೂತನ ಸೋಫಾ

ಮೋರೆ ಒಂದಾದರೂ ಎರಡು ವಿಧ ರೂಪ,
ಮಧ್ಯರಾತ್ರಿಗೆ ಮಂಚ, ಮಧ್ಯಾನ್ಹ ಸೋಫಾ.
ಯಾವಾಗಲೂ, ಮಗನೆ, ಬರಿ ಒಂದು ವೇಷ
ಧರಿಸಿದರೆ ಯಾರಿಗೂ ಇಲ್ಲ ಸಂತೋಷ.

## ೧೯೩೭. ಉದ್ರೇಕ

ಬಿದ್ದರೂ ಮೋರೆಯಲಿ ನೂರಾರು ಸುಕ್ಕು
ನನ್ನ ಬಾಳ್–ಕಬ್ಬಿಣಕೆ ಹಿಡಿದಿಲ್ಲ ತುಕ್ಕು.
ಇಂದಿಗೂ ಕುದಿಯುತಿದೆ ಪ್ರತಿಯೊಂದು ಎಲುಬು.
ಉದ್ರೇಕವೇ ನನ್ನ ಜೀವನದ ತಲಬು.

## ೧೯೩೮. ಯಮರಾಜ ಹೇಳಿದ್ದು

ಯಮರಾಜ ಬಂದು ಕಿವಿಯೊಳಗೂದಿ ಹೋದ
ನೀ ಬರೆದ ಈ ಚುಟಕಗಳು ಬಹಳ ಸಾದಾ
ಪಾಪ ! ಅವುಗಳಿಗಿಲ್ಲ ಯಾವ ಆಭರಣ.
ಫಲವೇನು ಅವುಗಳಿಗೆ ತರಿಸಿದರೆ ಮರಣ ?

## ೧೯೩೯. ಜೋಗದ ವಿದ್ಯುತ್ತು

ಯಂತ್ರ ಮಾಡಿದ್ದೇನು ? ಬರಿ ಒಂದು ಯುಕ್ತಿ
ಎಲ್ಲವೂ ಮೇಘರಾಜನ ದಿವ್ಯಶಕ್ತಿ
ಹಾಲಾಗಿ ಧುಮುಕಿಡಲು ಉಲ್ಲಾಸದಿಂದ,
ತಾರೆಗಳು ಧರೆಗಿಳಿದು ಮಿಂಚಿದವು, ಕಂದ.

## ೧೯೪೦. ಚಂದ್ರಯಾನ

ಯಂತ್ರಯುಗದಲಿ ನಮಗೆ ನೆತ್ತಿಯಲಿ ಕಣ್ಣು.
ಆಕಾಶದಲಿ ಕಾಣುತಿದೆ ಸೇಬು ಹಣ್ಣು.
ಈ ಹಣ್ಣಿಗಾಗಿ ವಿಪರೀತ ಹಾರಾಟ,
ರಷ್ಯ ಅಮೇರಿಕಗಳಿಗೆ ಮತ್ತೆ ಹೋರಾಟ.

## ೧೯೪೧. ನಾಯಕನ ಪ್ರತಿಮೆ

ಯಾತ್ರಿಕನೆ, ಇದು ನಮ್ಮ ನಾಯಕನ ಪ್ರತಿಮೆ
ವರ್ಣನಾತೀತವಾಗಿದೆ, ಇವನ ಮಹಿಮೆ
ನಾಲ್ದೆಸೆಗೆ ತುಂಬಿಕೊಂಡಿದೆ ಇವನ ಕೀರ್ತಿ
ಜೀವಂತವಿದ್ದಾಗ ತಿಂದದ್ದು ಭರ್ತಿ.

## ೧೯೪೨. ಮಹಾಶಿಲ್ಪ

ಯಾತ್ರಿಕನೆ, ಬಾ ಇಲ್ಲಿ ಕೈಮುಗಿದು ನಿಲ್ಲು!
ಇದು ಮಹಾ ಮೇರಿ ಕೃತಿ, ಅಲ್ಲ ಬರಿ ಕಲ್ಲು!
ನಮ್ಮ ದೇಶದ ಮಹಾ ಮಂತ್ರಿಗಳ ಶಿಲ್ಪ.
ಇವನು ನುಂಗಿದ ತಿಂಡಿ ಅಲ್ಲ ಅತ್ಯಲ್ಪ!

## ೧೯೪೩. ಹುಡುಗಿಯ ಕಣ್ಣುಮುಚ್ಚಾಲೆ

ಯಾರ ಕೈಗೂ ಸಿಗುವುದಿಲ್ಲ ಈ ಪ್ರಾಣಿ
ಎಲ್ಲರೂ ಹುಡುಕಿದರು ಪ್ರತಿಯೊಂದು ಓಣಿ
ಇವಳ್ಯಾರು ಗೊತ್ತುಂಟೆ? ದಿನಕರನ ಬಾಲೆ.
ಸಾಹಿತ್ಯ ಲೋಕದಲಿ ಕಣ್ಣುಮುಚ್ಚಾಲೆ.

## ೧೯೪೪. ರಾಜದಂಡ

ಯಾರ ಕೈಯೊಳಗಿದ್ದರೂ ರಾಜದಂಡ
ಕಪ್ಪೆಗಳಿಗೆಂದಿಗೂ ತಪ್ಪುವುದೆ ಹೊಂಡ?
ಹೀಗೆಂದು ಉಗುಳಿಬಿಟ್ಟಳು ಬೀದಿ ರಂಡೆ.
ಕ್ರಾಂತಿಕಾರನು ಓಡಿ ಹೋದುದನು ಕಂಡೆ.

## ೧೯೪೫. ಚುನಾವಣೆಯಲ್ಲಿ ಕೇಳಿದ್ದು

ಯಾರಪ್ಪ ಬಂದರೂ ನನಗೇನು ಬಂತು?
ಉಪವಾಸ ಸಾಯುತಿದೆ ಈ ಜೀವ ಜಂತು.
ಯಾರಜ್ಜ ಬಂದರೂ ಈ ಪ್ರಜಾರಾಜ್ಯ
ನಿಲಿಸಲಾರದು ಅಂದೆ ಹೊಟ್ಟೆಗಳ ವ್ಯಾಜ್ಯ.

## ೧೯೪೬. ಪ್ರಖ್ಯಾತಿಯ ಪರಿಣಾಮ

ಯಾರಿಗಾದರೂ ಅಷ್ಟೆ; ಗಳಿಸಿದ ಪ್ರಸಿದ್ಧಿ
ನೆತ್ತಿಗೇರಲು ಕೆಟ್ಟುಹೋಗುವುದು ಬುದ್ಧಿ.
ಗಳಿಸಬೇಕೆಂದು ಮತ್ತಷ್ಟು ಪ್ರಖ್ಯಾತಿ,
ಹಾರಿಬಿಟ್ಟರೆ ಮೇಲೆ ಟೊಂಗೆಯಲಿ ಕೋತಿ.

## ೧೯೪೭. ಇಲಿಯ ನ್ಯಾಬುದ್ಧಿ

ಯಾರಿಗೂ ಕೊಡದೆ ತಿನಬೇಕೆಂದು ನಾಳೆ
ಅಡಗಿಸಿಟ್ಟೆನು ಮೊಲೆಯೊಳಗೆ ರಸಬಾಳೆ
ಇಂದು ಮುಂಜಾನೆ ನೋಡಿದರೆ ಬರಿ ಸಿಪ್ಪೆ
ಏಕಾಂತದಲಿ ತಿಂದ ಮೂಷಿಕನ ತಪ್ಪೆ?

## ೧೯೪೮. ಪ್ರಾಚೀನ ಸೊಸೆ

ಯಾರಿವಳು ? ಪ್ರಾಚೀನ ಸೊಸೆಯೇನು ಈಕೆ ?
ಪಾಪ ! ಅತ್ತೆಯ ಮುಂದೆ ಇದ್ದಂತೆ ಮೇಕೆ.
ಮತ್ತೆ ಗಂಡನ ಮುಂದೆ ಬರಿ ಓತಿಕಾಟ.
ಮೂಲೆ ಮೂಲೆಗೆ ಅಡಗಿದರೆ ಯಾವ ಆಟ ?

## ೧೯೪೯. ಸುಮ್ಮನಿರು

ಯಾರು ಹಣ ತಿಂದರೂ ಸುಮ್ಮನಿರು, ರಂಗ.
ಎಂದಿಗೂ ಮಾಡಬಾರದು ಶಿಸ್ತು ಭಂಗ.
ವೃತ್ತಪತ್ರಿಕೆಗಳಿಗೆ ಪ್ರಕಟನೆಯ ಕೊಟ್ಟು
ಬಹಿರಂಗ ಪಡಿಸಿದರೆ ಸಚಿವರಿಗೆ ಸಿಟ್ಟು.

## ೧೯೫೦. ನಾನು ಸತ್ತಾಗ

ಯಾವ ಭಾಷಣ ಬೇಡ ನಾನು ಸತ್ತಾಗ
ನಿಶ್-ಶಬ್ದವಾಗಿರಲಿ ಹೆಣ ಸುಡುವ ಜಾಗ.
ಮಾತಾಡಿ ಮಾತಾಡಿ ಬೇಸತ್ತ ಜೀವ
ಮೌನತೆಯ ಶಾಂತಿಯಲಿ ಪಡೆಯಲಿ ಪ್ರಭಾವ.

### ೧೯೫೧. ಇವನ ಕೆಲಸ

ಯಾವಾಗಲೂ ಇವನ ಕೆಲಸ ಪಡಘೂಸಿ.
ಎರಡು ಹೊತ್ತಿಗೆ ಊಟ ಮಾಡುವನು ರಾಶಿ.
ಇಂಥ ಜನರನು ಕಟ್ಟಿಕೊಂಡರೆ ದಿವಾಳಿ.
ಬದುಕಬೇಕಾದೀತು ತಿಂದು ಒಣಗಾಳಿ.

### ೧೯೫೨. ಇವರ ಸಮತಾವಾದ

ಯಾವಾಗಲೂ ಇವರ ಸೋಷಲಿಜಮ್ಮು
ಗಡಿಯಾರದೊಳಗೆ ಜೋಲುವ ಪೆಂಡುಲಮ್ಮು
ತಿರುತಿರುಗಿ ಸರಿದು ಆ ಬದಿಗೆ ಈ ಬದಿಗೆ
ಎಂದಿಗೂ ಮುಟ್ಟಲಾರದು ಒಂದು ತುದಿಗೆ.

### ೧೯೫೩. ಹುದ್ದೆ ಮತ್ತು ಶ್ರದ್ಧೆ

ಯಾವಾಗಲೂ ಇವರ ಹುಡುಕುವುದು ಹುದ್ದೆ.
ಎಷ್ಟು ಮಂದಿಗೆ ಉಂಟು ನಿಜವಾದ ಶ್ರದ್ಧೆ?
ಗೆದ್ದ ಎತ್ತಿನ ಬಾಲ ಹಿಡಿಯುವುದೆ ರೂಢಿ
ಹೀಗಾಗಿ ರಾಜಕಾರಣ ಹೊಲಸು ರಾಡಿ.

### ೧೯೫೪. ಕೋಟು

ಯಾವಾಗಲೂ ಉದ್ದವಾಗಿರಲಿ ಕೋಟು.
ಅನುಕೂಲವಾಗುವುದು ತುಂಬಲಿಕೆ ನೋಟು.
ಒಮ್ಮೊಮ್ಮೆ ನೋಟುಗಳು ಸಿಕ್ಕುವವು ಜಾಸ್ತಿ,
ಸಂಬಳದ ಹೊರತಾಗಿ ಇದು ಬೇರೆ ಆಸ್ತಿ.

### ೧೯೫೫. ಚಿಕ್ಕತನ

ಯಾವಾಗಲೂ ಚಿಕ್ಕತನ ನೀಡು, ದೇವ.
ಚಿಕ್ಕಂದಿನಲಿ ಅಕ್ಕರತೆ ನಮ್ಮ ಭಾವ.
ಚಿಕ್ಕತನ ಬಾಳ ಸಕ್ಕರೆಯೆಂಬ ಸತ್ಯ
ನೆನಪಿನಲ್ಲಿಡಬೇಜಯ ನಾವು ಪ್ರತಿನಿತ್ಯ.

## ೧೯೫೬. ಬೆಂಕಿ ಹೇಳಿದ್ದು

ಯಾವಾಗಲೂ ನನಗೆ ಮೈತುಂಬ ಹಸಿವು.
ತಿಂದರೂ ಹೊಟ್ಟೆ ತುಂಬುವುದಿಲ್ಲ ತುಸುವು.
ತಿಂದಷ್ಟು ನನ್ನ ನಾಲಗೆಯಾಗಿ ಉದ್ದ,
ಹೊಲಸಿದ್ದರೂ ಕೊನೆಗೆ ಆಗುವುದು ಶುದ್ಧ.

## ೧೯೫೭. ಹಕ್ಕಿ

ಯಾವಾಗಲೂ ನಾನು ಆಗಿರಲಿ ಹಕ್ಕಿ.
ಇದಕೆ ಬೇಕಾಗಿಲ್ಲ ಯಾವ ಪಲ್ಲಕ್ಕಿ.
ಬುರ್ ಎಂದು ಇಲ್ಲಿಂದ ಅಲ್ಲಿಂದ ಹಾರಿ,
ಕುಣಿದರೂ ಬೀಳಲಾರೆನು ಕೆಳಗೆ ಜಾರಿ.

## ೧೯೫೮. ಭಾರತದ ಪ್ರಗತಿ

ಯಾವಾಗಲೂ ನಮ್ಮ ಪ್ರಗತಿ ಅಸಮಾನ
ಈ ಮಾತು ಸುಳ್ಳಲ್ಲ; ಬೇಡ ಅನುಮಾನ
ದೇವಲೋಕದ ಸಂಖ್ಯೆ ತೆತ್ತೀಸ ಕೋಟಿ
ಮುಂದೆ ಸಾಗಿದ್ದೇವೆ ಈ ಸಂಖ್ಯೆ ದಾಟಿ.

## ೧೯೫೯. ಕಾಶ್ಮೀರ ಗಡಿರಕ್ಷಕರಿಗೆ

ಯವಾಗಲೂ ಭುಜದ ಮೇಲಿರಲಿ ದೊಣ್ಣೆ.
ಮಿಸ್ಚೀಫು ಮಾಡಿದರೆ ತಿನಿಸಿಬಿಡ ಬೆಣ್ಣೆ.
ಸೊಂಟ ಮುರಿಯುವ ತನಕ ಕಲಿಸಿದರೆ ಬುದ್ಧಿ
ಡೊಂಕಾದ ತಲೆಯೊಳಗೆ ಪೂರ್ಣ ಅಭಿವೃದ್ಧಿ

## ೧೯೬೦. ಸ್ವರಾಜ್ಯ ಸಿಕ್ಕಿದಾಗ

ಯಾವಾಗಲೂ ಮುಂದೆ ನಮ್ಮ ಲಿಂಗಣ್ಣ
ಗೊತ್ತುಂಟು ಇಡಿ ಜಗತ್ತಿಗೆ ಇವನ ಬಣ್ಣ
ಮೂಲೆಯೊಳಗಿದ್ದ ಹೋರಾಟ ನಡೆದಾಗ,
ಎಲೆ ಹಾಕಿದೊಡನೆ ಇವನಿಗೆ ಪ್ರಥಮ ಜಾಗ.

## ೧೯೬೧. ಒಂದು ಸೂಚನೆ

ಯಾವುದಕ್ಕೂ, ಕಮಿಟಿ ನೇಮಿಸಿರಿ ಅಂದೆ.
ಅಭಿವೃದ್ಧಿ ಹೊಂದುವುದು ಸರಕಾರಿ ದಂಧೆ.
ಕಮಿಟಿಯ ಸದಸ್ಯರಿಗೆ ಆತ್ಮ ಸಂತೋಷ.
ಸಂಚಾರಿ ಭತ್ಯೆಗೂ ಪೂರ್ಣ ಅವಕಾಶ.

## ೧೯೬೨. ಉತ್ಸಾಹ

ಯಾವುದಕ್ಕೂ, ಮಗನೆ, ಬೇಕು ಉತ್ಸಾಹ.
ಎಲ್ಲರೂ ತಲೆದೂಗಿ ಏನಬೇಕು, ವ್ಹಾ! ವ್ಹಾ!
ಶಿಖಿಯ ಉತ್ಸಾಹದಲಿ ಕರಗುವುದು ಬೆಣ್ಣೆ
ಉತ್ಸಾಹ ಅಡಗಿದರೆ ಮೋರೆ ಹರಳೆಣ್ಣೆ

## ೧೯೬೩. ಹೆಂಡತಿಯ ಜಾತಿ

ಯಾವುದಾದರೂ ಏನು ಹೆಂಡತಿಯ ಜಾತಿ?
ಇಬ್ಬರಲ್ಲೂ ಬೇಕು ಅನವರತ ಪ್ರೀತಿ.
ಹೊಲೆಯಾಕಿಯಾದರೂ ಹುಟ್ಟುವುದು ಕೂಸು
ಜಾತಿಮಿಶ್ರಣದ ಸಂತತಿ ಬಹಳ ಲೇಸು.

## ೧೯೬೪. ಎಲ್ಲವೂ ಮುಗಿದು

ಯಾವುದೂ ಉಳಿದಿಲ್ಲ; ಎಲ್ಲವೂ ಮುಗಿದು
ಹಣ ತಿಂದನೆಂದು ಹಾಕಿದರಂತೆ ತೆಗೆದು.
ತೆಗೆದು ಹಾಕಿದರೇನು? ಗಳಿಸಿದನು ಭರ್ತಿ.
ಇವನಿಂದ ಹೊಸ ತರುಣರಿಗೆ ತುಂಬ ಸ್ಫೂರ್ತಿ.

## ೧೯೬೫. ಎಲ್ಲವೂ ಜಳ್ಳು

ಯಾವುದೂ ನಿಜವಲ್ಲ, ಎಲ್ಲವೂ ಜಳ್ಳು
ಸುಳ್ಳು ಮಾತಾಡಿ, ಸಖಿ, ಹಿಡಿಸುವನು ಮಳ್ಳು
ಇಂಥ ಯೋಗ್ಯತೆ ಇದ್ದವರು ಬಹಳ ಕಡಿಮೆ
ತುಂಬುವುದು ಹೊಟ್ಟೆ ಇರದಿದ್ದರೂ ದುಡಿಮೆ.

### ೧೯೬೬. ವಿಜ್ಞಾನ ಪ್ರಗತಿ

ಯುಗಯುಗಾಂತರದಿಂದ ಚಂದಿರನ ಮೋರೆ
ನೋಡಿ ಬೇಸರ ಬಂತು ಮನುಜನಿಗೆ, ನೀರೆ.
ಇನ್ನು ಮೋರೆಯ ಬದಲು ಬೆನ್ನು ನೋಡಿದರೆ
ನರನ ಉದ್ಧಾರವಾಗುವುದಂತೆ, ಚದುರೆ.

### ೧೯೬೭. ಪಂಚವಾರ್ಷಿಕ ಯೋಜನೆ

ಯೋಜನೆಯ ಕಾರ್ಯಕ್ರಮ ಪೂರ್ಣ ಈಡೇರಿ
ನಾವೆಲ್ಲರೂ ಹಿಮಾಚಲ ತುದಿಯನೇರಿ
ನಿಂತಿದ್ದರಿಂದ ಈ ಮೈನಡಕು, ಥಂಡಿ
ಶರ್ಟಿಗೂ ಇರಬಾರದೇ ಒಂದು ಗುಂಡಿ ?

### ೧೯೬೮. ಯೋಜನೆಯ ಫಲಶ್ರುತಿ

ಯೋಜನೆಯ ಪರಿಣಾಮ ಪೂರ್ಣ ಫಲಕಾರಿ.
ಪ್ರತಿಯೊಂದು ಪೇಟೆಯಲಿ ಭರ್ತಿ ತರಕಾರಿ.
ತುಟ್ಟಿಯಾದರೂ ಕೂಡ ಖರ್ಚಾಯ್ತು ಅಂದೆ.
ಹೌದು, ಮಾರಾಯ, ನಿಜ ನೀನೆಷ್ಟು ತಿಂದೆ ?

### ೧೯೬೯. ಯೋಜನೆಯ ಯುಗದೊಳಗೆ

ಯೋಜನೆಯ ಯುಗದೊಳಗೆ ಭೋಜನದ ಕೊರತೆ
ಕುಡಿಯಲಿಕೆ ನೀರಿಲ್ಲ, ಬಸಿದರೂ ಒರತೆ
ಕಾಳು ಕಡಿ ಸಿಗಲಿಲ್ಲ ನೆರೆದರೂ ಸಂತೆ.
ಊಟಕ್ಕೆ ಕುಳಿತಾಗ ಬಾಯೊಳಗೆ ಮೆಂತೆ.

### ೧೯೭೦. ಮಾನವನ ಹಾದಿ

ಯೌವನದ ಭರದೊಳಗೆ ನೆತ್ತಿಯಲಿ ಕಣ್ಣು
ವೃದ್ಧಾಪ್ಯದಲಿ ಜೀವನವಾಯ್ತು ಹಣ್ಣು.
ಸತ್ತಾಗ ಒಣ ಎಲಬುಗಳು ಮತ್ತೆ ಬೂದಿ.
ಇದಕೆಂಬೆ ಪ್ರತಿಯೊಬ್ಬ ಮಾನವನ ಹಾದಿ.

## ೧೯೭೧. ಯೌವನ

ಯೌವನದ ಹೆಮ್ಮೆ ಕಾಮನಬಿಲ್ಲು ಸ್ವಾಮಿ,
ಮೂಡಿದರೆ ಕೆಳಗೆ ಕಾಣುವದಿಲ್ಲ ಭೂಮಿ
ನಿಮಿಷ ನಿಮಿಷಕೆ ನೆತ್ತಿಗೇರುವುದು ಗಗನ
ನಕ್ಷತ್ರಗಳ ತಲುಪಿ ಕ್ಷಣದೊಳಗೆ ಪತನ.

## ೧೯೭೨. ಆದರ್ಶ

ರಕ್ತನಾಳಗಳಲ್ಲಿ ಹರಿಯುತ್ತಿದೆ ಕಡಲು
ಇಡಿಯ ಬ್ರಹ್ಮಾಂಡವಾಯಿತು ನರನ ಒಡಲು.
ಕೋಟಿ ಕಿರಣಗಳಿಂದ ಹೃದಯದಾಕಾಶ.
ಬೆಳಗಿದರೆ ಯಮನಿಗೂ ಇಲ್ಲ ಅವಕಾಶ.

## ೧೯೭೩. ಸರಕಾರದ ಸ್ಪಷ್ಟೀಕರಣ

ರಕ್ಷಣಾ ಕಾನೂನು ಜಾರಿಯಲಿ ಬಂದು
ಆಡಳಿತದೊಳಗಿಲ್ಲ ಯಾವುದೂ ಕುಂದು.
ನಡೆದಿಲ್ಲ ಸಕ್ಕರೆಯ ಕಳ್ಳ ಮಾರಾಟ
ನಡೆದದ್ದು ವರ್ತಕರ ಕಣ್ಣುಮುಚ್ಚಾಟ.

## ೧೯೭೪. ಯುದ್ಧಕಾಲದ ಸಂದೇಶ

ರಣದೊಳಗೆ ಮಡಿದವನಿಗಿರುವ ಸೌಕರ್ಯ
ಮನೆಯೊಳಗೆ ಸತ್ತವನಿಗಿಲ್ಲಂತೆ, ಅಯ್ಯ,
ಆದಷ್ಟು ಹೆಚ್ಚು ಜನ ರಣದೊಳಗೆ ಸತ್ತು
ವೀರಸ್ವರ್ಗವನೇರಲಿಕೆ ಇದೇ ಹೊತ್ತು.

## ೧೯೭೫. ಭಾರತದ ನಕ್ಷೆ

ರಮ್ಯವಾಗಿದೆಯಲ್ವೆ ಭಾರತದ ನಕ್ಷೆ?
ಹೊಟ್ಟೆಗಿಲ್ಲದೆ ಕೋಟಿ ಬೇಡುವರು ಭಿಕ್ಷೆ.
ಈ ಕೋಟಿಗಳ ಲೆಕ್ಕ ಮಾಡಿದವರಾರು?
ಆ ಕೋಟಿಗಳ ಲೆಕ್ಕ ದಿಲ್ಲಿ ದರಬಾರು.

### ೧೯೭೬. ಗಂಡ ಹೇಳಿದ್ದು

ರವಕೆಗಿರಬೇಕು, ಸಖಿ, ಹಿಂಬದಿಗೆ ಗುಂಡಿ.
ಛಾತಿ ಟೈಟಾಕಿ ಹತ್ತುವುದಿಲ್ಲ ಥಂಡಿ.
ನನ್ನ ಎರಡೂ ಕೈಗೆ ಬಿಡದೆ ಪ್ರತಿ ದಿವಸ
ದೊರಕುವುದು ಗುಂಡಿ ಹಾಕುವ ದೊಡ್ಡ ಕೆಲಸ.

### ೧೯೭೭. ವಿಜ್ಞಾನಿಗಳು

ರವಿಕಿರಣಗಳನೆಲ್ಲ ಕಟ್ಟಿ ಒಂದೆಡೆಗೆ
ಆಗಸವ ಗುಡಿಸಿದರು ತುದಿಯಿಂದ ತುದಿಗೆ.
ಭೂಮಿಯನು ಗುಡಿಸುವವರನು ಮಾತ್ರ ಕಾಣೆ
ಇದರ ಇಂಗಿತವೇನು ? ಹೇಳು ನೀ ಜಾಣೆ.

### ೧೯೭೮. ಚಂದ್ರನ ಸಾಲ

ರವಿಯ ರಿಣದಲಿ ಮುಳುಗಿ ಇದ್ದರೂ ಶಶಿಯು
ಯಾವಾಗಲೂ ನೋಡಿದರೆ ಹಸನ್ಮುಖಿಯು
ಲೋಕಹಿತಕಾಗಿಯೇ ಸಾಲವನು ತಂದು
ಸಂತೋಷದಲಿ ಬೆಳಗುತಿಹನು ಪೂರ್ಣೇಂದು.

### ೧೯೭೯. ರವಿ

ರವಿಯೊಬ್ಬನೇ ದೇವ, ಅವನ ಕಿರಣಗಳು,
ನಮ್ಮ ಪೃಥಿವಿಯನಪ್ಪಿಕೊಂಡ ಚರಣಗಳು.
ಕೋಟಿ ನಕ್ಷತ್ರ ಸೂರ್ಯನ ಬಳಗವೆಂಬೆ.
ನಮ್ಮ ಈ ಪೃಥಿವಿ ಎಂಬುದು ಸಣ್ಣ ನಿಂಬೆ.

### ೧೯೮೦. ಎಲ್ಲವೂ ದೊರಕುವುದು

ರಷ್ಯನರು ಪೂರೈಸುವರು ಸೀಮೆ ಎಣ್ಣೆ.
ಅಮೇರಿಕವು ನೀಡಲಿದೆ ಚಂದಿರನ ಬೆಣ್ಣೆ.
ಇಂಗ್ಲಂಡು ಬಿಂಗ್ಲಂಡು ನೀಡುವವು ಹುಲ್ಲು.
ಎಲ್ಲವೂ ದೊರಕುವವು; ನಿಲ್ಲಿಸಿರಿ ಗುಲ್ಲು.

## ೧೯೮೧. ತಾಟಸ್ಥ್ಯ ನೀತಿ

ರಷ್ಯನರ ದೋಣಿಯಲಿ ಎಡಗಾಲನಿಟ್ಟು
ಅಮೇರಿಕದ ದೋಣಿಯಲಿ ರವೆ ಗೋದಿ ಹಿಟ್ಟು.
ಎರಡನೂ ಕೈಬಿಟ್ಟು ಹೋದರೆ ಫಜೀತಿ.
ಸಾಗರದ ಬುಡದೊಳಗೆ ತಾಟಸ್ಥ್ಯ ನೀತಿ.

## ೧೯೮೨. ಭಾರತೀಯ ಸ್ವಾವಲಂಬನ

ರಷ್ಯ ನೀಡಿದ ತಿಂಡಿ ತೀರಿಸುವ ಮುನ್ನ,
ಅಮೆರಿಕದ ಅಧ್ಯಕ್ಷ ಬಡಿಸಿದನು ಅನ್ನ.
ಆಮೇಲೆ ಇಂಗ್ಲಂಡಿನಿಂದ ತಿಳಿ ಸಾರು.
ನಮ್ಮದೆಂಬುದು ಬರೀ ಮಜ್ಜಿಗೆಯ ನೀರು.

## ೧೯೮೩. ರಸಭರಿತ ಕತೆ

ರಸಭರಿತ ಕತೆಯುಂಟು : ಕೇಳು, ತನುಜಾತೆ
ಇವನ ಕೈಯೊಳಗಿತ್ತು ಲೈಸನ್ಸು ಖಾತೆ.
ವಟವೃಕ್ಷದಂತೆ ಹಬ್ಬಿತು ಇವನ ಬೇರು.
ಒಬ್ಬೊಬ್ಬ ಅಳಿಯನಿಗೆ ಒಂದೊಂದು ಕಾರು.

## ೧೯೮೪. ರಸಭರಿತವಾದದ್ದು

ರಸಭರಿತವಾದದ್ದು ನೀನಿಡುವ ಮುತ್ತು
ಎನ್ನುವುದು, ನಿರ್ಮಲಾ, ನಿನಗೇನು ಗೊತ್ತು?
ಎಲ್ಲವೂ ಗೊತ್ತುಂಟು, ನಿಮ್ಮ ಈ ಆಟ.
ನಿಮಿಷ ನಿಮಿಷಕೆ ಉಂಟು ನಿಮ್ಮ ಈ ಕಾಟ.

## ೧೯೮೫. ರಸಿಕತೆ

ರಸಿಕತೆಯ ಹೆಣ್ಣಾಗಿ ನೀ ಬಾಳಬೇಕು.
ಹಿಡಿಯಬಾರದು ಕೋಪ ಮಾಡಿದರೆ ಜೋಕು.
ಹಗಲಿಗೂ ಕೊಡಬೇಕು ಒಂದೆರಡು ಮುತ್ತು.
ಇದರ ಸುಖ ಅನುಭವಿಸಿದವರಿಗೇ ಗೊತ್ತು.

## ೧೯೮೬. ರಸಿಕ ಮತ್ತು ಸಚಿವ

ರಸಿಕನಾಡಿದ ಮಾತು ಶಶಿಯುದಿಸಿದಂತೆ
ಸಚಿವನಾಡಿದ ಮಾತು ಹುಸಿ ನುಡಿಯ ಸಂತೆ
ವೋಟು ಸಿಗಬೇಕೆಂದು ಏನೇನೋ ಹೇಳಿ
ಹೋದ ಹೋದಲ್ಲಿ ಊದಿದನು ಒಣ ಗಾಳಿ.

## ೧೯೮೭. ರಾಜಾಜಿ ಹೇಳಿದ್ದು

ರಸ್ತೆಯಲಿ ತುಂಬಿಕೊಂಡಿದೆ ಭರ್ತಿ ರಾಡಿ.
ಮುಂದೆ ಸಾಗುವುದೆಂತು ನಿಮ್ಮ ಈ ಗಾಡಿ ?
ಅವಸರವ ಮಾಡಿ ಫಲವಿಲ್ಲ, ಹೇ ನೆಹರು,
ರಾಡಿಯೊಳಗಿಂದ ಸಾಗದು ಮುಂದೆ ಕಾರು.

## ೧೯೮೮. ರಸ್ತೆಯಲಿ

ರಸ್ತೆಯಲಿ ಸಗಣಿಯಲ್ಲೇ ಬಿತ್ತು ಕಾಲು.
ಕಂಡ ಬಾಲಕರು ಬಾರಿಸಬೇಕೆ ಡೋಲು ?
ಆರಂಭ ಮಾಡಿದರು ಬಹಳ ಜೋರಾಗಿ
ನಿಂತುಬಿಟ್ಟರು ಮೂರು ಫರ್ಲಾಂಗು ಸಾಗಿ.

## ೧೯೮೯. ನೆನಪು

ರಂಗುರಂಗಿನ ಸೀರೆ ! ಸಿಂಗಾರಗೈದು
ನೀ ಮನೆಗೆ ಬಂದು, ಸುಖಿ, ವರುಷ ಹದಿನೈದು
ನಿನ್ನಿಂದ ಸಂಸಾರವಾಯ್ತು ಬಂಗಾರ.
ಎರಡು ಮಕ್ಕಳ ತಾಯಿ, ಹಿಡಿ ಪುಷ್ಪಹಾರ.

## ೧೯೯೦. ಮೀನುಗಾರರ ಜೀವನ

ರಂಪಣಿಯ ಬಲೆಯೊಳಗೆ ಬಂಗಡೆಯ ಪೀಕು,
ಭರ್ತಿ ಬಿದ್ದರು ಕೂಡ ಸಂಸಾರ ಸೀಕು.
ಮಡಕೆಯೊಳಗಿಲ್ಲ ಸಾಕಷ್ಟು ಕೊರಸಕ್ಕಿ.
ಉಪವಾಸ ಬಿದ್ದು ಅತ್ತರು ಬಿಕ್ಕಿ ಬಿಕ್ಕಿ.

### ೧೯೯೧. ರಾಜಕಾರಣದಿಂದ

ರಾಜಕಾರಣದಿಂದ ಗಳಿಸುವರು ಗಂಟು.
ದೇಶಭಕ್ತರು ಸೆಗಣಿ ತಿಂದದ್ದು ಉಂಟು.
ಈ ಮಹಾಶಯರು ಭಾಷಣ ಮಾಡಿ ನಿತ್ಯ
ಸಾಮಾನ್ಯ ಜನಗಳಿಗೆ ಕಲಿಸುವರು ಸತ್ಯ.

### ೧೯೯೨. ಅತಿಯಾಗಿ ಮಾತು

ರಾಜಕಾರಣದಲ್ಲಿ ಅತಿಯಾಗಿ ಮಾತು
ಬಡವರಿಗೆ ಪ್ರತಿ ದಿವಸ ಕೇಸರೀಭಾತು
ಕನಸು ಮುಗಿಯುವ ಮೊದಲೆ ತಿನ್ನಿ ಬೇಕಷ್ಟು
ಬಡಿಸುವನು ನವಭಾರತದ ಸೋಷಲಿಸ್ಟು.

### ೧೯೯೩. ಆಡುಗಳು

ರಾಜಕಾರಣದಲ್ಲಿ ಆಡುಗಳ ಜಾತಿ
ಮೈದೋರಿ ಬಡ ಭಾರತಾಂಬೆಯ ಫಜೀತಿ
ಸಿಕ್ಕಿ ಸಿಕ್ಕಿದ ಗಿಡಕ್ಕೆ ಹಚ್ಚಿದವು ಬಾಯಿ,
ಹೂ ಬಿಡದೆ ಬಂಜೆಯಾಯಿತು ಲೋಕಶಾಹಿ.

### ೧೯೯೪. ರಾಜಕಾರಣದಲ್ಲಿ

ರಾಜಕಾರಣದಲ್ಲಿ ಎರಡು ವಿಧ ಉಂಟು.
ಅಧಿಕಾರಗಳ ವಹಿಸಿ ಕಟ್ಟಿದರು ಗಂಟು.
ಇನ್ನೊಂದು ವಿಧದಲ್ಲಿ ಅಳಿಯನಿಗೆ ಜಾಗ
ಮತ್ತೆ ಯಾರಿಗೆ ಎಂದು ಹೇಳಲಿಕ್ಕಾಗ.

### ೧೯೯೫. ರಾಜಕೀಯ ತುಫಾನು

ರಾಜಕಾರಣದಲ್ಲಿ ಏಳಲು ತುಫಾನು
ಸಮಯ ಸಾಧಕರೆಲ್ಲ ಹಿಡಿಯುವರು ಮೀನು
ಈ ಕಡೆಗೆ ಆ ಕಡೆಗೆ ಹಾಕುವರು ಗಾಳ.
ಕಿಸೆಯೊಳಗೆ ತುಂಬುವರು ಸಿಕ್ಕಿದ ಗಬಾಳ.

## ೧೯೯೬. ಕರಡಿಗಳ ಕಾಟ

ರಾಜಕಾರಣದಲಿ ಕರಡಿಗಳ ಕಾಟ
ಅತಿಯಾಗಿ ಜನಕೋಟಿ ಎತ್ತಿದರು ಸೋಟಾ
ಸರಕಾರ ಬದಲಾಗಿ ಬಂತು ಹೊಸ ಮೇಳಾ
ಕೊನೆಗೆ ನೋಡಿದರೆ ಕರಡಿಯ ಬದಲು ತೋಳ.

## ೧೯೯೭. ರಾಜಕಾರಣದಲ್ಲಿ

ರಾಜಕಾರಣದಲ್ಲಿ ಕಳ್ಳರೂ ಬಂದು
ಜಯಘೋಷ ಹಾಕಿದರು, ಹೇ ಕರುಣಸಿಂಧು.
ಪ್ರತಿಯೊಂದು ದಂಡೆಯನು ಸರಿಯಾಗಿ ದಾಟಿ,
ಮಾಳಿಗೆಯ ಮನೆಯೇರಿ ಹಾಕಿದರು ಲೂಟಿ.

## ೧೯೯೮. ಗಳಿಸಿದನು ಭರ್ತಿ

ರಾಜಕಾರಣದಲ್ಲಿ ಗಳಿಸಿದನು ಭರ್ತಿ.
ಹೋದ ಹೋದಲ್ಲಿ ಹಬ್ಬಿತು ಇವನ ಕೀರ್ತಿ.
ನಾಕೈದು ಮನೆಯೊಳಗೆ ಈತನ ನಿವಾಸ
ಪ್ರತಿಯೊಂದು ದಿವಸ ತಾರೆಯರ ಸಹವಾಸ.

## ೧೯೯೯. ತರತರದ ವೇಷ

ರಾಜಕಾರಣದಲ್ಲಿ ತರತರದ ವೇಷ.
ಕರಡಿಗಳು ಹೆಚ್ಚಾಗಿ ಬರಡಾಯ್ತು ದೇಶ.
ಇದಕೆನ್ನುವರು ನವ್ಯ ಭಾರತದ ಲೀಲೆ.
ಗಮಟೆಪಾಂಗಿನ ಮೇಲೆ ಕೋಲೆನ್ನಿ ಕೋಲೆ.

## ೨೦೦೦. ರಾಜಕಾರಣದಲ್ಲಿ

ರಾಜಕಾರಣದಲ್ಲಿ ನುಂಗುವುದು ಜಾಸ್ತಿ
ನುಂಗಿದವರೆಲ್ಲರೂ ಕಟ್ಟಿದರು ಆಸ್ತಿ
ನುಂಗದಿದ್ದವರು ಬರಿ ಸೇಕಡಾ ಮೂರು
ಇವರ ಮೈಯೊಳಗಿಲ್ಲ ಸಾಕಷ್ಟು ನೀರು.

### ೨೦೦೧. ಪುಂಡರೀಕಾಕ್ಷನ ಉತ್ತರ

ರಾಜಕಾರಣದಲ್ಲಿ, ಪುಂಡರೀಕಾಕ್ಷ,
ಈಗ್ಗೆ ಸದ್ಯಕ್ಕೆ ನಿನ್ನದು ಯಾವ ಪಕ್ಷ?
ಪಕ್ಷ ಬದಲಾಯಿಸುವ ಕ್ರಮ ನಾನು ನಂಬೆ.
ಎಂದಿಗೂ ಸರಕಾರಿ ಪಕ್ಷ ಲೇಸೆಂಬೆ.

### ೨೦೦೨. ಇಂದಿರಾ ಗಾಂಧಿ

ರಾಜಕಾರಣದಲ್ಲಿ ಮಲ್ಲರನು ಗೆದ್ದು
ಅರಸುಗಳಿಗೂ ಕೊನೆಗೆ ಕುಡಿಸಿದಳು ಮದ್ದು
ಈಗಿಲ್ಲ ರಾಜಧನ, ಈಗಿಲ್ಲ ಬಿರುದು
ಹಳೆಯ ಕಾಲದ ಚಿಂದಿ ಹಾಕಿದಳು ಹರಿದು.

### ೨೦೦೩. ಸ್ಥಾನ

ರಾಜಕಾರಣದಲ್ಲಿ ವ್ಯವಹಾರ ಜ್ಞಾನ
ಇದ್ದ ವ್ಯಕ್ತಿಗೆ ಮಾತ್ರ ದೊರೆಯುವುದು ಸ್ಥಾನ.
ಮಂತ್ರಿಗಳನೆಂದಿಗೂ ಹೊಗಳುತ್ತಲಿದ್ದೆ.
ಹೀಗಾಗಿ ಬಂದುಬಿಟ್ಟಿತು ದೊಡ್ಡ ಹುದ್ದೆ.

### ೨೦೦೪. ರಾಜಕೀಯ ದಾರಿ

ರಾಜಕಾರಣದಲ್ಲಿ ಸರಿಯಾದ ದಾರಿ
ಅನುಸರಿಸಿದರೆ ಬೀಳುವನು ಕಾಲು ಜಾರಿ.
ಈ ದಾರಿ ಬಿಟ್ಟು ಹಿಡಿದರೆ ಮಾರ್ಗ ಡೊಂಕು.
ಸ್ವಲ್ಪ ಅಂತರದೊಳಗೆ ಕಾಣುವುದು ಬ್ಯಾಂಕು.

### ೨೦೦೫. ಮೇಲ್ಮನೆಯ ಚುನಾವಣೆಗಳು

ರಾಜಕಾರಣದಲ್ಲಿ ಸೋತವರಿಗೆಲ್ಲಾ
ಬೆಂಗಳೂರಿಗೆ ಕಳಿಸಿ ಹಂಚಿದರು ಬೆಲ್ಲ.
ಈ ಜಾಂಬವಂತರನು ಮೇಲ್ಮನೆಗೆ ಅಟ್ಟಿ
ಆರು ವರುಷದವರೆಗೆ ಬಡಿಸಿದರು ರೊಟ್ಟಿ.

## ೨೦೦೬. ರಾಜಕಾರಣದಲ್ಲಿ

ರಾಜಕಾರಣದಲ್ಲಿ ಹೆಚ್ಚಾಗಿ ಕೊಳಕು.
ಮುಖ್ಯಮಂತ್ರಿಯ ಬಂಗಲೆಯ ಮುಂದೆ ಬೆಳಕು.
ಈ ಬೆಳಕಿನಲಿ ಕೊಳಕು ಮತ್ತಷ್ಟು ಸ್ಪಷ್ಟ.
ಮುಂದಿನ ಚುನಾವಣೆಗೆ ಬರಬಹುದು ಕಷ್ಟ.

## ೨೦೦೭. ಬಾಪೂಜಿ ಹೇಳಿದ್ದು

ರಾಜಕಾರಣದಲ್ಲಿ ಹೆಚ್ಚಾಗಿ ದಂಧೆ
ಚಳಿಗಾಲದಲ್ಲಿಯೂ ಸಂಪೂರ್ಣ ಬೆಂದೆ.
ಈ ತಾಪ ಕಳೆಯಲಿಕೆ ಹರಿಜನರ ಕೇರಿ,
ಸೇರಿದೆನು ಮಂತ್ರಿಗಳ ಮನೆಯಿಂದ ಜಾರಿ.

## ೨೦೦೮. ಸಮರ್ಥನೆ

ರಾಜಕಾರಣದಲ್ಲಿ ಹೋಯ್ತು ಆಯುಷ್ಯ
ಬೇರೆ ವ್ಯವಸಾಯ ಮಾಡಲಿಕೆ ಆಲಸ್ಯ
ಈ ಪರಿಸ್ಥಿತಿಯೊಳಗೆ ಆಗಾಗ್ಗೆ ತಿಂದು
ಬದುಕಿದರೆ ತಪ್ಪೇನು ? ಹೇ ದೀನಬಂಧು.

## ೨೦೦೯. ರಾಜಕಾರಣದ ಸಡಗರ

ರಾಜಕಾರಣದ ಸಡಗರ ನಿಮಿಷ ಮೂರು.
ಹೋದ ಹೋದಲ್ಲಿ ಹೂಮಾಲೆಗಳು ಜೋರು.
ಹೂವು ಬಾಡುವ ಮೊದಲೆ ಮಂತ್ರಿಗಳ ಪತನ
ಹೀಗುಂಟು, ಮಗನೆ, ಪಕ್ಷಾಂತರದ ಕಥನ.

## ೨೦೧೦. ಗೋಖಲೆಯವರು ಹೇಳಿದ್ದು

ರಾಜಕಾರಣವಾಗಬೇಕು ಪರಿಶುದ್ಧ
ಆಗಬಾರದು ಪುಢಾರಿಯ ಜೇಬು ಉದ್ದ
ಅಂದರೇನೇ ಬೆಳಗುವುದು ನಮ್ಮ ಧಾತ್ರಿ
ಬೆಳಗದಿದ್ದರೆ ಹಗಲಿಗೇ ಮಧ್ಯರಾತ್ರಿ.

### ೨೦೧೧. ರಾಜಕಾರಣ

ರಾಜಕಾರಣವಾಯ್ತು ಹಾದರದ ತವರು.
ಹೀಗೆಂದು ಒರೆಸಿಕೊಂಡನು ಬಾಪು ಬೆವರು.
ಬೆವರು ಹನಿ ಹನಿಯಾಯ್ತು ಮೈತುಂಬ ಮೂಡಿ
ರಾಜ ವೈದ್ಯನು ಬಂದು ನೋಡಿದನು ನಾಡಿ.

### ೨೦೧೨. ರಾಜಕಾರಣ

ರಾಜಕಾರಣವೆನ್ನುವುದು ಡೊಂಬರಾಟ
ಬಿಳಿ ಟೋಪಿ ಹಾಕಿದರು ತೆಗೆದಿಟ್ಟು ಪೇಟ.
ನಿಮಿಷದಲಿ ತೊಟ್ಟುಕೊಂಡರು ಖಾದಿ ಅಂಗಿ
ಆಮೇಲೆ ಡೋಲು ಬಡಿದರು ನುಂಗಿ ನುಂಗಿ.

### ೨೦೧೩. ರಾಜಕಾರಣಿಗಳಿಗೆ

ರಾಜಕಾರಣಿಗಳಿಗೆ ಈ ಲೋಕಶಾಹಿ
ಎನ್ನುವುದು ಯಾವಾಗಲೂ ತೆರೆದ ಬಾಯಿ.
ಸಿಕ್ಕಿದೆಡೆ ನುಂಗುವರು; ಸಿಗದೆ ಹೋದಾಗ
ಅನ್ಯ ಪಕ್ಷವ ಸೇರಿ ಹೊಡೆಯುವರು ಲಾಗ.

### ೨೦೧೪. ಪ್ರಜಾರಾಜ್ಯದ ವಾದ್ಯಗಳು

ರಾಜಕಾರಣಿಗಳಿಗೆ ನಾಲಗೆಯೆ ಗಂಟೆ
ಈ ತರದ ಗಂಟೆಗಳು ಗುಡಿಯೊಳಗೆ ಉಂಟೆ?
ಆಗಾಗ್ಗೆ ಶಂಖ ಉದುವುದುಂಟು ಬೇರೆ.
ಇದಕೆನ್ನುವರು ಲೋಕಸತ್ತೆಯ ನಗಾರೆ.

### ೨೦೧೫. ರಾಜಕಾರಣಿಗಳು

ರಾಜಕಾರಣಿಗಳಿಗೆ ನೂರಾರು ದಾರಿ
ಪಂಚಖಾದ್ಯವ ನುಂಗಿ ಅವರು ಪರಾರಿ
ಕಳ್ಳಕಾಕರಿಗಿಲ್ಲ ಇಂಥ ಅನುಕೂಲ
ಇದಕೆಂಬೆ ನವ ಭಾರತದ ಪರ್ವಕಾಲ.

### ೨೦೧೬. ಗಾದಿ

ರಾಜಕಾರಣಿಗಳಿಗೆ ಬೇಕೆಂಬೆ ಗಾದಿ
ನನಗೆ ಬೇಕಾದದ್ದು ಜೀವನದ ಹಾದಿ.
ಈ ಹಾದಿಯೊಳಗಿದ್ದರೂ ಕಲ್ಲು ಮುಳ್ಳು
ಎಂದಿಗೂ ಕಾಣಿಸದು ಡಾಂಬರದ ಸುಳ್ಳು.

### ೨೦೧೭. ಹೆಚ್ಚಾಗಿ ಆಸೆ

ರಾಜಕಾರಣಿಗಳಿಗೆ ಹೆಚ್ಚಾಗಿ ಆಸೆ
ಹೋದ ಹೋದಲ್ಲಿ ತಿಂದರು ಇಡ್ಲಿ ದೋಸೆ.
ಸಚಿವನೆಂದನು : ನನಗೆ ಇಡ್ಲಿ ಸಾಕಾಗ
ಅಪ್ರತಿಮವಾದದ್ದು ನಾ ಗೈದ ತ್ಯಾಗ.

### ೨೦೧೮. ಮಂತ್ರವಾದಿ

ರಾಜಕಾರಣ ನಡೆವ ಹಾದಿಯಲಿ ನಾವು
ನಡೆಯಬಾರದು, ಮಗನೆ; ಅಲ್ಲುಂಟು ಹಾವು.
ರಾಜಕಾರಣಿಯೆಂದರೇ ಮಂತ್ರವಾದಿ;
ಅವನಿಂದ ಹಾವುಗಳಿಗೂ ಮಹಾ ವ್ಯಾಧಿ.

### ೨೦೧೯. ಕೀರ್ತಿ

ರಾಜಕಾರಣಿ, ನಿನ್ನ ಕೀರ್ತಿಯ ಪತಾಕೆ
ನಿಮಿಷದಲಿ ಪಾತಾಳಕಿಳಿಯವುದು, ಜೋಕೆ
ಎಲೆ ಕವಿಯೆ, ನಿನ್ನ ಕೀರ್ತಿಗೆ ಇಲ್ಲ ಮರಣ
ಶತಮಾನ ಕಳೆದರೂ ಬೆಳಗುವುದು ಕಿರಣ.

### ೨೦೨೦. ಪಕ್ಷಾಂತರ

ರಾಜಕಾರಣಿಯ ಕೈಯಲಿ ಕೊಡಲು ಬಿಲ್ಲಿ
ನಿಮಿಷದಲಿ ಇಲ್ಲಿಂದ ಹಾರಿದನು ಅಲ್ಲಿ.
ಬಿಲ್ಲಿ ಎನ್ನುವುದು ಶಾಸನ ಸಭೆಯ ಬಿಲ್ಲೆ
ಲೋಕಶಾಹಿಯ ಮೇಲೆ ಮಾಡಿದನು ಹಲ್ಲೆ.

## ೨೦೨೧. ವಿದ್ಯಾರ್ಥಿಯ ಉತ್ತರ

ರಾಜಕಾರಣಿಯ ತಲೆಯೊಳಗೆ ಏನುಂಟು ?
ಹೊಸ ದಿಲ್ಲಿಯಲಿ ಶೋಭಿಸುವ ಪಾರ್ಲಿಮೆಂಟು
ಪಾರ್ಲಿಮೆಂಟಿನ ಹೊರತು ಉಂಟೇನು ಮತ್ತೆ ?
ಹೌದು ಸ್ವಾಮಿ, ಹೌದು, ಸಂಚಾರಿ ಭತ್ತೆ.

## ೨೦೨೨. ಶ್ರೀಮಂತರ ನಾಯಿ

ರಾಜಕಾರಣಿಯ ನಾಯಿಗೆ ಸಿಗುವ ತುತ್ತು
ಕೋಟಿ ಜನರಿಗೆ ಸಿಗುವುದಿಲ್ಲ ಈ ಹೊತ್ತು.
ಲೋಹಿಯಾ ಹೀಗೆನಲು ಲೋಕಸಭೆಯೊಳಗೆ
ಮೇಲೆ ನಿಂತವರೆಲ್ಲ ನೋಡಿದರು ಕೆಳಗೆ.

## ೨೦೨೩. ರಾಜಕಾರಣಿಯ ನಡತೆ

ರಾಜಕಾರಣಿಯ ಭಾಷಣಗಳು ಗಲಾಟೆ.
ಮತ್ತೆ ಈತನ ಚುನಾವಣೆ ಮಾರು–ಪೇಟೆ.
ಆದರೂ ರಾಜ್ಯವಾಳುವನು ಈ ಜಾಣ
ಇಂಥ ರಾಜ್ಯಕ್ಕೆ ಉಂಟೆ ನಿಜವಾದ ತ್ರಾಣ ?

## ೨೦೨೪. ಒಂದು ಪ್ರಶ್ನೆ

ರಾಜಕಾರಣಿಯ ಸತ್ಕರಿಸಬೇಕೆಂದು
ಹೂಮಾಲೆಗಳನೇಕೆ ಹಾಕುವಿರಿ ತಂದು ?
ಇರಬಹುದು ಆತನಿಗೆ ಚುರುಕಾದ ಬುದ್ಧಿ
ಎಂದಿಗೂ ಬರಬಹುದೆ ಹೂವುಗಳ ಶುದ್ಧಿ ?

## ೨೦೨೫. ವಿಧಾಯಕ ಕಾರ್ಯ

ರಾಜಕೀಯದ ಕೊಡೆಗೆ ಬಿದ್ದಿರಲು ತೂತು
ಮಳೆಗಾಲವನು ಕಳೆದೆ ಮನೆಯೊಳಗೆ ಕೂತು
ಅಂಗಳದಿ ನೆಟ್ಟ ಸೇವಾಬೀಜ ಚಿಗುರಿ
ಟೊಂಗೆ ಟೊಂಗೆಗಳೊಡೆದು ಗಿಡ ತುಂಬ ತೊಗರಿ.

## ೨೦೨೬. ಸಚಿವರ ಸಂಖ್ಯೆ

ರಾಜಕೀಯದ ಹೊಲಕೆ ಭರ್ತಿ ಬೆಳೆ ಬಂದು
ಸಚಿವ ಸಂಪುಟದಲ್ಲಿ ಅರವತ್ತು ಒಂದು
ಅಧಿಕಾರ ಲಾಲಸೆಯ ಕಣಜಗಳು ತುಂಬಿ
ಶಾಸಕರ ನಡುವೆ ಏಳುವುದಿಲ್ಲ ದೊಂಬಿ.

## ೨೦೨೭. ಬಹುಳ ಅಮವಾಸ್ಯೆ

ರಾಜಮಾರ್ಗದ ಗುಂಟ ಮಿಂಚಿದವು ದೀಪ
ಆದರೂ ಓಣಿಯಲಿ ಬೆಳಕಿಲ್ಲ ಪಾಪ!
ಪ್ರತಿದಿವಸವೂ ಉಂಟು ಬಹುಳ ಅಮವಾಸ್ಯೆ.
ಈ ಕತ್ತಲೆಗೆ ಹೆಸರು; ಹೊಟ್ಟೆಯ ಸಮಸ್ಯೆ.

## ೨೦೨೮. ಪ್ರಧಾನಿಯ ಸಂಚಾರ

ರಾಜ್ಯಾದ್ಯಂತ ಸಂಚರಿಸಲು ಪ್ರಧಾನಿ
ಸಾಕಷ್ಟು ಮಳೆಗರೆದು ಹಸಿಯಾಯ್ತು ಭೂಮಿ
ಹೋದ ಹೋದಲ್ಲಿ ಜಯಘೋಷಗಳ ಗುಲ್ಲು
ಕೊನೆಗೆ ನೋಡಿದರೆ ಕಾಳಿಲ್ಲ ಬರಿ ಹುಲ್ಲು.

## ೨೦೨೯. ರಾಜ್ಯಪಾಲನ ಕಾರ್ಯಕ್ರಮ

ರಾಜ್ಯಪಾಲನಿಗಿಲ್ಲ ನಿಮಿಷ ಪುರಸತ್ತು.
ಟೀ ಪಾರ್ಟಿಯಲಿ ಹೋಗುತಿದೆ ಸಕಲ ಹೊತ್ತು.
ಟೀ ಪಾರ್ಟಿ ಮುಗಿದೊಡನೆ ಸತ್ಕಾರ ಕೂಟ
ಆಮೇಲೆ ಸಾರ್ವಜನಿಕರ ದೊಡ್ಡ ಊಟ.

## ೨೦೩೦. ರಾಜ್ಯವಾಳಿದರು

ರಾಜ್ಯವಾಳಿದರು, ಸಖಿ, ವರುಷ ಇಪ್ಪತ್ತು
ಜನಕೋಟಿಗಳಿಗೆ ಬಡಿಸಿದರು ಒಪ್ಪತ್ತು
ಇವರು ಗಳಿಸಿದ್ದು ಪರ್ವತದಷ್ಟು ಪ್ರಾಪ್ತಿ.
ಆದರೂ ಈ ರಾಯರಿಗೆ ಇಲ್ಲ ತೃಪ್ತಿ.

## ೨೦೩೧. ರಾಜ್ಯವಾಳುವ ಪಕ್ಷದಲಿ

ರಾಜ್ಯವಾಳುವ ಪಕ್ಷದಲಿ ವ್ಯಾಜ್ಯ ಹೆಚ್ಚು.
ಒಮ್ಮೊಮ್ಮೆ ವಿಪರೀತಕೇರುವುದು ಹುಚ್ಚು.
ಇದಕೆ ಕಾರಣವೇನು ? ನುಂಗುವ ಇರಾದೆ.
ದಿನ ಹೋದ ಹಾಗೆ ಹೆಚ್ಚಾಗುತಿದೆ ಬಾಧೆ.

## ೨೦೩೨. ಕಾರಖಾನೆ

ರಾಜ್ಯ ಸರಕಾರ ನಡೆಸುವ ಕಾರಖಾನೆ.
ಕೇಂದ್ರ ಸರಕಾರಕ್ಕೆ ಆಯಿತು ರವಾನೆ.
ಮೊದಲಿಗಿಂತಲು ಈಗ್ಗೆ ಲುಕ್ಸಾನು ಜಾಸ್ತಿ.
ಹೀಗುಂಟು ಸಾರ್ವಜನಿಕರ ಆಸ್ತಿಪಾಸ್ತಿ.

## ೨೦೩೩. ರಾಜರೆಲ್ಲಾ

ರಾಜರೆಲ್ಲಾ ಬಿದ್ದುಹೋದರು, ಗೆಳತಿ,
ಚುಟಕ ರಾಜನಿಗಿಲ್ಲ ಯಾವುದು ಫಜೀತಿ.
ರಾಜಧನ ಹೋದರೂ ಕಾವ್ಯ ಸಂಪತ್ತು
ಚಿರಕಾಲ ಬಾಳುವುದು; ಅದಕಿಲ್ಲ ಕುತ್ತು.

## ೨೦೩೪. ಗಂಡ ಹೇಳಿದ್ದು

ರಾತ್ರಿಯೆಲ್ಲಾ ಇವಳು ಹೊಡೆಯುವಳು ಗೊರಕೆ.
ಈ ಗೊರಕೆ ಎನ್ನುವುದು ಈಶ್ವರನ ಹರಕೆ.
ಗೊರಕೆ ಜೋರಾದಾಗ ನನಗಿಲ್ಲ ನಿದ್ದೆ.
ಏನು ಮಾಡಲಿ ಹೇಳು ? ಹತ್ತು ಸಲ ಎದ್ದೆ.

## ೨೦೩೫. ಸರಕಾರಿ ಬಂಗಲೆಯಲ್ಲಿ

ರಾತ್ರೆ ಬಂಗಲೆಯೊಳಗೆ ನಡೆಯುತಿದೆ ಮೋಜು
ಸಣ್ಣಕ್ಕಿ ಕೋಳಿಮರಿಗಳ ಸರಬರಾಜು
ಊಟ ಮುಗಿದೊಡನೆ ಬಂದಳು ಮೋಜುಗಾರ್ತಿ
ಬೆಳಕು ಹರಿಯುವ ತನಕ ಇವಳೆ ಸಂಗಾತಿ.

## ೨೦೩೬. ರಾಮಣ್ಣ

ರಾಮಣ್ಣನಿಗೆ ಕೆಟ್ಟ ವ್ಯಸನಿಗಳ ದೋಸ್ತಿ.
ಸಂಪೂರ್ಣ ಕಳೆದುಕೊಂಡನು ಇದ್ದ ಆಸ್ತಿ
ಕಾಶಿಯಾತ್ರೆಗೆ ಹೋದರೂ ಅಲ್ಲಿ ಸೂಳೆ
ವ್ಯಸನದಲ್ಲೇ ಹೋಯ್ತು ಸಂಪೂರ್ಣ ವೇಳೆ.

## ೨೦೩೭. ತುಟ್ಟಿಕಾಲ

ರಾವಸಾಹೇಬರೇ, ಇದು ತುಟ್ಟಿ ಕಾಲ.
ಐನೂರು ರೂಪಾಯಿ ಕೊಡಿ ನನಗೆ ಸಾಲ.
ತುಟ್ಟಿತನ ಮರೆಯಾಗಿ ದರ ಇಳಿದ ಮೇಲೆ
ಇನ್ನೊಂದು ಜನುಮದಲಿ ಮಾಡುವೆ ನಿಕಾಲೆ.

## ೨೦೩೮. ರಾಷ್ಟ್ರಪತಿ ಭವನ

ರಾಷ್ಟ್ರಪತಿ ಭವನಕ್ಕೆ ಕೋಣೆ ದಶಲಕ್ಷ.
ಆಗಬಾರದು ನಿತ್ಯ ಗುಡಿಸಲು ಅಲಕ್ಷ
ಈ ಭವನ ನಮ್ಮ ಬಡ ಜನರ ಸೌಭಾಗ್ಯ.
ಅಖಿಲ ಭಾರತಕೆ ಇದು ಅತ್ಯಂತ ಯೋಗ್ಯ.

## ೨೦೩೯. ರಾಷ್ಟ್ರಪತಿಗೆ

ರಾಷ್ಟ್ರಪತಿ, ನಿಮಗೆ ಮಾಡುವೆ ನಮಸ್ಕಾರ
ಯಾವಾಗ ಮೂಡುವುದು ಒಳ್ಳೆ ಸರಕಾರ ?
ರಾಷ್ಟ್ರಪತಿ ನುಡಿದರು : ಪ್ರಧಾನಿಯನು ಕೇಳು.
ಸಹಿ ಗೀಚಲಿಕೆ ನಾನು ನೇಮಿಸಿದ ಆಳು.

## ೨೦೪೦. ಉಳಿತಾಯ ಯೋಜನೆ

ರಾಷ್ಟ್ರೀಯ ಯೋಜನೆಗೆ ಹಣ ಬೇಕು, ನೀರೆ.
ಆದಷ್ಟು ಚಿಕ್ಕದಾಗಲಿ ನಿನ್ನ ಸೀರೆ.
ನೀನು ಧರಿಸುವ ರವಕೆಗೂ ಬೇಡ ತೋಳು.
ಕಡಿಮೆ ಊಟಾ ಮಾಡಿ ಉಳಿಸೋಣ ಕಾಳು.

## ೨೦೪೧. ಯೋಜನೆ

ರಾಷ್ಟ್ರೀಯ ಯೋಜನೆಯ ಈ ಪರ್ವಕಾಲ
ಮಾನವನ ಉನ್ನತಿಗೆ ಬಹಳ ಅನುಕೂಲ
ನರನನ್ನು ನರನಾಗಿ ಮಾರ್ಪಡಿಸಲಿಕ್ಕೆ
ಒಂದು ಯೋಜನೆ ಬರಲಿ ಕಾರ್ಯರೂಪಕ್ಕೆ

## ೨೦೪೨. ನಮ್ಮ ಯೋಜನೆ

ರಾಷ್ಟ್ರೀಯ ಯೋಜನೆಗೆ ಸಿಗಲಿಲ್ಲ ಕಾಸು
ಬಸುರಾಗಿಯೂ ಹೊರಗೆ ಬರಲಿಲ್ಲ ಕೂಸು.
ಎಲ್ಲವೂ ಪೇಚಾಟ! ಹೇ ರಾಮ ರಾಮ!
ಅಮೇರಿಕದ ಹಣ ನಂಬಿ ಕುಳಿತ ಪರಿಣಾಮ.

## ೨೦೪೩. ಮಡದಿಯ ಗಮನಕ್ಕೆ

ರೇಶಿಮೆಯ ಸೀರೆಗಿಂತಲು ಗೋಣಿ ಚೀ
ಈ ಪ್ರಜಾರಾಜ್ಯದಲಿ ಬಹಳ ಅನುಕೂಲ
ಚೀಲದಲ್ಲಿ ಕಳ್ಳದಾಸ್ತಾನು ಮಾಡಿದರೆ;
ನೂರು ನೈಲಾನ್ ಸೀರೆ ಸಿಗಬಹುದು, ನೀರೆ.

## ೨೦೪೪. ಭಟ್ಟರ ಉತ್ತರ

ರೇಷನ್ನು ಹೇಗೆ ನಡೆದಿದೆ ಹೇಳಿ, ಭಟ್ರೆ
ಅಕ್ಕಿ ಇಲ್ಲೆನ್ನುವರು ರವೆ ಗೋದಿ ಕೊಟ್ರೆ.
ನಮ್ಮ ಮಂತ್ರಿಗಳು ನಡೆಸುವ ಕಾರುಭಾರು
ಅನ್ನವಿಲ್ಲದ ಎಲೆಯ ಮೇಲೆ ಹುಳಿಸಾರು.

## ೨೦೪೫. ರೈತರಿಗೆ ಭೂಮಿ

ರೈತರಿಗೆ ಭೂಮಿ, ಸಿಕ್ಕಿದರೆ ನಾ ಗೆದ್ದೆ
ಜೀವಂತವಾಗುವುದು ಪ್ರತಿಯೊಂದು ಗದ್ದೆ
ಆಮೇಲೆ ಯಾವ ಬದನಿಕೆಗಿಲ್ಲ ಜಾಗ.
ಗೇಣಿಯೆಂಬುದು ದವಸ ಧಾನ್ಯಗಳ ರೋಗ.

## ೨೦೪೬. ರೋಗದಲಿ

ರೋಗದಲಿ ಹಾಳಾದ್ದು ಮಾನಸಿಕ ರೋಗ.
ಈ ರೋಗದಿಂದ ನರನಿಗೆ ಇಲ್ಲ ಭೋಗ.
ನಿದ್ದೆ ಬೀಳುವುದಿಲ್ಲ ರಾತ್ರೆ ಹಗಲಾಗಿ.
ಸಂಶಯ ಪಿಶಾಚಿ ಹರಿದಾಡುವನು ಕೂಗಿ.

## ೨೦೪೭. ಲಕಲಕನೆ

ಲಕಲಕನೆ ಹೊಳೆಯುತಿವೆ, ಸಖಿ ನಿನ್ನ ಕಣ್ಣು.
ಎಲ್ಲಿಯೂ ನೋಡಿಲ್ಲ, ನಿನ್ನಂಥ ಹೆಣ್ಣು
ಆಕೆ ಎಂದಳು : ಹೌದು, ನಿಮಗೊಂದು ಹುಚ್ಚು
ನಾನಂದೆ : ಹುಚ್ಚಿನೊಳಗೇ ಉಂಟು ನಚ್ಚು.

## ೨೦೪೮. ರಾಷ್ಟ್ರಪುರುಷರಿಗೆ

ಲಾಲಿಸ್ಯ ಗಾಂಧೀಜಿ, ಕೇಳು ನೆಹರೂಜಿ
ಆಕಾಶಕೇರಿ, ನಿಂತಿದೆ ನಫೇಬಾಜಿ
ಕಾರ್ಮೋಡದಿರುಳಾಗಿ ಸುರಿಯುತಿದೆ ಸ್ವಾರ್ಥ.
ನೀವಿಬ್ಬರೂ ದುಡಿದು ಮಡಿದದ್ದು ವ್ಯರ್ಥ.

## ೨೦೪೯. ದಪ್ಪ ಹೆಂಗಸು

ಲಾವಣ್ಯಗಿಂತಲೂ ಹೆಚ್ಚಾಗಿ ತೂಕ
ಓರೆಯಾಯಿತು ನನ್ನ ಭಾವನೆಯ ಲೋಕ.
ಹೀಗಾಗಿ ದೋಸ್ತಿ ಮಾಡಲಿಕೆ ತುಸು ಭೀತಿ
ಅಂಟಿಕೊಂಡರೆ ಕೊನೆಗೆ ತುಂಬಾ ಫಜೀತಿ.

## ೨೦೫೦. ವಂಕೀ ಕೇಂದ್ರದ ಪ್ರಕಟಣೆ

ಲೂಪ್ ಹಾಕಿದರೆ ರೂಪ ಲಾವಣ್ಯ ಹೆಚ್ಚು
ಗಂಡನಿಗೆ ಹಿಡಿಯುವುದು ಹೆಂಡತಿಯ ಹುಚ್ಚು
ಮಕ್ಕಳಾದರೆ ಮುದುಕಿಯಾಗುವಳು ಬೇಗ.
ಬಾಣಂತಿತನದಲ್ಲಿ ಹಿಡಿಯುವುದು ರೋಗ.

### ೨೦೫೧. ಲೂಪ್ ಹಾಕಿಯೂ

ಲೂಪ್ ಹಾಕಿಯೂ ಕೊನೆಗೆ ಬಸುರಾದಳಂತೆ!
ಈ ಮುಲಾಮತು ಕೇಳಿ ಗಂಡನಿಗೆ ಚಿಂತೆ.
ವಂಕಿ ಹಾಕಿದ್ದು ಆಗಿರಬೇಕು ಓರೆ.
ನೀ ಸ್ವಲ್ಪ ಹೋಗಿ ಆಕೆಗೆ ಕಲಿಸಿ ಬಾರೆ.

### ೨೦೫೨. ಲೆಕ್ಕ

ಲೆಕ್ಕ ಹಾಕುವ ಜಾಣರಿಗೆ ಕೊಳಗ ಅಕ್ಕಿ
ಲೆಕ್ಕವರಿಯದ ಮಕ್ಕಳಿಗೆ ಬಾನ ಚಿಕ್ಕಿ
ಕೋಟಿ ನಕ್ಷತ್ರಗಳ ನಿರ್ಮಿಸಿದ ಬೊಮ್ಮ
ಎಂದಿಗೂ ಲೆಕ್ಕ ಹಾಕಿರಲಿಲ್ಲ, ತಮ್ಮ.

### ೨೦೫೩. ಲೇಖನಿ

ಲೇಖನಿಯ ಹಿಡಿದು ಸರಕಾರದ ವಿರುದ್ಧ
ಮಾಡಬೇಕೆಂಬೆ, ಸಖಿ, ಆಡಳಿತ ಶುದ್ಧ.
ಯಶ ಗಳಿಸದಿದ್ದರೂ ಈ ಮಹಾಕಾರ್ಯ
ಲೇಖನಿಗೆ ಬರಬಹುದು ಸಾಕಷ್ಟು ಧೈರ್ಯ.

### ೨೦೫೪. ಅಹಿಂಸಾಮಯ ಯುದ್ಧ

ಲೇಖನಿಯ ಹಿಡಿದು ಸರಕಾರದ ವಿರುದ್ಧ
ಪ್ರತಿದಿವಸವೂ ನಾನು ಹೂಡಿದೆನು ಯುದ್ಧ.
ಬಂದೂಕುಗಳ ಬದಲು ಚುಟಕಗಳ ಬಾಣ
ಎಷ್ಟು ಚುಚ್ಚಿದರೇನು? ಬಿಡಲಿಲ್ಲ ಪ್ರಾಣ!

### ೨೦೫೫. ಪರ್ವತಾರೋಹಣ

ಲೈಸನ್ಸು ಪರ್ಮಿಟ್ಟುಗಳ ಮೇಲೆ ನಿಂತು
ನಂದಿ ಬೆಟ್ಟವನೇರಬಹುದು ಈ ಜಂತು
ಪರ್ವತಾರೋಹಣದ ಇತಿಹಾಸದಲ್ಲಿ
ಶ್ರೇಷ್ಠವಾಗಿದೆ ರಾಜಕಾರಣದ ಹಲ್ಲಿ.

### ೨೦೫೭. ಲೈಸನ್ಸು-ಪರ್ಮಿಟ್ಟು

ಲೈಸನ್ಸು ಪರ್ಮಿಟ್ಟುಗಳ ರಾಜ್ಯದೊಳಗೆ
ಅಧಿಕಾರಿ ಹಾಕಿದನು ಭರ್ತಿ ಕಿಸೆಯೊಳಗೆ.
ಲೈಸನ್ಸು ಪರ್ಮಿಟ್ಟು ಹಾಕಿದರು ತೆಗೆದು
ಅರೆಗಳಿಗೆಯಲಿ ಸರಕು ಹೋಗಿತ್ತು ಮುಗಿದು.

### ೨೦೫೭. ಕಿಸೆಯೊಳಗೆ ಕೈಹಾಕಿ

ಲೈಸನ್ಸು-ಪರ್ಮಿಟ್ಟುಗಳ ರಾಜ್ಯದಲ್ಲಿ
ಕಿಸೆಯೊಳಗೆ ಕೈ ಹಾಕಿಯೇ ನಿಂತುಕೊಳ್ಳಿ
ಕಿಸೆ ಖಾಲಿ ಮಾಡಿಬಿಡಿ ಒಳಗೆ ಕರೆದಾಗ
ವಿಘ್ನವಿಲ್ಲದೆ ಕೆಲಸವಾಗುವುದು ಬೇಗ.

### ೨೦೫೮. ಲೋಕಸಭೆಗಾಗಿ

ಲೋಕಸಭೆಗಾಗಿ ಆರಿಸಿ ಬರಲು ನಾನು
ಭತ್ತೆ ಕಾಸಿನ ಹೊರತು ಉಚಿತ ಟೆಲಿಫೋನು,
ಸಭೆಯೊಳಗೆ ಕುಳಿತಾಗ ಮೆತ್ತನೆಯ ಗಾದಿ
ಬಡವರಿಗೆ ಯಾವಾಗಲೂ ಹೊಲಸು ಬೀದಿ.

### ೨೦೫೯. ಲೋಕಸಭೆ

ಲೋಕಸಭೆಯಲ್ಲಿ ಕುಳಿತು ಭಾಷಣದ ಬಿಗಿದೆ
ದೂರಾಗಲಿಲ್ಲ ಜನಕೋಟಿಯ ತಗಾದೆ.
ಗೊತ್ತುವಳಿ ಪಾಸಾದರೂ ಕೈಯನೆತ್ತಿ,
ಹಸಿದ ಕಂಗಾಲರಿಗೆ ಸಿಗಲಿಲ್ಲ ಬುತ್ತಿ.

### ೨೦೬೦. ಲೋಕಸಭೆಯಲ್ಲಿ

ಲೋಕಸಭೆಯಲ್ಲಿ ನಿನ್ನೆ ವಿಪರೀತ ತಂಟೆ
ಗದ್ದಲ ಗಲಾಟೆಯಲಿ ಕೇಳಿಸಿತು ಗಂಟೆ
ಅಧ್ಯಕ್ಷ ಹೊರಟು ಹೋದನು ಸಿಟ್ಟಿನಿಂದ
ಚುಟಕಮ್ಮ ಹೇಳಿದಳು : ಇದು ಅಲ್ಲ ಚಂದ.

## ೨೦೬೧. ಲೋಕಸಭೆಯ ಕಾರ್ಯಕಲಾಪ

ಲೋಕಸಭೆಯಲಿ ನಿಂತುಹೋಯಿತು ಕಲಾಪ.
ಪೂರ್ಣ ಕೋರಂ ದೊರಕಲಿಲ್ಲಂತೆ! ಪಾಪ!
ಸಭೆ ನಿಂತರೂ ಸದಸ್ಯರ ದಿನದ ಭತ್ತೆ
ನಿಂತಿಲ್ಲವೆಂಬ ಸಂಗತಿ ನಿಮಗೆ ಗೊತ್ತೆ?

## ೨೦೬೨. ಲೋಕಸಭೆಯಲಿ

ಲೋಕಸಭೆಯಲಿ ಹೋಗಿ ನಾ ಕುಳಿತುಕೊಂಡೆ
ದುರ್ಬೀನು ಹಚ್ಚಿ ಇಡೀ ಭಾರತವ ಕಂಡೆ.
ಒಂದು ಕಡೆ ಕೋಟಿ ದಶಕೋಟಿ ದೌಲತ್ತು
ಉಳಿದ ಕಡೆ ಪಾಪ ಬಾಯಿಗೆ ಇಲ್ಲ ತುತ್ತು.

## ೨೦೬೩. ಲೋಕಸಭೆಯಲ್ಲಿ

ಲೋಕಸಭೆಯೊಳಗಿಡಲು ಸಾಣೆಕಲ್ಲೊಂದ
ಇದು ಏಕೆ? ಎಂದು ಕೇಳಿದನೊಬ್ಬ ಕಂದ.
ಮೊಂಡಾಗದಿರಲೆಂದು ಚರ್ಚೆಗಳ ಗುಲ್ಲು
ನಾಲಗೆಯ ಮಸೆಯಲಿಕೆ ಉಂಟು ಈ ಕಲ್ಲು.

## ೨೦೬೪. ಸರಕಾರದ ಪ್ರಕಟನೆ

ವನ್ಯಪಶುಗಳಿಗಾಗಿ ಉಂಟು ಈ ಜಿಲ್ಲೆ
ಬೆಳೆಸಬಾರದು ಇಲ್ಲಿ ಹೂ ಕಾಯಿಪಲ್ಲೆ.
ಹುಲಿ ಕರಡಿ ಕಾಡಾನೆ ಹಂದಿ ಹೆಬ್ಬಾವು
ಇವುಗಳಿಗೆ ತಗಲಬಾರದು ಯಾವ ನೋವು.

## ೨೦೬೫. ವರಕವಿ

ವರಕವಿಯ ಪತ್ನಿ ಕೈಯಲ್ಲಿ ಹಿಡಿದು ಸೌಟು
ಗಂಡನಿಗೆ ಮನೆಯಿಂದ ಮಾಡಿದಳು ಔಟು.
ಕವಿತೆ ಬರೆಯುವ ಮೊದಲು ತನ್ನಿ ಆಹಾರ
ಅಂದರೇನೇ ನಮಗೆ ಇಲ್ಲ ಬರಗಾಲ.

## ೨೦೬೬. ವರ್ತಕನ ಮನೆಯಿಂದ

ವರ್ತಕನ ಮನೆಯಿಂದ ಬಂತು ವಾಗೀನು
ಮಂತ್ರಿವರ್ಯನ ಸೊಸೆಗೆ ದಾಗ–ದಾಗೀನು.
ಜಾರಿಕೊಂಡನು ಮಂತ್ರಿ, ಅಧಿಕಾರಿ ಬಿದ್ದ.
ಇದಕೆನ್ನುವರು ಭಾರತದ ಧರ್ಮಯುದ್ಧ.

## ೨೦೬೭. ಕನ್ನಡ ರಾಜ್ಯೋತ್ಸವ

ವರುಷ್ಕೆ ಒಂದು ದಿನ ಮಾಡಿದರು ಹಬ್ಬ.
ಸಂಭ್ರಮದ ಮೆರವಣಿಗೆಯೇನು ! ಅಬ್ಬಬ್ಬ !
ಆಮೇಲೆ ಪ್ರತಿ ದಿವಸ ಮಾಡಿದರು ನಿದ್ದೆ.
ಭೂಮಿ ಬಂಜರು ಬಿದ್ದು ಬರಡಾಯ್ತು ಗದ್ದೆ.

## ೨೦೬೮. ಸಂಸಾರ ತುಟ್ಟಿ

ವರುಷ ವರುಷಕೆ ಕೋಟಿ ಕೂಸುಗಳು ಹುಟ್ಟಿ
ಭಾರತದ ಆದ್ಯಂತ ಸಂಸಾರ ತುಟ್ಟಿ.
ಒಂದು ಜಿನ್ನಸು ಮಾತ್ರ ಅತ್ಯಂತ ಸೋವಿ.
ಈ ಜಿನ್ನಸಿನ ಹೆಸರು : ನರನೆಂಬ ಜೀವಿ !

## ೨೦೬೯. ವೃತ್ತಪತ್ರಿಕೆ

ವೃತ್ತಪತ್ರಿಕೆ ಓದಿ ಭರ್ತಿ ಬೇಜಾರು.
ಹೋದ ಹೋದಲ್ಲಿ ವಿಪರೀತ ಇಳಿಜಾರು.
ತುಸು ಕಾಲು ಜಾರಿದರೆ ಪಾತಾಳ ಲೋಕ.
ಆದರೂ ಹೇಳುವರು : ನಮಗಿಲ್ಲ ಧೋಕಾ.

## ೨೦೭೦. ಹೊಸ ಸುದ್ದಿ

ವೃತ್ತಪತ್ರಿಕೆಯಲ್ಲಿ ಏನು ಹೊಸ ಸುದ್ದಿ ?
ಗೊತ್ತಿಲ್ವೆ ? ರಾಜಕಾರಣಿಯ ಅಭಿವೃದ್ಧಿ
ಮತ್ತೊಂದು ಸುದ್ದಿಯಿದೆ; ಕೊನೆಯ ಪುಟ ಓದಿ
ಕ್ಯೂ ನಿಂತರೂ ಕೂಡ ಸಿಗಲಿಲ್ಲ ಗೋದಿ.

## ೨೦೭೧. ಸರಕಾರಿ ಜಾಹಿರಾತುಗಳು

ವೃತ್ತಪತ್ರಿಕೆಯಲ್ಲಿ ಹೊಗಳಿಕೆಯ ಮಾತು.
ಬೆಳಗಿದರೆ ಮಾತ್ರ ಸಿಗುವುದು ಜಾಹಿರಾತು
ಈ ರೀತಿ ಮಂತ್ರಿಗಳ ಗಡ್ಡಕ್ಕೆ ನಿತ್ಯ
ಸಾಬೂನು ಹಚ್ಚಿದರೆ ಉಳಿಯುವುದೆ ಸತ್ಯ ?

## ೨೦೭೨. ಹೊಸ ಸುದ್ದಿ

ವೃತ್ತಪತ್ರಿಕೆಯಲ್ಲಿ ಹೊಸ ಸುದ್ದಿ ಏನು ?
ಭಾರತದ ಆದ್ಯಂತ ತುಂಬಾ ತುಫಾನು.
ಉದ್ದ ಮರಗಳು ಕಿತ್ತು ಬಿದ್ದವು, ಮುರಾರಿ.
ಸಚಿವರೆಲ್ಲಾ ಪಾಪ ಆದರು ಪರಾರಿ.

## ೨೦೭೩. ವೃದ್ಧಾಪ್ಯದಲಿ

ವೃದ್ಧಾಪ್ಯದಲಿ ಕೂದಲಿಗೆ ಇಲ್ಲ ಕಪ್ಪು
ಇದಕಾಗಿ ನನಗೆ ಬರಬೇಕೆಂಬೆ ಮುಪ್ಪು
ಆಕೆ ಎಂದಳು : ನನಗೆ ಬೇಡ ವೃದ್ಧಾಪ್ಯ
ಹೂ ಮುಡಿದು ನಾನು ಸತ್ತಾಗ ಕೃತಕೃತ್ಯ.

## ೨೦೭೪. ಆಧುನಿಕ ಆಭರಣ

ವಂಕಿ ಎನ್ನುವದು ಆಧುನಿಕ ಆಭರಣ
ಇದರಿಂದ ಎಲ್ಲೆ ಮೀರುವುದಿಲ್ಲ ಜನನ.
ಐದು ವರ್ಷಕ್ಕೊಮ್ಮೆ ಬೇಕಾದ ಹಾಗೆ
ಮರಿ ಹಾಕಿ ಸುಖಿಸಬಹುದಲ್ವೆ, ಈ ರಾಧೆ ?

## ೨೦೭೫. ಬೆಂಗಳೂರು

ವಿಜಯನಗರಕೆ ಇತ್ತು ಬರಿ ಒಂದು ಹಂಪೆ.
ಬೆಂಗಳೂರಿಗೆ ಉಂಟು ಹಲವಾರು ಕೊಂಪೆ.
ಪ್ರತಿಯೊಂದು ಕೊಂಪೆಯಲಿ ಕೊಳಚೆಯ ಪ್ರದೇಶ.
ಹೊಸ ಹಂಪಿ ನಿರ್ಮಾಣ ನಮ್ಮ ಉದ್ದೇಶ.

### ೨೦೭೬. ವಿಜ್ಞಾನ

ವಿಜ್ಞಾನವೆನ್ನುವುದು ಕೊನೆಯ ಅಜ್ಞಾನ
ಎಷ್ಟು ಹಾರಿದರೇನು ರಾಯರ ವಿಮಾನ ?
ಭೂಮಿಗಿಳಿಯಲೆ ಬೇಕು ಒಂದು ದಿನ ತಾನೆ ?
ವಿಜ್ಞಾನವೆನ್ನುವುದು ನರನ ತಲೆಬೇನೆ.

### ೨೦೭೭. ವಿದ್ಯಾರ್ಥಿಗಳ ಶ್ರಮದಾನ

ವಿದ್ಯಾರ್ಥಿಗಳು ಮಾಡಬೇಕು ಶ್ರಮದಾನ
ವ್ಯಕ್ತವಾಗಲಿ ಹೀಗೆ ದೇಶಾಭಿಮಾನ.
ಶ್ರಮದಾನ ನಡೆದಾಗ ಫೋಟೋಗಳ ತೆಗಿಸಿ
ವೃತ್ತಪತ್ರಿಕೆಯಲ್ಲಿ ಬಿಡಬೇಕು ಮುಗಿಸಿ.

### ೨೦೭೮. ಮುಷ್ಕರ

ವಿದ್ಯಾರ್ಥಿಗಳು ಮುಷ್ಕರವ ಹೂಡಿ ಮೊನ್ನೆ
ಅಭ್ಯಾಸ ಮಾಡಿದ್ದು ಸಂಪೂರ್ಣ ಸೊನ್ನೆ.
ಮುಷ್ಕರವು ಎರಡು ತಿಂಗಳು ನಡೆದು ಕೊನೆಗೆ
ನಾಪಾಸು ಆಗಿ ಹೋದರು ತಮ್ಮ ಮನೆಗೆ.

### ೨೦೭೯. ವಿದ್ಯಾರ್ಥಿಗಳು

ವಿದ್ಯಾರ್ಥಿ ಸದ್ಯ ಕಲಿಯುವ ಮುಖ್ಯ ವಿಷಯ
ಯಾವುದೆಂಬುದು ನನಗೆ ಸರಿಯಾಗಿ ತಿಳಿಯ.
ತಿಳಿದಾಗ ಆಗಬಾರದು ನೀನು ಸುಸ್ತು.
ಹೇಳುವೆನು ಕೇಳು : ಆ ವಿಷಯ 'ಬೇಶಿಸ್ತು'

### ೨೦೮೦. ವಿದ್ಯೆ

ವಿದ್ಯೆ ಎಂಬದು ರಾಗಿಯಾಗಬೇಕಣ್ಣ
ಎಂದಿಗೂ ಆಗಬಾರದು ಬರೀ ಬಣ್ಣ.
ಇವರು ನೀಡುವ ವಿದ್ಯೆ ಚಕಮಕ ಗಿಲೀಟು
ಎಷ್ಟು ದಿನ ಬಾಳುವುದು ಕಾಗದದ ಕೋಟು ?

## ೨೦೮೧. ಜನತೆಯ ಫಜೀತಿ

ವಿಪರೀತಕೇರಿ ದೆವ್ವದಕಾಟ ಸದ್ಯ
ಸಕ್ಕರೆಯ ಚೀಲ ಅಡಗಿದವು ನಡುಮಧ್ಯ.
ಅಕ್ಕಿಯನ್ನೂ ಮುಕ್ಕಿ ಜನತೆಯ ಫಜೀತಿ
ನಾನಾ ನಮೂನೆಯಲಿ ದೆವ್ವಗಳ ರೀತಿ.

## ೨೦೮೨. ನಿರುದ್ಯೋಗ

ವಿಪರೀತಕೇರಿ ಬಿಟ್ಟಿದೆ ನಿರುದ್ಯೋಗ
ಇದಕೆಂಬೆ ನವಭಾರತದ ಮಹಾರೋಗ.
ಹೋಗುವುದು ಬಾಡಿ ಅರಳುವ ಮೊದಲೆ ಹೂವು.
ಪ್ರಾಯವಿರುವಾಗಲೇ ತರುಣನಿಗೆ ಸಾವು.

## ೨೦೮೩. ಮಂತ್ರಿಗಳ ಆರಿಸುವಿಕೆ

ವಿಪರೀತ ಪ್ರಸವವೇದನೆ ನನಗೆ, ತಾಯಿ.
ಕಾರಣವ ಹೇಳಲಿಕೆ ನಾಚಿಕೆಯ ಬಾಯಿ!
ಹದಿನಾಲ್ಕು ಪಿಂಡಗಳ ಹೊರದೂಡಲಿಕ್ಕೆ
ಬೆಳಕು ಮೂಡುವ ತನಕ ಎಣಿಸಿದೆನು ಚಿಕ್ಕೆ.

## ೨೦೮೪. ವಿಪರೀತ ಸೆಕೆಯಾಗಿ

ವಿಪರೀತ ಸೆಕೆಯಾಗಿ ಮೈತುಂಬ ಬೆವರು.
ಈ ಬೆವರು ಬೇಡೆಂದು ಸೇರಿದಳು ತವರು.
ತಿರುಗಿದಳು ಮನೆಗೆ ಚಳಿಗಾಲ ಬಂದಾಗ.
ಚಳಿಯಲ್ಲಿ ಗಂಡನನು ಬಿಡಲಿಕ್ಕೆ ಆಗ.

## ೨೦೮೫. ಪೀಠಿಕಾ ಸಂಧಿ

ವಿರಹಿಗಳ ಶೃಂಗಾರ ಚುಟಕದೊಳಗಿಲ್ಲ
ಪರಮ ವೇದದ ಸಾರವೂ ಇದಕೆ ಸಲ್ಲ
ನಮ್ಮ ಮಂತ್ರೀ ಜನಕೆ ಶುಂಠೀ ಕಷಾಯ.
ಕಾವ್ಯಕ್ಕೇ ಲಘುವೆನಲು ಬರೆದೆ, ಮಾರಾಯ.

## ೨೦೮೬. ಮಂತ್ರಿಗಳ ಸಂಚಾರ

ವಿರಳವಾದಷ್ಟು ಮಂತ್ರಿಗಳ ಸಂಚಾರ
ಸುರಳೀತ ಸಾಗುವುದು ನಮ್ಮ ಸರಕಾರ.
ಕಡಮೆಯಾದಷ್ಟು ವ್ಯಾಖ್ಯಾನಗಳ ವೇಗ
ಪ್ರತಿಯೊಂದು ಕೆಲಸವೂ ಆಗುವುದು ಬೇಗ.

## ೨೦೮೭. ಪದವೀಧರರು

ವಿಶ್ವವಿದ್ಯಾನಿಲಯ ಕೊಟ್ಟರೂ ಡಿಗ್ರಿ
ಚರಿತಾರ್ಥ ನಡೆಸಲಿಕೆ ಇಲ್ಲ ಸಾಮಗ್ರಿ
ಕೈ ತೊಳೆದು ಬೆನ್ನ ಹತ್ತಿತು ನಿರುದ್ಯೋಗ
ಮೈ ತೊಳೆದುಕೊಂಡರೂ ಬಿಡಲಿಲ್ಲ ರೋಗ.

## ೨೦೮೮. ವಿಶ್ವವಿದ್ಯಾಲಯದಲ್ಲಿ

ವಿಶ್ವವಿದ್ಯಾಲಯದ ಒಳಗಡೆ ಕೂತು.
ಕಾವ್ಯ ಬರೆದರೆ ಕವಿಯ ತಲೆಬುರುಡೆ ತೂತು.
ಬೀದಿಯಲಿ ಕುಳಿತು ಗೀಚಿದರೆ ಬ್ರಹ್ಮಾಂಡ,
ಎಂದಿಗೂ ಶಬ್ದವಾಗದು ಬ್ರಹ್ಮದಂಡ.

## ೨೦೮೯. ಬಾಪೂಜಿಗೆ

ವಿಸ್ತಾರವಾಗಿದ್ದರೂ ಈ ಜಗತ್ತು
ನಿನ್ನ ಅಂಗೈಯೊಳಗೆ ಮುದುರಿಕೊಂಡಿತ್ತು.
ಅಖಿಲ ಬ್ರಹ್ಮಾಂಡವಾಗಲು ನೆಲ್ಲಿಕಾಯಿ
ಕರಗಿ ನೀರಾಗಿತ್ತು ಸಾಮ್ರಾಜ್ಯಶಾಹಿ.

## ೨೦೯೦. ವೀಳ್ಯದೆಲೆ

ವೀಳ್ಯದೆಲೆ ಹಾಕಿದರೆ ನಿನ್ನ ಸೌಂದರ್ಯ
ತುಟಿತುಂಬ ಮೆರೆದು ನೆರವೇರುವುದು ಕಾರ್ಯ
ಎಲೆ ಹಾಕಿದರೆ ದೇವರಿಗೆ ಕೂಡ ಒಲವು
ದೇವದಾಸಿಯ ತುಟಿಗೆ ಸಂಪೂರ್ಣ ಗೆಲವು.

## ೨೧೯೧. ವೇದಿಕೆಯ ಮೇಲೆ

ವೇದಿಕೆಯ ಮೇಲೆ ಆಡಿದ ಮಾತು ಚೊಕ್ಕ.
ಕೆಳಗಿಳಿದು ಕಿಸೆಯೊಳಗೆ ಹಾಕಿದ್ದು ರೊಕ್ಕ.
ಈ ಪರಿಸ್ಥಿತಿಗೆ ಕಾರಣವೇನು, ತಂಗಿ ?
ಈ ಮಹಾಶಯರು ಧರಿಸಿದ ಶುಭ್ರ ಅಂಗಿ.

## ೨೧೯೨. ವೇಷಧಾರಿಗಳು

ವೇಷಧಾರಿಗಳಲ್ಲಿ ಹಲವಾರು ತರಹ
ಪತ್ತೆಯಾಗುವುದಿಲ್ಲ ಇವರ ಹಣೆಬರಹ.
ಬಹಳ ಸಾದಾ ಅಂಗಿ, ಕಿಸೆ ಬಹಳ ಉದ್ದ
ಒಳ ಬದಿಗೆ ಹೊಲಸಾಗಿ ಹೊರಬದಿಗೆ ಶುದ್ಧ.

## ೨೧೯೩. ವೈದ್ಯರು

ವೈದ್ಯರೊಳಗಿಲ್ಲ, ಸಖಿ, ಒಂದಭಿಪ್ರಾಯ.
ಹೀಗಾಗಿ ಕಡಮೆಯಾಯಿತು ಅವನ ಪ್ರಾಯ.
ಕೊನೆಗೆ ನಿರ್ಣಯಿಸಬೇಕಾಯ್ತು ಭಗವಂತ.
ಹೀಗಾಗಿ ನಿನ್ನೆ ಆಯಿತು ಅವನ ಅಂತ.

## ೨೧೯೪. ನಮ್ಮ ಪ್ರಜಾರಾಜ್ಯ

ವೈಶಿಷ್ಟ್ಯಪೂರ್ಣವಾಗಿದೆ ಪ್ರಜಾರಾಜ್ಯ
ನದಿಯ ನೀರಿಗೆ ಮೂರು ಪ್ರಾಂತಗಳ ವ್ಯಾಜ್ಯ.
ಲೋಕಸಭೆಯಲಿ ಹಿಂದಿ ಭಾಷೆಯ ಗಲಾಟೆ.
ರಾಜಕಾರಣವೆನ್ನುವುದು ಮೀನು ಪೇಟೆ.

## ೨೧೯೫. ಜಗತ್ತಿನ ರೀತಿ

ಶಕ್ತಿ ಉಳ್ಳವನು ಕಿವಿ ಹಿಂಡುವುದು ಸಹಜ
ಕಿವಿ ಹಿಂಡಿ ಕಿವಿ ಹಿಂಡಿ ಆಗುವನು ರಾಜ.
ಜಾಗತಿಕ ಇತಿಹಾಸವೇ ಹೀಗೆ ಉಂಟು.
ನ್ಯಾಯ ನೀತಿಗಳೆನ್ನುವುದು ಪೊಳ್ಳು ದಂಟು.

## ೨೦೯೬. ಭೂದೇವಿಯ ವಯಸ್ಸು

ಶತಕೋಟಿ ವರುಷ ಭೂದೇವಿಯ ವಯಸ್ಸು
ಇಳಿ ಪ್ರಾಯದಲ್ಲಿಯೂ ತರುಣಿಯ ಮನಸ್ಸು,
ಪ್ರತಿ ವರುಷವೂ ಮೂಡಿ ಮೂಡಿ ಹೊಸ ಪ್ರಾಯ.
ಹಸಿರು ತೋಟಗಳಿಂದ ಇಂಚರದ ಗೇಯ.

## ೨೦೯೭. ಶತಮಾನಗಳ ಹಿಂದೆ

ಶತಮಾನಗಳ ಹಿಂದೆ ಅಂದಿನ ಜಗತ್ತು
ಹುಲ್ಲುಗಾವಲು ಆಗಿ ಉಲ್ಲಾಸವಿತ್ತು.
ಈಗ್ಗೆ ನೋಡಿದರೆ ಎಲ್ಲಾ ಬಣ್ಣ ಬೇರೆ
ಮಲಿನವಾಗಿದೆ ವಸುಂಧರೆಯುಟ್ಟ ಸೀರೆ.

## ೨೦೯೮. ಶನಿ ಹೇಳಿದ್ದು

ಶನಿಯೊಮ್ಮೆ ಎಚ್ಚರಿಕೆ ನೀಡಿದನು ಹೀಗೆ;
ಚುಟಕಗಳ ಬರೆದು ತರಿಸುವೆ ನೀನು ಬೇಗೆ
ಬೇಗೆ ತರಿಸುವುದು, ಮಗು, ಅದು ನನ್ನ ಧರ್ಮ
ಮಾಡಬಾರದು ನೀನು ಈ ತರದ ಕರ್ಮ.

## ೨೦೯೯. ಶಬ್ದಗಳು

ಶಬ್ದಗಳು ಹಾಡಿದರೆ ಮುಗ್ಧೆಯರ ಮುತ್ತು,
ದೇವಲೋಕದ ಕನ್ನೆಯರು ಸುತ್ತುಮುತ್ತು.
ಶಬ್ದಗಳು ಕಾಡಿದರೆ ದೇವರಿಗು ಬೇನೆ.
ಶಬ್ದಗಳ ಹೃದಯವೇ ಕವಿತೆಯಲ್ಲೇನೆ ?

## ೨೧೦೦. ಶಶಿಕಲಾ

ಶಶಿಕಲಾ, ನೀನು ಚಂದಿರನ ಕಲೆಯಾಗಿ
ಧರೆಗಿಳಿದು ಬಂದೆಯಾ ನನ್ನ ಸಲುವಾಗಿ
ನಿನ್ನ ಸೊಗಸಿಗೆ ನಾನು ಮರುಳಾಗಿ, ಗೆಳತಿ,
ಕೇಳಿಕೊಳ್ಳುವೆನು; ನೀನಾಗು ಮದವಳತಿ.

## ೨೧೦೧. ದೊಡ್ಡ ಸುದ್ದಿ

ಶಶಿಯ ಬೆನ್ನೇರಿದ್ದು ಬಲುದೊಡ್ಡ ಸುದ್ದಿ.
ಆಕಾಶಕೇರಿ ನಿಂತಿದೆ ನರನ ಬುದ್ಧಿ
ಆದರೂ ಕೆಳಗೆ ತಪ್ಪಿಲ್ಲ ಪಾತಾಳ
ಹೋದ ಹೋದಲ್ಲಿ ಧಾನ್ಯಗಳ ದುಷ್ಕಾಳ.

## ೨೧೦೨. ಶ್ರಮ

ಶ್ರಮವೆನ್ನುವುದು, ಮಗನೆ, ಮನುಕುಲದ ಉಕ್ಕು.
ಶ್ರಮದ ವಿನಹಾ ಮೈಗೆ ಹಿಡಿಯುವುದು ತುಕ್ಕು
ಬೆವರು ಹನಿಯಲಿ ಬಿಂಬಿಸುವುದು ಬಂಗಾರ
ಬಂಗಾರವೆನ್ನುವುದು ಜೀವನಾಧಾರ.

## ೨೧೦೩. ಶಾರದಕ್ಕನ ಗಂಡ

ಶಾರದಕ್ಕನ ಗಂಡ ಮಾದರಿಯ ಪುರುಷ
ಬಸುರಾಗುವಳು ಮಡದಿ ಪ್ರತಿಯೊಂದು ವರುಷ
ಇಂಥವರು ಹುಟ್ಟಿದರೆ ಭಾರತಕೆ ಜೋರು
ಮೈಯೊಳಗೆ ಇರಬೇಕು ಈ ತರದ ನೀರು.

## ೨೧೦೪. ಶಾರದಾಂಬೆಗೆ

ಶಾರದಾಂಬೆಯೆ, ನಿನ್ನ ಇಂಪಾದ ವೀಣೆ
ಈ ಗಾಂಪನೆಡೆಗಿಲ್ಲ; ನಿನ್ನ ಕೊರಳಾಣೆ.
ಇಂದಿನ ಪರಿಸ್ಥಿತಿಗೆ ಹೊಂದುವ ನಗಾರೆ
ನನ್ನ ಹತ್ತಿರ ಉಂಟು, ಕೇಳಲಿಕೆ ಬಾರೆ.

## ೨೧೦೫. ದಾಂಡೇಲಿಯ ಕಾಗದ ಕಾರಖಾನೆ

ಶಾರದೆಯ ಸಲುವಾಗಿ ಈ ಕಾರಖಾನೆ.
ದುರ್ಗಂಧ ವಾಸನೆಯ ಹಾಳು ತಲೆಬೇನೆ.
ನಿನ್ನ ಮುರಲಿಗೆ ಬಂದರೂ ಕೆಟ್ಟಕಾಲ,
ನೀ ಸುಮ್ಮನಾಗಿರುವೆ, ವೇಣುಗೋಪಾಲ.

### ೨೧೦೬. ಸ್ಯಾಂಪಲ್ಲುಗಳು

ಶಾಲೆ ಕಾಲೇಜುಗಳ ಹಣ ನಾನು ತಿಂದೆ
ಎಂದು ಸಾರಿದ ಭೂಪನೂ ಉಂಟು ಅಂದೆ.
ಇಂಥ ಸ್ಯಾಂಪಲ್ಲುಗಳು ಜನಿಸಿದ್ದರಿಂದ
ನನ್ನ ಮನಸಿಗೆ, ಗೆಳತಿ, ಬಹಳ ಆನಂದ.

### ೨೧೦೭. ಶಾಸಕನ ಹುದ್ದೆ

ಶಾಸಕನ ಹುದ್ದೆ ಸಿಗಬೇಕೆಂದು ಪುನಹಾ,
ಇಂಡಿಕೇಟಿಗೆ ಸೇರಿ ಮಾಡಿದನು ಯತ್ನ.
ಇವನ ಪಕ್ಷಾಂತರಕೆ ಬರಲಿಲ್ಲ ಫಸಲು
ನೀರಾಗಿ ಹೋಯ್ತು ಬಡ್ಡಿಯ ಸಹಿತ ಅಸಲು.

### ೨೧೦೮. ಪಕ್ಷಾಂತರದ ಕಸರತ್ತು

ಶಾಸಕರ ಸಭೆಯೊಳಗೆ ನಡೆದು ಕಸರತ್ತು
ಸಂಜೆಯಾಗುವ ಮೊದಲೆ ಸರಕಾರ ಬಿತ್ತು.
ಹೊಸ ಮಂತ್ರಿಗಳು ಕೂಡ ಬೀಳುವರು ನಾಳೆ
ರಾಜಕಾರಣವಾಯ್ತು ಶಾಸಕರ ಸೂಳೆ.

### ೨೧೦೯. ಲಾಲ ಬಹದ್ದೂರ್ ಶಾಸ್ತ್ರೀಜಿ

ಶಾಸ್ತ್ರೀಜಿ ಹುಲಿಯಲ್ಲ, ಸಣ್ಣ ಗುಬ್ಬಚ್ಚಿ.
ದಂಡೆತ್ತಿ ಬಂದವನ ಹಾಕಿದನು ಚುಚ್ಚಿ.
ಕಿರಿದಾದರೂ ದೇಹ ಉಕ್ಕಿನ ಮನಸ್ಸು.
ಸಫಲವಾಯಿತು ದೇಶಸೇವೆಯ ತಪಸ್ಸು.

### ೨೧೧೦. ನೂರಾರು ಅರ್ಜಿ

ಶಿಕ್ಷಕನ ಕೆಲಸಕ್ಕೆ ನೂರಾರು ಅರ್ಜಿ.
ಅಲ್ಲಲ್ಲಿ ಓಡಾಡಿ ಹಿಡಿಯುವರು ಮರ್ಜಿ.
ದರ್ಜಿತನ ಕಲಿತವರಿಗಿಲ್ಲ ಈ ರಗಳೆ.
ನಿಮಿಷದಲಿ ಉದ್ಯೋಗ ದೊರಕುವುದು, ಮಗಳೆ.

## ೨೧೧೧. ಅಧ್ಯಾಪಕರಿಗೆ

ಶಿಕ್ಷಕರ ಮೇಲಿರುವ ಕರ್ತವ್ಯಭಾರ
ಕುಸುಮವೆನಿಸಲು ಗೋಖಲೆಗೆ ಪುಷ್ಪಹಾರ.
ಅರಿವು ಹೊರಸೂಸಿ ಈ ಹಾರದೊಳಗಿಂದ
ವಿದ್ಯಾರ್ಥಿಗಳಿಗೆ ಜೀವನದ ಮಕರಂದ.

## ೨೧೧೨. ಶಿಸ್ತು

ಶಿಸ್ತು ಎಂಬುದು ವಸ್ತು ಇದ್ದಷ್ಟು ಕಡಮೆ.
ಶಿಸ್ತಿನಿಂದಿರಬೇಕು ಯಾವುದೂ ದುಡಿಮೆ.
ಶಿಸ್ತಿನಿಂದಲೆ ಕೊನೆಗೆ ಹುಟ್ಟುವುದು ಜೇನು.
ಶಿಸ್ತಿನರಮನೆ ಎನ್ನುವುದೇ ಆ ಜಪಾನು.

## ೨೧೧೩. ಒಂದು ಹೋಲಿಕೆ

'ಶ್ರೀ' ಅವರು ಏರಿಸಿದ ಕನ್ನಡ ಪತಾಕೆ
ಸರಕಾರ ಸ್ಥಾಪಿಸಿದ ಸಂಸ್ಕೃತಿ ಇಲಖೆ
ಈ ಎರಡರಲಿ ಯಾವ ವ್ಯತ್ಯಾಸ ಉಂಟೆ ?
ಒಂದು ಹೃದಯದ ವೀಣೆ; ಇನ್ನೊಂದು ಘಂಟೆ.

## ೨೧೧೪. ಭಕ್ತನ ಮೊರೆ

ಶ್ರೀಕೃಷ್ಣ ಪರಮಾತ್ಮ, ನೀನೆ ಇನ್ನೊಮ್ಮೆ
ಬಂದಹೊರತೂ ಹಾಲು ಕೊಡದು ಈ ಎಮ್ಮೆ.
ಯಾವುದಕ್ಕೂ ಬೇಕು ಕೃಷ್ಣಾವತಾರ.
ಉಡುಪಿ ಕೃಷ್ಣನು ಬರಲು ಇಡ್ಲಿ ಸಂಬಾರ.

## ೨೧೧೫. ಸ್ಥಳಪುರಾಣ

ಶ್ರೀ ಪುರಂದರ ದಾಸರೂ ಇಲ್ಲಿ ಬಂದು
ಪುಣ್ಯ ಗಳಿಸಿದರು ಈ ಹಳ್ಳದಲಿ ಮಿಂದು.
ನೀರೊಳಗೆ ಬಿದ್ದರೂ ತಂಬೂರಿ ತಾಳ,
ತೇಲಿ ಬಂದವು ಮೇಲೆ ತಲುಪಿ ಪಾತಾಳ.

## ೨೧೧೬. ನಿನ್ನದೇ ಆಟ

ಶ್ರೀ ಪುರಂದರ ವಿಠಲ, ನಿನ್ನದೇ ಆಟ.
ಹತ್ತು ಸಲ ಹೋದರೂ ಸಿಗಲಿಲ್ಲ ಕೋಟಾ
ಈಗ ಬಾ ಆಗ ಬಾ ಹೋಗಿ ಬಾ ಎಂದು
ಒಳ್ಳೆ ಕಾಳನ್ನೆಲ್ಲಾ ಹಾಕಿದರು ತಿಂದು.

## ೨೧೧೭. ಪುರಂದರ ವಿಠಲನಿಗೆ

ಶ್ರೀ ಪುರಂದರ ವಿಠಲ, ನಿನ್ನ ಹಂಗ್ಯಾಕೆ ?
ತುಟ್ಟಿತನ ನೀಗದಿದ್ದರೆ ಸ್ವಲ್ಪ ಜೋಕೆ.
ಮಡಕೆಯಲಿ ಬೆಂದಿಲ್ಲ ಸಾಕಷ್ಟು ಅನ್ನ
ಬಡವರೆಲ್ಲಾ ಕಟ್ಟಿ ಹಾಕುವರು ನಿನ್ನ.

## ೨೧೧೮. ಪ್ರಜಾಸತ್ತೆಯ ಮೇಲ್ಮೆ

ಶ್ರೀಮಂತ ತೊಟ್ಟರೂ ರೇಶಿಮೆಯ ಕೋಟು
ಅವನಿಗೂ ನಮ್ಮಂತೆ ಬರಿ ಒಂದೆ ವೋಟು.
ಈ ಸಮಾನತೆ ಭಾರತದ ದೊಡ್ಡ ಹೆಮ್ಮೆ.
ಕೋಳಿಮರಿ ಮೈಯುಬ್ಬಿ ಆದಂತೆ ಎಮ್ಮೆ.

## ೨೧೧೯. ಶ್ರೀರಂಗ ಕಾಮ್ತಿ

ಶ್ರೀರಂಗ ಕಾಮ್ತಿಯೂ ಬಹಳ ಚಾಣಾಕ್ಷ
ಇದುವರೆಗೆ ಗಳಿಸಿದ್ದು ಲಕ್ಷೋಪಲಕ್ಷ.
ಹೆಂಡತಿಯ ಹೆಸರಿನಲ್ಲೂ ಉಂಟು ಆಸ್ತಿ
ಇವನಿಗೂ ಮಂತ್ರಿಗೂ ವಿಪರೀತ ದೋಸ್ತಿ.

## ೨೧೨೦. ಶ್ರೀಹರಿಗೆ

ಶ್ರೀಹರಿಗೆ ಮೊನ್ನೆ ಮಾಡಿದೆನು ಟೆಲಿಫೋನು,
ಮಂತ್ರಿಗಳ ದರಬಾರು ನೋಡೆಂದು ನಾನು.
ಹರಿ ಎಂದ : ಏನು ಮಾಡಲಿ ನಾನು ಸಧ್ಯ ?
ಕುಡಿಯುತ್ತಿದ್ದಾರಿವರು – ಅಧಿಕಾರ – ಮಧ್ಯ.

## ೨೧೨೧. ಉಡುಗೊರೆಯ ಫಲಶ್ರುತಿ

ಶ್ರೇಷ್ಠಕವಿಯೆಂದು ಕೊಟ್ಟರು ರೇಷ್ಮೆ ಶಾಲು.
ಬಾಯ್ಗೆ ಬಂದಂತೆ ಹೊಗಳಿದರು ಹೋಲ್‌ಸೇಲು.
ಮರುದಿವಸ ನೋಡಿದರೆ ಅರ್ಧಾಂಗ ವಾಯು
ಮೊದಲಿನಂತಿರಲಿಲ್ಲ ಕವನಕ್ಕೆ ಸ್ನಾಯು.

## ೨೧೨೨. ಶರಾವತಿ ನದಿಗೆ

ಶ್ರೇಷ್ಠವಾದುದು ನೀನು ವಹಿಸಿರುವ ಪಾತ್ರ
ಪಾತಾಳ ಧುಮುಕಿ ಧರೆಯೊಳಗೆ ನಕ್ಷತ್ರ!
ಗಗನ ಹಾರುವ ಜಾಣರಿಗೆ ಸ್ವಲ್ಪ ಹೇಳು.
ಇವರ ಹಾರಾಟದಲಿ ಪೆಟ್ರೋಲು ಹಾಳು.

## ೨೧೨೩. ಶೈಲಿ

ಶೈಲಿಯಾಗಿರಬೇಕು ಪೂರಾ ವಿಚಿತ್ರ
ಕಾಲರಾಯನು ನೀಡುವನು ಮಾನಪತ್ರ.
ಬರವಣಿಗೆ ಆಗಿ ಬಿಟ್ಟರೆ ಪೂರ್ಣ ಸಾದಾ,
ಒಮ್ಮೊಮ್ಮೆ ತೇಲುವುದು ನೂತನ ಅಗಾಧ.

## ೨೧೨೪. ಸಂಭಾವನಾ ಗ್ರಂಥ

ಷಷ್ಟ್ಯಬ್ಧಿ ಪೂರ್ತಿ ದಿನ ಹೊಗಳಿ ಅತ್ಯಂತ
ಪ್ರಕಟಪಡಿಸಿದವರಿವರು ಶ್ರೇಷ್ಠ ಉದ್ಗ್ರಂಥ.
ಎಲ್ಲರೂ ಭರಭರನೆ ಮುಗಿಸಿದರು ಓದಿ
ಮರುದಿವಸ ಒಲೆಯೊಳಗೆ ಉದ್ಗ್ರಂಥ ಬೂದಿ.

## ೨೧೨೫. ಈಗಿನ ಕಾಲದಲ್ಲಿ

ಸಕಲರಿಗೆ ಉಂಟು ಸಾಕಷ್ಟು ಅವಕಾಶ.
ಹಾರುವವನಿಗೆ ಉಂಟು ಮೇಲೆ ಆಕಾಶ.
ಇಳಿಯುವವನಿಗೆ ಕೆಳಗೆ ಉಂಟು ಪಾತಾಳ.
ಅವಕಾಶಕೆಂದಿಗೂ ಇಲ್ಲ ದುಷ್ಕಾಳ.

## ೨೧೨೬. ವಾಂತಿ

ಸಕಲರಿಗೆ ಒಮ್ಮೆಲೇ ಆಯ್ತುಂತೆ ವಾಂತಿ.
ನಾನಂದೆ; ಓ ರಮಣಿ, ಇದಕೆಂಬೆ ಕ್ರಾಂತಿ.
ಕೊನೆಗೆ ನೋಡಲು ತೆಂಗಿನೆಣ್ಣೆ ಪರಿಣಾಮ
ಎಣ್ಣೆಯಲಿ ಏನು ಹಾಕಿದರೊ ? ಹೇ ರಾಮಾ ! ರಾಮಾ !

## ೨೧೨೭. ತಾಯಿ

ಸಕಲರಿಗೆ ಮೊದಲು ಬೇಕಾದವರು ತಾಯಿ,
ತಾಯಿಯಿಂದಲೆ ನಮಗೆ ಮೂಡುವುದು ಬಾಯಿ.
ನುಡಿಯೊಳಗೆ ಶ್ರೇಷ್ಠವಾದುದು ತಾಯಿ ಮಾತು
ದೇವರೂ ಕೇಳುವನು ಗುಡಿಯೊಳಗೆ ಕೂತು.

## ೨೧೨೮. ಹುಬ್ಬಳ್ಳಿಯಲ್ಲಿ ಕೇಳಿದ್ದು

ಸಕ್ಕರೆಯ ಹೆಗಲೇರಿ ಕೂತ್ಯೆತಿ ಬೆಲ್ಲ !
ಎಲ್ಲವೂ ಸೈತಾನನಾಟ, ಬಿಸಮಲ್ಲಾ.
ಪಾಪ ! ಆ ಸೈತಾನನಿಗೆ ಯಾಕ ಬೈತಿ ?
ರಾಮರಾಜ್ಯದ ದೆವ್ವ ಬೆನ್ನ ಹತ್ತೈತಿ.

## ೨೧೨೯. ಸಕ್ಕರೆಯು ಸಿಕ್ಕಿದರೆ

ಸಕ್ಕರೆಯು ಸಿಕ್ಕಿದರೆ ಸಿಗಲಿಲ್ಲ ಬೆಲ್ಲ.
ಬೆಲ್ಲ ಸಿಕ್ಕಿದರೆ, ಸಖಿ, ಕಾಳು ಕಡಿ ಇಲ್ಲಾ
ಕಾಳು ಕಡಿ ಸಿಕ್ಕಿದರೆ ಸಿಗಲಿಲ್ಲ ಅರಿವೆ.
ಈಶ್ವರನಿಗೂ ಇಲ್ಲ ಮಾನವನ ಪರಿವೆ.

## ೨೧೩೦. ಮಂತ್ರಿಗಳ ಉತ್ತರ

ಸಕ್ಕರೆ, ಸಿಮೆಂಟು, ಮುಂತಾದ ಸಾಮಾನು
ಚೀಲವೇ ನುಂಗಿದರೆ ಮಾಡಬೇಕೇನು ?
ಮತ್ತೆ ಬಿಸಿಲಲ್ಲಿ ಕಬ್ಬಿಣ ಕರಗಿ ನೀರು
ಆಗಿ ಬಿಟ್ಟರೆ ಇದಕೆ ಹೊಣೆಗಾರನಾರು ?

## ೨೧೩೧. ವರ್ತಕರ ಗಮನಕ್ಕೆ

ಸಚಿವರ ಚುನಾವಣೆಗೆ ದೇಣಿಗೆಯ ಕೊಟ್ಟು
ಸುರಳೀತ ಮುಂದೆ ಸಾಗಲಿ ನಿಮ್ಮ ತಟ್ಟು
ಕೊಡದೆ ಹೋದರೆ ನಿಮ್ಮ ಲೈಸನ್ಸು ರದ್ದು
ಕೊಟ್ಟು ಮುಗಿಸಿದ ಬಳಿಕ ಮಾಡುವರು ಮುದ್ದು.

## ೨೧೩೨. ಸಚಿವರಿಗೆ

ಸಚಿವರಿಗೆ ಇವರು ಕಳಿಸಿದರು ಪಾರ್ಸಲ್ಲು.
ಒಳಗಡೆಗೆ ಭರ್ತಿ ತುಂಬಿತ್ತು ಒಣ ಹುಲ್ಲು.
ಕಾಳೆಲ್ಲ ಕಾಳಸಂತೆಗೆ ಹೋಯಿತೆಂದು
ಅದರೊಳಗೆ ಬರೆದಿತ್ತು ಹುಲ್ಲು ಉಂಟೆಂದು.

## ೨೧೩೩. ಸಚಿವರ ವಿರುದ್ಧ

ಸಚಿವರ ವಿರುದ್ಧ ಬರೆದೆನು ಚುಟಕ ಐದು
ಮರುದಿವಸವೇ ನನ್ನ ಮಾಡಿದರು ಕೈದು
ಇಂದ್ರ ದೇವನು ಕೇಳಿ ಕಳಿಸಿದನು ರಂಭೆ
ನನ್ನ ಬಿಡುಗಡೆಯಾಯ್ತು. ಕೇಳು ಜಗದಂಬೆ.

## ೨೧೩೪. ಸಂಪುಟದ ವಿಸ್ತರಣೆ

ಸಚಿವ ಸಂಪುಟ ಈಗ್ಗೆ ವಿಸ್ತರಣೆ ಹೊಂದಿ
ಸರಕಾರಿ ಸೌಧದಲಿ ಐವತ್ತು ಮಂದಿ.
ಆದರೂ ಸಕಲರಿಗೆ ಇಲ್ಲೆಂಬೆ ತೃಪ್ತಿ.
ಅಧಿಕವಾಗಲಿ ಮತ್ತೆ ಸಂಪುಟದ ವ್ಯಾಪ್ತಿ.

## ೨೧೩೫. ಸಚಿವ ಸಂಪುಟದಲ್ಲಿ

ಸಚಿವ ಸಂಪುಟದಲ್ಲಿ ಕುಳಿತುಕೊಂಡಾಗ
ಈತನಿಗೆ ಪಾಪ ಹಿಡಿಯಿತು ಒಂದು ರೋಗ.
ಔಷಧಿಯ ಬದಲಾಗಿ ನುಂಗುವನು ನೋಟು.
ಗೊತ್ತುಂಟು ನೀಡುವವರಿಗೆ ಇವನ ರೇಟು.

## ೨೧೩೬. ಸಚಿವ ಸಂಪುಟ

ಸಚಿವ ಸಂಪುಟದೊಳಗೆ ಪುಟಸಂಖ್ಯೆ ಎಷ್ಟು?
ಹಲಸುಹಣ್ಣಿನ ಒಳಗೆ ಸೋಳೆ ಇದ್ದಷ್ಟು.
ಯಾವ ಜಾತಿಯ ಸೋಳೆ? ಅಂಬಲಿಯೊ? ಬಕ್ಕೆ?
ಹಣ್ಣಾಗಬೇಕಲ್ಲ ರುಚಿ ನೋಡಲಿಕ್ಕೆ.

## ೨೧೩೭. ಸಚಿವ ಸಂಪುಟ

ಸಚಿವ ಸಂಪುಟ ಮೊನ್ನೆ ಬದಲಾಗಿ ಪೂರ್ಣ
ಮುಕ್ಕಾಲು ಮಂದಿ ತಿನಬೇಕಾಯ್ತು ಚೂರ್ಣ.
ಕೆಲವರಿಗೆ ಮೇಲಿಂದ ಕೆಳಬದಿಗೆ ಬಡ್ತಿ.
ಕೆಲವರಿಗೆ ಹತ್ತಲಿಲ್ಲವೊ ಯಾವ ಸೋಡ್ತಿ.

## ೨೧೩೮. ಅದಲು ಬದಲು

ಸಚಿವ ಸಂಪುಟದಲ್ಲಿ ಹೊಸ ಅದಲು ಬದಲು.
ಮೂರು ತಿಂಗಳ ಹಿಂದೆ ಆಗಿತ್ತು ಮೊದಲು.
ಸರ್ಕಸಿನ ಕುದುರೆಗಳ ಓಡಾಟದಂತೆ
ಸುತ್ತಲೂ ತಿರುಗುತಿದೆ ಜನಮನದ ಚಿಂತೆ.

## ೨೧೩೯. ಮನೆತನದ ದಂಧೆ

ಸತ್ತ ಮಂತ್ರಿಯ ಮಡದಿಗೂ ಬೇಕು ಸೀಟು.
ಮಗನಿಗೂ ಕೊಡಬೇಕು ಕೈತುಂಬ ವೋಟು
ರಾಜಕಾರಣವೆನ್ನುವುದು ಮನೆಯ ದಂಧೆ
ವಂಶಾನುಗತವಾಗಿ ನಡೆಯಬೇಕಂದೆ.

## ೨೧೪೦. ಜೀವಕಳೆ

ಸತ್ತ ಮಾತಿಗೆ ಮತ್ತೆ ಜೀವಕಳೆ ತುಂಬಿ
ಚಿತ್ರ ಬರೆದಾಗ ಝೇಂಕರಿಸುವುದು ದುಂಬಿ.
ಇದಕೆಂಬೆ ಕವಿ ಮಾಡಬೇಕಾದ ಕಾರ್ಯ.
ಶ್ರೀಮಂತವಾಗುವುದು ನುಡಿಯ ಸೌಂದರ್ಯ.

## ೨೧೪೧. ಸತ್ತರೂ

ಸತ್ತರೂ ಕಷ್ಟ ಮುಗಿಯುವುದಿಲ್ಲ, ಮಗಳೆ,
ಒಣ ಸೌಧೆಗಾಗಿ ಹಣ ಬೇಕೆಂಬ ರಗಳೆ.
ಆಮೇಲೆ ಪುಣ್ಯತಿಥಿ, ಪ್ರತಿ ವರುಷ ಶ್ರಾದ್ಧ
ಕೈಯೊಳಗೆ ಕಾಸಿರದೆ ಸಾಲದಲಿ ಬಿದ್ದ.

## ೨೧೪೨. ನೀನು ಬದುಕಿದ್ದಿ

ಸತ್ತರೂ, ಬಾಪೂಜಿ, ನೀನು ಬದುಕಿದ್ದಿ
ನಮಗಿರಲಿ ನಿನ್ನನರಿಯುವ ಧವಳಬುದ್ಧಿ.
ನಿನ್ನ ಗೊಂಬೆಯ ಮಾಡಿ ನಿಲಿಸುವುದು ತಪ್ಪು
ನಿನ್ನ ಜೀವನವೆನ್ನುವುದು ಧರೆಯ ಉಪ್ಪು.

## ೨೧೪೩. ನನ್ನ ಬಯಕೆ

ಸತ್ತರೂ ಸಾಯಬಾರದು ಮನುಜ ಕೊನೆಗೆ.
ಈ ತರದ ಮರಣ, ಸಖಿ, ಬರಬೇಕು ನನಗೆ.
ಅನವರತ ಸೌಭಾಗ್ಯವತಿಯಾಗಿ ನೀನು,
ನಿನ್ನ ಸಂಸಾರವಾಗುವುದು ಸವಿ ಜೇನು.

## ೨೧೪೪. ಮಲೆನಾಡಿನ ತಕರಾರು

ಸತ್ತರೂ ಸುಡಲಿಕ್ಕೆ ಇಲ್ಲ ಒಣ ಸೌದೆ
ಎಂಬ ಈ ತಕರಾರು ನಿಜವೇನು ? ಹೌದೆ ?
ಹೌದು, ಸ್ವಾಮೀ, ಹೌದು; ಮಾಡ್ಬೇಡಿ ಸಿಟ್ಟು.
ಒಣ ಸೌದೆಗೂ ಈಗ ಬೇಕು ಪರ್ಮಿಟ್ಟು.

## ೨೧೪೫. ಹೆಸರು

ಸತ್ತರೂ ಹೆಸರುಳಿಯಬೇಕೆಂದು ಸೆಟ್ಟಿ
ತನ್ನ ಹೆಸರನು ಕೆತ್ತಿದನು ಗುಡಿಯ ಕಟ್ಟಿ.
ಬಾವಲಿಯ ಬಳಗವೆಲ್ಲಾ ಗುಡಿಯ ಸೇರೆ
'ಬಾವುಲಿಯ ಗುಡಿ' ಎಂದು ಹೆಸರಾಯ್ತು ನೀರೆ.

## ೨೧೪೬. ಶ್ರಾದ್ಧ

ಸತ್ತವರ ಹೆಸರಿನಲಿ ಮಾಡಿದರು ಶ್ರಾದ್ಧ
ಜೀವಂತವಿದ್ದವರು ಮುಕ್ಕಿದರು ಖಾದ್ಯ.
ಜಗದಂಬೆ, ಇದಕೆಂಬೆ ಮಾನವನ ರೀತಿ
ಸತ್ತವರಿಗಿಲ್ಲ ಉಪವಾಸಗಳ ಭೀತಿ.

## ೨೧೪೭. ಸತ್ತವರು

ಸತ್ತವರು ಮತ್ತೆ ಹುಟ್ಟುವರಂತೆ ಪಾಪ.
ಇದಕೆನ್ನುವೆನು ನಾನು ಶ್ರೀಹರಿಯ ಶಾಪ.
ಭೂತ ದೆವ್ವಗಳಾಗಿ ಬಾಳಿದರೆ ವಾಸಿ,
ಈ ತುಟ್ಟಿ ಕಾಲದಲಿ ಮನುಜ ಬಿಕನಾಸಿ.

## ೨೧೪೮. ಸತ್ಯನಾರಾಯಣ

ಸತ್ಯನಾರಾಯಣನ ಪೂಜೆಯೇ ಜಾಸ್ತಿ.
ಹೆಚ್ಚಾಯ್ತು ಸುಳ್ಳು ನಾರಾಯಣನ ಆಸ್ತಿ.
ಪೂಜೆಗೂ ಆಸ್ತಿಗೂ ಸಂಬಂಧ ಉಂಟೆ ?
ಅಹುದೆಂದು ಪೂಜಾರಿ ಬಾರಿಸಿದ ಗಂಟೆ.

## ೨೧೪೯. ದೇವರ ಪರೀಕ್ಷೆ

ಸದ್ಯಕ್ಕೆ ನಡೆದದ್ದು ದೇವರ ಪರೀಕ್ಷೆ
ಉಂಟೇನು ಪಾಸಾಗಬಹುದೆಂಬ ಆಸೆ ?
ಹೇಳುವುದು ಕಷ್ಟ! ದೇವರು ಕೂಡ ಸದ್ಯ
ಪಾಠ ಓದುವದಿಲ್ಲ ಎಂದನು ಉಪಾಧ್ಯ.

## ೨೧೫೦. ಬೆಂಗಳೂರಿನ ಹವಾಮಾನ

ಸದ್ಯಕ್ಕೆ ಬೆಂಗಳೂರಿನ ಹವಾಮಾನ
ತಂಪಾಗಿ ಮುಖ್ಯಮಂತ್ರಿಗೆ ಸಮಾಧಾನ
ಎಷ್ಟು ದಿನವೆನ್ನುವುದು ಮಾತ್ರ ಅನುಮಾನ
ಉಷ್ಣವಾದರೆ ಕೊನೆಗೆ ತಣ್ಣೀರ ಸ್ನಾನ.

### ೨೧೫೧. ಕಡುಜಾಣ

ಸದ್ಯಕ್ಕೆ ಮಾನವನು ಆಗಿ ಕಡು ಜಾಣ
ಪಾಷಾಣವೂ ಕೊನೆಗೆ ಬಿಡಬಹುದು ತ್ರಾಣ.
ಅಣ್ವಸ್ತ್ರಗಳನ್ನೆಲ್ಲ ಶೇಖರಿಸಿ ಕೊನೆಗೆ
ಪಾಷಾಣಗಳ ಸಹಿತ ಕಳಿಸುವರು ಮನೆಗೆ.

### ೨೧೫೨. ಹಗಲ ಸನ್ಯಾಸಿ

ಸದ್ಯಕ್ಕೆ ಹಗಲ ಸನ್ಯಾಸಿಗಳೆ ಜಾಸ್ತಿ
ಬೂದಿ ಬಡಕೊಂಡರೂ ನಡೆಯುತಿದೆ ಕುಸ್ತಿ.
ಕಾಲಕ್ಕೆ ತಕ್ಕಂತೆ ಹದಿನಾರು ವೇಷ.
ಮುನ್ನೂರು ಮೂವತ್ತು ಕೋಟಿಗಳ ದೇಶ.

### ೨೧೫೩. ಹೆಗ್ಗಣದ ಕಾಟ

ಸದ್ಯಕ್ಕೆ ಹೆಗ್ಗಣದ ಕಾಟ ಹೆಚ್ಚಾಗಿ
ಮುಗಿಸಿದವು ಜೋಳ, ಅಕ್ಕಿಯ ಜೊತೆಗೆ ರಾಗಿ
ಸರಕಾರಿ ಸೌಧದಲ್ಲೂ ಇದರ ಕಾಟ.
ಲಕ್ಷಗಟ್ಟಲೆ ತಿಂದು ಹೂಡಿದವು ಆಟ.

### ೨೧೫೪. ಸಚಿವರ ಸಂಖ್ಯೆ

ಸದ್ಯ ಸಚಿವರ ಸಂಖ್ಯೆಯೇ ಮೂರು ಡಜನು
ನಮ್ಮ ಈ ರಾಜ್ಯಕ್ಕೆ ಇದು ಕಡಮೆಯೇನು ?
ಹೌದು ಮಾರಾಯ, ರಾಜ್ಯದ ಸಂಖ್ಯೆ ಕೋಟಿ
ಸಚಿವ ಸಂಪುಟ ಬೇಕು ನೂರಕ್ಕೆ ದಾಟಿ.

### ೨೧೫೫. ಷರಾಯಿ ಮತ್ತು ಚೋಲಿ

ಸಪುರವಾದಷ್ಟು ಸಖಿ, ಗಂಡನ ಷರಾಯಿ
ಟೈಟಾಗಿ ಶೋಭಿಸಲಿ ನಿನ್ನ ಮಿನಿ – ಚೋಲಿ
ಕಾಲಕ್ಕೆ ತಕ್ಕಂತೆ ಬೇಕು ಫ್ಯಾಷನ್ನು
ಹಿಂದೆ ಬೆನ್ನಿಗೆ ಇರಲಿ ಚೋಲಿಯ ಬಟನ್ನು.

## ೨೧೫೬. ವಿಪರೀತ ಮಳೆ

ಸಭೆಯೊಳಗೆ ವಿಪರೀತ ಮಳೆಯಾಗಿ, ನೀರೆ,
ಗುಡುಗು ಮಿಂಚಿನ ಜೊತೆಗೆ ಸುರಿಸಿದರು ಧಾರೆ.
ಈ ತರದ ಮಳೆ ನಮ್ಮ ರಾಜ್ಯದಲಿ ಹಿಂದೆ
ಆಗಿಲ್ಲವೆಂದು ಶ್ರುತಪಡಿಸಿದವನು ತಂದೆ.

## ೨೧೫೭. ಸ್ಮಗ್ಲಿಂಗು

ಸ್ಮಗ್ಲಿಂಗು ಎನ್ನುವುದು ಕಳ್ಳ ಸಾಗಾಟ
ಇದರೊಳಗೆ ಪೋಲಿಸರಿಗೆ ಉಂಟು ಕೋಟಾ
ಜಾಗತಿಕ ದಂಧೆಯಲಿ ಇದು ಬಹಳ ದೊಡ್ಡ
ಇದನರಿಯದಿದ್ದವನು ಸಂಪೂರ್ಣ ಹೆಡ್ಡ.

## ೨೧೫೮. ಸಮತೆ

ಸಮತೆ ಹತ್ತೂ ಕಡೆಗೆ ಜಾರಿಯಲಿ ಬಂದು,
ಯಾವತ್ತು ಪ್ರಜೆಗಳಿಗೆ ಕಾನೂನು ಒಂದು :
ಉಳುವ ರೈತನು ಕೂಡ ಅಂಗಡಿಗೆ ಹೋಗಿ
ಪರ್ಮಿಟ್ಟು ಪಡಕೊಂಡು ತಿನಬೇಕು ರಾಗಿ.

## ೨೧೫೯. ಸಮಯ ಸಾಧಕತನ

ಸಮಯ ಸಾಧಕತನಕೆ ನೀಡಿ ಅವಕಾಶ
ಪ್ರಗತಿ ದೇವಿಯ ಕೊರಳ ಸುತ್ತಲೂ ಪಾಶ.
ಬೇಕೆಂಬೆ ರಾಷ್ಟ್ರ ಪ್ರಗತಿಗೆ ತತ್ವಾದಿ
ನಖಶಿಖಾಂತದವರೆಗೆ ಅಲ್ಲ ಬರಿ ಖಾದಿ.

## ೨೧೬೦. ಸಮ್ಮಿಶ್ರ ಸರಕಾರ

ಸಮ್ಮಿಶ್ರ ಸರಕಾರವೆನ್ನುವುದು ಖಿಚಡಿ
ಸ್ವಲ್ಪ ರುಚಿ ನೋಡಿ, ಆಮೇಲೆ ಮಾತಾಡಿ.
ಒಂದು ದಿನ ತಿನಬಹುದು ಇಂಥ ಆಹಾರ
ನಿತ್ಯ ತಿಂದರೆ ಹಿಡಿಯುವುದು ಗಿರಾಚಾರ.

### ೨೧೬೧. ವ್ಯಕ್ತಿ ಸ್ವಾತಂತ್ರ್ಯ

ಸರ್ಕಸ್ಸಿನ ಡೇರೆಯಲಿ ತರತರದ ಪ್ರಾಣಿ
ಕುಣಿದಾಡಬೇಕೆಂದು ಹೇಳಿದಳು ರಾಣಿ.
ನರನಿಗೂ ನಾಯಿಗೂ ಕಲಿಸಿದರು ಆಟ
ಅಲ್ಲಗಳೆಯಿತು ಬೆಕ್ಕು ಕಲಿಯಲಿಕೆ ಪಾಠ.

### ೨೧೬೨. ವಿಶ್ರಾಂತಿ ವೇತನ

ಸರಕಾರ ಕವಿಗೆ ನೀಡಿದರೆ ಪೆನ್‌ಶನ್ನು
ಅಪಹರಿಸಬಾರದಯ್ಯ ಅವನ ಪೆನ್ನು.
ಮನಬಂದಹಾಗೆ ವರ್ತಿಸಲಿ ಆ ಬೆರಳು
ಸಾಹಿತ್ಯ ಲೋಕದಲಿ ಅರಳುವುದು ಹರಳು.

### ೨೧೬೩. ಸರಕಾರಿ ಸ್ಟೋರು

ಸರಕಾರ ತೆರೆದ ಅಂಗಡಿ ದೊಡ್ಡ ಸ್ಟೋರು.
ಜಾಹಿರಾತಿನ ವಿವರಗಳು ಬಹಳ ಜೋರು.
ಬೆಲೆ ಕಡಮೆ ಎನಲು ಕೊಂಡೆನು ಚೀಲ ಗೋದಿ
ಮನೆಗೊಯ್ದು ನೋಡಿದರೆ ಮುಕ್ಕಾಲು ಬೂದಿ.

### ೨೧೬೪. ಸರಕಾರದಲ್ಲಿ

ಸರಕಾರದಲ್ಲಿ ಪೋಲಿಸರಿಗೆ ಫಾಯ್ದೆ
ಈ ಪ್ರಾಣಿಗಳಿಗೆ ಹತ್ತುವುದಿಲ್ಲ ಕಾಯ್ದೆ
ಕಾಯ್ದೆ ಹೆಚ್ಚಾಗಿ ಪೋಲಿಸರಿಗೆ ಲಾಭ
ಕಿಸೆಗಳೆಲ್ಲಾ ಭರ್ತಿ ತುಂಬುವವು ಬೇಗ.

### ೨೧೬೫. ವಶೀಲಿ

ಸರಕಾರದಲ್ಲಿ ಬೇಕು ನಾನಾ ವಶೀಲಿ.
ಇದಕೆನ್ನುವರು, ಮಗಳೆ, ಆಧುನಿಕ ಕೀಲಿ.
ಈ ಕೀಲಿ ಎನ್ನುವುದು ಭಾಗ್ಯದ ತಿಜೋರಿ
ದಡ್ಡನೂ ದುಡ್ಡು ಗಳಿಸುವನು ಮೇಲೇರಿ.

## ೨೧೬೬. ಹೊಸ ಪಕ್ಷ

ಸರಕಾರ ನಡೆಸಲಿಕೆ ಬಂತು ಹೊಸ ಪಕ್ಷ
ಇವರದೂ ಕೂಡ ತಿನ್ನುವ ಕಡೆಗೆ ಲಕ್ಷ್ಯ
ಇವರು ತಿನ್ನುವ ಪ್ರಮಾಣವು ಮಾತ್ರ ಜಾಸ್ತಿ
ಕಟ್ಟಬೇಕೆನ್ನುವರು ಜೀವನದ ಆಸ್ತಿ.

## ೨೧೬೭. ಕಾರಕೂನ ಹೇಳಿದ್ದು

ಸರಕಾರ ನಮಗೆ ನೀಡುವ ತುಟ್ಟಿ ಭತ್ಯ
ಬಿಸಿ ಕಾಫಿ ಕುಡಿಯಲಿಕೆ ಸಾಕಾಗ ನಿತ್ಯ.
ಹೀಗಾಗಿ ನಮಗೆ ಮಾಮುಲು ಅನಿವಾರ್ಯ
ಸರಿಯಾಗಿ ನೆರವೇರುವುದು ನಿಮ್ಮ ಕಾರ್ಯ.

## ೨೧೬೮. ದೊಡ್ಡ ಉದ್ಯಾನ

ಸರಕಾರ ನಿರ್ಮಿಸಿತು ದೊಡ್ಡ ಉದ್ಯಾನ
ಸೌಂದರ್ಯ ನಿಧಿಯೆಂದು ಹಾಡಿದರು ಗಾನ
ಈ ಗಾನದಿಂದ ಬಡವರ ಹೊಟ್ಟೆ ತುಂಬಿ
ತೃಪ್ತಿಯಾಯ್ತೆ ಹಾರಾಡುತಿದೆ ದುಂಬಿ.

## ೨೧೬೯. ಸಚಿವರು ಹೇಳಿದ್ದು

ಸರಕಾರ ನೀಡುವುದು ಎಲ್ಲ ಸವಲತ್ತು.
ಅದಕೆ ಬರಬೇಕಲ್ವೆ ಸರಿಯಾದ ಹೊತ್ತು?
ಈ ಚುನಾವಣೆಯಲ್ಲಿ ವೋಟು ಕೊಡಿ ಮೊದಲು.
ಸವಲತ್ತುಗಳು ದೊರಕುವವು ಅದರ ಬದಲು.

## ೨೧೭೦. ಸರಕಾರಿ ಆಯೋಗಗಳು

ಸರಕಾರ ನೇಮಿಸಿತು ಮೂರು ಆಯೋಗ.
ಆದರೂ ವಾಸಿಯಾಗುವುದಿಲ್ಲ ರೋಗ.
ದಿನ ಹೋದ ಹಾಗೆಲ್ಲ ಹೆಚ್ಚಾಯ್ತು ಬೇನೆ
ಆಯೋಗದಿಂದಲೇ ಹೀಗಾಯ್ತು ತಾನೆ?

### ೨೧೭೧. ಯೋಜನೆಯ ಫಲಶ್ರುತಿ

ಸರಕಾರ ಬಸುರಾಗಿ ಆಯ್ತೇನು ಹೆರಿಗೆ?
ಕ್ಷೇಮವಾಗಿದೆಯೇನು ಬಂದದ್ದು ಹೊರಗೆ?
ಹೊರಗೆ ಬಂದದ್ದು ಕೂಸಲ್ಲ! ಬರಿ ಬೆಂಡು!
ಆಶ್ಚರ್ಯಚಕಿತರಾದರು ಜನರು ಕಂಡು.

### ೨೧೭೨. ಧಾನ್ಯದ ಖರೀದಿ

ಸರಕಾರ ಮಾಡಿತ್ತು ಧಾನ್ಯದ ಖರೀದಿ.
ಆದರೂ ಪ್ರಜೆಗಳಿಗೆ ಸಿಗಲಿಲ್ಲ ಗೋದಿ.
ಇದಕೆನ್ನುವರು ರಾಮರಾಜ್ಯದ ಪ್ರತಾಪ
ಗೋದಾಮುಗಳು ತಿಂದು ಹಾಕಿದವು ಪಾಪ.

### ೨೧೭೩. ಪ್ರತಿಯೊಂದು ಚೀಲದಲಿ

ಸರಕಾರ ಮಾಡಿದರೆ ಧಾನ್ಯದ ಖರೀದಿ
ಪ್ರತಿಯೊಂದು ಚೀಲದಲಿ ಮುಕ್ಕಾಲು ಬೂದಿ
ಅಧಿಕಾರಿ ಮತ್ತು ಪಟ್ಟಣಸೆಟ್ಟಿ ಕೂಡಿ
ಒಳಗೊಳಗೆ ಮಾತಾಡಿ ಮಾಡಿದರು ಮೋಡಿ.

### ೨೧೭೪. ಚುನಾವಣೆ

ಸರಕಾರ ಮುದಿ ಗಂಡ, ಜನತೆ ಮುದಿ ಹೆಣ್ಣು
ನವಯುವತಿಯರ ಮೇಲೆ ಮುದುಕರಿಗೆ ಕಣ್ಣು.
ಐದು ವರುಷಕೊಮ್ಮೆ ಜಗ್ಗಿ ಮುತ್ತಿಟ್ಟು
ನಟಿಸಿದರೆ, ನಮ್ಮ ಮುದುಕಿಗೆ ಇಲ್ಲ ಸಿಟ್ಟು.

### ೨೧೭೫. ಗಡಿಯಾರ

ಸರಕಾರ ರಾಜಕಾರಣದ ಗಡಿಯಾರ.
ಮಂತ್ರಿಗಳ ನಾಡಿ ತಿಳಿಯಲಿಕೆ ಆಧಾರ.
ಅಮವಾಸ್ಯೆ ಬಂದರೂ ಹೊಡೆಯುತಿದೆ ಗಂಟೆ.
ಕೀಲಿ ಕೊಡುವಾಗ ಯಾವಾಗಲೂ ತಂಟೆ.

## ೨೧೭೬. ಪ್ರಧಾನಿಗಳ ನಿವೇದನೆ

ಸರಕಾರವೆನ್ನುವುದು ಕೃಷ್ಣಾವತಾರ
ಜನರ ಉದ್ಧಾರಕ್ಕೆ ಉಂಟು ಕರಭಾರ
ತೆರಿಗೆ ಅಂದರೆ ಹರಿಗೆ ಕೊಡುವ ನೈವೇದ್ಯ
ಎಂದು ಭಾವಿಸಿ ನೀವು ಕೊಡಬೇಕು ಸದ್ಯ.

## ೨೧೭೭. ಮುಗುದಾಣಿಯ ಅವಶ್ಯಕತೆ

ಸರಕಾರವೆನ್ನುವುದು ವಿಕ್ಷಿಪ್ತ ಪ್ರಾಣಿ
ಇದಕೆ ಪ್ರಜೆಗಳು ಹಾಕಬೇಕು ಮುಗುದಾಣಿ.
ಹಾಕದಿದ್ದಲ್ಲಿ ಸಿಕ್ಕಾಪಟ್ಟೆ ಓಡಿ,
ಬೀದಿ ಬೀದಿಗಳಲ್ಲಿ ಮಾಡುವುದು ರಾಡಿ.

## ೨೧೭೮. ಸೆಟ್ಟಿಯ ದಿಗ್ವಿಜಯ

ಸರಕಾರ ಹಾಕಿದರು ಬೆಲೆಯ ಕಂಟ್ರೋಲು
ನಮ್ಮ ಸೆಟ್ಟಿಗೆ ಮಾತ್ರ ಬರಲಿಲ್ಲ ಸೋಲು.
ಕಂಟ್ರೋಲಿನೊಳಗಿತ್ತು ಒಂದೆರಡು ರಂಧ್ರ
ಜಾರಿಕೊಂಡನು ನಮ್ಮ ಸೆಟ್ಟಿ ದೇವೇಂದ್ರ.

## ೨೧೭೯. ರೋಗಿ ಹೇಳಿದ್ದು

ಸರಕಾರಿ ಆಸ್ಪತ್ರೆಯೊಳಗೆ ಪಡಪೋಸಿ
ಖಾಸಗೀ ವೈದ್ಯನೆಡೆ ಹೋಗುವುದೆ ವಾಸಿ :
ಕೈತುಂಬ ಕೊಟ್ಟರೂ ಸುಖವಾಗಿ ಸತ್ತು
ಸ್ವರ್ಗವೇರಲಿಕೆ ಹಿಡಿಯುವುದಿಲ್ಲ ಹೊತ್ತು.

## ೨೧೮೦. ನಿಜವಾದ ಕಾರಣ

ಸರಕಾರಿ ಕಾಲೇಜಿನಲಿ ಸಿಗುವ ವಿದ್ಯೆ
ಕ್ಲಾಸಿನಲಿ ಕೂತಾಗ ಬರುವಂಥ ನಿದ್ದೆ.
ಇದಕಾಗಿಯೇ ಅಲ್ಲಿ ಫೀ ಕಡಮೆ ಎಂದು
ಜಾಹೀರುಪಡಿಸಿದರು ಧ್ವನಿಯಂತ್ರ ತಂದು.

### ೨೧೮೧. ದೇವರ ಕೆಲಸ

ಸರಕಾರಿ ಕೆಲಸ ದೇವರ ಕೆಲಸವೆಂಬೆ.
ಈ ಕೆಲಸವನ್ನೆ ಮೆಚ್ಚುವಳು ಜಗದಂಬೆ.
ಮಂತ್ರಿಗೂ ಪೂಜಾರಿಗೂ ಇಲ್ಲ ಭೇದ.
ಇಬ್ಬರೂ ತಿನಬೇಕು ದೇವರ ಪ್ರಸಾದ.

### ೨೧೮೨. ಪಕ್ಷಾಂತರದ ಫಲಶ್ರುತಿ

ಸರಕಾರಿ ಪಕ್ಷ ಸೇರಿದನು, ಮಾರಾಯ.
ಆದರೂ ಸಿಗಲಿಲ್ಲ, ಪಂಚಕಜ್ಜಾಯ
ಇದಕೆನ್ನುವರು, ಮಗಳೆ, ವಿಧಿಯ ವಹಿವಾಟು
ವ್ಯರ್ಥವಾಯಿತು ಪಾಪ ಬಿಳಿ ಖಾದಿ ಕೋಟು.

### ೨೧೮೩. ಬಿರಿಯಾನಿ

ಸರಕಾರಿ ಬಂಗ್ಲೆಯಲಿ ಕುಳಿತು ಬಿರಿಯಾನಿ
ಬೇಕಷ್ಟು ತಿಂದರೂ ನಿಮಗಿಲ್ಲ ಹಾನಿ
ಆ ಊರಿನೊಳಗಿರುವ ಕಂತ್ರಾಟುದಾರ
ಹಣ ತುಂಬಿ ಮಾಡುವನು ನಿಮ್ಮ ಉದ್ಧಾರ.

### ೨೧೮೪. ಸರಕಾರಿ ವರುಷ

ಸರಕಾರಿ ವರುಷ ಮುಗಿಯುವ ಅವಧಿ ಮಾರ್ಚು.
ಅವಧಿಯೊಳಗೇ ಮುಗಿಸಿಬಿಡಬೇಕು ಖರ್ಚು.
ಖರ್ಚಾಗದಿದ್ದರೂ ಹಾಕಿಬಿಡಿ ವೆಚ್ಚ.
ಸರಕಾರ ನಿಮಗೆ ಅನ್ನುವುದಿಲ್ಲ ಲುಚ್ಚ.

### ೨೧೮೫. ನಾಪತ್ತೆ

ಸರಕಾರಿ ಸೌಧದಲ್ಲಿ ಫೈಲು ನಾಪತ್ತೆ
ಇದಕೆನ್ನುವರು ಭಾರತದ ಲೋಕಸತ್ತೆ.
ಕಾರಕೂನನಿಗೆ ಕುಡಿಸಿದರೆ ನೊರೆಹಾಲು
ಫೈಲುಗಳಿಗೂ ಮೂಡುವವು ನೂರು ಕಾಲು.

## ೨೧೮೬. ಮೈಸೂರಿನ ಖೆಡ್ಡಾ

ಸರಕಾರಿ ಸೌಧದಲ್ಲೂ ಬೇಕು ಖೆಡ್ಡಾ
ಇದರರ್ಥ ತಿಳಿಯದಿದ್ದರೆ ನೀನು ಹೆಡ್ಡ.
ಸೌಧದಲ್ಲೂ ಉಂಟು ತರತರದ ಆನೆ.
ಹಿಡಿದಾಗ ಮಾತ್ರ ಗೊತ್ತಾಗುವುದು ತಾನೆ ?

## ೨೧೮೭. ಸರಕಾರಿ ಸೌಧದಲಿ

ಸರಕಾರಿ ಸೌಧದಲಿ ಸಾವಿರ ಗುಮಾಸ್ತೆ
ಆದರೂ ಹಬ್ಬಿಕೊಂಡಿದೆ ಅವ್ಯವಸ್ಥೆ
ನೂರಾರು ಫೈಲುಗಳ ಮೈಮೇಲೆ ಧೂಳು
ಗುಡಿಸಿ ನೋಡಿದರೆ ಹೊರ ಬೀಳುವುದು ಚೇಳು

## ೨೧೮೮. ಸಿಗಲಿಲ್ಲ ಜಾಗ

ಸರಕಾರಿ ಸೌಧದಲಿ ಸಿಗಲಿಲ್ಲ ಜಾಗ
ಯಾವುದೋ ಕಮಿಟಿಯಲಿ ಹಾಕಿದರು ಈಗ.
ಹೇಗಾದರೂ ಮಾಡಿ ಕೊಡಬೇಕು ಭತ್ಯ.
ಭತ್ಯ ಸಿಕ್ಕಿದರೆ ಆಗುವನು ಕೃತಕೃತ್ಯ.

## ೨೧೮೯. ಸರಕಾರಿ ಹೈಸ್ಕೂಲು

ಸರಕಾರಿ ಹೈಸ್ಕೂಲಿನಲ್ಲಿ ವಿದ್ಯಾರ್ಥಿ
ಯಾವಾಗಲೂ ಗಳಿಸುವನು ಧವಳಕೀರ್ತಿ.
ಶೇಕಡಾ ತೊಂಬತ್ತುಮೂರು ನಾಪಾಸು
ಧನ್ಯವಾಯಿತು ಶಿಕ್ಷಣಕೆ ತೆತ್ತು ಕಾಸು.

## ೨೧೯೦. ತುಂಟನ ಪರಂಪರೆ

ಸರ್ವಜ್ಞ ಕವಿ ನನ್ನ ಪೂರ್ವಜನ ನೆಂಟ
ಸಾಹಿತ್ಯ ಲೋಕದಲಿ ಅವನೊಬ್ಬ ತುಂಟ
ಆತ ನೀಡಿದ ಸ್ಫೂರ್ತಿ ನನ್ನ ಮಿಸ್ಚೀಫು
ಮಂತ್ರಿಗಳ ಮೋರೆಗೆ ಹಚ್ಚಿದೆನು ಸೋಪು.

### ೨೧೯೧. ಸರ್ವಜ್ಞನಿಗೆ

ಸರ್ವಜ್ಞ, ನಿನ್ನ ತ್ರಿಪದಿಗೆ ಮರುಳನಾಗಿ,
ಚೌಪದಿಯ ಗೀಚಿದೆನು ನಿನಗೆ ತಲೆಬಾಗಿ.
ಚೌಪದಿಗಿಂತ ತ್ರಿಪದಿಯ ರಚನೆ ಕಷ್ಟ.
ಸರ್ವಜ್ಞನಾದದ್ದು ನಿನ್ನ ಅದೃಷ್ಟ.

### ೨೧೯೨. ಸರ್ವಜ್ಞ

ಸರ್ವಜ್ಞ ಕವಿ, ನೀನು ಮೂಡಿಸಿದ ತ್ರಿಪದಿ
ನನ್ನ ಚೌಪದಿಗಳಿಗೆ ತೋರಿಸಿತು ಹಾದಿ
ನಿನ್ನ ಮಾತಿನ ಸೊಗಸು ಬರಲಿಲ್ಲ ನನಗೆ
ನೀನೊಬ್ಬನೆ ಸಾರ್ವಭೌಮ ಇದುವರೆಗೆ.

### ೨೧೯೩. ಸರ್ವಜ್ಞ

ಸರ್ವಜ್ಞ ನೀ ಪಾಠ ಕಲಿತದ್ದು ಎಲ್ಲಿ ?
ಸರ್ವಜ್ಞ ಹೇಳಿದನು : ಪ್ರತಿಯೊಂದು ಗಲ್ಲಿ.
ಸರ್ವಜ್ಞ ನಿನಗಿತ್ತೆ ಯಾವುದೂ ಆಸೆ ?
ಹೌದು ಮಗು, ಅದು ನಮ್ಮ ಜನಮನದ ಭಾಷೆ.

### ೨೧೯೪. ಸರ್ವಜ್ಞ ಮೂರ್ತಿಗೆ

ಸರ್ವಜ್ಞ ಮೂರ್ತಿ, ನೀ ಇನ್ನೊಮ್ಮೆ ಹುಟ್ಟಿ
ಭೂಮಿಗಿಳಿದರೆ ಕಾಣುವುದು ಕಳ್ಳಭಟ್ಟಿ
ಇದನು ನೋಡುವ ಪುಣ್ಯವಿರಲಿಲ್ಲ ನಿನಗೆ.
ಬೇಗ ಬಾ, ಮಾರಾಯ, ಈ ಬೀದಿಯೊಳಗೆ.

### ೨೧೯೫. ಎರಡು ಹಾದಿಗಳು

ಸರ್ವಜ್ಞ ಹಿಡಿದದ್ದು ತ್ರಿಭುವನದ ಹಾದಿ.
ನಾನು ಹಿಡಿದದ್ದು ನವಭಾರತದ ಬೀದಿ.
ಸರ್ವಜ್ಞ ತ್ರಿಪದಿಯಲಿ ಮನುಕುಲದ ಕಾಳು.
ನನ್ನ ಚೌಪದಿಯೊಳಗೆ ಮಾನವನ ಗೋಳು.

## ೨೧೯೬. ಸರ್ವಪಿತೃ ಅಮವಾಸ್ಯೆ

ಸರ್ವಪಿತೃಗಳ ಅಮವಾಸ್ಯೆ ಈ ಹೊತ್ತು
ಊಟಕ್ಕೆ ಮರಳುವರು ಹೋದರೂ ಸತ್ತು.
ಸ್ವರ್ಗದಲಿ ಸೀ ಅಮೃತವ ಕುಡಿದು ಕುಡಿದು
ಬೇಸರಿಕೆ ಬಂದು ಬರುವರು ಇಲ್ಲಿ ನಡೆದು.

## ೨೧೯೭. ಸರ್ವಾಂಗ ಸುಂದರಿಗೆ

ಸರ್ವಾಂಗ ಸುಂದರಿಯೆ, ನಿನಗೊಂದು ಮಾತು
ಹೊರಗೆ ಹೋದರೆ ಮರಳಬೇಕು ಸಾಬೀತು.
ನಿನ್ನ ಬೆನ್ನ ಹಿಡಿಯುವರು ನೂರಾರು ಮಂದಿ
ಅವರಲ್ಲಿ ಇರಬಹುದು ಒಂದೆರಡು ಹಂದಿ.

## ೨೧೯೮. ಸರ್ವಾಧಿಕಾರಿಗಳು

ಸರ್ವಾಧಿಕಾರಿಗಳ ಜೀವನಚರಿತ್ರ
ಹಾಡಬೇಕೆಂದು ಕಟ್ಟಿದೆನು ಈ ಸೂತ್ರ :
ಜೀವಂತವಿದ್ದಾಗ ಕೈಯೊಳಗೆ ಬೆತ್ತ,
ಪ್ರಾಣ ಹಾರಿದ ಬಳಿಕ ನೂರು ಸಲ ಸತ್ತ.

## ೨೧೯೯. ಸರಸಿ ಹೆಂಡತಿ

ಸರಸಿ ಹೆಂಡತಿಯಿರಲು ಅರಸಾಗಿ ನಾನು
ಸಂಸಾರ ಸಾಗಿಸುವೆ ಕುಡಿಕುಡಿದು ಜೇನು.
ಮೊಂಡು ಹೆಂಡತಿ ಸಿಕ್ಕಿದರೆ ನಾನು ಸತ್ತೆ.
ಕೋಗಿಲೆಯ ಬದಲಾಗಿ ಕಿರುಚುವುದು ಕತ್ತೆ.

## ೨೨೦೦. ಸಖಿಗೆ

ಸರಿಯಾಗಿ ಆಗದಿದ್ದರೆ ಯಾವ ಕೆಲಸ
ಕಡಮೆಯಾಗುವುದು, ಸಖಿ, ನನ್ನ ಆಯುಷ್ಯ.
ಸಹಕರಿಸಬೇಕು ಪ್ರತಿಯೊಂದರಲಿ ನೀನು,
ಕಡೆತನಕ ಸಂಸಾರವಾಗುವುದು ಜೇನು.

### ೨೨೦೧. ಇವರಿಟ್ಟ ಲೆಕ್ಕ

ಸರಿಯಾಗಿ ಇದ್ದರೂ ಇವರಿಟ್ಟ ಲೆಕ್ಕ
ಸರಕಾರಿ ಬೊಕ್ಕಸವ ಮಾಡಿದರು ಚೊಕ್ಕ.
ಇದಕೆನ್ನುವರು ಜನರು ಆಧುನಿಕ ಜಾದು
ಈ ಜಾದು ಕಲಿತದ್ದು ಬಹಳೇ ಚಲೋದು.

### ೨೨೦೨. ಟಪಾಲು ವ್ಯವಸ್ಥೆ

ಸರಿಯಾಗಿ ಇಲ್ಲ ಪತ್ರಗಳ ಬಡವಾಡೆ.
ಈ ಪ್ರಜಾರಾಜ್ಯದಲಿ ಇದು ಒಂದು ಪೀಡೆ.
ಲಗ್ನಪತ್ರಿಕೆ ತಲುಪಲಿಕೆ ದಿವಸ ಹತ್ತು.
ತಂತಿ ಕಳಿಸಿದರೆ, ಸಖಿ, ಐದು ಒಪ್ಪತ್ತು.

### ೨೨೦೩. ಒಂದು ಸೂಚನೆ

ಸರಿಯಾಗಿ ಕೃತಿಯೊಳಗೆ ತಂದು ಪ್ಲಾನಿಂಗು
ಹೊಟ್ಟೆ ತುಂಬುವ ತನಕ ಸಾಕಷ್ಟು ನುಂಗು
ನುಂಗಿದಕೆ ಇಲ್ಲ ಇನ್‌ಕಮ್ ಟ್ಯಾಕ್ಸು, ಜೀಯ
ಪ್ರತಿಯೊಂದು ಪೈಸೆಯೂ ಕಿಸೆಯ ಆದಾಯ.

### ೨೨೦೪. ಬರೆದದ್ದು

ಸರಿಯಾಗಿ ಝುರಿಯಾಗಿ ಮೂಡಿದರೆ ಪ್ರಾಸ,
ಬರೆದದ್ದು ಓದಲಿಕೆ ನಮಗಿಲ್ಲ ತ್ರಾಸ,
ಎಳೆದು ತಂದರೆ ಪ್ರಾಸ ಒಡೆಯುವುದು ಮಡಕೆ
ಓದುವವರಿಗೆ ಪಾಪ ತುಂಬ ನೀರಡಿಕೆ.

### ೨೨೦೫. ಮಾದರಿ ಮಂತ್ರಿ

ಸರಿಯಾಗಿ ಮಾಡಿಕೊಂಡನು ಇವನು ತಂಪು.
ಹೆಂಡತಿಯ ಹೆಸರಿನಲಿ ಪೆಟ್ರೋಲು ಪಂಪು.
ಅಳಿಯನಿಗೆ ಬಲು ದೊಡ್ಡ ಸರಕಾರಿ ಹುದ್ದೆ.
ಬಾಯೊಳಗೆ ಯಾವಾಗಲೂ ಬೆಣ್ಣೆ ಮುದ್ದೆ.

## ೨೨೦೬. ಸರಸ–ಸಜ್ಜನಿಕೆ

ಸರಿಯಾಗಿ ಮಾಡಿದರೆ ಬಹಿರಂಗ ತನಿಖೆ
ಹೊರಬೀಳುವುದು ಇವರ ಸರಸ–ಸಜ್ಜನಿಕೆ.
ಒಳಬದಿಗೆ ಪಂಚಖಾದ್ಯವ ತಿಂದು ಭರ್ತಿ
ಹೊರ ಬದಿಗೆ ಗಳಿಸಿಕೊಂಡರು ಧವಳ ಕೀರ್ತಿ.

## ೨೨೦೭. ಅಂತ್ಯಪ್ರಾಸ

ಸರಿಯಾಗಿ ಮೂಡಿಬಂದರೆ ಅಂತ್ಯಪ್ರಾಸ
ಕವಿಯ ಲೇಖನಿಗಿಲ್ಲ ಯಾವುದೂ ತ್ರಾಸ.
ಎಳೆದು ತಂದರೆ ಪ್ರಾಸವಾಗುವುದು ಜಳ್ಳು
ತನ್ನಾರೆ ಮೂಡಿದರೆ ಹಿಡಿಸುವುದು ಮಳ್ಳು.

## ೨೨೦೮. ಆಡಳಿತ

ಸರಿಯಾಗಿ ಹಾಸಿ ಬಿಟ್ಟರೆ ಎಲ್ಲ ಫೈಲು
ಕಾಗದದ ಉದ್ದಳತೆ ಹದಿನೆಂಟು ಮೈಲು.
ಫೈಲುಗಳ ಒಳಗೆ ನೋಡಿದರೆ ಮಜಕೂರು
ಹೊಸ ರಸ್ತೆ ಮಾಡಿದ್ದು ಫರ್ಲಾಂಗು ಮೂರು.

## ೨೨೦೯. ಕಾಂಗ್ರೆಸಿನ ಜೋಡೆತ್ತು

ಸರಿಯಾಗಿ ಹೂಡಲಿಲ್ಲವೋ ಯಾವ ಗದ್ದೆ
ಲೋಕಸಭೆಯಲ್ಲಿಯೂ ಮಾಡಿದವು ನಿದ್ದೆ.
ನಿತ್ಯವೂ ತಿಂದು ಭತ್ಯದ ಹತ್ತಿಕಾಳು
ಸಗಣಿ ಹಾಕಲು ಸಾಕಿದವನ ಮನೆಹಾಳು.

## ೨೨೧೦. ಸ್ವರ್ಗದಲಿ

ಸ್ವರ್ಗದಲಿ ನಾನು ಐದಾರು ದಿನವಿದ್ದೆ
ಎಲ್ಲಿಯೂ ಕಾಣಲಿಲ್ಲವೊ ಒಂದು ಗದ್ದೆ.
ಎಲ್ಲರೂ ತಿನ್ನುವುದು ಬರಿ ಜೇನು ತುಪ್ಪ
ನಾನಂದೆ; ಈ ಸ್ವರ್ಗ ನನಗೆ ಬೇಡಪ್ಪ.

### ೨೨೧೧. ಆದರ್ಶ

ಸ್ವರ್ಗ ನೋಡಲಿಕೆಂದು ಸಾಯುವೆನು ಕಂದ
ಸ್ವರ್ಗದಲಿ ಎಲೆ ಕೂಡ ಹೂವಾಗಿ ಚಂದ.
ಕೊಕ್ಕು ಇಲ್ಲದ ಹಕ್ಕಿಗಳು ಹಾರಿ ಬಂದು
ಹಿಗ್ಗುವವು ಮಕರಂದ ರಸದೊಳಗೆ ಮಿಂದು.

### ೨೨೧೨. ಕೆಟ್ಟ ಸುದ್ದಿ

ಸ್ವರ್ಗಲೋಕದ ಮೇಲೆಯೂ ಕೆಟ್ಟ ಸುದ್ದಿ
ದೈತ್ಯರೆಲ್ಲಾ ಸೇರಿದರು ಒಳಗೆ ನುಗ್ಗಿ.
ಇಂದ್ರದೇವನು ರಂಭೆಯೊಂದಿಗೆ ಪರಾರಿ
ಅಡಗಿಕೊಂಡಿದ್ದಾನೆ ಪಾತಾಳ ಸೇರಿ.

### ೨೨೧೩. ಸ್ವರ್ಗವನ್ನೇರಿ

ಸ್ವರ್ಗವನ್ನೇರಿ ನಾ ಸಾಕಾಗಿ ಬಂದೆ
ಬಿರಿಯಾನಿ ಸಿಗಲಿಲ್ಲ! ಸಿಹಿ ಮಾತ್ರ ತಿಂದೆ
ಈ ಸ್ವರ್ಗ ನನಗೆ ಹೇಳಿದ್ದಲ್ಲವೆಂದು
ಭೂಮಿಗಿಳಿದೆನು ಒಂದು ನಿಚ್ಚಣಿಕೆ ತಂದು.

### ೨೨೧೪. ನನ್ನ ಹಳ್ಳಿ

ಸ್ವರ್ಗವೂ ನರಕವೂ ಒಂದೆಡೆಗೆ ಸೇರಿ
ಹಳ್ಳಿಯಾಗಲು ಅದರ ಹೆಸರು ಆಲಗೇರಿ.
ಅಡಿಗಡಿಗೆ ಕಲ್ಪತರು ನೆರಳು ನೀಡಿದರೂ
ಗರ್ಭಪಿಂಡವ ಚುಚ್ಚುತಿದೆ ಮುಳ್ಳುಬಿದಿರೂ

### ೨೨೧೫. ತ್ರಿಭುವನ

ಸ್ವರ್ಗವೆಂಬುದು, ದೇವ ನಿರ್ಮಿಸಿದ ಥಳಕು.
ಭೂಲೋಕವೆನ್ನುವುದು ನಿಜವಾದ ಬೆಳಕು.
ಪಾತಾಳವೆನ್ನುವುದು ಕತ್ತಲೆಯ ಕೋಣೆ.
ಈ ಮಾತು ಸುಳ್ಳಲ್ಲ, ನಿನ್ನ ಕೊರಳಾಣೆ.

## ೨೨೧೬. ಸ್ವಾಮಿಭಕ್ತಿ

ಸ್ವರ್ಣಮಂದಿರ ತ್ಯಜಿಸಿ ಓಡಿದನು ಹರಿಯು
ಶ್ರೀಹರಿಯ ಹಿಂಬಾಲಿಸಿತು ಕುನ್ನಿ ಮರಿಯು.
ಆದರೂ ಮನುಜನಿಗೆ ಬರಲಿಲ್ಲ ಬುದ್ಧಿ.
ಭೂಲೋಕ ಕಂಪಿಸಿತು ಕೇಳಿ ಈ ಸುದ್ದಿ.

## ೨೨೧೭. ಚುನಾವಣೆ

ಸ್ವಲ್ಪ ಕಿವಿಗೊಟ್ಟು ಲಾಲಿಸು, ರಾಮಕೃಷ್ಣ;
ಈ ಚುನಾವಣೆಯಲ್ಲಿ ಆಯ್ತಲ್ವೆ ಉಷ್ಣ?
ಮುಂದಿನ ಚುನಾವಣೆಗೆ ಪೂರಾ ನಿಕಾಲೆ
ಸರಿಯಾಗಿ ಮುಡಿಸುವರು ಮಲ್ಲಿಗೆಯ ಮಾಲೆ.

## ೨೨೧೮. ತುಟ್ಟಿಕಾಲದಲ್ಲಿ

ಸ್ವಲ್ಪಮಟ್ಟಿಗೆ ಅಗ್ಗವಾದರೂ ಅಕ್ಕಿ
ಉಳಿದ ಜಿನ್ನಸು ಹೋಗಬೇಕೇನು ಸೊಕ್ಕಿ?
ಹದಿನೈದು ದಿನದೊಳಗೆ ತಿಂಗಳ ಪಗಾರ
ಮಟಮಾಯವಾದಾಗ ಯಾರ ಉದ್ಧಾರ?

## ೨೨೧೯. ಕವಿಯ ಆಯಾಸ

ಸ್ವಲ್ಪ ಮಟ್ಟಿಗೆ ಆದರೂನು ಆಯಾಸ
ಎಲೆ ಕವಿಯೆ, ಸಂಪೂರ್ಣ ಬಿಟ್ಟುಬಿಡು ಪ್ರಾಸ.
ಶ್ವಾಸ ಹೋಗುವ ತನಕ ಮಾಡಿದರೆ ರಚನೆ
ಹೂ ಗುಲಾಬಿಯ ಬದಲು ಆಗುವುದು ಬದನೆ.

## ೨೨೨೦. ಕರ್ಕಶತೆ

ಸವಿ ತಿಂಡಿ ಹೆಚ್ಚಾಗಿ ಮೈಗೆಲ್ಲ ಕಜ್ಜಿ
ಕೋಗಿಲೆಯ ಕಾಲ ಮುಗಿಯಿತು ಈಗ, ಅಜ್ಜಿ,
ಈಗ ಬೇಕಾಗಿಹುದು ಕರ್ಕಶದ ಹಾಡು
ಕಾಗೆಯಿಂದಲೆ ಎಚ್ಚರಾಗುವುದು ನಾಡು.

### ೨೨೨೧. ಸರಕಾರಿ ಬ್ಯಾಂಕು

ಸಹಕಾರಿ ಬ್ಯಾಂಕಿನಲಿ ಪಂಚಕಜ್ಜಾಯ
ತಿಂದವರು ಯಾರ‍್ಯಾರು? ಹೇಳು, ಮಾರಾಯ,
ನನಗೇನು ಗೊತ್ತು? ಎಂದನು ಮಂತ್ರಿವರ್ಯ.
ಎಲ್ಲರೂ ಹೊಗಳೋಣ ತಿಂದವನ ಧೈರ್ಯ.

### ೨೨೨೨. ರಾಮರಾಜ್ಯದ ನಮೂನೆ

ಸಹಕಾರಿ ಬ್ಯಾಂಕಿನಲಿ ಹಣವೆಷ್ಟು ಇತ್ತು?
ಅಧ್ಯಕ್ಷರಿಗೆ ಕೂಡ ಇರಲಿಲ್ಲ ಗೊತ್ತು.
ಒಂದು ದಿನ ಮಟಮಾಯವಾಯಿತು ಖಜಾನೆ
ಇದಕೆನ್ನುವರು ರಾಮರಾಜ್ಯದ ನಮೂನೆ.

### ೨೨೨೩. ನೃತ್ಯ

ಸಹ್ಯಾದ್ರಿ ಕುಣಿದಾಡೆ ಟೊಪ್ಪಿಗೆಯ ತೆಗೆದು
ಚಪ್ಪಾಳೆ ತಟ್ಟಿದವು ವೃಕ್ಷಗಳು ನೆಗೆದು.
ಪ್ರತಿಯೊಂದು ಎಲೆ ಚಿಗುರು ಹೂ ಕಾಯಿ ಹಣ್ಣು
ಸುತ್ತಲೂ ನೋಡಿದವು ಅರಳಿಸುತ ಕಣ್ಣು.

### ೨೨೨೪. ಗೋವೆ

ಸಹ್ಯಾದ್ರಿ ಪರ್ವತದ ನಡುಮಧ್ಯದಲ್ಲಿ
ಬ್ರಹ್ಮದೇವನು ಹಾಕಿದನೆ ರಂಗವಲ್ಲಿ?
ಗಿರಿನಿರ್ಝರದ ರೇಖೆಗಳ ನೀಲಿಯಿಂದ
ರಂಗವಲ್ಲಿಯ ಸೊಬಗು ಮತ್ತಷ್ಟು ಚಂದ.

### ೨೨೨೫. ನನ್ನ ಆಸೆ

ಸಹ್ಯಾದ್ರಿ ಬೆಟ್ಟದಡಿಯಲಿ ದಟ್ಟ ರಂಬೆ.
ಕೊನೆಗಿಲ್ಲಿಗೇ ಬಂದು ಮಲಗಬೇಕೆಂಬೆ.
ಆ ಸಮಯ ಬರುವತನಕ ಕೈ ತುಂಬ ಕೆಲಸ
ಮುಗಿಸಲಿಗೆ ಬೇಕಾಗುವುದು ಬಹಳ ದಿವಸ.

## ೨೨೨೬. ಆದರ್ಶ

ಸಹ್ಯಾದ್ರಿಯಾಗಿರಲಿ ಜೀವನದ ಕನಸು.
ಕಾವೇರಿಯಂತಿರಲಿ ಮಾನವನ ಮನಸು.
ಜೋಗ ಜಲಪಾತವಾಗಲಿ ಗೈವ ಕಾರ್ಯ.
ಯಶ ಗಳಿಸುತಿರಬೇಕು ಕಡಲ ಔದಾರ್ಯ.

## ೨೨೨೭. ಚಕ್ರಬಡ್ಡಿ

ಸಂಕಷ್ಟಗಳು ಬಂದರೂ ಮುಂದೆ ಸಾಗು.
ಎಂದಿಗೂ ಹಾಕಬಾರದು ಯಾವ ಸೋಗು.
ಪೂರ್ಣ ಬತ್ತಲೆಯಾದರೂ ಇಲ್ಲ ಅಡ್ಡಿ.
ಎಂದಿಗೂ ನೀಡಬಾರದು ಚಕ್ರಬಡ್ಡಿ.

## ೨೨೨೮. ಸಂಗೀತದ ಧಾಟಿ

ಸಂಗೀತ ಅಕಾಡೆಮಿಯ ಕಲ್ಯಾಣಿ ರಾಗ
ಹಾಡಿದರೆ ಸಿಗಬಹುದು ದಿಲ್ಲಿಯಲ್ಲಿ ಜಾಗ
ಭೈರವಿಯ ಹಾಡಿದರೆ ಉಂಟೇನು ಸ್ಥಾನ ?
ಚಳುವಳಿಯ ಹೂಡಬಹುದೆಂಬ ಅನುಮಾನ.

## ೨೨೨೯. ಕನಸು

ಸಂಜೆಯಲ್ಲೂ ನನಗೆ ಬೀಳುತಿವೆ ಕನಸು
ಕನಸು ಕಂಡಾಗ ಬಸುರಾಗುತಿದೆ ಮನಸು.
ಈ ಬಸುರಿನಿಂದ ಹೊರ ಬೀಳುತಿವೆ ತತ್ತಿ
ತತ್ತಿ ಒಡೆದಾಗ ಕಲ್ಪನೆಗೆ ಹಸಿ ಬುತ್ತಿ.

## ೨೨೩೦. ಸಂತತಿ ನಿಯಂತ್ರಣ

ಸಂತತಿ ನಿಯಂತ್ರಣದ ಕೆಲಸ ಬಲು ಸಾದಾ
ತವರೂರು ಲೇಸೆಂದು ಕಳಿಸಿಬಿಡಿ ಸೀದಾ
ವಂಕಿ ಧರಿಸುವ ಉಸಾಬರಿ ಇಲ್ಲ ತಾನೆ ?
ಕೈ ಹಿಡಿದ ದಿವಸವೇ ಆಗಲಿ ರವಾನೆ.

೨೨೩೧. ಸಹ್ಯಾದ್ರಿ

ಸಂತೆಯಲಿ ಕಿಕ್ಕಿರಿದು ಜನ ತುಂಬಿದಾಗ
ಉಸಿರಾಡಲಿಕೆ ಇಲ್ಲ ಒಂದಿಷ್ಟು ಜಾಗ.
ಬಯಸುವವನಿಗೆ ತಂಪು ಪರಿಶುದ್ಧ ಗಾಳಿ
ಸಹ್ಯಾದ್ರಿ ಶಿಖರ ನಿಂತಿಹುದು ಮೈತಾಳಿ.

೨೨೩೨. ಮಾರಾಟ

ಸಂತೆಯೊಳಗೊಂದು ಸ್ಥಳ ಸಿಕ್ಕಿದರೆ ಸಾಕು
ಮಾರಬೇಕೆನ್ನುವೆನು ಬೀಡಿ ತಂಬಾಕು.
ಇದುವರೆಗೆ ಮಾರಿದ್ದು ಕವನ ಸಾಹಿತ್ಯ
ಖರ್ಚಾದ ಪ್ರತಿ ಮೂರು! ನಿನ್ನಾಣೆ! ಸತ್ಯ.

೨೨೩೩. ವಿದೇಶಾಂಗ ನೀತಿ

ಸಂತೋಷಗೊಳಿಸಿದರೆ ಮುಗುಳುನಗೆಯಿಂದ
ಎಲ್ಲರೂ ನಮಗೆ ನೆರವಾಗುವರು, ಕಂದ.
ಪ್ರತಿಯೊಂದು ದೇಶವೂ ಭಾರತದ ಬಳಗ
ಒಂದೊಂದು ಕಡೆಯಿಂದ ಒಂದೊಂದು ಕೊಳಗ.

೨೨೩೪. ಸಂಪುಟದ ಗಾತ್ರ

ಸಂಪುಟದ ಗಾತ್ರ ಇಪ್ಪತ್ತೆಂಟು ತಾನೆ?
ಮುಖ್ಯಮಂತ್ರಿಗೆ ಬೇಕು ಈ ಮಹಾಸೇನೆ
ಪ್ರತಿಯೊಂದು ಒಳಗುಂಪಿಗೂ ಸಿಕ್ಕಿ ಕೋಟಾ
ಭದ್ರವಾಯಿತು ಮುಖ್ಯಮಂತ್ರಿಯ ಕಿರೀಟ.

೨೨೩೫. ನ್ಯಾಯಾಂಗ ವಿಚಾರಣೆ

ಸಂಪೂರ್ಣ ಒಳಹೊಕ್ಕು ಮಾಡಿದರೆ ಶೋಧ
ಹೊರಸೂಸುವುದು ಖಚಿತ ನೂತನ ಅಗಾಧ.
ಯಾರ್ಯಾರ ಕಿಸೆಯೊಳಗೆ ಏನೇನು ಬಿತ್ತು
ಎನ್ನುವುದು ಸರಿಯಾಗಿ ಆಗುವುದು ಗೊತ್ತು.

### ೨೨೩೬. ಭತ್ಯ

ಸಂಬಳಕೆ ಮೀರಿ, ಸಖಿ, ಗಳಿಸಿದರು ಭತ್ಯ
ಮಂತ್ರಿಗಳ ಈ ನಡತೆ ಅತ್ಯಂತ ಸ್ತುತ್ಯ
ಈ ಪ್ರಜಾರಾಜ್ಯದಲಿ ಭತ್ಯದ ಮಹತ್ವ
ಶ್ರೇಷ್ಠವೆಂಬುದು ರಾಜಕಾರಣದ ತತ್ವ

### ೨೨೩೭. ಸಂಬಳದ ಹೊರತಾಗಿ

ಸಂಬಳದ ಹೊರತಾಗಿ ಕೈತುಂಬ ಭತ್ಯ
ಇದಕೆನ್ನುವರು ರಾಜಕೀಯ ಸಾಹಿತ್ಯ.
ಮತ್ತೆ ಕಿಸೆಯೊಳಗೆ ಹಾಕಿದ್ದುಂಟು ಬೇರೆ.
ದೇಶಸೇವಕರೆಂದು ಹೊಡೆದರು ನಗಾರೆ.

### ೨೨೩೮. ಸಂಚಾರ ಭತ್ಯ

ಸಂಬಳವು ಕಡಮೆಯಾದರೆ ಬೇಕು ಭತ್ಯ
ಭತ್ಯವೂ ಕಡಮೆಯಾದರೆ ಆತ್ಮಹತ್ಯ.
ಇದನು ತಪ್ಪಿಸಲಿಕ್ಕೆ ನಿತ್ಯ ಸಂಚಾರ
ಬೇಕೆಂಬ ನಿರ್ಣಯಕೆ ಬಂತು ಸರಕಾರ.

### ೨೨೩೯. ಮುಪ್ಪು

ಸಂಸಾರ ಗದ್ದೆಯನು ಪ್ರತಿವರುಷ ಹೂಡಿ
ನನ್ನ ಮೋರೆಗೆ ಬಿದ್ದ ಗೀರುಗಳ ನೋಡಿ
ಪ್ರತಿಯೊಂದು ಗೀರಿನಲಿ ನೆಟ್ಟ ನವ ಧಾನ್ಯ
ಪರಿಪಕ್ವವಾಗಿರಲು ವೃದ್ಧ್ಯಾಪ್ಯ ಧನ್ಯ!

### ೨೨೪೦. ಸಂಸಾರ

ಸಂಸಾರದಿಂದ ಬಿಡುಗಡೆಯಿಲ್ಲ ತಂಗಿ.
ಸಂಸಾರವೆನ್ನುವುದು ಜೀವನದ ಅಂಗಿ.
ಸನ್ಯಾಸಿಯೂ ಪಾಪ ಧರಿಸಿ ಲಂಗೋಟಿ
ಪರಾಗುವುದು ಕಷ್ಟ ಅಂಬುಧಿಯ ದಾಟಿ.

## ೨೨೪೧ ಜೀವನದ ಸಾರ

ಸಂಸಾರದೊಳಗುಂಟು, ಜೀವನದ ಸಾರ
ಸಂಸಾರವೆನ್ನುವುದು ದೊಡ್ಡ ತಲೆಭಾರ.
ಸಂಸಾರವೆನ್ನುವುದು ಸುಖದುಃಖ ತಾನೆ.
ಈ ಹೊತ್ತು ಆನಂದ, ಮರುದಿವಸ ಬೇನೆ.

## ೨೨೪೨. ಹೆಣ್ಣು

ಸಂಸಾರವೆನ್ನುವುದು ಅಕ್ಕರೆಯ ಹೆಣ್ಣು.
ಹೆಣ್ಣು ಮುನಿದರೆ ನಾವು ತಿನಬೇಕು ಮಣ್ಣು.
ಹೆಣ್ಣು ಅಂದರೆ ತಾಯಿ, ಜೀವನದ ತವರು.
ಹೆಣ್ಣು ಮುನಿದಾಗ ಸಂಸಾರದಲಿ ಬೆವರು.

## ೨೨೪೩. ಜೀವನದ ವೀಣೆ

ಸಂಸಾರವೆನ್ನುವುದು ಕತ್ತಲೆಯ ಕೋಣೆ
ಕಾಳಸಂತೆಯ ನಡುವೆ ಜೀವನದ ವೀಣೆ
ಶ್ರೀ ಪುರಂದರ ವಿಠಲ, ನುಡಿಸುವುದು ಹೇಗೆ ?
ಕೂಳಿಗೂ ತತ್ವಾರ ದಿನ ಹೋದ ಹಾಗೆ.

## ೨೨೪೪. ಬಸ್ ಪ್ರಯಾಣ

ಸಂಸಾರವೆನ್ನುವುದು ಬಸ್ಸು ನಿಲ್ದಾಣ
ಬಸ್ಸು ಹತ್ತಿದರೆ ಹೋಗುವುದುಂಟು ಪ್ರಾಣ.
ಮೂವತ್ತು ಸೀಟಿನಲಿ ಅರವತ್ತು ತುಂಬಿ
ಪ್ರಾಣ ಹಿಂಡುವ ತನಕ ಎಪ್ಪತ್ತು ಮಂದಿ.

## ೨೨೪೫. ವೇದಾಂತಿ

ಸಂಸಾರವೆನ್ನುವುದು ಬಸ್ಸು ನಿಲ್ದಾಣ
ಬಸ್ಸು ಹತ್ತಿದರೆ ಹೋಗುವುದುಂಟು ಪ್ರಾಣ.
ಮೂವತ್ತು ಸೀಟಿನಲಿ ಅರವತ್ತು ತುಂಬಿ
ಪ್ರಾಣ ಹಿಂಡುವ ತನಕ ಎಪ್ಪತ್ತು ಮಂದಿ.

## ೨೨೪೬. ಸಂಸಾರ

ಸಂಸಾರವೆನ್ನುವುದು ಸಾಂಬಾರದಂತೆ.
ಸರಿಯಾಗಿ ಅಡಿಗೆ ಮಾಡಿದರಿಲ್ಲ ಚಿಂತೆ.
ಎಲ್ಲವನ್ನೂ ಹಾಕಿ ತಪ್ಪಿದರೆ ಉಪ್ಪು,
ತಾರುಣ್ಯದಲ್ಲಿಯೇ ಬರಬಹುದು ಮುಪ್ಪು.

## ೨೨೪೭. ಸಂಸಾರವೆನ್ನುವುದು

ಸಂಸಾರವೆನ್ನುವುದು ಸುಕ ದುಃಖ, ತಂಗಿ.
ಒಂದು ದಿನ ಹರಿದು ಹೋಗುವುದು ಈ ಅಂಗಿ
ಸಂಸಾರವೆನ್ನುವುದು ಮೂರು ಮೊಳ ಉದ್ದ
ನಿರ್ವಾಣ ಕೊನೆಯೆಂದು ಕಲಿಸಿದನು ಬುದ್ಧ.

## ೨೨೪೮. ಒಂದು ನವ್ಯ ಕಾವ್ಯ

ಸಂಸಾರವೆನ್ನುವುದು ಸೈಕಲ್ ಸವಾರಿ
ಗಂಡ–ಹೆಂಡಿರು ಇದರ ಗಾಲಿಗಳು, ನಾರಿ.
ಗಾಲಿಯೊಳಗಿನ ಕಡ್ಡಿಗಳೆ ಮಕ್ಕಳೆಂಬೆ.
ಈ ತುಟ್ಟಿ ಕಾಲದಲಿ ಕಷ್ಟ! ಜಗದಂಬೆ!

## ೨೨೪೯. ಅಜ್ಜಿ ಹೇಳಿದ್ದು

ಸಂಸಾರ ಹೂಡಿದರೆ ಮಾನವನ ಜನುಮ
ವ್ಯರ್ಥವಾಗುವುದೆಂದು ಹೇಳಿದನು ಹನುಮ.
ಇದಕಾಗಿಯೇ ಹನುಮ ಮನೆಯಿಂದ ಜಾರಿ.
ಹನುಮಂತನಾಗಿಬಿಟ್ಟನು ಮೇಲೆ ಹಾರಿ.

## ೨೨೫೦. ಆಧುನಿಕ ಭಾರತ

ಸಾಕಾಗದಿದ್ದರೂ ಆಹಾರ ಧಾನ್ಯ
ಮಕ್ಕಳಾಗುವ ರೇಟು ಅಲ್ಲ ಸಾಮಾನ್ಯ.
ಬರಗಾಲ ಬಿದ್ದರೂ ಮನೆಯೊಳಗೆ ಪೀಕು
ನಾನು ಹೇಳುವ ಮಾತು ಅಲ್ಲ ಬರಿ ಜೋಕು.

### ೨೨೫೧. ಸಾಕಾಗಲಿಲ್ಲ

ಸಾಕಾಗಲಿಲ್ಲ ಮಂತ್ರಿಗಳು ಐವತ್ತು,
ಹೊಸದಾಗಿ ಬಂದು ಸೇರಿದರು ಮೂವತ್ತು.
ಏರಬೇಕೆನ್ನುವರು ಭರ್ತಿ ನೂರಕ್ಕೆ
ಏರದಿದ್ದಲ್ಲಿ ಶಾಸಕರಲ್ಲಿ ಧಿಕ್ಕೆ.

### ೨೨೫೨. ಸೆಮಿನಾರಗಳು

ಸಾಕಾಯ್ತು ಇವರ ಭಾಷಣ ಕೇಳಿ ಕೇಳಿ.
ಊಟಕ್ಕೆ ಹೋಗೋಣ, ತಡವಾಯ್ತು ಏಳಿ.
ಸೇಕಡಾ ತೊಂಬತ್ತು ಏಳು ಬರಿ ಗ್ಯಾಸು
ವ್ಯರ್ಥವಾಯಿತು ನಮ್ಮ ಏಳೆಂಟು ತಾಸು.

### ೨೨೫೩. ಸಾಕಾಯ್ತು ಜೀವ

ಸಾಕಾಯ್ತು ಸಾಕಾಯ್ತು ಸಾಕಾಯ್ತು ಜೀವ
ಇನ್ನೆಷ್ಟು ವರುಷ ಬದುಕಲಿ ನಾನು ದೇವ ?
ನನಗೆ ಹಿಡಿಯುವ ಮೊದಲೆ ಯಾವುದೂ ರೋಗ
ನಿನ್ನ ಸನ್ನಿಧಿಯಲ್ಲಿ ಕರೆದುಬಿಡು ಬೇಗ.

### ೨೨೫೪. ಕಟು ಸತ್ಯ

ಸಾಕಿನ್ನು ಮಧುಮಧುರ ಮಾತುಗಳ ನೃತ್ಯ.
ಕಾವ್ಯದೊಳಗಿರಲಿ ಜೀವನದ ಕಟು ಸತ್ಯ.
ಸತ್ಯ ಕಹಿಯಾದಷ್ಟು ಕುಡಿಯಲಿಕೆ ಲೇಸು
ದೇವರಿಗೆ ಕೂಡ ಕೊಡಬಹುದು ನೋಟೀಸು.

### ೨೨೫೫. ಕಡಲ ತಡಿಯ ಚಿಪ್ಪು

ಸಾಗರನ ಹೆಡೆಯೊಳಗೆ ಧಾರುಣಿಯ ಉಪ್ಪು
ಜಿಗಿಜಿಗಿದು ನೆಗೆದಾಡಿ ಕೊನೆಗಾಯ್ತು ಚಿಪ್ಪು.
ಈ ಚಿಪ್ಪಿನೊಳಗುಂಟು ತ್ರಿಭುವನದ ಹೆಂಡ
ತಲೆಗೇರಿದರೆ, ಮಗನೆ, ಅಖಿಲ ಬ್ರಹ್ಮಾಂಡ.

## ೨೨೫೬. ಸಾಗರನಿಗೆ

ಸಾಗರನೆ, ನೀ ಮಹಾ ದೊಡ್ಡವನು ಎಂದು
ಕವಿ  ಹಾಡಿದರೆ, ಅವನ ನಾಲಗೆಗೆ ಕುಂದು
ದೊಡ್ಡವರಿಗೂ ಉಂಟು ಏರಿಳಿತ ದಿನಕೂ
ನಿನಗೂ ನನಗೂ, ಕಡಲೆ, ಏನಿಲ್ಲ ಫರಕು.

## ೨೨೫೭. ಸನ್ಯಾಸಿ

ಸಾಧುಗಳಿಗಿಂತಲೂ ಸಂಸಾರಿ ಲೇಸು
ಸಾಧುವರ್ಯನಿಗೆ ಸಂಸಾರಿ ಲೇಸು
ಸನ್ಯಾಸಿಯಿಂದ ಮನುಕುಲಕಿಲ್ಲ ಮುಂದು
ಜೀವವಿದ್ದಾಗಲೇ ಹೋಗುವನು ಬೆಂದು.

## ೨೨೫೮. ರಾಜಕೀಯ ಗೊತ್ತುವಳಿ

ಸ್ನಾನಕ್ಕೆ ನಿಂತಾಗ ಬಿಸಿ ಬಿಸಿ ಠರಾವು.
ಊಟಕ್ಕೆ ಕುಳಿತಾಗ ಆರುವುದು ಕಾವು
ಸಿಗದಿದ್ದರೂ ಕೊನೆಗೆ ಹುಳಿ ಸಾರು ಅನ್ನ
ವೇದಿಕೆಯ ಮೇಲೆ ಭಾಷಣದ ಮೃಷ್ಟಾನ್ನ.

## ೨೨೫೯. ಪೋಷಾಕು

ಸಾಮಾನ್ಯ ಜನರಂತೆ ಇರಲಿ ಪೋಷಾಕು
ನನಗೇಕೆ ಬಿಳಿ ಖಾದಿ ಬಟ್ಟೆಯ ಧಿಮಾಕು ?
ದೇಶಭಕ್ತನ ಜೊತೆಗೆ ಕಳ್ಳ ಬಾಜಾರಿ
ಬಿಳಿಯಂಗಿ ಧರಿಸಿ ಆದನು ವೇಷಧಾರಿ.

## ೨೨೬೦. ದಾಸಾಳ

ಸಾಮಾನ್ಯ ಜನರಂತೆ ದಾಸಾಳ ಹೂವು.
ಬೇರು ನೋವಾದರೂ ಅದಕಿಲ್ಲ ಸಾವು.
ರಂಬೆಯನು ನೆಟ್ಟರೂ ಅರಳುವುದು ಮೊಗ್ಗು
ರಂಭೆಯೊಬ್ಬಳ ಬಿಟ್ಟು ಎಲ್ಲರಿಗೂ ಹಿಗ್ಗು.

## ೨೨೬೧. ಪ್ರಜಾಸತ್ತೆಯ ಸ್ವರೂಪ

ಸಾಮಾನ್ಯ ಜನರ ಪಾಲಿಗೆ ಲೋಕಸತ್ತೆ
ಬ್ರಾಹ್ಮಣರ ಮನೆಯೊಳಗೆ ಇದ್ದಂತೆ ಅತ್ತೆ.
ಅಡಿಗೆ ಮಾಡುವ ಕೆಲಸ ಸೊಸೆಯರಿಗೆ ಕೊಟ್ಟು
ಬಡಿಸಲಿಕೆ ಮಾತ್ರ ಬರುವಳು ಮಡಿಯನುಟ್ಟು.

## ೨೨೬೨. ತಹಸೀಲುದಾರ

ಸಾಮಾನ್ಯನಲ್ಲ ಈ ತಹಸೀಲುದಾರ.
ಎಂದಿಗೂ ಭರ್ತಿ ಈತನ ಫಲಾಹಾರ.
ನಮ್ಮ ಈ ರಾಜ್ಯಕ್ಕೆ ಈ ಇಸಮು ಯೋಗ್ಯ
ಸರಿಯಾಗಿ ಉದಯ ಹೊಂದಿದೆ ಜನರ ಭಾಗ್ಯ.

## ೨೨೬೩. ಸರಕಾರಿ ಕೆಲಸ

ಸಾಮಾನ್ಯವಲ್ಲ, ಸಖಿ, ಕೆಲಸ ಸರಕಾರಿ
ಸರಿಯಾಗಿ ಬೇಯಿಸದ ಹಾಗೆ ತರಕಾರಿ
ಹೀಗಾಗಿ ಜೀರ್ಣವಾಗುವುದು ತುಸು ಕಷ್ಟ
ಸದ್ಯ ಅತಿಯಾಗಿಬಿಟ್ಟಿದೆ ಈ ಅರಿಷ್ಟ.

## ೨೨೬೪. ಇಂದಿನ ಭಾರತ

ಸಾಮಾನ್ಯ ಪುರುಷನಿಗೆ ಜೀವನದ ಕುಸ್ತಿ.
ರಾಜಕಾರಣಿಗಳಿಗೆ ಕಿಸೆ ತುಂಬ ಆಸ್ತಿ.
ಲಕ್ಷಾಧಿಪತಿಗಳಿಗೆ ಕೋಟಿ ಉತ್ಪನ್ನ.
ಜನಕೋಟಿಗಳಿಗಿಲ್ಲ ಒಪ್ಪತ್ತು ಅನ್ನ.

## ೨೨೬೫. ಇವನೊಂದು ರತ್ನ

ಸಾಮಾನ್ಯನಲ್ಲ, ಸಖಿ, ಇವನೊಂದು ರತ್ನ
ಸಫಲವಾಯಿತು ಕೊನೆಗೆ ಈತನ ಪ್ರಯತ್ನ.
ಇಲ್ಲಿಂದ ಅಲ್ಲಿ ಹಾರಿದ ಬಳಿಕ ಗೆದ್ದ.
ಮತ್ತೆ ನುಂಗುವ ವಿಷಯದಲ್ಲಿ ಮೇಲೆದ್ದ.

## ೨೨೬೬. ಈತನ ಹೆಸರು

ಸಾಮಾನ್ಯನಲ್ಲ, ಈತನ ಹೆಸರು ರಾಜಾ
ಈ ತರದ ಹೆಸರು ಇರುವುದು ಬಹಳ ಸಾಜಾ.
ರಾಜನಿರದಿದ್ದರೂ ಈ ದೇಶದೊಳಗೆ
ಹೆಸರಾದರೂ ಇರಲಿ ಕೆಲವು ಮನೆಯೊಳಗೆ.

## ೨೨೬೭. ತಾಲ್ಲೂಕು ಬೋರ್ಡು

ಸಾಮಾನ್ಯವಲ್ಲ ಈ ತಾಲ್ಲೂಕು ಬೋರ್ಡು
ಇದರ ವರಮಾನ ರೂಪಾಯಿ ಹನ್ನೆರಡು
ನೌಕರರ ಸಂಬಳಕೆ ಹೋಯ್ತು ಒಂಭತ್ತು.
ಉಳಿದದ್ದು ಯಾರ ಕಿಸೆಯಲಿ ಹೋಗಿಬಿತ್ತು ?

## ೨೨೬೮. ವಿದ್ಯಾ ಇಲಾಖೆ

ಸಾಮಾನ್ಯವಲ್ಲ ಈ ವಿದ್ಯಾ ಇಲಾಖೆ
ಸರಕಾರವೆಂಬ ಆಲದ ಮರದ ಶಾಖೆ.
ಒಂದು ಟೊಂಗೆಗೆ ಒಬ್ಬ ಮುಖ್ಯಾಧಿಕಾರಿ
ಎರಡು ಎಲೆಗಳ ನಡುವೆ ಈತನ ಕಛೇರಿ.

## ೨೨೬೯. ಫಲದ್ರೂಪತೆ

ಸಾಮಾನ್ಯವಲ್ಲ ಕರ್ನಾಟಕದ ಮಣ್ಣು
ಗಂಡು ಕೂಸೂ ಆಗಬಹುದಿಲ್ಲಿ ಹೆಣ್ಣು!
ಹೀಗೆಂದು ಮರೆಯಾಯ್ತು ಎಲ್ಲಮ್ಮನ ದೆವ್ವ
ಎಚ್ಚರಾಗಲು ಮನೆಯ ಮುಂದೆ ಜೋಗವ್ವ.

## ೨೨೭೦. ಆಧುನಿಕ ಕಾಲ

ಸಾಮಾನ್ಯವಲ್ಲ, ಮಗು, ಆಧುನಿಕ ಕಾಲ
ನಮಗುಂಟು ವಿಜ್ಞಾನ ಯುಗದ ಅನುಕೂಲ
ಹಸಿವೆಯಾದರೆ ಉಂಟು ಸೋಷಾಲಿಜಮ್ಮು
ಬೇಸರಾದರೆ ಉಂಟು ಬಾಂಬು ಆಟಮ್ಮು.

## ೨೨೭೧. ಮಾವೊ ಹೇಳಿದ್ದು

ಸಾಮಾನ್ಯವಲ್ಲ, ಮಗು, ನನ್ನ ಪೇಕಿಂಗು.
ಇಲ್ಲಿ ಜೇನ್ನೊಣಕಿಲ್ಲ ಹೂವುಗಳ ಹಂಗು.
ಮತ್ತೆ ಪಾತರಗಿತ್ತಿಗಳಿಗಿಲ್ಲ ಜಾಗ.
ಪ್ರತಿಯೊಂದು ಬಕಪಕ್ಷಿ ಹಾಕುತಿದೆ ಲಾಗ.

## ೨೨೭೨. ಅಧಿಕಾರಿಗಳ ಗಳಿಕೆ

ಸಾಮಾನ್ಯವಲ್ಲ ಲೈಸನ್ಸು–ಪರ್ಮಿಟ್ಟು
ಅಧಿಕಾರಿಗಳು ಗಳಿಸಿದರು ನೂರು ಪಟ್ಟು
ಆಡಳಿತ ಪಕ್ಷದವರಿಗೆ ಭರ್ತಿ ಫಂಡು.
ಲೋಕಶಾಹಿಗೆ ಪಾಪ ಹಾಕಿದರು ಗುಂಡು.

## ೨೨೭೩. ಇದು ಪರ್ವಕಾಲ

ಸಾಮಾನ್ಯವಲ್ಲ, ಸಖಿ, ಇದು ಪರ್ವಕಾಲ.
ಈ ಕಾಲದಲ್ಲಿ ಜನಿಸಿದ್ದು ಅನುಕೂಲ.
ತುಟ್ಟಿತನ ಹೆಚ್ಚಾದರೂ ನಾವು ಗಟ್ಟಿ.
ಚಂದ್ರಲೋಕಕ್ಕೆ ಹಾರಿದೆವು ಬುತ್ತಿ ಕಟ್ಟಿ.

## ೨೨೭೪. ಇವರ ಪ್ರಖ್ಯಾತಿ

ಸಾಮಾನ್ಯವಲ್ಲ, ಸಖಿ, ಇವರ ಪ್ರಖ್ಯಾತಿ
ಜೇಬು ಬಿಸಿ ಮಾಡಿದರು ಬದಿಗಿರಿಸಿ ನೀತಿ
ನಿಮಗೆ ನೀತಿಯ ಹುಚ್ಚು, ಅವರು ಹಾಗಲ್ಲ
ಸಿಕ್ಕಿದೆಡೆ ಇರುವೆಯೂ ತಿನ್ನುವುದು ಬೆಲ್ಲ.

## ೨೨೭೫. ಹಿಡಿಕೊಚ್ಚು

ಸಾಮಾನ್ಯವಲ್ಲ, ಸಖಿ, ಇವಳ ಹಿಡಿಕೊಚ್ಚು.
ಕೆಳಗಿಳಿಯುವುದು, ನೆತ್ತಿಗೇರಿದರೆ ಹುಚ್ಚು.
ಹಿಡಿಕೊಚ್ಚಿನಿಂದಲೇ ತೆಗೆಯುವಳು ದೆವ್ವ.
ಇವಳ್ಯಾರು ಗೊತ್ತೆ? ಚೌಪದಿಯ ಚುಟಕವ್ವ.

## ೨೨೭೬. ಕಾರವಾರದ ಸೌಂದರ್ಯ

ಸಾಮಾನ್ಯವಲ್ಲ, ಸಖಿ, ಈ ಕಾರವಾರ
ಕಡಲ ತೀರದ ಶೋಭೆ ಅನುಪಮ ಅಪಾರ.
ಈ ಶೋಭೆಯೊಳಗುಂಟು ಇನ್ನೊಂದು ಮೋಜು,
ಕಡಲ ದಂಡೆಯ ಮೇಲೆ ಮನುಜನ ಗಲೀಜು.

## ೨೨೭೭. ಈ ಚುಚ್ಚು ಬಾಣ

ಸಾಮಾನ್ಯವಲ್ಲ, ಸಖಿ, ಈ ಚುಚ್ಚುಬಾಣ
ಕಚ್ಚಿದರೆ ಅರೆಗಳಿಗೆಯಲ್ಲಿ ನಿತ್ರಾಣ
ಕಚ್ಚದಿದ್ದರೆ, ಶಬ್ದಗಳ ದುರುಪಯೋಗ
ಬಾಣ ಹೂಡಿದ ಕವಿಗೆ ಹಿಡಿಯುವುದು ರೋಗ.

## ೨೨೭೮. ಈ ಪರ್ವಕಾಲ

ಸಾಮಾನ್ಯವಲ್ಲ, ಸಖಿ, ಈ ಪರ್ವಕಾಲ
ಪ್ರಖ್ಯಾತವಾಗಿಬಿಟ್ಟಿದೆ ಗೋಣಿಚೀಲ.
ಈ ಚೀಲದಲಿ ಸೆಟ್ಟಿ ಹಿತ್ತಾಳಿ ತುಂಬಿ,
ಬಂಗಾರ ಮಾಡುವನು ದೇವರನು ನಂಬಿ.

## ೨೨೭೯. ರಾಜಕಾರಣದಲ್ಲಿ

ಸಾಮಾನ್ಯವಲ್ಲ, ಸಖಿ, ಈ ಪರ್ವಕಾಲ
ರಾಜಕಾರಣದಲ್ಲಿ ವಿಜಯಿ ಮಾರ್ಜಾಲ.
ಸ್ವಾತಂತ್ರ್ಯಕ್ಕಾಗಿ ಹೋರಾಡಿದರು ಕೂಡಾ
ಹುಲಿ ಸಿಂಹಗಳು ಈಗ್ಗೆ ಯಾರಿಗೂ ಬೇಡ.

## ೨೨೮೦. ಪಾಂಡುವಿನ ಕತೆ

ಸಾಮಾನ್ಯನಲ್ಲ, ಸಖಿ, ಈ ಪಾಂಡುರಂಗ.
ಇವನು ಏರಿದ ಶಿಖರ ಬಹಳ ಉತ್ತುಂಗ.
ಸಣ್ಣ ನೌಕರಿ ಇದ್ದರೂ ಲಕ್ಷಗಟ್ಲೆ
ನೂರು ಮೊಳ ಉದ್ದವಾಯಿತು ಇವನ ಪೊಟ್ಲೆ.

### ೨೨೮೧. ಮಧುರ ಗಾನ

ಸಾಮಾನ್ಯವಲ್ಲ, ಸಖಿ, ಈ ಮಧುರಗಾನ
ಮೂರು ಮೊಳ ಉದ್ದವಾಯಿತು ಇವನ ತಾನ.
ಆಮೇಲೆ ಕುಣಿತ ಶುರುವಾಗಿ ತಕಧಿನ್ನ
ಮನೆಗೆ ಮರಳಿದ ಬಳಿಕ ಸಿಗಲಿಲ್ಲ ಅನ್ನ.

### ೨೨೮೨. ವಿಶ್ವಸಂಘದಲ್ಲಿ

ಸಾಮಾನ್ಯವಲ್ಲ, ಸಖಿ, ಈ ವಿಶ್ವಸಂಘ
ಎರಡು ಬದಿಯಿಂದ ಬಾರಿಸಿದರು ಮೃದಂಗ.
ವಾದ್ಯ ಜೋರಾದೊಡನೆ ತಲೆಗೇರಿ ಕಾವು
ವ್ಯರ್ಥವಾಯಿತು ಪಾಸು ಮಾಡಿದ ಠರಾವು.

### ೨೨೮೩. ಕವಿಯ ಸಾಮ್ರಾಜ್ಯ

ಸಾಮಾನ್ಯವಲ್ಲ, ಸಖಿ, ಕವಿಯ ಸಾಮ್ರಾಜ್ಯ
ಅರೆಹೊಟ್ಟೆ ತೆಗೆದುಕೊಂಡಿದೆ ಇದರ ಕಬ್ಜಾ
ಕವಿಯ ಮಡದಿಗೆ ಕೂಡ ಸಾಕಷ್ಟು ಸಿಗದು
ಕವಿತೆಗಳ ಹಾಳೆಗಳೆ ಕಬ್ಬಿಗನ ನಗದು.

### ೨೨೮೪. ನಮ್ಮೂರ ರಾಮು

ಸಾಮಾನ್ಯನಲ್ಲ, ಸಖಿ, ನಮ್ಮೂರ ರಾಮು
ಬಾಯಿಂದ ಮಾತಾಡಾವುದು ದೊಡ್ಡ ಸ್ಕೀಮು.
ಆಮೇಲೆ ನೋಡಿದರೆ ಎಲ್ಲವೂ ಶೂನ್ಯ
ಈ ಪ್ರಜಾರಾಜ್ಯದಲಿ ಇಂಥವರೆ ಧನ್ಯ.

### ೨೨೮೫. ನಮ್ಮ ಶತಮಾನ

ಸಾಮಾನ್ಯವಲ್ಲ, ಸಖಿ, ನಮ್ಮ ಶತಮಾನ.
ಚಂದ್ರಲೋಕಕೆ ಹೋಯ್ತು ನೂತನ ವಿಮಾನ.
ಆಮೇಲೆ ಪಾತಾಳಕಿಳಿಯುವುದು ಉಂಟು.
ಹೊಸ ಬಗೆಯ ಆಟಮ್ಮು ಬೀಳುವುದು ಗಂಟು.

## ೨೨೮೬. ಮಕ್ಕಳ ಸಮಸ್ಯೆ

ಸಾಮಾನ್ಯವಲ್ಲ, ಸಖಿ, ಮಕ್ಕಳ ಸಮಸ್ಯೆ.
ಇನ್ನೆರಡು ಹುಟ್ಟಿದರೆ ಪೂರ್ಣ ಅಮಾವಸ್ಯೆ.
ಬೆಳದಿಂಗಳಲಿ ಕಂಡ ಭಾವನಾ ಲೋಕ
ಪ್ರತಿವರುಷ ಮರಿ ಹಾಕಿ ಆಯ್ತು ಅವಿವೇಕ.

## ೨೨೮೭. ನೆರೆಮನೆಯ ಹುಡುಗಿ

ಸಾಮಾನ್ಯಳಲ್ಲ, ಸಖಿ, ನೆರೆಯಮನೆಯ ಹುಡುಗಿ,
ಆಗಾಗ್ಗೆ ಮೂಲೆಯಲ್ಲಿ ಕೂಡ್ರುವಳು ಗುಡುಗಿ
ಮದುವೆಯಾಗಲು ಪಾಪ ಗಂಡನ ಫಜೀತಿ
ಪ್ರತಿದಿವಸವೂ ಗುಡುಗು ಸಿಡಿಲುಗಳ ಭೀತಿ.

## ೨೨೮೮. ತಾಯಿಯ ಹರಕೆ

ಸಾಲೆ ಕಾಲೇಜುಗಳ ಸಂಖ್ಯೆ ಹದಿನೆಂಟು
ಇದಕ್ಕೆನ್ನುವರು ಜನರು ದಿನಕರನ ಗಂಟು.
ಈ ಗಂಟಿನೊಳಗುಂಟು ಮಕ್ಕಳ ಮಿಠಾಯಿ.
ಹೀಗೆಂದು ಮುದದಿಂದ ಹರಸಿದಳು ತಾಯಿ.

## ೨೨೮೯. ಸಾಮ್ರಾಜ್ಯ

ಸಾಮ್ರಾಜ್ಯ ದೊಳ್ಳು ಹೊಟ್ಟೆಯ ಹಾಗೆ ದೊಡ್ಡ
ದೊಡ್ಡದಾದರು ಶಕ್ತಿಯಲಿ ಬಹಳ ಗಿಡ್ಡ.
ಸಾಮ್ರಾಜ್ಯವೆನ್ನುವುದು ಮೈತುಂಬ ಕಜ್ಜಿ
ಅಹುದೆಂದು ತಲೆದೂಗಿದಳು ನಮ್ಮ ಅಜ್ಜಿ.

## ೨೨೯೦. ಸಾಯಿಬಾಬಾನ ಪೂಜೆ

ಸಾಯಿಬಾಬಾನ ಪೂಜೆ ಮಾಡಿದರೆ ನಿತ್ಯ
ಸುಳ್ಳು ಮಾತಾಡಿದರೆ ಆಗುವುದು ಸತ್ಯ.
ಪ್ರತಿಯೊಂದು ಪಾಪವು ಆಗುವುದು ಬೂದಿ
ಈ ಬೂದಿಯೇ ಕೊನೆಗೆ ಭಸ್ಮದ ಬುನಾದಿ.

## ೨೨೯೧. ಸ್ವಾತಂತ್ರ್ಯ ದಿನಕೆ

ಸ್ವಾತಂತ್ರ್ಯ ದಿನಕೆ ಭಾರತಕೆ ಜಯವೆನ್ನು
ಆಮೇಲೆ ಮರುದಿವಸ ಸಾಕಷ್ಟು ತಿನ್ನು.
ತಿಂದುದೆಲ್ಲಾ ಕರಗಿ ಆಗುವುದು ಜೀರ್ಣ
ಮತ್ತೆ ಭಾರತ ಆಗಬಹುದು ಪರಿಪೂರ್ಣ.

## ೨೨೯೨. ಸ್ವಾತಂತ್ರ್ಯ ದಿನ

ಸ್ವಾತಂತ್ರ್ಯ ದಿನದಂದು ಅಲ್ಲಲ್ಲಿ ವಾದ್ಯ
ಮತ್ತೆ ಹತ್ತೂ ಕಡೆಗೆ ಹಂಚಿದರು ಖಾದ್ಯ
ಮರುದಿವಸ ಸಕ್ಕರೆಗೆ ಬಂತು ಬರಗಾಲ
ನಿಂತಿತ್ತು ಆಕಾಶಕೇರಿ ಆಹಾರ.

## ೨೨೯೩. ಸಮರ್ಪಕ ಉತ್ತರ

ಸ್ವಾತಂತ್ರ್ಯ ಬಂದರೂ ಅರೆಹೊಟ್ಟೆ ಅನ್ನ!
ಇದರ ಕಾರಣವೇನು? ಸ್ವಲ್ಪ ಹೇಳಣ್ಣ,
ಸ್ವಾತಂತ್ರ್ಯ ಬಂದಿಹುದು ಅಖಿಲ ದೇಶಕ್ಕೆ
ಪ್ರತಿಯೊಬ್ಬನಿಗೆ ಅಲ್ಲ ಭರ್ತಿ ಉಣಲಿಕ್ಕೆ

## ೨೨೯೪. ಸತ್ಯ ಮತ್ತು ನೃತ್ಯ

ಸ್ವಾತಂತ್ರ್ಯ ಸಂಗ್ರಾಮದೊಳಗಿತ್ತು ಜ್ವಾಲೆ
ಈಗ ಜ್ವಾಲೆಯ ಬದಲು ಕೊರಳ ಹೂಮಾಲೆ.
ತಾಯ್ನಾಡ ಹೋರಾಟದೊಳಗಿತ್ತು ಸತ್ಯ.
ಈಗ ಸತ್ಯದ ಬದಲು ತರತರದ ನೃತ್ಯ.

## ೨೨೯೫. ನಾಯಿ

ಸ್ವಾಮಿಭಕ್ತಿಗೆ ನಾಯಿ ಆದರ್ಶಪ್ರಾಯ
ಈ ವಿಷಯದಲಿ ಮಾನವನ ನಡತೆ ಹೇಯ
ಕುತ್ತಿಗೆಯ ಕೊಯ್ದು ಪಕ್ಷಾಂತರವ ಗೈದು
ಮಂತ್ರಿಯಾಗದು ನಾಯಿ ಸ್ವಾಮಿಯನು ಬೈದು.

### ೨೨೯೬. ಸಾಹಿತ್ಯ ಸಮ್ಮೇಳನದ ಉದ್ಘಾಟನೆ

ಸಾಹಿತ್ಯಗಿಂತ ಉದ್ಘಾಟನೆಯೆ ಮುಖ್ಯ
ನಮಗೆ ಬೇಕಾದದ್ದು ಮಂತ್ರಿಗಳ ಸಖ್ಯ.
ಮಂತ್ರಿಗಳ ಕೈಯಿಂದ ನಡೆದದ್ದರಿಂದ
ಕನ್ನಡಾಂಬೆಗೆ ಯಾವ ಭೀತಿಯಿಲ್ಲೆಂದ.

### ೨೨೯೭. ಒಂದು ಮೋಜು

ಸಾಹಿತ್ಯಲೋಕದಲ್ಲಿ ಇದು ಒಂದು ಮೋಜು :
ಈಗ್ಗೆ ತಿಳಿಯುವುದಿಲ್ಲ ಬೆಲೆಯ ಅಂದಾಜು.
ಒಂದು ಶತಮಾನ ಬಚ್ಚಿಡು ಕವಿಯ ಪೆನ್ನು
ಆಮೇಲೆ ಆಗಬಹುದೇ ನೋಡು ಹೊನ್ನು.

### ೨೨೯೮. ಸಾಹಿತ್ಯದಲ್ಲಿ ಕ್ರಾಂತಿ

ಸಾಹಿತ್ಯ ಲೋಕದಲ್ಲಿ ಹೂಡುವೆನು ಕ್ರಾಂತಿ
ಎಂದು ಹೊರಟರೆ ಹಾಸಿಗೆಯ ಮೇಲೆ ವಾಂತಿ.
ಹಳೆ ಸಂಪ್ರದಾಯಕೆ ಹಾಕಿ ಹೊಸ ಮಣ್ಣು
ಕೃಷಿ ಮಾಡಿದರೆ ಮಾತ್ರ ರಸಬಾಳೆ ಹಣ್ಣು.

### ೨೨೯೯. ಪ್ರಜಾರಾಜ್ಯದ ಕಲಾವಿಕಾಸ

ಸಾಹಿತ್ಯ ಸಂಗೀತ ನೃತ್ಯ ಮುಂತಾದ್ದು
ಮಾಡತೊಡಗಲಿ ಮಗನೆ, ಆದಷ್ಟು ಸದ್ದು.
ಮೂರು ತಿಂಗಳಿಗೊಮ್ಮೆ ಬೇಕು ಪರಿಷತ್ತು
ಅಂದರೇನೇ ಮೈಗೆ ಪೂರ್ಣ ತಾಕತ್ತು

### ೨೩೦೦. ಶರಾವತಿಯ ಸೋರುಗುಂಡಿ

ಸಾಹುಕಾರನ ಜೊತೆಗೆ ಸರಕಾರ ಕೂತು,
ಇಣುಕಿ ನೋಡಲು ಶರಾವತಿ ನದಿಗೆ ತೂತು !
ಈ ತೂತಿನೊಳಗಿಂದ ನೀರೆಲ್ಲ ಸೋರಿ
ಪಾತಾಳ ಒದ್ದೆಯಾಯಿತು ! ಕೇಳು, ನಾರಿ.

### ೨೩೦೧. ವರ್ತಕನ ಅನುಭವ

ಸಾಹೇಬರಿಗೆ ಮೊದಲು ಕೊಡಬೇಕು ಭಕ್ಷ್ಯ
ಆಮೇಲೆ ಉಳಿದ ದೇವರ ಕಡೆಗೆ ಲಕ್ಷ್ಯ
ಈ ರೀತಿ ಹಂಚಿದ್ದರೆ ತಿಂಡಿತೀರ್ಥ
ಕೈಕೊಂಡ ವ್ಯವಹಾರದೊಳಿಗಿಲ್ಲ ಅರ್ಥ.

### ೨೩೦೨. ಸಿಕ್ಕುಬಿದ್ದನು

ಸಿಕ್ಕುಬಿದ್ದನು ಇವನು ತಿನುವಾಗ ಲಂಚ.
ಜಾಗರೂಕತೆ ವಹಿಸಬೇಕಿತ್ತು ಕೊಂಚ
ಯಾವುದಕ್ಕೂ ಬುದ್ಧಿ ಬೇಕಲ್ವೆ, ಸ್ವಾಮಿ ?
ಲಂಚ ತಿನುವುದು ಹೇಗೆ ದಡ್ಡ ಆಸಾಮಿ ?

### ೨೩೦೩. ಸಿಗರೇಟಿನ ಮಹಾತ್ಮೆ

ಸಿಗರೇಟು ಸೇದಿದರೆ ಹೊಗೆಯೊಳಗೆ ಕವನ
ಭಾವನೆಯ ಲಹರಿಯಲಿ ಆನಂದ ಭವನ.
ಈ ಸೌಖ್ಯ ಸಾಮ್ರಾಜ್ಯ ನನಗಿಲ್ಲ ಲೇಡಿ.
ಇದಕೆ ಕಾರಣ ನಾನು ಸೇದುವುದು ಬೀಡಿ.

### ೨೩೦೪. ಸಿಟ್ಟು ಬಂದರೆ

ಸಿಟ್ಟು ಬಂದರೆ ನಾನು ಕೆಟ್ಟವನು ಬಹಳ.
ಕಟು ವಿಡಂಬನೆ ಬರೆದು ಹಾಕುವೆನು ಕವಳ.
ಈ ವಿಡಂಬನೆಯಿಂದ ಮಾಡುವೆನು ಹಿಟ್ಟು.
ಇದಕೆನ್ನುವರು ಜನರು ದಿನಕರನ ಸಿಟ್ಟು.

### ೨೩೦೫. ಯೋಜನೆಯ ಕರಡು

ಸಿದ್ಧವಾಗಿದೆ ಪಂಚವಾರ್ಷಿಕದ ಕರಡು,
ಈ ಕರಡು ಎನ್ನುವುದು ಬರಿ ಖಾಲಿ ಬರಡು.
ಸರಕಾರಿ ಬೊಕ್ಕಸಕೆ ಹತ್ತಿರುವ ಒರಲೆ
ಹೋದ ಹೊರತು ದುಡ್ಡು ಎಲ್ಲಿಂದ ತರಲೆ ?

## ೨೩೦೬. ಸಿಂಗಾರ

ಸಿಂಗಾರದೊಳಗುಂಟು ಬಾಳ ಬಂಗಾರ.
ಸಿಂಗಾರದೊಳಗುಂಟು ಜೀವನದ ಸಾರ.
ಸಿಂಗಾರ ಅರಿಯದಿದ್ದಾಗ ಅಂಗಾರ.
ಸಿಂಗಾರ ತೀರಿದರೆ ಜೀವನವೆ ಭಾರ.

## ೨೩೦೭. ಯುಗಾದಿಯ ಭವಿಷ್ಯ

ಸಿಂಹರಾಶಿಗೆ ಮೇಷದಿಂದ ಅಭಿವೃದ್ಧಿ
ಮಿಥುನಕ್ಕೆ ಪ್ರತಿವರುಷ ಸಂತಾನ ಸಿದ್ಧಿ
ಪಾಪ ! ಕನ್ಯಾರಾಶಿಗಳಿಗಿಲ್ಲ ಚಿನ್ನ.
ಕುಂಭರಾಶಿಗೆ ಸಿಗದು ಸಾಕಷ್ಟು ಅನ್ನ.

## ೨೩೦೮. ಸಹಕಾರಿ ಕೃಷಿ ವಿಕಾಸ

ಸೀಮೆ ಗೊಬ್ಬರ ಹಾಕಿದರು ಹತ್ತು ಬುಟ್ಟಿ
ಆದರೂ ಬೀಜಗಳು ಬರಲಿಲ್ಲ ಹುಟ್ಟಿ!
ಈ ಪರಿಸ್ಥಿತಿಗೆ ಕಾರಣವೇನು, ಹೇಳು ?
ಬಿತ್ತಲಿಕೆ ತಂದದ್ದು ಸರಕಾರಿ ಕಾಳು.

## ೨೩೦೯. ಆದರಾತಿಥ್ಯ

ಸ್ವೀಕರಿಸಿ ಜಾನಕಿಯ ಆದರಾತಿಥ್ಯ
ಏಳೆಂಟು ದಿನ ಮಾಡಬೇಕಾಯ್ತು ಪಥ್ಯ
ಈ ಹಾಳು ನಾಲಗೆಗೆ ಕೆಟ್ಟ ಅಭ್ಯಾಸ
ಏಳೆಂಟು ದಿನ ಇಡೀ ದೇಹಕ್ಕೆ ತ್ರಾಸ.

## ೨೩೧೦. ಪಂಚವಾರ್ಷಿಕ ಹೆದ್ದಾರಿ

ಸಂಗಮವಾಗಿದೆ ನಾವು ಹಿಡಿದ ಹೆದ್ದಾರಿ
ಪಂಚವಾರ್ಷಿಕದಿಂದ ಬೆಲೆಗಳು ದುಬಾರಿ
ಪ್ರತಿಯೊಂದು ಒಡುವೆಗೂ ಮಾರಾಟ ತೆರಿಗೆ
ಅಪವಾದವಾಗಿ ಉಳಿದದ್ದು ಕಸಬರಿಗೆ.

## ೨೩೧೧. ನನ್ನ ಸಂಕಲ್ಪ

ಸುಟ್ಟುಹೋಯಿತು ಸುತ್ತಮುತ್ತಲಿನ ಹುಲ್ಲು
ನಾನೊಬ್ಬನೇ ಉಳಿದೆ, ನಾನೊಂದು ಕಲ್ಲು.
ಈ ಕಲ್ಲಿನಿಂದಲೇ ಹಾಕಿದರೆ ಪಾಯ
ದೇಗುಲವು ನಿಲ್ಲುವುದು ನನ್ನ ತರುವಾಯ.

## ೨೩೧೨. ಸ್ವಾನುಭವ

ಸುತ್ತಮುತ್ತಲು ನಡೆದ ಸಂಗತಿಯೆನೆಲ್ಲಾ
ಗಾಣದಲಿ ಹಿಂಡಿ ಹದಗೊಳಿಸಿದರೆ ಬೆಲ್ಲ.
ಸ್ವಾನುಭವದಿಂದಲೇ ಇಳಿಯುವುದು ಪಾಕ
ಕವಿ ತನ್ನ ಸೀಸೆಯಲಿ ತುಂಬಿದರೆ ಶ್ಲೋಕ.

## ೨೩೧೩. ಪಾರಿಜಾತ

ಸುತ್ತಲೂ ನರುಗಂಪು ಬೀರಿಯೂ ಭರ್ತಿ
ಇದಕೆ ಬೇಕಿಲ್ಲ ಆಡಂಬರದ ಕೀರ್ತಿ
ಈ ಹೂವು ಅರಳುವುದು ಇರುಳು ಕವಿದಾಗ
ಮುಂಜಾವದಲಿ ಅದಕೆ ಗಿಡದಡಿಯ ಜಾಗ.

## ೨೩೧೪. ಪ್ರಜಾರಾಜ್ಯದ ಜೀವನ

ಸುತ್ತಲೂ ಹಬ್ಬಿಕೊಂಡಿದೆ ನಿಬಿಡ ಬೆಟ್ಟ
ನಮ್ಮ ಜೀವನವಾಯ್ತು ಅರಬೈಲು ಘಟ್ಟ.
ಸಾಕಾಯ್ತು ಮುಂಜಾವಿನಿಂದ ಏರೇರಿ.
ನಡುರಸ್ತೆಯಲಿ ಮತ್ತೆ ನಡೆದಿದೆ ರಿಪೇರಿ.

## ೨೩೧೫. ಸುದ್ದಿ ಮತ್ತು ಜಾಹಿರಾತು

ಸುದ್ದಿಗೂ ಜಾಹಿರಾತಿಗೂ ದೊಡ್ಡ ವ್ಯಾಜ್ಯ
ನ್ಯಾಯ ತೀರಿಸಿ ತೀರ್ಪು ಕೊಟ್ಟ ನಮ್ಮಜ್ಜ
ಇಬ್ಬರಿಗೂ ಸುಳ್ಳು ಹೇಳುವ ಕೆಟ್ಟ ಚಾಳಿ
ಆದರೂ ಬದುಕುವರು ಬಹುಕಾಲ ಬಾಳಿ.

## ೨೩೧೬. ಸುಮ್ಮನಿರುವುದು ಒಳಿತು

ಸುಮ್ಮನಿರುವುದು ಒಳಿತು ಈ ಕಾಲದಲ್ಲಿ
ನಿಜ ಮಾತನಾಡಿದರೆ ಹೇಳುವರು : ಸಿಲ್ಲಿ.
ಹೊಣೆ ತಪ್ಪಿ ಮಾತನಾಡಿದರೆ ಚಪ್ಪಾಳೆ
ಲೋಕನಾಯಕನಾಗಿ ಮೆರೆಯುವನು ನಾಳೆ.

## ೨೩೧೭. ಸುರಗಿ ಹೂವು

ಸುರಗಿ ಹೂವಿನ ಸುವಾಸನೆಗೆ ಮರುಳಾದೆ.
ಬಾಡಿದರು ಅದರ ಪರಿಮಳಕಿಲ್ಲ ಬಾಧೆ.
ಮುಪ್ಪಿನಲಿ ಬಾಡಿದಾಗಲೂ ನೀನು, ಗೆಳತಿ,
ನವ ಯುವತಿಯಂತೆ ಪರಿಮಳದ ಮದವಳತಿ.

## ೨೩೧೮. ಸುರಲೋಕ

ಸುರಲೋಕದೊಳಗುಂಟು ಹೂವಿನ ಪಲಂಗ
ಈ ಪಲಂಗದ ಮೇಲೆ ಈಶ್ವರನ ಲಿಂಗ.
ನಾವು ಮಲಗಿದರೆ, ಸಖಿ, ತುಂಬಾ ಫಜೀತಿ.
ಚಳಿಯಾಗಿ ಮೈ ನಡಗಬಹುದೆಂಬ ಭೀತಿ.

## ೨೩೧೯. ಸುಲಭದಲಿ ಸಿಕ್ಕಿದರೆ

ಸುಲಭದಲಿ ಸಿಕ್ಕಿದರೆ ರುಚಿ ಬಹಳ ಕಡಮೆ
ಬಲು ದಿವಸ ಬಾಳಲಾರದು ಅದರ ಮಹಿಮೆ
ಬಿಕ್ಕಟ್ಟುಗಳ ದಾಟಿ ಸಿಕ್ಕಿದರೆ ಮುತ್ತು
ಅದರ ಸುಖ ಅನುಭವಿಸಿದವರಿಗೇ ಗೊತ್ತು.

## ೨೩೨೦. ನವ್ಯಕವಿ ಹೇಳಿದ್ದು

ಸುಲಭವಾಗಿದೆ ಅವನ ಪಂಕ್ತಿಗಳ ಅರ್ಥ
ಹೀಗಾಗಿ ಅವನು ಗೀಚಿದ ಚುಟಕ ವ್ಯರ್ಥ.
ಅರ್ಥವಾಗದ ಕವನ ನೂತನ ಮಿಠಾಯಿ
ನಾನು ಬರೆದದ್ದು ಬರಿ ಹುಳಿ ಅಮಟೆಕಾಯಿ.

## ೨೩೨೧. ಬಾಪೂಜಿಯ ಹೆಸರಿನಲ್ಲಿ

ಸುಳ್ಳು ಹೇಳುವುದಿಲ್ಲ; ಕೇಳು ಬಾಪೂಜಿ
ನಿನ್ನ ಹೆಸರಲ್ಲಿ ನಡೆದಿದೆ ದಗಲುಬಾಜಿ
ಪ್ರಾಪ್ತವಾಗಿದೆ ಲಫಂಗರಿಗೆ ಅವಕಾಶ
ಸಂಪೂರ್ಣ ಹಾಳಾಗುತಿದೆ ನಮ್ಮ ದೇಶ.

## ೨೩೨೨. ನಿನ್ನ ತುಟಿಯಾಣೆ

ಸುಳ್ಳು ಹೇಳುವುದಿಲ್ಲ, ನಿನ್ನ ತುಟಿಯಾಣೆ
ನಿನ್ನಂಥ ಚಂದ್ರಮುಖಿ ಎಲ್ಲಿಯೂ ಕಾಣೆ.
ಆಕೆ ಎಂದಳು; ಹೌದು ದಿನಕರನ ಛಾಯೆ
ಬೆಳಗಿಸಲು ರವಿ ಇರಲು, ನಾನು ಬರಿ ಮಾಯೆ.

## ೨೩೨೩. ಅಭಿವೃದ್ಧಿ ಕಾರ್ಯ

ಸುಳ್ಳು ಹೇಳುವುದಿಲ್ಲ, ಹೇ ಮಂತ್ರಿವರ್ಯ
ನಿನ್ನಿಂದಲೇ ನನಗೆ ಇಷ್ಟು ಸೌಕರ್ಯ.
ಅಭಿವೃದ್ಧಿ ಕಾರ್ಯ ನಡೆಯಲಿ ಇದೇ ರೀತಿ
ಮಂತ್ರಿಗಳಿಗಿರಲಿ ಗೆಳೆಯರ ಮೇಲೆ ಪ್ರೀತಿ

## ೨೩೨೪. ನೆಹರು

ಸುಳ್ಳು ಹೇಳುವುದೇಕೆ ? ಬರಲಿಲ್ಲ ಸಾವು.
ಬಾಡಿ ಹೋಯಿತು, ಮಗನೆ, ಭಾರತದ ಹೂವು.
ಇದರ ಪರಿಮಳ ಅಮರ ಲೋಕದ ಸುಗಂಧ
ಅನವರತವಾಗಿ ಗಮಗಮಿಸುವುದು, ಕಂದ.

## ೨೩೨೫. ಸುಳ್ಳು ಹೇಳವುದುದೇಕೆ ?

ಸುಳ್ಳು ಹೇಳುವುದೇಕೆ ? ಮಳ್ಳು ಹಿಡಿದಾಗ
ನಿನ್ನ ಬಿಟ್ಟುಳಿಯುವುದು ನನ್ನಿಂದ ಆಗ.
ಎಲ್ಲಿ ಹೋದರು ನನಗೇ ನಿನ್ನದೇ ಧ್ಯಾನ.
ಸುಳ್ಳು ಹೇಳುವುದಿಲ್ಲ, ಬೇಡ ಅನುಮಾನ.

## ೨೩೨೬. ಕವಿಯ ಆನಂದ

ಸೂರ್ಯ ಕಿರಣವ ಕಿತ್ತು ಕಡಲೊಳಗೆ ಅದ್ದಿ
ಆಕಾಶ ಪಟದೊಳಗೆ ತಾರೆಗಳ ತಿದ್ದಿ
ಚಿತ್ರಿಸಲು ಜನಿಸಿತ್ತು ಕವಿಯ ಆನಂದ
ಬ್ರಹ್ಮನೂ ಉಸುರಿದನು; ಇದು ಬಹಳ ಚಂದ.

## ೨೩೨೭. ಸೂರ್ಯಕಿರಣ

ಸೂರ್ಯಕಿರಣವೆ, ನೀನೆ ಜಗದ ಆಭರಣ.
ನೀನು ಮರೆಯಾದಲ್ಲಿ ಜೀವಿಗಳ ಮರಣ.
ಬಂಗಾರ ಅಂಗಾರ ಪ್ರತಿಯೊಂದು ವಸ್ತು
ಬೇರೆ ಏನೂ ಅಲ್ಲ, ಅವು ನಿನ್ನ ಶಿಸ್ತು.

## ೨೩೨೮. ಸೂರ್ಯ

ಸೂರ್ಯದೇವನಿಗಿಲ್ಲ ಎಂದಿಗೂ ಸಾವು.
ಅವನಿಂದ ಸಕಲ ಭುವನಕೆ ಬಂತು ಕಾವು.
ಈ ಕಾವಿನಿಂದಲೇ ಸಕಲರಿಗೆ ಪ್ರಾಣ.
ಉಳಿದ ದೇವರು, ಮಗನೆ, ಪೂರ್ಣ ನಿತ್ರಾಣ.

## ೨೩೨೯. ಸೂರ್ಯ

ಸೂರ್ಯನೊಬ್ಬನೆ ದೇವ, ಜೀವಿಗಳ ಪ್ರಾಣ
ಉಳಿದ ದೇವರ ಸುದ್ದಿ ಕಂತೆಯ ಪುರಾಣ.
ಕೋಟಿ ನಕ್ಷತ್ರಗಳು ಮಿಂಚಿದರೆ ಮಾತ್ರ
ಪತ್ತೆ ಹಚ್ಚುವುದು ಬ್ರಹ್ಮಾಂಡಗಳ ಗಾತ್ರ.

## ೨೩೩೦. ಅಕ್ಕತಂಗಿಯರು

ಸೂಳೆಯಾದರು ರಾಮಪುರದ ಸಾಂತಕ್ಕ.
ಯಾವಾಗಲೂ ಅವಳ ವ್ಯವಹಾರ ಚೊಕ್ಕ.
ದೊಡ್ಡ ಹದಿಬದೆಯಾದರೂ ಅವಳ ತಂಗಿ
ಏನವಳ ಠಕ್ಕುತನ! ಏನವಳ ಭಂಗಿ!

### ೨೩೩೧. ಸೂಳೆಯರ ಮೆರವಣಿಗೆ

ಸೂಳೆಗೂ ಸ್ವರ್ಗದಲಿ ಜಾಗ ಸಿಗಲೆಂದು
ಕೂಗುತ್ತ ನಿಲಿಸಿದರು ಮೆರವಣಿಗೆ ತಂದು.
ಮೆರವಣಿಗೆಗಂಜಿ ಈಶ್ವರ ಒಪ್ಪಿಕೊಂಡ
ಮನೆಗೆ ಹಿಂಬಾಲಿಸಿತು ಸೂಳೆಯರ ತಂಡ.

### ೨೩೩೨. ಸ್ಮಾರಕದ ಮಾದರಿಗಳು

ಸ್ಫೂರ್ತಿ ಹೊಂದಲಿಕೆ ಸ್ಮಾರಕ ಬೇಕು ತಾನೆ ?
ಸ್ಮಾರಕದ ರೀತಿಗಳು ನಾನಾ ನಮೂನೆ.
ಬಾಪೂಜಿಯವರ ಹೆಸರಿನಲಿ ಒಂದು ರಸ್ತೆ
ಈ ರಸ್ತೆ ಯಾವಾಗಲೂ ಅವ್ಯವಸ್ಥೆ

### ೨೩೩೩. ಸೆಮಿನಾರು

ಸೆಮಿನಾರು ಮುಗಿದೊಡನೆ ಬಂತು ಪರಿಷತ್ತು
ಹೀಗಾಗಿ ಯಾರಿಗೂ ಇಲ್ಲ ಪುರುಸತ್ತು.
ಆಮೇಲೆ ಬಂತು ತಜ್ಞರ ಅಭಿಪ್ರಾಯ.
ಎಲ್ಲವೂ ಕೊನೆಗೆ ಹೊಗೆಯೊಳಗೆ ಮುಕ್ತಾಯ.

### ೨೩೩೪. ರಾಯರ ನಿರಾಶೆ

ಸ್ಟೇಶನಿಗೆ ಬಂದು ಮುಟ್ಟಲು, ರೈಲುಗಾಡಿ,
ಪಾಪ ! ರಾಯರ ಮೋರೆ ಹೋಗಿತ್ತು ಬಾಡಿ.
ಈ ಪರಿಸ್ಥಿತಿಗೆ ಕಾರಣವೇನು, ಚಂದೂ ?
ತವರೂರಿನಿಂದಾಕೆ ಬರಲಿಲ್ಲವೆಂದು.

### ೨೩೩೫. ಸೇವೆ

ಸೇವೆ ಎಂಬುದು ಮಗಳೆ, ಜೀವನದ ಜೇನು
ಸೇವೆಯಲಿ ಯಾವಾಗಲೂ ನಿರತ ಭಾನು.
ಪ್ರತಿ ದಿವಸವೂ ಸೂರ್ಯನಿಗೆ ನಮಸ್ಕಾರ
ಉಳಿದ ದೇವರ ಸುದ್ಧಿ ಸುಳ್ಳು ತಲೆಭಾರ.

### ೨೩೩೬. ಗೂಳಿ

ಸೊಕ್ಕೇರಿದೊಡನೆ ಸಡಿಲಾಯ್ತು ಮುಗುದಾಣಿ
ಹಿಮಗಿರಿಗೆ ಹಾರಬೇಕೆನ್ನುತಿದೆ ಪ್ರಾಣಿ!
ಮುಗ್ಗರಿಸಿ ಬಿದ್ದು ಕಳಕೊಳ್ಳುವುದು ಪ್ರಾಣ
ತಿಳಿಯಲಾರದು ಅದಕೆ ಸ್ವಂತ ಕಲ್ಯಾಣ.

### ೨೩೩೭. ನಾಜೂಕು ಹುಡುಗಿಯ ತಂದೆಗೆ

ಸೊಗಸಾದ ಅವಳ ಕೈ ಬಹಳ ನಾಜೂಕು
ಇಂಥ ಕೈಯಿಗೆ ಬೇಕು ಬೆಲೆಯುಳ್ಳ ವಾಚು.
ನನ್ನಂಥ ಬಡವನಿಗೆ ಉಂಟೇನು ಸಾಧ್ಯ?
ನಿರ್ಧರಿಸಿದೆನು ಮದುವೆ ಬೇಡೆಂದು ಸಧ್ಯ.

### ೨೩೩೮. ಸೊಂಟ ಪಟ್ಟೆ

ಸೊಂಟಕ್ಕೆ ಕಟ್ಟಿಕೊಂಡರೆ ಒಂದು ಪಟ್ಟೆ
ಬಲು ಗಟ್ಟಿಯಾಗುವುದು ಕೈಕಾಲು ರಟ್ಟೆ.
ಮುದುಕನೂ ಕಾಣುವನು ಪ್ರಾಯದವನಾಗಿ
ಸಂತೋಷಪಡಬಹುದು ಹೊಸ ಮದುವೆಯಾಗಿ.

### ೨೩೩೯. ಸಣ್ಣ ಕೆಲಸಕ್ಕೆ

ಸೊಂಟ ಹಿಡಿಯುವನೊಬ್ಬ ಸಣ್ಣ ಕೆಲಸಕ್ಕೆ
ಇನ್ನೊಬ್ಬನು ಬೇಕು ಎಣಿಸಲಿಕ್ಕೆ ಚಿಕ್ಕೆ
ಈ ರೀತಿ ಸಿದ್ಧವಾಗಲು ಇವರ ತಂಡ
ಇವರು ಮುಗಿಸಿದ ಕೆಲಸ ಬರಿ ಬ್ರಹ್ಮದಂಡ.

### ೨೩೪೦. ನೂತನ ದೀವಳಿಗೆ

ಸ್ಫೋಟ ಹೆಚ್ಚಾದಂತೆ ದೀವಳಿಗೆ ಚಂದ
ಸಿಡಿಚಟಾಕಿಯ ಬದಲು ಅಣುಬಾಂಬು, ಕಂದ.
ಮೇಲಾಟ ಗೆದ್ದ ಹುಡುಗರಿಗೆ ಸವಿ ಕೀರು,
ತಿನ್ನಲಿಕೆ ಮಾತ್ರ ಇರಲಿಕ್ಕಿಲ್ಲ ಯಾರು.

## ೨೩೪೧. ಆಗಸದ ತಾರೆ

ಸೌಂದರ್ಯದಲಿ ನೀನು ಆಗಸದ ತಾರೆ
ನಿನಗೇಕೆ ಈ ಧರೆಯ ರೇಶಿಮೆಯ ಸೀರೆ ?
ಕಡಮೆ ಖರ್ಚಿನ ಸೀರೆಯುಟ್ಟರೂ ನೀನು
ನಿನ್ನ ಕಣ್ ಝಳಪಿಸಲು ನಾಚುವುದು ಮೀನು.

## ೨೩೪೨. ಸೌಂದರ್ಯ

ಸೌಂದರ್ಯವೆನ್ನುವುದು ನವಿಲುಗರಿ ತಾನೆ
ಬೆಟ್ಟದೊಳಗಿನ ಸಿಂಹ ಸಾರಂಗ ಆನೆ.
ಇವುಗಳನು ಹಿಡಿದು ತಂದರೆ ಇಲ್ಲ ಸೊಗಸು
ಸೌಂದರ್ಯವಾಗುವುದು ಮಾನವನ ಹೊಲಸು.

## ೨೩೪೩. ಬಂಧನ

ಹಗ್ಗಗಳ ಬಲೆಯೊಳಗೆ ಬಂಧಿಸಿದರೆನ್ನ.
ಕತ್ತರಿಸಿ ಪಾರಾದೆ ಯಮ ಬರುವ ಮುನ್ನ.
ಹೂವುಗಳ ಬಲೆ ನೇದು ಹಾಕಿದರು ಪುನಹಾ
ಪಾರಾಗಲಿಕೆ ಮನಸು ಬರಲಿಲ್ಲ ತಮ್ಮಾ.

## ೨೩೪೪. ನದಿಯ ಅನುಭವ

ಹಗಲಿರುಳು ಹರಿದಾಡಿದರೆ ವ್ಯರ್ಥ ಬಾಳು.
ಒಂದೆಡೆಗೆ ನಿಂತರೇ ಕಣಜದಲ್ಲಿ ಕಾಳು.
ನಭದೊಳಗೆ ನಕ್ಷತ್ರ ಮಿಂಚಿ ಫಲವೇನು ?
ಭೂಮಿಗಿಳಿದರೆ ಚಂದ ಚಿಕ್ಕೆಗಳ ಬಾನು.

## ೨೩೪೫. ಕೊಳೆ

ಹಚ್ಚಿಕೊಂಡರೆ ಏನು ಸಾಬೂನು ನಿತ್ಯ ?
ಕೊಳೆ ಹೋಗಲಿಲ್ಲ, ಸಖಿ, ಹೇಳುವೆನು ಸತ್ಯ.
ಕೊಳೆಯುಂಟು ಮನದೊಳಗೆ, ಅಲ್ಲ ಮೈಯೊಳಗೆ
ಹೀಗಾಗಿ ಪ್ರತಿ ದಿವಸ ಹಾಕಿದರು ಒಳಗೆ.

## ೨೩೪೬. ಹಟಮಾಡಬೇಡ

ಹಟಮಾಡಬೇಡ ಬಂಗಾರ ಬೇಕೆಂದು
ಮನದನ್ನೆ, ನಿನಗಿಲ್ಲ ಯಾವುದೂ ಕುಂದು
ಬಂಗಾರಗಿಂತ ನೀ ಕಾಣಲಿಕೆ ಚೆಂದ.
ನಿನ್ನ ಮುಖ ನೋಡಿದರೆ ಮನಕೆ ಆನಂದ.

## ೨೩೪೭. ಜೇಲು ಮನೆಗೆ

ಹಣ ಕುಬೇರನ ಕಳಿಸಿದರು ಜೇಲು–ಮನೆಗೆ
ಇದರ ಇಂಗಿತ ತಿಳಿಯಲಿಲ್ಲೇನು ನಿನಗೆ?
ಈ ಚುನಾವಣೆಗಾಗಿ ಭರ್ತಿ ಇಸಕೊಂಡು
ಬಿಟ್ಟುಬಿಡುವರು ಕೊನೆಗೆ ಇದು ಅವರ ಫಂಡು.

## ೨೩೪೮. ಹಣ ತಿನ್ನುವಾಗ

ಹಣ ತಿನ್ನುವಾಗ ಈತನು ಸಿಕ್ಕಿಬಿದ್ದ
ಲೋಕಸಭೆಯಲಿ ಮೆಂಬರನಾಗಿ ಇದ್ದ.
ತಿಂದರೂ ಬೀಳಬಾರದು ಹೀಗೆ ಸಿಕ್ಕಿ
ಪಾರಾಗಬೇಕು ಒಳಗಿಂದೊಳಗೆ ಮುಕ್ಕಿ.

## ೨೩೪೯. ಹಣ

ಹಣ ನೀಡಿದರೆ ಮನುಜನಾಗುವನು ನಾಯಿ.
ಹಣ ನೋಡಿದರೆ ಹೆಣವು ತೆರೆಯುವುದು ಬಾಯಿ.
ಹಣವೆನ್ನುವುದು, ಮಗಳೆ ಶ್ರೇಷ್ಠ ಜಗದೊಳಗೆ.
ನಾನಾ ನಮೂನೆಯಲಿ ಹಾಕುವರು ಒಳಗೆ.

## ೨೩೫೦. ರೀತಿ ನೂರಾರು

ಹಣ ನುಂಗುವಲ್ಲಿಯೂ ರೀತಿ ನೂರಾರು
ದೊಡ್ಡ ಆಲದ ಮರಕೆ ಇನ್ನಷ್ಟು ಬೇರು.
ಕೆಲವರಂತೂ ಬಹಳ ಒಳಗಡೆಗೆ ಸೇರಿ
ವಿಪರೀತ ನುಂಗಿ ಮೇಲೇರುವರು ಹಾರಿ.

### ೨೩೫೧. ಮಂತ್ರಿಪದದ ಬಾಸಿಂಗ

ಹಣೆಗೆ ಕಟ್ಟಲಿಕೆ ಮಂತ್ರಿಪದದ ಬಾಸಿಂಗ
ಅಲ್ಪನಿಗೆ ಹೇಳಿದರು : ನೀನೆ ಉತ್ತುಂಗ.
ಅಧಿಕಾರ ಬಲದಿಂದ ಮಳ್ಳನೂ ಜಾಣ.
ಮದ್ದಾನೆಯಾಗಿ ಗೋಚರಿಸುವುದು ಕೋಣ.

### ೨೩೫೨. ಹತ್ತಿ ಇಲ್ಲದೆ

ಹತ್ತಿಯಿಲ್ಲದೆ ಇವರು ತೆಗೆಯುವರು ನೂಲು
ಆಕಳಿಲ್ಲದೆ ಇವರು ಹಿಂಡುವರು ಹಾಲು.
ಇಂಥವರ ಸಂಖ್ಯೆಯೇ ಹೆಚ್ಚಾಗಿ ಸದ್ಯ
ಗಂಟೆ ಬಾರಿಸಿದರೂ ಇಲ್ಲ ನೈವೇದ್ಯ.

### ೨೩೫೩. ಕೃಷ್ಣ ಪರಮಾತ್ಮನಿಗೆ

ಹತ್ತು ಅವತಾರ ತಾಳಿದೆ ನೀನು ಕೃಷ್ಣ
ಆದರೂ ದಿನದಿನಕೆ ಹವೆಯಾಯ್ತು ಉಷ್ಣ.
ಈಗಂತು ಚೀನಿಯರ ಕೈಲಿ ಅಣ್ವಸ್ತ್ರ
ನಿನ್ನ ಕೈಯೊಳಗೇನು ? ಯಾವ ಕರವಸ್ತ್ರ ?

### ೨೩೫೪. ನೋಡಿದೆನು

ಹತ್ತೂ ಕಡೆಗೂ ನೋಡಿದೆನು ಕಣ್ಣು ತೆರೆದು.
ಅಲ್ಲಲ್ಲಿ ಅಲ್ಲಲ್ಲಿ ತಲೆ ಬುರುಡೆ ಬರಿದು,
ಇವುಗಳ ಪ್ರಮಾಣ ಹೆಚ್ಚಾಗಿತ್ತು ಎಲ್ಲಿ ?
ಹೇಳಿದರೆ ಮಂತ್ರಿಗಳು ಹೇಳುವರು, ಸಿಲ್ಲಿ.

### ೨೩೫೫. ಸಾರ್ವಜನಿಕ ಸಭೆಯಲ್ಲಿ

ಹತ್ತು ಕಡೆಯಿಂದ ಜಗಿದಾಡಲು ಟೊಮೆಟೊ
ನೆಲಕುರುಳಿದವು ಮಗನೆ ಒಂದೆರಡು ಫೋಟೋ
ವೇದಿಕೆಯ ಮೇಲಿತ್ತು ಬಲು ದೊಡ್ಡ ಹೊಟ್ಟೆ
ಅಪ್ಪಳಿಸಿ ಪಿತ್ತ ಕಾರಿತು ಕೋಳಿಮೊಟ್ಟೆ.

  

## ೨೩೫೬. ಮುಖ್ಯಮಂತ್ರಿಯ ಪತನ

ಹತ್ತು ದಿನಗಳವರೆಗೆ ಕಾರ್ಯಕ್ರಮ ರದ್ದು
ಇದಕೆ ಕಾರಣ ಜಾರಿ ಬಿತ್ತಂತೆ ಹದ್ದು.
ಪರಿಷತ್ತಿಗಾಗಿ ತಲುಪಿದ ಹಕ್ಕಿಪಕ್ಕಿ
ವಾಪಸ್ಸು ಮರಳಿದವು ಹುಡಕಲಿಕ್ಕೆ ಅಕ್ಕಿ.

## ೨೩೫೭. ಮಂತ್ರಿಯಾಗಿದ್ದ

ಹತ್ತು ವರುಷದ ತನಕ ಮಂತ್ರಿಯಾಗಿದ್ದ
ಬೆಂಗಳೂರಲಿ ದೊಡ್ಡ ಮನೆ ಕಟ್ಟಿ ಗೆದ್ದ.
ಬ್ಯಾಂಕಿನಲಿ ಲಕ್ಷಗಟ್ಟಲೆ ಉಂಟು ಮತ್ತೆ
ಸರಿಯಾದ ಲೆಕ್ಕ ಆಗುವುದಿಲ್ಲ ಪತ್ತೆ.

## ೨೩೫೮. ನಮ್ಮ ಶ್ರೀಪಾದ

ಹತ್ತು ವರುಷದ ಹಿಂದೆ ಉಪಮಂತ್ರಿಯಾದ
ಈ ವರುಷ ಗೃಹಮಂತ್ರಿಯಾದ ಶ್ರೀಪಾದ
ಈ ತನಕ ಗಳಿಸಿದ್ದು ಅಲ್ಲ ಅತ್ಯಲ್ಪ
ಈಗ್ಗೆ ಕುಡಿದಂತೆ, ಸಖಿ, ಹೊಸ ಕಾಯಕಲ್ಪ.

## ೨೩೫೯. ದೇಶಭಕ್ತನ ಆತ್ಮಕಥನ

ಹತ್ತು ವರುಷದ ಹಿಂದೆ ಸೆರೆಮನೆಗೆ ಹೋದೆ.
ಆ ಪರಾಕ್ರಮದಿಂದ ಈಗಾಯ್ತು ಫಾಯ್ದೆ
ಎಂದಿಗೂ ಶೌರ್ಯವಾಗುವುದಿಲ್ಲ ಗೊಡ್ಡು
ಸಚಿವ ಸಂಪುಟ ಸೇರಿ ಗಳಿಸಿದೆನು ದುಡ್ಡು

## ೨೩೬೦. ಕವಿಗಳು

ಹತ್ತು ಸಾವಿರ ಚುಟಕ ಬರೆದಂಥ ಜಾಣ
ಒಂದು ದಿನ ಪಾಪ ಬಿಡಬೇಕಾಯ್ತು ಪ್ರಾಣ.
ಹದಿಮೂರು ಚುಟಕ ಗೀಚಿದ ಹುಚ್ಚ, ನೀರೆ,
ಈಗಲೂ ಇದ್ದಾನೆ! ತೋರಿಸುವೆ ಬಾರೆ.

### ೨೩೬೧. ಕಬ್ಬಿಗನ ಪೇಡಾ

ಹತ್ತು ಸಾವಿರ ವರುಷ ಕಳೆದರೂ ಕೂಡಾ.
ರುಚಿಯಾಗಿ ಇರಬೇಕು ಕಬ್ಬಿಗನ ಪೇಡಾ.
ಅನುಭವದ ಸಕ್ಕರೆಯ ಬೆರೆಸಿದರೆ ಮಾತ್ರ.
ಶತಮಾನ ಉಳಿಯುವುದು ಕವಿಯ ಕುಲಗೋತ್ರ.

### ೨೩೬೨. ಶಾಲೆಯ ಹೂದೋಟ

ಹತ್ತು ಹೂವಿನ ಗಿಡಕೆ ಬೇಕೊಂದು ಪಂಪು.
ಇದ್ದ ಎಲೆಗಳು ಪಾಪ ಹಸುರಲ್ಲ, ಕೆಂಪು.
ಈ ರಾಶಿ ಶಾಲೆ ಮಾಡಿದರೆ ಹೂದೋಟ.
ತೋಟಗಾರಿಕೆ ಕೊನೆಗೆ ಆಗುವುದು ಆಟ.

### ೨೩೬೩. ಅಣ್ಣಾದೊರೆ ಹೇಳಿದ್ದು

ಹದಿನಾಲ್ಕು ಅತ್ತಕತಂಗಿಯರ ಈ ದೇಶ
ಕಟ್ಟಬೇಕೇನು ಹಿಂದಿಗೆ ಮಾತ್ರ ವೇಷ?
ಪ್ರತಿಯೊಬ್ಬಳಿಗೆ ಸಿಗಲಿ ಒಂದೊಂದು ಸೀರೆ.
ವೇಷ ಕಟ್ಟಲಿಕೆ ಹೆಂಗಸು ಬರಲಿ ಬೇರೆ.

### ೨೩೬೪. ಸಸ್‌ಪೆಂಡ್

ಹದಿನೆಂಟು ಎಂಜನಿಯರುಗಳು ಸಸ್‌ಪೆಂಡು.
ಹಣ ತಿಂದು ತೇಗಿದರು ಸುಖವಾಗಿ ಉಂಡು.
ಈ ಘಟನೆ ನಿಜವಾಗಿ ನಡೆದದ್ದು, ಸ್ವಾಮಿ
ಚಾರಿತ್ರ್ಯದಿಂದ ತುಂಬಿದ ನಮ್ಮ ಭೂಮಿ.

### ೨೩೬೫. ನನ್ನ ಕೆಲಸ

ಹದಿನೆಂಟು ಶಾಲೆ ಕಾಲೇಜುಗಳ ಕಟ್ಟಿ
ಮಕ್ಕಳಿಗೆ ಬಡಿಸಿದೆನು ಜೀವನದ ರೊಟ್ಟಿ
ಆದರೂ ತೃಪ್ತಿಯಿಲ್ಲವೋ ಕರುಣಸಿಂಧು,
ನಾನು ಮಾಡಿದ ಕೆಲಸ ಬರಿ ಒಂದು ಬಿಂದು.

### ೨೩೬೬. ಶಶಿವದನೆಗೆ

ಹನಮಗೌಡನ ತೋಟದಲಿ ಬೆಳೆದ ಬದನೆ
ನಿನ್ನ ಮೋರೆಯಗಿಂತ ದುಂಡು, ಶಶಿವದನೆ.
ಮತ್ತೆ ಹಾಗಲಕಾಯಿ ಕಹಿಯಾದರೂನು
ನಿನ್ನ ತುಟಿಗಳಿಗಿಂತ ರುಚಿಯಿಲ್ಲವೇನು ?

### ೨೩೬೭. ಉತ್ತರ ಕನ್ನಡ ಜಿಲ್ಲೆ

ಹಬ್ಬಿಕೊಂಡಿದ್ದರೂ ವಿಪರೀತ ಕಾಡು
ಈ ಪುಣ್ಯಭೂಮಿ ಸಂಭಾವಿತರ ನಾಡು.
ಹುಲಿ ಕರಡಿ ಹೆಬ್ಬಾವುಗಳ ನಡುವೆ ಇದ್ದೂ
ಇವರು ಮಾಡುವುದಿಲ್ಲ ಯಾವುದೂ ಸದ್ದು !

### ೨೩೬೮. ಕೊರತೆಯ ರಾಜ್ಯದಲ್ಲಿ

ಹಬ್ಬಿದರೆ ದವಸಧಾನ್ಯಗಳ ದುಷ್ಕಾಳ
ವೃದ್ಧಿಯಾಗುವುದು ಸೆಟ್ಟಿಯ ಬಂಡವಾಳ.
ಕಾಳುಕಡಿಗಳಿಗೆ ಹಾಕಿದರೆ ಕಂಟ್ರೋಲು
ಉದ್ದವಾಗುವುದು ಅಧಿಕಾರಿಗಳ ಕೋಲು.

### ೨೩೬೯. ಹರಕತ್ತು

ಹರಕತ್ತು ಮಾಡಿದೆ ಬರಕತ್ತು ಖಾತ್ರಿ
ಎಂದು ಭಾಷಣ ಮಾಡಿದನು ರಾಕು ಮೇತ್ರಿ.
ಎಲ್ಲರೂ ಅಹುದೆಂದು ಚಪ್ಪಾಳೆ ತಟ್ಟಿ
ನಿಂತುಬಿಟ್ಟರು ನಿಮಿಷದಲಿ ಸೊಂಟ ಕಟ್ಟಿ.

### ೨೩೭೦. ತಮ್ಮನಿಗೆ ಉಪದೇಶ

ಹರಿ ಗೊಂಬೆಗಳ ಮಾಡಿ ಕುಣಿಸುವನು ನಮ್ಮ
ಸರಿಯಾಗಿ ಕುಣಿಯಲಿಕೆ ಕಲಿ ನೀನು, ತಮ್ಮಾ,
ಕುಣಿತಲ್ಲೇ ಉಂಟು ಜೀವನದ ಧ್ಯೇಯ
ಕುಣಿದಂತೆ ದೊರಕುವುದು ತರತರದ ಪೇಯ.

### ೨೩೭೧. ಹರಿಜನರ ಪರಮನಿಗೆ

ಹರಿಜನರ ಪರಮನಿಗೆ ಇರಲಿಲ್ಲ ಪ್ರಾಪ್ತಿ
ಇದ್ದುದನ್ನೂ ಮೊನ್ನೆ ಮಾಡಿದರು ಜಪ್ತಿ
ಬಿಟ್ಟುಹೋದದ್ದು ಬಿದಿರಿನ ಹರಕು ಬುಟ್ಟಿ
ಜಪ್ತಿ ಮಾಡಿಸಿದವನು ಹರಿಯಪ್ಪ ಸೆಟ್ಟಿ.

### ೨೩೭೨. ಮಂತ್ರಿಗಳು ಬಂದಾಗ

ಹರಿಜನರ ಮನೆ ಹೊಲಸು ನಾರುತಿದೆ ಪಾಪ
ಮಂತ್ರಿಗಳು ಬಂದಾಗ ಹಾಕಿದರು ಧೂಪ.
ಗಲ್ಲಿ ಗಲ್ಲಿಗೆ ದೊಡ್ಡ ತೋರಣವ ಹಚ್ಚಿ
ಬೀದಿ ಬೀದಿಗೆ ಉರಿಸಿದರು ಅಗರಬತ್ತಿ.

### ೨೩೭೩. ಹರಿಜನರು

ಹರಿಜನರು ಹರಿಯ ಲೋಕಕೆ ಹೋದ ಮೇಲೆ
ಸರಿಯಾಗಿ ಆಗುವುದು ವ್ಯಾಜ್ಯದ ನಿಕಾಲೆ.
ಈ ತನಕ ಹರಿಜನರು ತುಸು ತಾಳ್ಮೆಯಿಂದ
ಅರೆಹೊಟ್ಟೆಯಲ್ಲಿಯೇ ಬದುಕಬೇಕೆಂದ.

### ೨೩೭೪. ಡಿ.ವಿ. ಗುಂಡಪ್ಪನವರು ಹೇಳಿದ್ದು

ಹರಿದಿನದ ಯಜಮಾನ ನಾನೆ ಗುಂಡಪ್ಪ
ಕೈಲಾದ ಮಟ್ಟಿಗೂ ಬಡಿಸಿದೆನು ತುಪ್ಪ.
ನಮ್ಮ ಕಾಲದ ಭೋಜನಕೆ ಇತ್ತು ಸ್ವಾದ.
ಈಗ್ಗೆ ನೋಡಿದರೆ ಉಣ್ಣುವ ಮೊದಲೆ ವಾದ.

### ೨೩೭೫. ಬ್ರಾಹ್ಮಣರ ಭಾರತ

ಹರಿದಿನದ ಸಲುವಾಗಿ ಕೈಯೊಳಗೆ ಪಾತ್ರೆ
ಈ ಪಾತ್ರೆ ಹಿಡಕೊಂಡು ಅಮೇರಿಕದ ಯಾತ್ರೆ.
ಈ ಯಾತ್ರೆ ಮುಗಿದೊಡನೆ ಅಲ್ಲಿಂದ ಎಲ್ಲಿ ?
ಭೂಪ್ರದಕ್ಷಿಣೆ ಗೈದು ವಾಪಸ್ಸು ದಿಲ್ಲಿ.

## ೨೩೭೬. ನಿನ್ನ ಹೆಸರಿನಲ್ಲಿ

ಹರಿ, ನಿನ್ನ ಹೆಸರಿನಲ್ಲಿ ನಡೆದ ದುಷ್ಕರ್ಮ
ಹಲವಾರು ಸರ್ತಿ ಆಗುವುದು ಧರ್ಮ.
ಪಾಪವೂ ಪುಣ್ಯವಾಗುವುದುಂಟು ಮತ್ತೆ
ಕುದುರೆಯಾಗುವುದುಂಟು ಅರಮನೆಯ ಕತ್ತೆ.

## ೨೩೭೭. ಸರ್ವಾಧಿಕಾರಿಯ ವಿವೇಚನೆ

ಹರಿಯ ಕೈಯೊಳಗಿತ್ತು ಒಂದಿಷ್ಟು ಮೇಣ.
ಮನುಜನಾಕೃತಿ ಮಾಡಿ ತುಂಬಿದನು ಪ್ರಾಣ.
ಮೇಣಕ್ಕೆ ಬೇಕಾದ ರೂಪವನು ಕೊಟ್ಟು
ಭೂಮಿಯನ್ನಾಳಿದರೆ ಹರಿಗಿಲ್ಲ ಸಿಟ್ಟು.

## ೨೩೭೮. ಮುತ್ತು ಮತ್ತು ತುತ್ತು

ಹರಿಯ ಕೊರಳಲಿ ಭಕ್ತ ಕಟ್ಟಿದಾ ಮುತ್ತು
ಚೂರು ಚೂರಾಗಿಯೇ ನರಕದಲ್ಲಿ ಬಿತ್ತು
ಹಸಿದವನ ಕೈಗಿತ್ತ ಆ ಒಂದು ತುತ್ತು
ಸ್ವರ್ಗಲೋಕವನೇರಿ ಸುಖವಾಗಿ ಇತ್ತು.

## ೨೩೭೯. ಹರಿಗೆ

ಹರಿಯೆ, ಯಾವಾಗಲೂ ನೀನು ಅದೃಷ್ಟ
ಹೀಗಾಗಿ ನಿನಗಿಲ್ಲ ಯಾವುದೂ ಕಷ್ಟ.
ನಿನ್ನ ಕಂಡರೆ ಬೆನ್ನು ಹತ್ತುವರು ಜನರು
ನೀ ಕೂಡ ಸುರಿಸಬೇಕಾದೀತು ಬೆವರು.

## ೨೩೮೦. ಹೊಸ ರಾಜ್ಯದಲ್ಲಿ

ಹಲಸು ಹಣ್ಣನು ಬಯಸಿ ನಮ್ಮೂರ ಪೆದ್ದ
ಹುಣಸೆ ಮರದಡಿಯಲ್ಲಿ ಕುಳಿತುಕೊಂಡಿದ್ದ!
ಹೊಸ ರಾಜ್ಯದಲಿ ಹುಣಸೆ ಹಲಸಾಯಿತೆಂದು
ಪೆದ್ದನಿಗೆ ಯಾರೊ ಹೇಳಿದರಂತೆ ಬಂದು.

## ೨೩೮೧. ದಂತಮಂಜನ ಜಾಹಿರಾತು

ಹಲ್ಲುಗಳು ಕಲ್ಲಿನಂತಾಗುವುವು ಗಟ್ಟಿ
ಬೇಕಾದ ರೀತಿಯಲಿ ತಿನಬಹುದು ರೊಟ್ಟಿ
ಗಪಗಪನೆ ತಿಂದರೂ ಇಲ್ಲ ಅಳಿಗಾಲ
ಅಧಿಕಾರಿಗಳಿಗೆ ಇದು ಬಹಳ ಅನುಕೂಲ.

## ೨೩೮೨. ಲಾಲಸೆ

ಹಲ್ಲು ಬಿದ್ದರೂ ಕಬ್ಬು ತಿನ್ನುವ ಪಿಪಾಸೆ
ಇದಕೆನ್ನುವರು, ಮಗನೆ, ಮಾನವನ ಆಸೆ.
ಮುದುಕನಿಗೆ ಅಧಿಕಾರ ಕಾಮಿನಿಯ ಷೋಕು
ಹಾಸಿಗೆಯ ಹಿಡಿದರೂ ಮಂತ್ರಿಪದ ಬೇಕು.

## ೨೩೮೩. ಕೋಟಿ ದೇವರು

ಹಸಿವೆ ಸಂಕಟ ದುಃಖ ಮಾನವನ ಪಾಲು.
ನಿತ್ಯವೂ ಕೋಟಿ ದೇವರಿಗೆ ನೊರೆಹಾಲು.
ಇದಕೆನ್ನುವರು ಆದ್ಯ ಬಂಡವಾಳಶಾಹಿ
ಆಮೇಲೆ ಅಗಲವಾಯಿತು ಅದರ ಬಾಯಿ.

## ೨೩೮೪. ತೊದಲು ನುಡಿ

ಹಸುಗೂಸು ತೊದಲು ಮಾತಾಡಿದರೆ ಕವನ
ಸಂಪೂರ್ಣ ಮರುಳಾಗುವುದು ಅಖಿಲ ಭುವನ.
ದೊಡ್ಡವರ ಮಾತಿನೊಳಗಿಲ್ಲ ಈ ಶಕ್ತಿ
ತೊದಲು ನುಡಿಯೊಳಗುಂಟು ಮಾನವನ ಮುಕ್ತಿ.

## ೨೩೮೫. ಹೊಸತನ

ಹಳತು ಆದಷ್ಟು ಹೊಸತನ ಹೆಚ್ಚು ಬಂದು
ದಿನದಿನಕೆ ಮಿನುಗಿದರೆ ಅದಕಿಲ್ಲ ಕುಂದು.
ಶತಮಾನ ಕಳೆದರೂ ಅದಕಿಲ್ಲ ಮುಪ್ಪು
ಹಸುರು ಹಸುರಾಗಿ ಆಗುವುದಿಲ್ಲ ಸೊಪ್ಪು.

### ೨೩೮೬. ಹಳ್ಳಿಯ ಆಸ್ಪತ್ರೆ

ಹಳ್ಳಿಯಲಿ ಇವರು ಸ್ಥಾಪಿಸಲು ಆಸ್ಪತ್ರೆ
ನೆರವೇರಿಸಿದರು ಉದ್ಘಾಟನೆಯ ಜಾತ್ರೆ.
ಆಮೇಲೆ ನಡೆದ ಕತೆ ಲಾಲಿಸು, ಮುರಾರಿ.
ಬಂದ ಡಾಕ್ಟರು ಮೂರು ದಿನದಲಿ ಪರಾರಿ!

### ೨೩೮೭. ರೈತನ ಉತ್ತರ

ಹಳ್ಳಿಯಲಿ ಶ್ರೇಷ್ಠವಾದುದು ಏನು ಹೇಳು?
ಗದ್ದೆಯಲಿ ಮುದ್ದಾಗಿ ನಿಂದಿರುವ ಕಾಳು.
ಇದಕಿಂತಲೂ ಹಿರಿದು ಏನಾದುರುಂಟೆ?
ಶಾನುಭೋಗರ ಲೆಕ್ಕಣಿಕೆ ತರುವ ತಂಟೆ.

### ೨೩೮೮. ಮಂತ್ರಿಗಳ ತುಲಾಭಾರ

ಹಳ್ಳಿಹಳ್ಳಿಗೆ ಮಂತ್ರಿಗಳ ತುಲಾಭಾರ.
ಎಲ್ಲರೂ ತರಬೇಕು ಶುದ್ಧ ಬಂಗಾರ.
ಹದಿನಾಲ್ಕು ಕ್ಯಾರೇಟುಗಳ ಮಾತು ಕೇಳಿ
ಹಾಕಬಾರದು ಮತ್ತೆ ನಡುವೆ ಹಿತ್ತಾಳೆ.

### ೨೩೮೯. ವಿದ್ಯಾ ವಿಕಾಸ

ಹಳ್ಳಿಹಳ್ಳಿಯಲಿ ಮೂಡಿದರೆ ಹೈಸ್ಕೂಲು
ಶಾರದಾಂಬೆಯ ಮೊಲೆಗೆ ನಂದಿನಿಯ ಹಾಲು.
ಮೂಡದಿದ್ದರೆ ಹೆತ್ತ ತಾಯಿಯೂ ಬಂಜೆ
ರವಿ ಮೂಡಿಯೂ ವ್ಯರ್ಥ; ಹಗಲೆಲ್ಲ ಸಂಜೆ.

### ೨೩೯೦. ಸೋರುವ ಮನೆ

ಹಳೆಗನ್ನಡದ ಜಂಗು ಹಿಡಿದ ಸಾಮಾನು
ತಂದು ಮನೆಕಟ್ಟಿದರೆ ನಡೆಯಬಹುದೇನು?
ಭವ್ಯವಾದರು ಶಬ್ದ ಪುಂಜಗಳ ಭವನ
ಪ್ರತಿಯೊಂದು ಕೋಣೆಯಲಿ ಸೋರುವುದು ಕವನ.

## ೨೩೯೧. ಹೊಸ ಕವಿಗೆ

ಹಳೆಯ ಕವಿಗಳು ಪಳಗಿಸಿದರು ಈ ಭಾಷೆ
ಪೂರೈಸಬೇಕು ಹೊಸಬರು ಅದರ ಆಸೆ.
ಭದ್ರವಾಗಿದೆ ನಮ್ಮ ಗುಡಿಯ ನೆಲಗಟ್ಟು.
ಹೊಸ ಕವಿಯೆ, ಅದರ ಮೇಲೆಯೇ ನೀನು ಕಟ್ಟು.

## ೨೩೯೨. ಹೊಸ ಪಕ್ಷ

ಹಳೆಯ ಹೆಗ್ಗಣಗಳಿಗೆ ಹೊಸ ಪಕ್ಷ ಸಿಕ್ಕಿ
ಸರಿಯಾಗಿ ನುಂಗಿದವು ಮಣಗಟ್ಲೆ ಅಕ್ಕಿ.
ಮತ್ತೆ ಅಕ್ಕಿಯ ಜೊತೆಗೆ ರಾಗಿ ಬಿಳಿ ಜೋಳ.
ಸರಕಾರಿ ಸೌಧದಲಿ ಬಂತು ತೋಳ.

## ೨೩೯೩. ಹೆಸರುಗಳು

ಹೃದಯನಾಥನಿಗೆ, ಸಖಿ, ಹೃದಯವೇ ಇಲ್ಲ.
ಹೆಸರು ಇಟ್ಟವರಾರು ? ದೇವರೇ ಬಲ್ಲ.
ಹೃದಯ ಬರಲೆಂದು ಇಟ್ಟಿರಬೇಕು ತಾಯಿ.
ಆದರೂ ಬರಲಿಲ್ಲವೆಂದ, ದೇಸಾಯಿ.

## ೨೩೯೪. ಹೃದಯ ಲೇವಾದೇವಿ

ಹೃದಯ ಲೇವಾದೇವಿ ಆದರೇ ಲಗ್ನ
ಆಗದಿದ್ದರೆ ಪಾಪ ಸಂಸಾರ ಭಗ್ನ.
ಇಬ್ಬರೂ ಕೈಗೆ ಕೈ ಹಚ್ಚಿಯೂ ವ್ಯರ್ಥ
ಹೃದಯಗಳ ಸಂಗಮವೆ ಜೀವನದ ಅರ್ಥ.

## ೨೩೯೫. ಅಜ್ಜನ ದೀಪಾವಳಿ

ಹಾಕಮ್ಮ ಹಾಕು ಮಂಗಳದ ರಂಗೋಲಿ
ಸ್ವಲ್ಪವೂ ಜಾಗ ಬಿಡಬೇಡಮ್ಮ ಖಾಲಿ.
ಎಲ್ಲೆಲ್ಲಿಯೂ ಹಣತೆಯಲಿ ದೀಪ ಹಚ್ಚು
ದೀಪಗಳ ನೋಡುವುದು ನನಗೊಂದು ಹುಚ್ಚು.

## ೨೩೯೬. ಬೆಂಗಳೂರಿನ ರಾಜಧಾನಿಯಲ್ಲಿ

ಹಾಡಲಿಕೆ ಸ್ಥಳವಿಲ್ಲ ಇದ್ದರೂ ವೀಣೆ.
ಗಂಡ ಸಿಕ್ಕಿದರು, ಸಖಿ, ಸಿಗಲಿಲ್ಲ ಕೋಣೆ.
ಪಂಚವಾರ್ಷಿಕದಲ್ಲಿ ಮನೆಗಳ ಅಭಾವ
ಸಂಪೂರ್ಣ ಸೊರಗಿ ಹೋದನು ಅಳಿಯದೇವ.

## ೨೩೯೭. ಹೋರಾಟಬೇಕೆ

ಹಾರಾಟ ಕಲಿತಾಗ ಹೋರಾಟವೇಕೆ?
ಸಮಯ ಸಿಕ್ಕಿದ ಹಾಗೆ ಹಿಡಿಯಲಿಕೆ ಪತಾಕೆ.
ಆದಷ್ಟು ತುಂಬಿಕೊಳ್ಳಲಿ ಎಂದು ಜೇಬು
ಆಗಾಗ್ಗೆ ತೂರುವವು ಒಂದೆರಡು ಸೇಬು.

## ೨೩೯೮. ಮಾಜಿ ಶಾಸಕ

ಹಾರಾಟ ನಿಂತು, ಸಖಿ, ಬಂದಾಯ್ತು ಪುಂಗಿ
ಜರಿಯ ಧೋತರ ಬಿಚ್ಚಿ ಹಚ್ಚಿದನು ಲುಂಗಿ.
ಈ ಪರಿಸ್ಥಿತಿಗೆ ಕಾರಣವೇನು ಗೊತ್ತಾ?
ಈಗ ಕೈಯೊಳಗಿಲ್ಲ ಶಾಸಕನ ಬೆತ್ತ.

## ೨೩೯೯. ಕಡಲ ಬಿರುಗಾಳಿ

ಹಾರಿ ಹೋಗಲಿ ಎಂದು ಹುಳತಿಂಬ ಕೋಳಿ
ಓ ಮಗನೆ, ನಾನಾದೆ ಕಡಲ ಬಿರುಗಾಳಿ
ನನಗೆ ಇಷ್ಟೇ ಸಾಕು, ಪೂರ್ಣ ಸಂತುಷ್ಟಿ
ಯಾವಾಗಲೂ ಮೂಡುತಿರಲಿ ಹೊಸ ದೃಷ್ಟಿ.

## ೨೪೦೦. ಹಾಲಕ್ಕಿ ಮಕ್ಕಳಿಗೆ

ಹಾಲಕ್ಕಿ ಮಕ್ಕಳಿಗೆ ಕಲಿಸಿದರೆ ವಿದ್ಯೆ
ಯಾಲಕ್ಕಿಯಾಗಿ ಗಮಗಮಿಸುವುದು ಗದ್ದೆ
ಹಾಲಕ್ಕಿ ಮಕ್ಕಳಿಗೆ ಕಲಿಸಿದರೆ ಪಾಠ
ಹಲುಸಾಗುವುದು ಕಾಯಿಪಲ್ಯಗಳ ತೋಟ.

## ೨೪೦೧. ಅವಳು ಹೇಳಿದ್ದು

ಹಾಲು ಮಾರಲಿಕೆಂದು ತಿರುಗಿದರೆ ಬೀದಿ
ಸಂದಿ ಸಂದಿಗೆ ನಿಂತು ಕಾಯುವನು ಹಾದಿ.
ಬೆಣ್ಣೆ ಮಾರಲಿಕೆಂದು ಹೊರಟರೂ ಮತ್ತೆ
ಸಂತೆಯೊಳಗೆ ಬೆನ್ನು ಬಿಡದು ಈ ಕತ್ತೆ.

## ೨೪೦೨. ಕನ್ನಡಿಗರ ಗತ ವೈಭವ

ಹಾಳುಹಂಪೆಯ, ಕಂಡು ಮರುಗದಿರು ನೊಂದು ;
ಎಲ್ಲ ಸಾಮ್ರಾಜ್ಯಗಳ ಮೈ ಬಣ್ಣ ಒಂದು.
ನಮ್ಮ ಗತ ವೈಭವಕೆ ಸಾಕ್ಷಿಯೇ ಬೇರೆ;
ಬಸವನುಸುರಿದ ವೇದದೊಳಗುಂಟು, ನೀರೆ.

## ೨೪೦೩. ತಿಂಗಳಿನ ಬೆಳಕು

ಹಿಟ್ಟು ಚೆಲ್ಲಿದ ಹಾಗೆ ತಿಂಗಳಿನ ಬೆಳಕು
ಮನೆಯೊಳಗೆ ಹಿಟ್ಟಿರದೆ ಮನಕಿಲ್ಲ ಮಿನುಗು.
ಹುಣ್ಣಿಮೆಯ ದಿವಸವೂ ಕತ್ತಲೆಯ ಕಾಟ.
ಕಾಳಸಂತೆಗೆ ಮಾತ್ರ ಅಮಿತ ದರಹಾಸ.

## ೨೪೦೪. ಇಬ್ಬರನು ಮಾತ್ರ

ಹಿಡಿದುಬಿಟ್ಟರು ನಿನ್ನೆ ಇಬ್ಬರನು ಮಾತ್ರ
ಹಿಡಿದರೂ ಕಡಿಮೆಯಾಗುವುದಿಲ್ಲ ಗಾತ್ರ
ಇದಕೆಂಬೆ ಹೊಸ ನಾಟಕದ ನವ್ಯರೀತಿ
ತೆರೆಯ ಹಿಂಬದಿಯಲ್ಲಿ ಅನ್ಯೋನ್ಯ ಪ್ರೀತಿ.

## ೨೪೦೫. ಕವಿಗೆ

ಹಿಡಿಯಬಾರದು, ಕವಿಯೆ, ಯಾರ ದರಕಾರ
ಸತ್ಯಗಿಂತಲು ಶ್ರೇಷ್ಠವಲ್ಲ ಸರಕಾರ.
ಕವಿವಾಣಿ ಉಳಿಯುವುದು ರವಿ ಇರುವ ತನಕ
ಈ ಮಾತು ಸುಳ್ಳಲ್ಲ! ನಿನ್ನಾಣೆ, ಬೆನಕ.

### ೨೪೦೬. ಅವಳು ಹೇಳಿದ್ದು

ಹಿಡಿಯಬಾರದು ನನ್ನ ಸೆರಗು ಈ ರೀತಿ.
ಗೊತ್ತುಂಟು ಇಡಿ ಜಗತ್ತಿಗೆ ನಿಮ್ಮ ಪ್ರೀತಿ.
ಜನ ನೋಡಿದರೆ ಏನು ಹೇಳುವರು ಗೊತ್ತೆ?
ನಾನು ಕೆಡಿಸಿದೆನೆಂದು ಹೇಳುವಳು ಅತ್ತೆ.

### ೨೪೦೭. ಕವಿಗಳ ಜಾಹೀರುನಾಮೆ

ಹಿಡಿಯಬಾರದು ನಾವು ಯಾರ ದರಕಾರ
ಇದಕೆನ್ನುವರು ಕವಿಯ ಜೀವನದ ಸಾರ.
ಪರಮಾತ್ಮನೂ ಕೊನೆಗೆ ಮಾಡಿದರೆ ತಪ್ಪು.
ಅವನಿಗೂ ತಿನಿಸೋಣ ಒಂದಿಷ್ಟು ಉಪ್ಪು.

### ೨೪೦೮. ಜೋಗತಿ ಹೇಳಿದ್ದು

ಹಿಡಿಯಬೇಡಯ್ಯ, ನೀ, ಬಿಡು ನನ್ನ ಸೆರಗು
ನಿನ್ನ ಮುಖ ನೋಡೋಣ, ಈ ಕಡೆಗೆ ತಿರುಗು.
ನನ್ನ ಜೊತೆ ಬರ್ತಿಯಾ? ಭರವಸೆಯ ನೀಡು
ಮೊದಲು ಹುಂ ಎಂದು ಆಮೇಲೆ ಮುತಾಡು.

### ೨೪೦೯. ಸೋಜಿಗದ ಗಿಡ

ಹಿತ್ತಲಲ್ಲಿ ಸಣ್ಣ ಸೋಜಿಗದ ಗಿಡ ಉಂಟು.
ಹುಲ್ಲಿನಷ್ಟೇ ಹಗುರ ಈ ಗಿಡದ ದಂಟು.
ನಾಲ್ಕು ರೆಂಬೆಗಳುಳ್ಳ ಈ ಪುಟ್ಟ ಗಿಡಕೆ
ಕಿರುಗವನವೆಂಬ ಜಾತಿಯ ಚಕಣಿ ಅಡಕೆ.

### ೨೪೧೦. ನೆಹರು

ಹಿಮಗಿರಿಯ ಮೇಲೆ ಮೀಯು ಸೃಷ್ಟಿಕರ್ತ
ಗಂಗೆ ಯಮುನೆಯ ಸಂಗಮದ ಪುಣ್ಯತೀರ್ಥ.
ಇದರ ಚೈತನ್ಯವೇ ಭಾರತದ ನೆಹರು
ಧನ್ಯವಾಯಿತು, ಮಗನೆ, ಹಿಮಗಿರಿಯ ನೀರು.

## ೨೪೧೧. ಭಾರತ

ಹಿಮಗಿರಿಯೆ ಭಾರತದ ಆತ್ಮವಿಶ್ವಾಸ.
ತೆಂಕಣದ ಕಡಲ ಗಾಳಿಯೆ ನಮ್ಮ ಶ್ವಾಸ.
ಈ ಮಾತು ಅಚ್ಚಳಿಯದಿರುವಂಥ ಸತ್ಯ.
ಸಂದೇಹ ತಾಳಿದರೆ ಅದು ಆತ್ಮಹತ್ಯ.

## ೨೪೧೨. ಮೂಲಂಗಿ

ಹಿರಿ ತುರಾಯಿಯ ಹಾಕಿ ಧರಿಸಿಲ್ಲ ಅಂಗಿ.
ಇವಳ್ಯಾರು ಗೊತ್ತಾಯ್ತೆ? ಇವಳು ಮೂಲಂಗಿ.
ತರಕಾರಿ ಪೇಟೆಯಲಿ ಇದು ಒಂದು ಸೋಗು
ಆದರೂ ಯಾರೂ ಮುರಿಯುವುದಿಲ್ಲ ಮೂಗು.

## ೨೪೧೩. ನಮ್ಮ ಇತಿಹಾಸ

ಹಿಂದಿತ್ತು ವ್ಯಾಸರಾಯರ ದಾಸಕೂಟ
ಈಗ್ಗೆ ಉಳಿದದ್ದು ಬರಿ ಹರಿದಿನದ ಊಟ.
ಭಕ್ತಿಮಾರ್ಗದ ಗುಂಟ ನಡೆದಿತ್ತು ತೇರು.
ಈಗ್ಗೆ ಪಂಕ್ತಿಯ ಮುಂದೆ ಅನ್ನ ಹುಳಿ ಸಾರು.

## ೨೪೧೪. ಸಂಶೋಧನೆ

ಹಿಂದೆ ಕನ್ನಡ ನಾಡು ಸತ್ಯಯುಗದೊಳಗೆ
ಬಲು ದೂರ ತಲುಪಿತ್ತು ಹಿಮಗಿರಿಯವರೆಗೆ!
ಅದು ಮುಂದೆ ಹಿಮಗಿರಿಯ ಚಳಿಗೆ ಬೇಸತ್ತು
ಧಾರವಾಡದ ಸೀಮೆಯಲಿ ಬಂದು ಬಿತ್ತು.

## ೨೪೧೫. ಸ್ವರಾಜ್ಯ ಪ್ರಾಪ್ತಿಯ ನಂತರ

ಹಿಂದೆ ಗರ್ಜಿಸುತ್ತಿದ್ದ ಸಿಂಹಗಳು ಸದ್ಯ
ಸುಮ್ಮನಾದವು ಹೇಗೆ? ಇದು ಒಂದು ಚೋದ್ಯ.
ಹೊಟ್ಟೆ ತುಂಬಿದ ಬಳಿಕ ಪ್ರತಿಯೊಂದು ಪ್ರಾಣಿ.
ಸುಮ್ಮನಾಗುವುದೆಂದು ಹೇಳಿದನು ಮಾಣಿ.

## ೨೪೧೬. ದೇಶಭಕ್ತಿಯ ಫಲಾಹಾರ

ಹಿಂದೆ ಜೈಲಿಗೆ ಹೋದ ಪುಣ್ಯಾತ್ಮನಾರು ?
ಈತನಿಗೆ ಈ ಹೊತ್ತು ಎರಡೆರಡು ಕಾರು.
ಕುಳಿತಲ್ಲಿ ದೇಶಭಕ್ತಿಯ ಫಲಾಹಾರ
ರಾಜಕಾರಣವಾಯ್ತು ಸಗಟು ವ್ಯಾಪಾರ.

## ೨೪೧೭. ಹಿಂಸೆ ಬೇಡೆಂದು

ಹಿಂಸೆ ಬೇಡೆಂದು, ಸಖಿ, ಹೇಳಿದನು ಬುದ್ಧ.
ಆದರೂ ಆಗಾಗ್ಗೆ ನಡೆಯುತಿದೆ ಯುದ್ಧ.
ಯುಗ ಕಳೆದರೂ ನಮಗೆ ಬರಲಿಲ್ಲ ಬುದ್ಧಿ.
ಅಣುಬಾಂಬು ಎನ್ನುವುದೇ ನಮ್ಮ ಅಭಿವೃದ್ಧಿ.

## ೨೪೧೮. ಮೇನಕೆಯ ಪತ್ರ

ಹೀಗಿತ್ತು ಮೇನಕೆಯು ಬರೆದಂಥ ಪತ್ರ :
ಒಂದು ದಿನ ಬರಬೇಕು ನೀ ನನ್ನ ಹತ್ರ.
ನೀ ಬರೆದ ಚುಟಕಗಳ ಕೇಳಬೇಕೆಂಬೆ
ಅವುಗಳನು ಬಲು ಹೊಗಳುತ್ತಿದ್ದಾಳೆ ರಂಭೆ.

## ೨೪೧೯. ಹದಿನೆಂಟು ಸುತ್ತು

ಹೀಗುಂಟು ಹಾಗುಂಟು, ನಿಮಗಿಲ್ಲ ಗೊತ್ತು
ಹೀಗೆಂದು ಹಾಕಿಸಿದ ಹದಿನೆಂಟು ಸುತ್ತು.
ಆಮೇಲೆ ಕಿಸೆ ಸ್ವಲ್ಪ ಬಿಸಿ ಮಾಡಿದಾಗ
ಮಾಡಿಕೊಟ್ಟನು ಕೆಲಸ ಆದಷ್ಟು ಬೇಗ.

## ೨೪೨೦. ಹುಚ್ಚು

ಹುಚ್ಚಿನೊಳಗೂ ಉಂಟು ಎರಡು ವಿಧ ನೀರೆ,
ಈ ಎರಡು ಹುಚ್ಚುಗಳ ಪರಿಣಾಮ ಬೇರೆ
ಗಂಡಹೆಂಡಿರ ಹುಚ್ಚಿನೊಳಗುಂಟು ಪ್ರೀತಿ.
ಸೈನಿಕರ ಹುಚ್ಚಿನಲಿ ಈ ಧರೆಗೆ ಭೀತಿ.

### ೨೪೨೧. ಹುಚ್ಚು ಹಿಡಿಸಿತು

ಹುಚ್ಚು ಹಿಡಿಸಿತು ನನಗೆ ನಿನ್ನ ಮುಖ ಭಂಗಿ.
ಆಮೇಲೆ ನೀನಾದೆ ನನ್ನ ಅರ್ಧಾಂಗಿ.
ಅಂದು ನೋಡಿದ ನೋಟ ಇಂದಿಗೂ ಹಸಿರು
ಆಮೇಲೆ ನೀನಾದೆ ಮೂರು ಸಲ ಬಸಿರು.

### ೨೪೨೨. ನಮ್ಮೂರ ರಂಗಿ

ಹುಚ್ಚು ಹಿಡಿಸಿದಳು, ಸಖಿ, ನಮ್ಮೂರ ರಂಗಿ
ಮರುಳನಾದನು ಮಂತ್ರಿ ನೋಡಿ ಮುಖಭಂಗಿ.
ಬೇಲೇಕೇರಿಯ ಬಂಗ್ಲೆಯಲಿ ನಡೆದ ಆಟ
ಸಕಲರಿಗೆ ಗೊತ್ತಾಗಿ ದೊಡ್ಡ ಪೇಚಾಟ.

### ೨೪೨೩. ಅಣುಯುಗದ ಸಸ್ಯ

ಹುಟ್ಟಿಕೊಂಡಿದೆ ಈಗ್ಗೆ ಇನ್ನೊಂದು ಸಸ್ಯ.
ಈ ಸಸ್ಯದೊಳಗುಂಟು ಲೋಕದ ಭವಿಷ್ಯ.
ವಿಜ್ಞಾನ ಲತೆಗೆ ಅರಳಿವೆ ಎರಡು ಹೂವು.
ಒಂದು ಜೀವನದರಳು; ಇನ್ನೊಂದು ಸಾವು.

### ೨೪೨೪. ವಿದ್ಯುತ್ ವಿಕಾಸ

ಹುಟ್ಟಿದವು ಲಕ್ಷಗಟ್ಟಲೆ ಕೀಲೋವಾಟು
ಮಿಂಚತೊಡಗಿದವು ಕುಬೇರನ ಮನೆಯ ಗೇಟು.
ರಾಜಮಾರ್ಗದ ಕಂಬಗಳಿಗೆ ಹೊಸ ದೀಪ.
ಬಡ ಜನರ ಜಠರದಲಿ ಬೆಳಕಿಲ್ಲ, ಪಾಪ!

### ೨೪೨೫. ನೀರಾವರಿ ಪಂಪು

ಹುಟ್ಟುವಳಿ ಅಧಿಕಗೊಳಿಸಲು ಪಂಪು ಬೇಕು.
ಹೀಗೆಂದು ಸಾಲ ಪಡೆದನು ನಮ್ಮ ರಾಕು.
ಈ ಸಾಲದಿಂದ ಮಗನಿಗೆ ಹೆಣ್ಣು ತಂದ.
ಹುಟ್ಟುವಳಿ ಅಧಿಕವಾದದ್ದು ನಿಜವೆಂದ.

## ೨೪೨೬. ಹುಟ್ಟುವುದು

ಹುಟ್ಟುವುದು ಸಾಯುವುದು ಬದುಕುವುದು ಮತ್ತೆ
ಇವುಗಳನು ನಡೆಸುತಿದೆ ಪ್ರತಿಯೊಂದು ಕತ್ತೆ.
ಬದುಕುವುದು ಮುಖ್ಯವಲ್ಲವೊ, ನನ್ನ ಮಗನೆ,
ಬದುಕೆನ್ನುವುದು ಆಗದಿರಲೆಂಬೆ ಬದನೆ.

## ೨೪೨೭. ಹುಡುಕಾಡಿದರು

ಹುಡುಕಾಡಿದರು ಮಗಳೆ, ಪ್ರತಿಯೊಂದು ಕೇರಿ
ಚಂದ್ರಲೋಕದ ವರೆಗೆ ನೋಡಿದರು ಹಾರಿ.
ತ್ರಿಭುವನವ ತಿರುಗಿದನು ಜಾನಕಿಯ ಗಂಡ.
ತೊಟ್ಟಿಲಲ್ಲೇ ಇತ್ತು ಅಖಿಲ ಬ್ರಹ್ಮಾಂಡ.

## ೨೪೨೮. ಹುಬ್ಬಳಿ–ಕಾರವಾರ ರೈಲು

ಹುಬ್ಬಳ್ಳಿಯಿಂದ ಬರಲಿದೆ ರೈಲುಮಾರ್ಗ
ಆಮೇಲೆ ಮೂರು ಫರ್ಲಾಂಗಿಗೇ ಸ್ವರ್ಗ.
ಬಿಣಗೆ ಘಟ್ಟದ ಮೇಲೆ ಶಿವನ ಕೈಲಾಸ
ಹೆಣ ಹೊರುವ ಪುಣ್ಯಾತ್ಮರಿಗೆ ಇಲ್ಲ ತ್ರಾಸ.

## ೨೪೨೯. ನನ್ನ ಚೌಪದಿ

ಹುರಿಗಡಲೆ ತುಂಬಲಿಕೆ ಚೌಪದಿಯ ಪಾತ್ರೆ.
ಪ್ರತಿಯೊಂದು ಪಂಕ್ತಿಯಲಿ ಹದಿನೆಂಟು ಮಾತ್ರೆ.
ಕಿಲಬು ಬಾರದ ಹಾಗೆ ಪ್ರಾಸದ ಕುಲಾಯಿ
ಸೃಷ್ಟಿಸಿದ ಕವಿ ಯಾರು ? ನಾನು ಬಡಪಾಯಿ.

## ೨೪೩೦. ಹುರಿಗಡಲೆ

ಹುರಿಗಡಲೆ, ಹುರಿಗಡಲೆ, ಸಿಟ್ಟೇಕೆ ಹೇಳು.
ನಿನ್ನ ಮೇಲೂ ಚುಟಕ ಬರೆಯುವೆನು ಕೇಳು.
ನೀ ತೋಷದಲಿ ನಕ್ಕು ಬಿಡುವೆ ಹುರಿದಾಗ
ಈ ತರದ ತ್ಯಾಗ ಯಾರಿಂದಲೂ ಆಗ.

## ೨೪೩೧. ಹುಳ

ಹುಳ ನೀನು ಹುಳ ಎಂದು ನಿಂದಿಸಲು ನರನು,
ಹುಳದ ಎಂಜಲದಿಂದ ಸೂಸಿತ್ತು ಜೇನು.
ಯಾರಿಗೂ ಬೇಡಯ್ಯ, ಹುಳದ ಸಂಸಾರ
ಎಂದೆನಲು ಜನಿಸಿತ್ತು ರೇಶಿಮೆಯ ದಾರ.

## ೨೪೩೨. ಹುಂಜ

ಹುಂಜವೆಂದಿತು ತಾನು ಕೂಗಿದ್ದರಿಂದ
ಸೂರ್ಯದೇವನು ಎದ್ದು ಈ ಧರೆಗೆ ಬಂದ.
ಅಹುದು ಅಹುದೆಂದು ನುಡಿಯಿತು ಒಂದು ಹಕ್ಕಿ.
ಹುಂಜ ಇನ್ನೊಮ್ಮೆ ಕೂಗಿತು ಹರುಷ ಉಕ್ಕಿ.

## ೨೪೩೩. ಔದ್ಯಮೀಕರಣ

ಹೂದೋಟಗಳ ಬದಲು ಡಾಂಬರದ ಗಲ್ಲಿ
ಇಣಚಿ ಮೊಲ ಜಿಂಕೆಗಳ ಬದಲಾಗಿ ಹಲ್ಲಿ
ಕ್ಷಿತಿಜ ರೇಖೆಯ ಬದಲು ಬಂದರದ ಧಕ್ಕೆ
ತಂತಿ ದೀಪಗಳೆಸೆಯೆ ಮರೆಯಾಯ್ತು ಚಿಕ್ಕೆ.

## ೨೪೩೪. ಶಿಕ್ಷಣ

ಹೂವಾಗಿ ಅರಳಬೇಕೆಂಬೆ ಹೈಸ್ಕೂಲು
ಹಿಡಿಯಬಾರದು ಶಿಕ್ಷಕರು ಕೈಲಿ ಕೋಲು.
ಕೋಲು ಹಿಡಿದರೆ ಉದುರಿ ಹೋಗುವುದು ಮೊಗ್ಗು
ಆಮೇಲೆ ಉದ್ಯಾನದೊಳಗಿಲ್ಲ ಹಿಗ್ಗು.

## ೨೪೩೫. ಬೆಳವಣಿಗೆ

ಹೂವಿನಲಿ ಮುಗುಳುನಗೆ, ಮಿಡಿಯೊಳಗೆ ಭೋಗ.
ಕಾಯಿ ಹಣ್ಣಾದೊಡನೆ ತರತರದ ರೋಗ.
ಮೈಯೊಳಗೆ ರಸ ತುಂಬಿ ಫಲ ಪಕ್ವವಾಗೆ
ತಿಂದುಬಿಡಬೇಕೆಂದು ಯೋಚಿಸಿತು ಕಾಗೆ.

## ೨೪೩೬. ವಿಭಜನೆ

ಹೂವಿನೊಳಗಿನ ಚೆಲವು ಬಂತು ಎಲ್ಲಿಂದ ?
ಪಕಳೆಗಳ ವಿಂಗಡಿಸಿ ನೋಡಿದನು ಕಂದ.
ತಾಯಿಯೆಂದಳು; ಮಗನೆ ನನಗಿಲ್ಲ ಶಂಕೆ.
ದೊಡ್ಡ ವಿಜ್ಞಾನಿಯಾಗುವೆ ನೀನು, ಮಂಕೆ.

## ೨೪೩೭. ಹೆಚ್ಚು ಮಾತಾಡಿದರೆ

ಹೆಚ್ಚು ಮಾತಾಡಿದರೆ ಮಳೆಗೆ ಬೇಜಾರು
ಆಕಾಶದಲಿ ಹಾರಿ ಹೋಗುವುದು ನೀರು.
ಮಾತು ಹೆಚ್ಚಾದಂತೆ ಮಳೆ ಕಡಮೆಯಾಗಿ
ಊಟಕ್ಕೆ ಸಿಗಲಿಲ್ಲ ಸಾಕಷ್ಟು ರಾಗಿ.

## ೨೪೩೮. ಹೆಸರು

ಹೆಸರು ಸುಂದರಿ ಏನು ? ಬಹಳ ಸಂತೋಷ
ಮದುವೆಯಾಗುವ ಪತಿಗೆ ಕರುಣಿಸಲಿ ಈಶ.
ಇವಳ ತಂಗಿಯ ಹೆಸರು ಕನಕಾಂಗಿ ತಾನೆ ?
ಕಪ್ಪಗಿದ್ದರು, ಬುದ್ಧಿ ಚಿನ್ನದ ನಮೂನೆ.

## ೨೪೩೯. ಮೀನು ತಂದಾಗ

ಹೆಂಗರು ತಿನ್ನಬಾರದು ಮೀನು ಹೆಚ್ಚು
ಪ್ರತಿವರುಷ ಬಸುರಾಗಿ ಹಿಡಿಯುವುದು ಹುಚ್ಚು.
ಮೀನು ತಂದಾಗ ಈ ಮಾತು ನೆನಪಿಟ್ಟು
ತುಸು ತಿನ್ನಬೇಕು ಹೆಚ್ಚಿಗೆ ನನಗೆ ಕೊಟ್ಟು.

## ೨೪೪೦. ಹೆಂಗಸರ ನೇತೃತ್ವ

ಹೆಂಗಸರ ನೇತೃತ್ವ ಬರಬೇಕು ಎಂದು
ಚುಟಕಮ್ಮ ಹೇಳಿದಳು ಎಲೆ ಅಡಕೆ ತಿಂದು,
ಗಂಡಸರು ಹಾಳುಗೆಡವಿದರು ಈ ದೇಶ
ಮೈತುಂಬ ಧರಿಸಿ ಖಾದಿಯ ಹಗಲು ವೇಷ.

### ೨೪೪೧. ಗುಳಿಗೆಯ ಪರಾಕ್ರಮ

ಹೆಂಗಸರು ಪ್ರತಿ ದಿವಸ ನುಂಗಿದರೆ ಗುಳಿಗೆ
ಬಾಳು ಸವಿಯಾಗಲಿಕೆ ಸಾಕು ಅರಗಳಿಗೆ
ಆಮೇಲೆ ನಿಮಗಿಲ್ಲ ಮಕ್ಕಳ ಗಲಾಟೆ
ಸಂಸಾರವೆಂದಿಗೂ ಹೊಡೆಯದು ಲಗಾಟೆ.

### ೨೪೪೨. ಕುಳ್ಳ ಗಂಡ

ಹೆಂಡತಿಗೆ ಪತಿರಾಯನಲ್ವೆ ಸರ್ವಸ್ವ?
ಹೌದು, ಸಖಿ; ಆಗಬಾರದು ಅವನು ಹ್ರಸ್ವ.
ಕುಳ್ಳನಾದರೆ ಪಾಪ ಮಡದಿಯ ಫಜೀತಿ.
ಪೂರ್ಣ ಬದಲಾಗುವುದು ಚುಂಬನದ ರೀತಿ.

### ೨೪೪೩. ಶೈಲಿ

ಹೆಂಡತಿಯ ಜೊತೆಗೆ ಕೊಚ್ಚುವ ಹಾಗೆ ಹರಟೆ
ಮೂಡಿ ಬಂದರೆ ಶೈಲಿ, ಬಸಿಯುವುದು ಒರತೆ.
ಎಲೆ ಅಡಿಕೆ ಹಾಕಿ ಸೊಗಸಾಗಿ ಮಾತಾಡಿ
ಅರಳಿಸಿದ ಕವನ ಹೋಗುವುದಿಲ್ಲ ಬಾಡಿ.

### ೨೪೪೪. ಬೆಂಗಳೂರಿನ ಹವಾಮಾನ

ಹೇಗುಂಟು ಬೆಂಗಳೂರಿನ ಹವಾಮಾನ?
ನಿತ್ಯವೂ ನಡೆಯುತಿದೆ ತರತರದ ಗಾನ.
ಬಗೆಬಗೆಯ ಕುಣಿತಗಳಿಗೂ ಉಂಟು ಜಾಗ
ಸರಕಾರಿ ಸೌಧದಲಿ ದಿನಕೊಂದು ಲಾಗ.

### ೨೪೪೫. ರಾಜಕಾರಣದ ಹಣೆಬರಹ

ಹೇಗುಂಟು ರಾಜಾಕಾರದ ಹಣೆಬರಹ?
ಒಬ್ಬೊಬ್ಬ ಮಂತ್ರಿಗಳು ಒಂದೊಂದು ತರಹ.
ಅರ್ಥಮಂತ್ರಿಗೆ ಮಾರವಾಡಿಗಳ ದೋಸ್ತಿ.
ಮುಖ್ಯಮಂತ್ರಿಗೆ ಬೇಕು ನುಂಗಲಿಕೆ ಜಾಸ್ತಿ.

## ೨೪೪೬. ವಿಧಾನ ಸೌಧದಲ್ಲಿ

ಹೇಗುಂಟು ಸೌಧದೊಳಗಿರುವ ಸಿಬ್ಬಂದಿ ?
ಎಲ್ಲರೂ ಕರ್ತವ್ಯ ದಕ್ಷತೆಯ ಮಂದಿ.
ಸೇಕಡಾ ಐವತ್ತು ಮಾಡುವರು ನಿದ್ದೆ.
ಉಳಿದವರು ಹರಟೆ ಹೊಡೆಯುವರು ನಡುಮಧ್ಯೆ.

## ೨೪೪೭. ಹೇಗೆ ಸಾಗಿದೆ

ಹೇಗೆ ಸಾಗಿದೆ ಭಾರತದ ಲೋಕಶಾಹಿ ?
ಅಗಲವಾಗಿದೆ ರಾಜಕಾರಣಿಯ ಬಾಯಿ.
ಹೇಗೆ ಸಾಗಿದೆ ದೇಶಸೇವಕರ ತ್ಯಾಗ.
ಸಿಕ್ಕಿದ್ದು ಬಚ್ಚಿಟ್ಟು ಹಾಕಿದರು ಬೀಗ.

## ೨೪೪೮. ದೇವನಿಗೆ

ಹೇ ದೇವ, ಕಾಣೆಯಾಗಿತ್ತೇನು ಬುದ್ಧಿ ?
ಎಲ್ಲಿ ಹೋಗಿತ್ತು ಅಂತಃಕರಣದ ಶುದ್ಧಿ ?
ಕಳ್ಳಪೇಟೆಯ ಭಕ್ತರಿಗೆ ವಿಜಯ ನೀಡಿ.
ತೆಗೆದುಕೊಳ್ಳುವೆ ಲಂಚ, ಇದು ಅಲ್ವೆ ರಾಡಿ ?

## ೨೪೪೯. ಹೇ ದೇವ

ಹೇ ದೇವ, ನಿತ್ಯವೂ ಪೂಜಾರಿಯೊಡನೆ
ಮಾತನಾಡುವ ನೀನು ಒಮ್ಮೆ ನಮ್ಮೊಡನೆ,
ಮಾತನಾಡಿದರೆ ಮಾತ್ರ ನಿನ್ನ ಕಿಮ್ಮತ್ತು.
ಸಾಮಾನ್ಯ ಜನತೆಗೂ ಆಗುವುದು ಗೊತ್ತು.

## ೨೪೫೦. ಮಾನವನ ಸುದ್ದಿ

ಹೇ ದೇವ, ನಿನಗೇಕೆ ಮಾನವನ ಸುದ್ದಿ ?
ವಿಪರೀತಕೇರಿ ಬಿಟ್ಟಿದೆ ನರನ ಬುದ್ಧಿ ?
ಚಂದಿರನ ಮೇಲೆ ಏರಿದ್ದಾನೆ ಸದ್ಯ.
ನಿನ್ನ ಮೇಲೂ ಏರಿ ಹೋಗುವುದು ಸಾಧ್ಯ.

## ೨೪೫೧. ಲಂಚ ಕೊಟ್ಟು

ಹೇ ದೇವ, ನಿನಗೆ ಭಕ್ತರು ಲಂಚ ಕೊಟ್ಟು
ಮರಳುವರು ಇದಕೆ ಕಾಣಿಕೆಯ ಹೆಸರಿಟ್ಟು,
ಅಧಿಕಾರಿ ಇದಕೆ ಮಾಮೂಲು ಹೆಸರಿಟ್ಟು
ತೋರಿಸುವ ನಿನ್ನ ಕಡೆಗೆ ತನ್ನ ಬೊಟ್ಟು.

## ೨೪೫೨. ಹೇ ದೇವ

ಹೇ ದೇವ, ನೀನೇಕೆ ಅಡಗಿಕೊಂಡಿರುವೆ ?
ಓಡಾಡುತಿದೆಯಲ್ಲ ಈ ಸಣ್ಣ ಇರುವೆ.
ದೇವನೆಂದನು ! ಅಡಗಿಕೊಳ್ಳುವುದೆ ವಾಸಿ
ನನಗೆ ತೊಂದರೆ ಬೇಡ, ಜನರು ಬಿಕನಾಸಿ.

## ೨೪೫೩. ಹೇ ದೇವ

ಹೇ ದೇವ, ನೀನು ಮಾಡುವುದಿಲ್ಲ ಊಟ.
ಆದರೂ ಬದುಕಿರುವೆ ! ಇದು ನಿನ್ನ ಆಟ !
ದೇವನೆಂದನು : ನಾನು ತಿನ್ನುವೆನು ಗಾಳಿ
ನಿನ್ನಂಥ ಭಕ್ತರಿಗೆ ನೀಡುವೆನು ಕೋಳಿ.

## ೨೪೫೪. ದೇವರ ಫಜೀತಿ

ಹೇ ದೇವ, ಹೇ ದೇವ, ಎಲ್ಲಿದ್ದಿ ನೀನು ?
ಸಂಪೂರ್ಣ ಬೇಸತ್ತೆ ಮಾಡಿ ಟೆಲಿಫೋನು
ದೇವನೆಂದನು : ನನಗೆ ವೇಳೆಯೇ ಸಿಗದು
ನನ್ನ ಮನೆಯಲ್ಲಿಯೂ ನುಂಗಿದರು ನಗದು.

## ೨೪೫೫. ಹೇ ದೇವ

ಹೇ ದೇವ, ಹೇ ದೇವ, ನಿನಗೊಂದು ಸುದ್ದಿ
ನಮ್ಮ ಜನರಿಗೆ ಇನ್ನು ಬರಲಿಲ್ಲ ಬುದ್ಧಿ.
ಯಾವಾಗಲೂ ನೀನು ಅವರ ಜೊತೆಯಲ್ಲಿ
ಇದ್ದರೂ ಹುಡುಕಲಿಕೆ ಹೋಗುವರು ಅಲ್ಲಿ.

### ೨೪೫೬. ಹೇ ದೇವ

ಹೇ ದೇವ, ಹೊರಗೆ ಬಾ, ಎಲ್ಲಿ ಅಡುಗಿರುವೆ?
ಹರಿದಾಡುತಿದೆ ನೋಡು ಈ ಸಣ್ಣ ಇರುವೆ.
ನೀನು ದೊಡ್ಡವನಾಗಿ ನೀನಗೇಕೆ ಭೀತಿ?
ಓರೆಯಾಗಿದೆ ಏನು ಈ ಜಗದ ರೀತಿ?

### ೨೪೫೭. ಇದು ರಾಜಮೋಹ

ಹೇ ಪುರಂದರದಾಸ, ಇದು ರಾಜಮೋಹ!
ಹಾಸಿಗೆಯ ಹಿಡಿದರೂ ಗದ್ದುಗೆಯ ನೇಹ.
ನಾನೂರು ವರುಷಗಳು ಕಳೆದರೂ ದಾಸಾ,
ನೀನು ಹಾಡಿದ್ದು ಆಧುನಿಕ ಇತಿಹಾಸ.

### ೨೪೫೮. ಹೇಳಿಯೇ ಬಿಟ್ಟೆ

ಹೇಳಬೇಕಾದುದನು ಹೇಳಿಯೇ ಬಿಟ್ಟೆ.
ಹೀಗಾಗಿ ಗಟ್ಟಿಯಾಯಿತು ನನ್ನ ರಟ್ಟೆ.
ಹೇಳಬೇಕಾದುದನು ಮನದೊಳಗೆ ಇಡಲು.
ಸಂಪೂರ್ಣ ಬಂಜೆಯಾಯಿತು ನನ್ನ ಒಡಲು.

### ೨೪೫೯. ತೊದಲು

ಹೇಳಲಿಕೆ ಏನಾದರೂ ಇರಲಿ ಮೊದಲು.
ತಪ್ಪಿಲ್ಲ ಮಾತಾಡಿದರೆ ಪೂರ್ಣ ತೊದಲು.
ಅನುಭವವು ಮೂಡಿದರೆ ಈ ತೊದಲಿನಿಂದ
ಮಾತು ಶಾಶ್ವತವಾಗಿ ಬದುಕಬಹುದೆಂದ.

### ೨೪೬೦. ಹೈಸ್ಕೂಲ ಸ್ಥಾಪನೆಗೆ

ಹೈಸ್ಕೂಲ ಸ್ಥಾಪನೆಗೆ ರೂಪಾಯಿ ಐದು.
ಪ್ರೀತಿಯಲಿ ನೀಡಿದ್ದೆ ಶ್ರಮದಾನ ಗೈದು.
ನನ್ನ ಮಗನಿಗೆ ಈಗ ನೌಕರಿಯ ನೀಡಿ,
ನ್ಯಾಯ ಕೊಡಬೇಕೆಂದುಕೊಳ್ಳುವೇನು ಬೇಡಿ.

## ೨೪೬೧. ನಮ್ಮೂರಿನ ಶಾಸಕ

ಹೊಟ್ಟೆ ತುಂಬವ ತನಕ ಸಿಕ್ಕಿದವು ವೋಟು
ಅರಗಳಿಗೆಯಲಿ ಮೈಗೆ ರೇಶಿಮೆಯ ಕೋಟು.
ಮರುದಿವಸ ಬೆಂಗಳೂರಿಗೆ ಹೋಗಿ ಬಂದ.
ಬರುವಾಗ ಕಿಸೆಯೊಳಗೆ ಏನೇನೋ ತಂದ.

## ೨೪೬೨. ಚರಿತಾರ್ಥ

ಹೊಟ್ಟೆ ತುಂಬುವ ರೀತಿ ನಾನಾ ನಮೂನೆ:
ರೈತನಿಗೆ ಭೂಮಿ, ಕೂಲಿಗೆ ಕಾರಖಾನೆ.
ಬೆಟ್ಟದೊಳಗಿನ ವ್ಯಾಧನಿಗೆ ಮೊಲದ ಬೇಟೆ.
ಪಟ್ಟಣದ ಡೊಳ್ಳ ಸೆಟ್ಟಿಗೆ ಕಳ್ಳ ಪೇಟೆ.

## ೨೪೬೩. ಉಬ್ಬರದ ಫಲಶ್ರುತಿ

ಹೊಟ್ಟೆಯುಬ್ಬರದಿಂದ ಗಣಪತಿಯ ಧೋತ್ರ
ಅಗಲವಾಗಲು ಜನರು ಹಾಡಿದರು ಸ್ತೋತ್ರ.
ದುಡ್ಡಿನುಬ್ಬರದಿಂದ ನರನ ಲಂಗೋಟಿ
ಹರಿದುಹೋಗಲು ನಗ್ನವಾಯ್ತು ಜನಕೋಟಿ.

## ೨೪೬೪. ಚುಟಕದ ಸಾರಥಿಗೆ

ಹೊಡಿ ಮಗನೆ, ಹೊಡೆ ಮಗನೆ, ಹೊಡಿ ನನ್ನ ಜಟಕಾ
ಅರಗಳಿಗೆಯಲಿ ಮುಟ್ಟಬೇಕು ಈ ಚುಟಕ.
ಬೆಂಗಳೂರನು ಮುಗಿಸಿ ಆಮೇಲೆ ದಿಲ್ಲಿ
ನಾರುತಿದೆ ಭಾರತದ ಪ್ರತಿಯೊಂದು ಗಲ್ಲಿ.

## ೨೪೬೫. ನೂತನ ಪುಢಾರಿ

ಹೊತ್ತಾಯ್ತು ಸಖಿ, ನನಗೆ ಬರಲಿಕ್ಕೆ ಇಂದೆ.
ರಾಜಕಾರಣದಲ್ಲಿ ತರತರದ ದಂಧೆ.
ನಮ್ಮ ಜಿಲ್ಲೆಯ ಒಬ್ಬ ನೂತನ ಪುಢಾರಿ
ಮಣಗಟ್ಲೆ ಹಣ ತಿಂದು ಆದನು ಪರಾರಿ.

## ೨೪೬೬. ಹೊಲಸು

ಹೊಲಸೆಂದು ಮೂಗು ಮುರಿಯುವುದೇಕೆ ಸ್ವಾಮಿ?
ಹೊಲಸು ಗೊಬ್ಬರವಾಗಿ ಫಲಿಸುವುದು ಭೂಮಿ.
ನಮ್ಮ ಸರಕಾರಕ್ಕೆ ಗೊಬ್ಬರದ ಹುಚ್ಚು
ಅಂತೆಯೇ ಆಡಳಿತದಲಿ ಹೊಲಸು ಹೆಚ್ಚು.

## ೨೪೬೭. ಬಡ ಸೂಳೆ

ಹೊಲಸು ನಾರುವ ಬೀದಿಯಲಿ ನನ್ನ ವಾಸ.
ಆದರೂ ಕಾಮದೇವನಿಗೆ ಉಲ್ಲಾಸ!
ಎಲೆ ಕಾಮದೇವನೇ, ನಿನ್ನ ಹೂಬಾಣ
ಕಬ್ಬಿಣದ ಮೊನೆಯಾಗಿ ತಿವಿಯುತಿದೆ ಪ್ರಾಣ.

## ೨೪೬೮. ನನ್ನ ಕಾವ್ಯವಸ್ತು

ಹೊಲಸು ನಾರುವ ಪಟ್ಟಣದ ಬೀದಿಯಿಂದ
ನಕ್ಷತ್ರಗಳವರೆಗೆ ಹಾರಿದವು, ಕಂದ.
ಶ್ರೇಷ್ಠವಾದರು ಮಾನವ ಬುದ್ಧಿಮತ್ತೆ,
ನನ್ನ ಕಾವ್ಯದ ತಿರುಳು ನರನೆಂಬ ಕತ್ತೆ.

## ೨೪೬೯. ಹೊಸ ಉಪಾಯ

ಹೊಸ ಉಪಾಯವ ಹುಡುಕಿದನು ಮಂತ್ರಿಯೊಬ್ಬ
ಇದನು ಕೃತಿಗಿಳಿಸಿದರೆ ಪ್ರತಿ ದಿವಸ ಹಬ್ಬ.
ಧಾನ್ಯಗಳ ದುಷ್ಕಾಳ ಮುಗಿದು ಸಮೃದ್ಧಿ
ಮೂಷಿಕವ ಕೊಂದು ತಿನಬೇಕೆಂತೆ ಬುದ್ಧಿ.

## ೨೪೭೦. ಹೊಸ ಕಣ್ಣುಮುಚ್ಚಾಲೆ

ಹೊಸ ಕಣ್ಣು ಮುಚ್ಚಾಲೆ ಗೊತ್ತುಂಟೆ, ಹುಡುಗಿ?
ರಾಜಮಾರ್ಗದ ಮಗ್ಗುಲಲಿ ನೋಡು ಅಡಗಿ.
ರಸ್ತೆಯ ಸುಧಾರಣೆಗೆ ತರಿಸಿದ ಸಿಮೆಂಟು
ವಾಮ ಮಾರ್ಗದ ಗಂಟು ಅಡಗುವುದು ಉಂಟು.

## ೨೪೭೧. ಹೊಸ ಕಾಯ್ದೆ

ಹೊಸ ಕಾಯ್ದೆ ಬಂದದ್ದು ಗೊತ್ತಾಯ್ತು ತಾನೆ?
ಬಸುರಾಗಲಿಕ್ಕೆ ಬೇಕಂತೆ ಪರವಾನೆ!
ಗೊತ್ತುಂಟೆ, ಮಾರಾಯ ಇನ್ನೊಂದು ಗುಟ್ಟು?
ಸಾಯಬೇಕಾದರೂ ಬೇಕು ಪರ್ಮಿಟ್ಟು!

## ೨೪೭೨. ಕಾರಖಾನೆಗಳ ಸ್ಥಾಪನೆ

ಹೊಸ ಕಾರಖಾನೆ ಮಾಡಿದರು ಮಂಜೂರು
ಜಾಹಿರಾತಿನ ವಿವರಗಳು ಬಹಳ ಜೋರು.
ಆರು ತಿಂಗಳ ಮೇಲೆ ದುಡ್ಡಿನ ಅಭಾವ
ಮಂಜೂರು ಮಾಡಿದ್ದು ರದ್ದಾಯ್ತು ದೇವ.

## ೨೪೭೩. ಹೊಲಸಿಕೊಂಡಿದ್ದು

ಹೊಸ ಖಾದಿ ಕೋಟುಗಳ ಹೊಲಸಿಕೊಂಡಿದ್ದ
ಈ ಚುನಾವಣೆಯಲ್ಲಿ ಅಂಗಾತ ಬಿದ್ದ.
ಹಳೆ ಕೋಟಿನಲಿ ತುಂಬಿಕೊಂಡದ್ದು ಉಂಟು.
ಬಿದ್ದರೂ ಮುಗಿದುಹೋಗುವುದಿಲ್ಲ ಗಂಟು.

## ೨೪೭೪. ಹೊಸ ಗಾಳಿ

ಹೊಸ ಗಾಳಿ ಜೋರಾಗಿ ಬೀಸುತಿದೆ, ಕಂದ.
ಹೋದ ಹೋದಲ್ಲಿ ಈ ಹಾಳು ದುರ್ಗಂಧ.
ಮುಚ್ಚಿಕೊಂಡರು ಮೂಗು ಒಳಗುಂಟು ನಾತ.
ಈ ನಾತ ಲೋಕಶಾಹಿಯ ಭಾವಗೀತ.

## ೨೪೭೫. ನವ್ಯ ಚುಟಕ

ಹೊಸ ತರದ ಚುಟಕ ಬರೆದಿದ್ದೇನೆ, ತಂಗಿ :
ನರನ ಸಂಸಾರವೆನ್ನುವುದು ಮೂಲಂಗಿ.
ಮೈಯಿಗಿಂತಲು ಉದ್ದವಾಗಿದೆ ಕಿರೀಟ.
ಹೀಗುಂಟು ಆಧುನಿಕ ಜೀವನದ ಆಟ.

## ೨೪೭೬. ಉದ್ಘಾಟನೆ

ಹೊಸದಾಗಿ ತಂದು ಹಚ್ಚಿದರು ರಸಬಾಳೆ
ಇದರ ಉದ್ಘಾಟನೆಯು ನಡೆಯಲಿದೆ ನಾಳೆ.
ಕೃಷಿ ಮಂತ್ರಿಗಳು ಬಂದು ಹನಿಸುವರು ನೀರು
ಇದಕಾಗಿ ಓಡಾಡಲಿವೆ ಹತ್ತು ಕಾರು.

## ೨೪೭೭. ನೂತನ ಪ್ರಧಾನಿಗೆ

ಹೊಸದಿಲ್ಲಿಯಲಿ ಕುಳಿತ ನೂತನ ಪ್ರಧಾನಿ
ನಿನ್ನಿಂದ ಭಾರತಕೆ ಬರದಿರಲಿ ಹಾನಿ.
ಉತ್ಕರ್ಷ ಬರದಿದ್ದರೂ ಬೇಡ ಕೇಡು.
ಮಾರಾಯ, ಇಷ್ಟಾದರೂ ನೀನು ಮಾಡು.

## ೨೪೭೮. ದಿಲ್ಲಿಯ ಪ್ರಯಾಣ

ಹೊಸದಿಲ್ಲಿಯಲಿ ಪ್ರಮುಖರನು ಕಂಡು ಬಂದ.
ಹಿಂದಿರುಗಿ ಬರುವಾಗ ಏನೇನು ತಂದ ?
ಪಾಪ ! ಎರಡೂ ಕೈಗಳಲಿ ಬೆರಳು ಮಾತ್ರ.
ಮೇಲಾಗಿ ಕಡಮೆಯಾಯಿತು ಮೈಯ ಗಾತ್ರ.

## ೨೪೭೯. ಹೊಸ ನಾಟಕ

ಹೊಸ ನಾಟಕದ ಹೆಸರು ಲಂಚಾವತಾರ.
ನಾಟಕಕೆ ರಾಜಕಾರಣಿ ಸೂತ್ರಧಾರ.
ಕಿಸೆಯೊಳಗೆ ನೋಟುಗಳು, ಕೈಯೊಳಗೆ ರಾಟಿ.
ನಾಟಕಕೆ ಪ್ರೇಕ್ಷಕರು ಜನ ಕೋಟಿ ಕೋಟಿ.

## ೨೪೮೦. ಸಂಸ್ಕೃತಿ ವಿಕಾಸ

ಹೊಸ ನಿಯಮ ಪಾಸು ಮಾಡಿದೆ ಪಾರ್ಲಿಮೆಂಟು.
ಭಜನೆಗಳಿಗೂ ಉಂಟು ಸರಕಾರಿ ಗ್ರ್ಯಾಂಟು.
ಊರೆಲ್ಲ ಕೇಳುವಂತಿರಬೇಕು ಡೋಲು.
ಉದ್ದವಾಗಿರಬೇಕು ಬಾರಿಸುವ ಕೋಲು.

## ೨೪೮೧. ಪರ್ವಕಾಲ

ಹೊಸ ಪಕ್ಷ ಬಂತು, ಸಖಿ : ಇದು ಪರ್ವಕಾಲ.
ಬಡಬಗ್ಗರಿಗೆ ಈಗ್ಗೆ ಬೇಕಿಲ್ಲ ಸಾಲ.
ಬಡತನ ನಿವಾರಣೆಯ ಕಾರ್ಯ ಕೃತಿಗಿಳಿದು
ಮಾನವನ ಹಸಿವೆ ಹೋಯಿತು ಪೂರ್ಣ ಅಳಿದು.

## ೨೪೮೨. ಹೊಸ ಬಟ್ಟೆ ಹೊಲಿಸಿಲ್ಲ

ಹೊಸ ಬಟ್ಟೆ ಹೊಲಿಸಿಲ್ಲ ಹೆಚ್ಚಾಗಿ ರೇಟು
ಸಂಪೂರ್ಣ ಹರಿದುಹೋದರು ನನ್ನ ಕೋಟು.
ಷರ್ಟಿಗೂ ಹಣವಿಲ್ಲ, ಅದು ಕೂಡ ತುಟ್ಟಿ.
ಬಾಜಾರ ಸುತ್ತುವೆನು ಧರಿಸಿ ಲಂಗೋಟಿ.

## ೨೪೮೩. ಆಹಾರದ ಉತ್ಪಾದನೆಗಾಗಿ

ಹೊಸ ಬಾವಿ ಕಡಿಸಿದರೆ ಇಲ್ಲ ಬಿಕ್ಕಟ್ಟು
ಸರಕಾರ ತರಿಸಿಕೊಡುವುದು ಪಂಪುಸೆಟ್ಟು.
ಬಾವಿಯಲಿ ನೀರು ಬರದಿದ್ದರೂ ಕೂಡಾ
ಸರಕಾರಿ ಗ್ರಾಂಟು ಸಿಗುವುದು, ರಾಮಗೌಡಾ.

## ೨೪೮೪. ಹೊಸ ಮನೆ

ಹೊಸ ಮನೆಯ ಕಟ್ಟಿದನು ಹೊಸ ದುಡ್ಡಿನಿಂದ
ಈ ದುಡ್ಡು ಇಲ್ಲಿ ಬಂದದ್ದು ಎಲ್ಲಿಂದ ?
ಗಳಿಸುವವನಿಗೆ ಉಂಟು ತರತರದ ಹಾದಿ.
ದೇಶಭಕ್ತಿಯ ಜೊತೆಗೆ ಉಂಟು ಬಿಳಿ ಖಾದಿ.

## ೨೪೮೫. ಹೊಸ ಹುಡುಗಿಯರು

ಹೊಸ ಹುಡುಗಿಯರು ಈಗ್ಗೆ ಧರಿಸುವರು ಪ್ಯಾಂಟು
ಜಡೆಯಲ್ಲಿ ಹೊಸ ರೀತಿಯಲ್ಲಿ ಹೂವು ಉಂಟು.
ಚುಟಕಮ್ಮ ನೀನು ಕೂಡಾ ನವ್ಯ ರೀತಿ.
ಅನುಸರಿಸದಿದ್ದಾಗ ನಿನಗಿಲ್ಲ ಖ್ಯಾತಿ.

## ೨೪೮೬. ರೈತನ ವಿವೇಚನೆ

ಹೋದಲ್ಲಿ ಬಂದಲ್ಲಿ ಬರಿ ಬಾಯಿಮಾತು.
ಎರಡು ತುಟಿಗಳ ಮಧ್ಯದೊಳಗೊಂದು ತೂತು.
ವೀಳ್ಯದೆಲೆ ತಿನ್ನಲಿಕೆ ಮಾತ್ರ ಆಧಾರ.
ಇಂಥ ಮಂತ್ರಿಗಳಿಂದ ಜಳ್ಳು ಸರಕಾರ.

## ೨೪೮೭. ಸ್ಥಾನಿಕ ಪುಢಾರಿ

ಹೋದಹೋದಲ್ಲಿ ಈತನ ಬಗ್ಗೆ ಗುಲ್ಲು
ಒಂದು ದಿನ ಮುರಿದು ಬಿಡುವರು ಇವನ ಹಲ್ಲು.
ಮೊನ್ನೆ ಗೋವೆಗೆ ಹೋಗಿ ಹೊಸಬಳನು ತಂದ.
ಬರುವಾಗ ರಸ್ತೆಯಲಿ ಹೊಡಪೆಟ್ಟು ತಿಂದ.

## ೨೪೮೮. ಚುನಾವಣೆಯ ಫಲಿತಾಂಶ

ಹೋದಹೋದಲ್ಲಿ ಕುರಿಗಳ ಸಂಖ್ಯೆ ಏರಿ
ರಾಜ್ಯವಾಳುವ ಪಕ್ಷ ಹೊಡೆಯಿತು ನಗಾರಿ.
ಪ್ರತಿ ಪಕ್ಷದವರು ಅನುಭವಿಸಿದರು ಸೋಲು.
ದೊಣ್ಣೆಯಾಯಿತು. ಮಗನೆ, ಸರಕಾರಿ ಕೋಲು.

## ೨೪೮೯. ಹೋದ ಹೋದಲ್ಲಿ

ಹೋದಹೋದಲ್ಲಿ ಭೀಕರ ನಿರುದ್ಯೋಗ
ಯೌವನದ ಭರದಲ್ಲಿ ಮಾನಸಿಕ ರೋಗ.
ಹೊಟ್ಟೆ ತುಂಬುವುದಿಲ್ಲ, ಬಟ್ಟೆ ಬಿಕನಾಸಿ
ಶ್ರೀಮಂತರಿಗೆ ನಿತ್ಯ ಕೋಟಿಗಳ ರಾಶಿ.

## ೨೪೯೦. ಮಳೆ

ಹೋದಹೋದಲ್ಲಿ ಮಳೆ ಹೆಚ್ಚಾಗಿ, ಮಗಳೆ,
ಇಡಿಯ ದೇಶಕೆ ಬಂತು ವಿಪರೀತ ರಗಳೆ.
ಮುಗಿಲಿಗೂ ಬಿತ್ತಂತೆ ಬಲು ದೊಡ್ಡ ತೂತು.
ಮಳೆ ಎನ್ನುವುದು, ಮಗಳೆ, ಉದ್ದುದ್ದ ಮಾತು.

### ೨೪೯೧. ಅಮೆರಿಕದ ಧನಸಹಾಯ

ಹೋದಹೋದಲ್ಲಿ, ಸಖಿ, ಅಮೇರಿಕದ ದುಡ್ಡು
ನಿತ್ಯ ಮುಂಜಾನೆ ಬೆಣ್ಣೆಯ ಜೊತೆಗೆ ಬ್ರೆಡ್ಡು.
ಹೊಟ್ಟೆಗಿಲ್ಲದ ಪ್ರಾಣಿಗಾಯ್ತು ಆಧಾರ.
ಈ ದಾನವೆನ್ನುವುದು ನರಿಯ ವ್ಯವಹಾರ.

### ೨೪೯೨. ಹೋದ ಹೋದಲ್ಲಿ

ಹೋದಹೋದಲ್ಲಿ, ಸಖಿ, ಅಮೇರಿಕದ ಸುದ್ದಿ
ಸಂಪೂರ್ಣ ವೆಚ್ಚವಾಗಿದೆ ನಮ್ಮ ಬುದ್ಧಿ.
ಹಿಂದೆ ನಡೆಯಿತು ಆಂಗ್ಲ ಜನರ ಅನುಕರಣೆ
ನಮಗೆ ಬೇಕಾದದ್ದು ಪರರ ಸೀಕರಣೆ.

### ೨೪೯೩. ಕುಡಿಯುವುದು ಜಾಸ್ತಿ

ಹೋದಹೋದಲ್ಲಿ ಸಖಿ ಕುಡಿಯುವುದು ಜಾಸ್ತಿ.
ಹಲವು ಜನ ಕಳೆದುಕೊಂಡರು ಆಸ್ತಿಪಾಸ್ತಿ.
ಗುಡಿಗೇರಿ ಭೀಮಣ್ಣ ಆಗಿ ಹೈರಾಣ
ನಡು ರಸ್ತೆಯಲಿ ಬಿದ್ದು ನೀಗಿದನು ಪ್ರಾಣ.

### ೨೪೯೪. ಹೋದ ಹೋದಲ್ಲಿ

ಹೋದಹೋದಲ್ಲಿ ಸಖಿ, ಹೊಲ ಹಪ್ಪುನಾತಾ
ಇದಕೆನ್ನುವರು ಅವರು ದುಡ್ಡಿನ ಪ್ರತಾಪ.
ಹೋದಹೋದಲ್ಲಿ ಸಖಿ, ಹರಕು, ಲಂಗೋಟಿ
ಸರಿಯಾಗಿ ಲೆಕ್ಕ ಹಾಕಿದರೆ ದಶ ಕೋಟಿ.

### ೨೪೯೫. ಅಧಿಕಾರ ಇರುವನಕ

ಹೋದಹೋದಲ್ಲಿ ಸತ್ಕಾರಗಳ ಸುಗ್ಗಿ.
ಹೂಮಾಲೆ ಹಾಕಿದರು ಕೈ ಮುಗಿದು ಬಗ್ಗಿ.
ಅಧಿಕಾರ ಇರುವನಕ ಭರ್ತಿ ಪ್ರಖ್ಯಾತಿ.
ಆಮೇಲೆ ಮೂಸಿ ನೋಡುವುದಿಲ್ಲ ಕೋತಿ.

### ೨೪೯೬. ಸತ್ಕಾರಗಳ ಸುಗ್ಗಿ

ಹೋದಹೋದಲ್ಲಿ ಸತ್ಕಾರಗಳ ಸುಗ್ಗಿ.
ಈ ಸಮಾರಂಭಗಳ ಒಳಗಟ್ಟು ಹುಗ್ಗಿ.
ಶಾಲು ಜೋಡಿಯ ಜೊತೆಗೆ ರೇಶಿಮೆಯ ಅಂಗಿ.
ಪ್ರತಿಯೊಂದು ಭಾಷಣಕೆ ಹೊಗಳುಭಟ್ಟಂಗಿ.

### ೨೪೯೭. ಸಮತಾವಾದ

ಹೋದಹೋದಲ್ಲಿ ಸಮತಾವಾದ ಹಬ್ಬಿ
ಸಂತೋಷದಿಂದ ಹಾರಾಡಿದವು ಗುಬ್ಬಿ
ನಿಮಿಷದಲಿ ಹದ್ದು ಕೆಳಗಿಳಿದು ಮುದದಿಂದ
ಗುಬ್ಬಿ ನುಂಗಿದ ಮಹಾ ಕತೆಯ, ಕೇಳೆಂದ.

### ೨೪೯೮. ಹೋರಾಟ

ಹೋರಾಟದೊಳಗುಂಟು ನಿಜವಾದ ಗೆಲವು.
ಹೋರಾಡಿ ಹೋರಾಡಿ ಸೋತರೂ ಚೆಲವು.
ಪ್ರತಿಯೊಂದು ಸಲ ನಾನು ಸೋತೆ ಮಾರಾಯಾ,
ಮತ್ತಿಷ್ಟು ಮಿರುಗಿತಿದೆ ನನ್ನ ದೃಢಕಾಯಾ.

### ೨೪೯೯. ಹೋರಾಡಬೇಕು

ಹೋರಾಡಬೇಕು, ಸಖಿ, ಬಡಜನರಿಗಾಗಿ
ಎರಡು ಹೊತ್ತಿಗೆ ಸಿಗಲಿ ಸಾಕಷ್ಟು ರಾಗಿ.
ಆಮೇಲೆ ನೋಡೋಣ ಮಂತ್ರಿಗಳ ಡೌಲು
ಮೊದಲು ಬೇಕಾದದ್ದು ಒಂದಿಷ್ಟು ಜಾಲು.

### ೨೫೦೦. ಗಿಳಿಗಳು

ಹೌದು, ಗಿಳಿಗಳ ಸಂಖ್ಯೆ ಹೆಚ್ಚಾಯ್ತು ಸಧ್ಯ.
ಇದರೊಳಗೆ ಇಲ್ಲ, ಸಖಿ, ಸ್ವಲ್ಪವೂ ಚೋದ್ಯ.
ಗಿಳಿಗಳನು ಸಲುಹಿತಿದೆ ನಮ್ಮ ಸರಕಾರ.
ಆಗಾಗ್ಗೆ ನೀಡಿ ತರತರದ ಆಹಾರ.

### ೨೫೦೧. ವ್ಯಾಪಾರಿ ಸಂಘ

ಅಖಿಲ ಕರ್ನಾಟಕದ ವ್ಯಾಪಾರಿ ಸಂಘ
ರಾಜಕೀಯವನೇರಿ ಕುಳಿತಿರುವ ಮಂಗ
ತುತ್ತ ತುದಿಯನ್ನೇರಿ ನಿಂತುಹುದು ಮತ್ತೆ
ಮರದ ಬುಡದಲಿ ಮೇಯುತಿದೆ ಪ್ರಜಾಸತ್ತೆ.

### ೨೫೦೨. ಆಹಾರ ಖಾತೆ

ಅಡಿಗೆ ಮಾಡುವ ಮೊದಲು ಕೇಳು, ತನುಜಾತೆ;
ಹೊಸದಿಲ್ಲಿಯೊಳಗುಂಟು ಆಹಾರ ಖಾತೆ.
ಈ ಖಾತೆಯನ್ನುವುದು ಕಣಜಗಳ ಲೆಕ್ಕ
ಲೆಕ್ಕ ಹೆಚ್ಚಾಗಿ ಅಕ್ಕಿಯ ಬದಲು ದುಃಖ.

### ೨೫೦೩. ವರ್ತಕನ ಅನುಭವ

ಅಧ್ಯಕ್ಷರಿಗೆ ಮೊದಲು ಕೊಡಬೇಕು ಭಕ್ಷ್ಯ
ಆಮೇಲೆ ಉಳಿದ ದೇವರ ಕಡೆಗೆ ಲಕ್ಷ್ಯ
ಈ ರೀತಿ ಹಂಚದಿದ್ದರೆ ತಿಂಡಿತೀರ್ಥ
ಕೈಕೊಂಡ ವ್ಯವಹಾರದೊಳಗಿಲ್ಲ ಅರ್ಥ.

### ೨೫೦೪. ಅವರ ಚಾಪೆ

ಅವರು ಹೊಸೆಯುವ ಚಾಪೆ ಹದಿನೆಂಟು ಪೇಜು
ನಾಲ್ಕು ದಾರಗಳಲ್ಲಿಯೇ ನನ್ನ ಮೋಜು
ಅವರ ಹಾರಾಟಕ್ಕೆ ಮುಕ್ತ ಛಂದಸ್ಸು
ನನ್ನ ಸಂಚಾರಕ್ಕೆ ಚೌಪದಿಯ ಬಸ್ಸು.

### ೨೫೦೫. ನಮ್ಮ ಕವಿಗಳಿಗೆ

ಅನ್ನೆಗಂ ! ಸೊನ್ನೆಗಂ ! ಮೇಣು ! ಸೊಗಮಕ್ಕು !
ಇಂದಿಗೂ ಮೈದೋರುವುದೆ ಇಂಥ ಸೊಕ್ಕು ?
ಹೊಸಗನ್ನಡಕೆ, ಮಗನೆ, ದೊಡ್ಡ ಅವಮಾನ.
ಬಂಜೆಯಾಗಿದೆ ಏನು ನಮ್ಮ ಶತಮಾನ ?

### ೨೫೦೬. ಆಡಳಿತ ಭಾಷೆ

ಅಚ್ಚಗನ್ನಡದಲ್ಲಿ ಹಚ್ಚಿದರು ಬೋರ್ಡು
ಕನ್ನಡದಿ ಪ್ರಿಂಟಾಯ್ತು ಮಂತ್ರಿಗಳ ಕಾರ್ಡು
ಧನ್ಯವಾಯಿತು ನಾಡು; ಪರಮ ಸಂತೋಷ!
ಇನ್ನೇಕೆ ನಮಗೆ ಕನ್ನಡ ವಿಶ್ವಕೋಶ?

### ೨೫೦೭. ಅನುಭವಾಮೃತ

ಅಮೆರಿಕನ್ನರ ಗೋದಿ ಹೊಡೆಯಲಿದೆ ಗೋತಾ
ಆಮೇಲೆ ಭಾರತದ ಕಣಜದಲಿ ಖೋತಾ
ಪರದೇಶಗಳ ಮೇಲೆ ಅವಲಂಬಿಸಿದರೆ
ನಡುವೆಯೇ ಮುಗ್ಗರಿಸಿ ಬೀಳುವುದು ಕುದುರೆ.

### ೨೫೦೮. ಆಹಾರ ಮಂತ್ರಿ ಹೇಳಿಕೆ

ಆಹಾರ ಪ್ರಶ್ನೆಯನು ಬಗೆಹರಿಸಲಿಕ್ಕೆ
ಮಾರ್ಗವೊಂದೇ ಉಂಟು ನಮ್ಮ ದೇಶಕ್ಕೆ
ಚಂದ್ರಲೋಕದ ಭೂಮಿಯನು ಉತ್ತಿ ಬಿತ್ತಿ
ಕೃಷಿ ಮಾಡಿದರೆ ಮಾತ್ರ ಸಾಕಷ್ಟು ಬುತ್ತಿ.

### ೨೫೦೯. ಅತಿರೇಕ

ಆಕಾಶಕೇರಿದರೆ ದೇಶಾಭಿಮಾನ
ಮಾಡಬೇಕಾದೀತು ತಣ್ಣೀರ ಸ್ನಾನ.
ಆಕಾಶಕೇರಿಯೇ ಇಂದಿನ ಫಜೀತಿ
ದೇಶಾಭಿಮಾನ ರಣಹದ್ದುಗಳ ಜಾತಿ.

### ೨೫೧೦. ಆಧುನಿಕ ನಾಟಕ

ಆಧುನಿಕ ನಾಟಕದ ಪರದೆಯನು ತೆರೆದೆ
ರಂಗಭೂಮಿಯ ಪಾತ್ರಗಳನೆಲ್ಲ ಬರೆದೆ
ಒಂದೊಂದು ಚುಟಕದಲಿ ಒಂದೊಂದು ಸೋಗು
ನೋಡಿದವರೆಲ್ಲರೂ ಮುರಿಯುವರು ಮೂಗು.

## ೨೫೧೧. ನವ್ಯ ಮಾರ್ಗ

ಇದುವರೆಗೆ ಕಂಡದ್ದು ಬರಿ ನಾಲ್ಕು ದಿಕ್ಕು
ಈಗ ಬೇಕಾದದ್ದು ಬದನೆಯ ಬೆಕ್ಕು
ಹಳೆಧಾನ್ಯಗಳನೆಲ್ಲ ಅಂಗಡಿಗೆ ಕೊಟ್ಟು
ಎಲ್ಲರೂ ತಿನ್ನೋಣ ಹೊಸ ಕಡ್ಲೆಹಿಟ್ಟು.

## ೨೫೧೨. ಖಾಲಿಯಾದ ಮೇಲೆ

ಇದ್ದ ನೌಕರಿ ಹೋಗಿ ನಾನಾದೆ ಖಾಲಿ
ನನ್ನ ಹೂದೋಟಕ್ಕೆ ಈಗಿಲ್ಲ ಬೇಲಿ
ಈ ಹೊತ್ತಿನಿಂದ ನಾನು ಕ್ರಾಂತಿಕಾರ
ಎಚ್ಚರಿಕೆಯಿಂದಿರಲಿ ನಮ್ಮ ಸರಕಾರ.

## ೨೫೧೩. ನವ್ಯ ಕವಿಗೆ

ಇಂದು ಹುಟ್ಟಿದ ಹಕ್ಕಿಗೂ ಪಕ್ಕವುಂಟು
ಕಲಿಯುಗದ ಸೂರಣಕ್ಕೂ ಹಸಿರು ದಂಟು.
ಕೋಗಿಲೆಯ ಸಿರಿಕಂಠ ಗೊಗ್ಗರಾಗಿಲ್ಲ
ಸಕ್ಕರೆಯ ಯುಗದೊಳಗೆ ಇರಲಿ ತುಸುಬೆಲ್ಲ.

## ೨೫೧೪. ಇತಿಹಾಸ

ಇತಿಹಾಸವೆನ್ನುವುದು ವಿಕ್ಷಿಪ್ತ ಪ್ರಾಣಿ
ನಿನ್ನೆ ನೋಡಿದ ಬಣ್ಣ ಇಂದಿಲ್ಲ ಮಾಣಿ,
ಭಾಯಿಭಾಯಿಗಳೆಂದು ನಡೆದಿತ್ತು ದೋಸ್ತಿ,
ಈಗ್ಗೆ ನೋಡಿದರೆ ಎಲ್ಲೆಲ್ಲಿಯೂ ಕುಸ್ತಿ.

## ೨೫೧೫. ಹೆಸರಾಂತ ವ್ಯಕ್ತಿ

ಇವರ ಹೆಸರೆನ್ನುವುದು ಮನೆಮನೆಯ ಮಾತು
ಕೇಳುವರು ಅಡಿಗೆಮನೆಯಲಿ ಜನರು ಕೂತು
ಹೆಸರು ಕೇಳಿದ ಹಾಗೆ ಮಡಕೆಯಲಿ ಅನ್ನ
ಊಟ ಮಾಡಿದ ಬಳಿಕ ನೆತ್ತಿಯಲಿ ಪುಣ್ಯ.

## ೨೫೧೬. ವ್ಯಾಸಂಗಿ

ಇವನಾರು ಗೊತ್ತಾಯ್ತೆ ದೊಡ್ಡ ವ್ಯಾಸಂಗಿ
ಯಾವಾಗಲೂ ಹೊಲಸು ನಾರುತಿದೆ ಅಂಗಿ.
ಗಡ್ಡ ಬೋಳಿಸಲಿಕ್ಕು ಇಲ್ಲ ಪುರಸೊತ್ತು.
ಗಪಗಪನೆ ಬಾಯೊಳಗೆ ಹಾಕಿದನು ತುತ್ತು.

## ೨೫೧೭. ಮೂರಾರ್ಜಿ ದೇಸಾಯಿ

ಇವನು ಹಿಂಡುವ ಆಕಳಿಗೆ ಮೂರು ಕಾಲು
ಯಾವಾಗಲೂ ಕುಡಿಯುವುದು ಹಸರು ಹಾಲು
ಇವನು ಮಾತಾಡಿದರೆ ಹೊಸ ವೇದವಾಕ್ಯ
ಇವನಂಥ ಮೇಧಾವಿ ಸಿಗುವುದು ಅಶಕ್ಯ.

## ೨೫೧೮. ಗ್ರಾಮಪಂಚಾಯತಿ

ಇವನಾರು ಗೊತ್ತೆ? ಪಂಚಾಯ್ತಿ ಪ್ರೆಸಿಡೆಂಟು.
ಇವನ ಕಂಕುಳಕೆ ಹಳ್ಳಿಯ ಪಾರ್ಲಿಮೆಂಟು
ದಿಲ್ಲಿಯಲಿ ಪಾಸಾದ ಎಲ್ಲ ಕಾನೂನು
ಇಲ್ಲಿ ತಲುಪುವತನಕ ನೊರೆಯ ಸಾಬೂನು.

## ೨೫೧೯. ರಾಜಿನಾಮೆ ಕೊಟ್ಟ ಮಂತ್ರಿ

ಇಷ್ಟು ದಿನ ರಾಜಹಂಸನ ಹಾಗೆ ಇದ್ದ
ಈಗ ಬೀದಿಯ ಕಾಗೆಯಾಗಿ ಹೊರಬಿದ್ದ
ಆದರೂ ತಲೆಯ ಮೇಲುಂಟು ಬಿಳಿ ರೆಕ್ಕೆ!
ಲೋಕವೇ ಬಂತು ಸೋಜಿಗ ನೋಡಲಿಕ್ಕೆ.

## ೨೫೨೦. ಮೀಸೆ ಭೀಮಣ್ಣ

ಇವನಾರು ಗೊತ್ತಾಯ್ತೆ? ಮೀಸೆ ಭೀಮಣ್ಣ
ಕೆಂಡದಂತಿದೆ ಇವನ ಕೆಚ್ಚೆದೆಯ ಬಣ್ಣ
ಭೀಮಣ್ಣ ಯಾವಾಗಲೂ ಬಹಳ ಜೋರು
ಹೆಂಡತಿಯ ಎದುರಿನಲ್ಲಿ ಮಾತ್ರ ತಣ್ಣೀರು.

### ೨೫೨೧. ಕೋರ್ಟು ವ್ಯವಹಾರ

ಇವರ ತಂದೆಯ ಆಸ್ತಿ ಬರಿ ಒಂದು ಗುಂಟೆ
ಈ ಆಸ್ತಿಗಾಗಿ ನಡೆಯಿತು ದೊಡ್ಡ ತಂಟೆ
ಕೊನೆಗೆ ಈ ವ್ಯಾಜ್ಯ ಕೋರ್ಟಿಗೆ ಹೋಗಿ ಬಿತ್ತು.
ಇವರು ಸಾಯುವತನಕ ಅಲ್ಲಿಯೇ ಇತ್ತು.

### ೨೫೨೨. ಕ್ರೀಮಿನ ಜಾಹಿರಾತು

ಈ ಕ್ರೀಮು ಹಾಕಿಕೊಂಡರೆ ನಿಮ್ಮ ಕನ್ಯೆ
ಮೂರು ದಿನದೊಳಗೆ ಆಗುವಳು ಮನದನ್ಯೆ
ಭೂಮಿಗಿಳಿಯಲು ಅವಳ ಕೂದಲಿನ ಉದ್ದ
ಎಂಗೇಜುಮೆಂಟಾಗಿ ಅಂಗಜನು ಗೆದ್ದ.

### ೨೫೨೩. ರೈಲಿನ ಜಾಹೀರಾತು

ಈ ವರುಷ ರೈಲಿನಲಿ ಬಹಳ ಅಪಘಾತ
ಹಿಂದೆಂದಿಗೂ ಇಲ್ಲ ಇಂಥ ವಿಪರೀತ
ಶೀಘ್ರದಲಿ ತೆಗೆದುಕೊಳಿ ರೈಲಿನ ತಿಕೇಟು
ನೀವು ಮುಟ್ಟುವ ಜಾಗ ಬಾಂದಳದ ಗೇಟು.

### ೨೫೨೪. ಆಧುನಿಕ ಜೀವನ

ಈ ಯಂತ್ರ ಯುಗದೊಳಗೆ ಮಾನವನ ಜೀವ
ಹೇಗೆನ್ನುವುದು ನಿನಗೆ, ಗೊತ್ತುಂಟೇ ದೇವ ?
ನರನ ಜೀವನವೆನ್ನುವುದು ಒಂದು ಟಿನ್ನು
ಆ ಟಿನ್ನಿನೊಳಗುಂಟು ಎಣ್ಣೆ ಕೆರೂಸಿನ್ನು.

### ೨೫೨೫. ಚುನಾವಣೆಯಲ್ಲಿ

ಈ ಚುನಾವಣೆಯಲ್ಲಿ ನಾನಾ ನಮೂನೆ
ಕತ್ತೆ ಆರಿಸಿ ಬಂತು, ಬಿತ್ತು ಮದ್ದಾನೆ.
ಮತ್ತೆ ನಮ್ಮೂರಿನಲಿ ಇನ್ನೊಂದು ಚೋದ್ಯ
ಸಂಪೂರ್ಣ ಜಯಶಾಲಿಯಾಯ್ತಂತೆ ಮದ್ಯ.

## ೨೫೨೬. ರೈತರ ಗೊತ್ತುವಳಿ

ಈ ರೀತಿ ಸಾರಿತ್ತು ರೈತ ಪರಿಷತ್ತು
ರೈತರಿಗೆ ಸಿಗಬೇಕು ಪೂರ್ಣ ಸವಲತ್ತು.
ಬಡ್ಡಿ ಇಲ್ಲದ ಸಾಲ ಬಹಳ ಅನುಕೂಲ
ಆಗಬಾರದು ಅಡ್ಡಿ ನುಂಗಿದರೆ ಸಾಲ.

## ೨೫೨೭. ಪುಢಾರಿಗಳ ರಾಜಿನಾಮೆ

ಈ ಮಹಾಶಯರು ಕೊಟ್ಟರೆ ರಾಜಿನಾಮೆ
ಜಯಿಸುವಳು ನವಭಾರತದ ಸತ್ಯಭಾಮೆ
ನನ್ನ ಮಾತಿನ ಅರ್ಥ ಆಯ್ತೇ, ಲಿಂಗಣ್ಣ ?
ಸಂಪೂರ್ಣ ಬಯಲಾಗುವುದು ಮಂಗಗಳ ಬಣ್ಣ.

## ೨೫೨೮. ಗೋವೆಯ ಗೆಳೆಯನಿಗೆ

ಬೆಂಗಳೂರಿಗೆ ನೀನು ಹೋದರೆ ಫಜೀತಿ
ಅಲ್ಲಲ್ಲಿ ಗೋಮಂತಕದ ಮೀನ ಪಳದಿ.
ಈ ಪಳದಿಗಾಗಿ ಮಾಡಿದರೆ ತಕರಾರು
ಬಾಯೊಳಗೆ ಹಾಕುವರು ಮಜ್ಜಿಗೆಯ ನೀರು.

## ೨೫೨೯. ಆಧುನಿಕ ಪ್ರಗತಿ

ಉಪವಾಸ ಬಿದ್ದರೂ ಜನ ಕೋಟಿಕೋಟಿ
ಶಶಿಯ ಬೆನ್ನೇರಿದರು ಆಗಸವ ದಾಟಿ.
ಅಭಿನಂದನೀಯವಲ್ಲವೇ ನರನ ಪ್ರಗತಿ ?
ಅಹುದೆಂದು ಹಲ್ಲು ಕಿರಿಯಿತು ಮರದ ಕೋತಿ.

## ೨೫೩೦. ಧರ್ಮೋಪದೇಶ

ಎಂದಿಗೂ ಧರ್ಮವನು ಬಿಡಬಾರದಣ್ಣ
ಯಾವಾಗಲೂ ಶುಭ್ರ ಚಂದಿರನ ಬಣ್ಣ
ನಿತ್ಯ ವ್ಯವಹಾರದೊಳಗಿದ್ದರೂ ಮೋಸ
ಧರ್ಮವಿದ್ದರೆ ಗಳಿಸಬಹುದು ಕೈಲಾಸ

### ೨೫೩೧. ಕನಸಿಗೆ

ಎಲೆ ಕನಸೆ, ನಿನಗಿಲ್ಲ ಯಾವ ಕುಲಗೋತ್ರ
ನೀನು ಮೈದೋರುವುದು ನಿದ್ದೆಯಲಿ ಮಾತ್ರ.
ಈ ರೀತಿ ನಡೆಯಲಾರದು ಇನ್ನು ಮುಂದೆ
ರಾಷ್ಟ್ರೀಯ ಯೋಜನೆಗೆ ನೆರವಾಗು ಅಂದೆ.

### ೨೫೩೨. ಮಾತು

ಎಲ್ಲರೂ ಕಡಿಮೆ ಮಾತಾಡಿದರೆ, ಸ್ವಾಮಿ,
ಅಭಿವೃದ್ಧಿಹೊಂದುವದು ಭಾರತದ ಭೂಮಿ
ಆದರೂ ಇದಕೊಂದು ಉಂಟು ಅಪವಾದ
ಮಂತ್ರಿಗಳು ವಟವಟಿಸಿದರೆ ಇಲ್ಲಂತೆ ವಾದ.

### ೨೫೩೩. ಉಸ್ಮಾನ ಸಾಬಿ

ಎಂದಿಗೊ ನಿರ್ನಾಮವಾಯಿತು ಮೊಗಲಾಯಿ.
ಈಗ ಉಳಿದದ್ದು ಬರಿ ಪಾತ್ರೆಯ ಕಲಾಯಿ.
ಆದರೂ ನಮ್ಮೂರ ಸಾಬಿ ಉಸ್ಮಾನಾ
ಮೊಗಲಾಯಿ ನಡೆಸಬೇಕೆನ್ನುವನು ಪುನಹಾ !

### ೨೫೩೪. ದೇವರ ಅಜ್ಞಾನ

ಎಲ್ಲದಕ್ಕೂ ಶ್ರೇಷ್ಠ ದುಡ್ಡಿನ ಪ್ರತಾಪ.
ಈ ತತ್ವ ದೇವರಿಗೆ ಗೊತ್ತಿಲ್ಲ ಪಾಪ !
ದೇವರೂ ಅರಿತುಕೊಳ್ಳಲಿ ತನ್ನ ಸ್ಥಾನ.
ಭಗವಂತನಿಗೆ ಉಂಟೇ ವ್ಯವಹಾರ ಜ್ಞಾನ ?

### ೨೫೩೫. ಮಾನವ

ಎರಡು ತುಟಿಗಳ ಮೇಲೆ ಬರಿ ಒಂದು ಮೂಗು
ಮೂಗು ಒಂದಾದರೂ ಹದಿನೆಂಟು ಸೋಗು
ಬಾಯ ನಡುಮಧ್ಯದಲಿ ಮೂವತ್ತು ಹಲ್ಲು
ಹೋದಹೋದಲ್ಲಿ ಹಲ್ಲಿನ ಬಗ್ಗೆಯೇ ಗುಲ್ಲು.

## ೨೫೩೬. ತೆರಿಗೆಗಳ ಭಾರ

ಎಷ್ಟು ಹಾಕಿದರೇನು ತೆರಿಗೆಗಳ ಭಾರ ?
ನಮ್ಮ ಹಿತಸಾಧನೆಗೇ ಉಂಟು ಸರಕಾರ.
ಭಾರವಾದರೆ ತಲೆಯ ಮೇಲಿರುವ ಒಜ್ಜೆ
ಮೆಲ್ಲಮೆಲ್ಲನೆ ನಡೆದು ಹಾಕೋಣ ಹೆಜ್ಜೆ.

## ೨೫೩೭. ಕನಸಿಗೆ

ಎಲೆ ಕನಸೆ, ನಿನಗಿಲ್ಲ ಯಾವ ಕುಲಗೋತ್ರ
ನೀನು ಮೈದೋರುವುದು ನಿದ್ದೆಯಲಿ ಮಾತ್ರ
ಈ ರೀತಿ ನಡೆಯಲಾರದು ಇನ್ನು ಮುಂದೆ
ರಾಷ್ಟ್ರೀಯ ಯೋಜನೆಗೆ ನೆರವಾಗು ಅಂದೆ.

## ೨೫೩೮. ಸರಸ್ವತಿಗೆ

ಎಲೆ ಸರಸ್ವತಿ, ನಿನ್ನ ಇಂಪಾದ ವೀಣೆ
ಈ ಗಾಂಪನಡೆಗಿಲ್ಲ ! ನಿನ್ನ ಕೊರಳಾಣೆ !
ಇಂದಿನ ಪರಿಸ್ಥಿತಿಗೆ ಹೊಂದುವ ನಗಾರೆ
ನನ್ನ ಹತ್ತರ ಉಂಟು; ಕೇಳಲಿಕೆ ಬಾರೆ.

## ೨೫೩೯. ಒಂದು ಸಲಹೆ

ಏಳಿಗೆಯ ಕಡೆಗೆ ಇದ್ದರೆ ನಿಮ್ಮ ಲಕ್ಷ್ಯ
ನಿಮಿಷದಲಿ ಸೇರಿಬಿಡಿ ಆಡಳಿತ ಪಕ್ಷ
ತಡಮಾಡಿದರೆ ನಿಂತುಹೋಗುವುದು ಪ್ರಗತಿ
ಪ್ರಗತಿಯೊಂದಿಗೆ ನಿಮ್ಮ ಜೀವನದ ಬಡತಿ.

## ೨೫೪೦. ಸಾರ್ಥಕತೆ

ಎಷ್ಟೋ ಪುಢಾರಿಗಳು ಚುಟಕಗಳನೋದಿ
ಪಾಪ ! ನಾಚಿಕೆಯಾಗಿ ತ್ಯಜಿಸಿದರು ಖಾದಿ.
ಬರೆದದ್ದು ಕೊನೆಗೆ ಸಾರ್ಥಕವಾಯ್ತು ಅಂದೆ
ಧರೆಯೊಳಗೆ ಶ್ರೇಷ್ಠವಾದುದು ಕವಿಯ ದಂಧೆ.

## ೨೫೪೧. ಕವಿಯ ವ್ಯಾಯಾಮ

ಏನು ನಡೆದಿದೆ ಸ್ವಾಮಿ, ಎಂಥ ವ್ಯಾಯಾಮ
ಬೆವರೆಷ್ಟು ತೆಗೆದುಕೊಳಿ ಸ್ವಲ್ಪ ಆರಾಮ!
ಗೊತ್ತಿಲ್ವೆ ನಿಮಗೆ ಇಲಿಯಟ ಮತ್ತು ಏಟ್ಸು?
ರಚಿಸುತ್ತಿದ್ದೇನೆ ಕೈಯಲಿ ಹಿಡಿದು ನೋಟ್ಸು.

## ೨೫೪೨. ದೇಶಭಕ್ತ ಹೇಳಿದ್ದು

ಏಕಮತದಿಂದ ಪಾಸಾದರೆ ಠರಾವು
ಭಾರತದ ಆದ್ಯಂತ ವಿಪರೀತ ಕಾವು.
ಚಳಿಯೆಲ್ಲವೂ ಹಾರಿ ಹೋಗುವುದು ಮಗನೆ
ಈ ಕಾವಿನಲಿ ಬೇಯುವುದು ನನ್ನ ಬದನೆ.

## ೨೫೪೩. ಅಣುಯುಗದ ಜಗತ್ತು

ಒಂದೆಡೆಗೆ ರವೆಯಷ್ಟು ಒಡೆದರೂ ಮುತ್ತು
ಚೂರುಚೂರಾಗುವುದು ಇಂದಿನ ಜಗತ್ತು
ಆಮೇಲೆ ಆ ಬ್ರಹ್ಮದೇವನ ಸವಾರಿ
ಧರೆಗಳಿದರೂ ವ್ಯರ್ಥ, ಆಗದು ರಿಪೇರಿ.

## ೨೫೪೪. ಲಕ್ಷಣಗಳು

ಒದ್ದೆಯಾಗಿದೆ ದೇಶಸೇವಕನ ಟೋಪಿ
ಪಾಪ! ಕುಡಿದಿರಬೇಕು ಹಗಲೆಲ್ಲ ಕಾಫಿ
ಭಾರವಾಗಿದೆ ರಾಜಕಾರಣಿಯ ಕೋಟು
ಕಿಸೆಯೊಳಗೆ ಇರಬಹುದು ನೂರಾರು ನೋಟು.

## ೨೫೪೫ ಬೀಡಿ–ಸಿಗರೇಟು

ಒಮ್ಮೆ ರುಚಿ ನೋಡಲಿಕೆ ಸೇದಿದರೆ ಬೀಡಿ
ನಿಮ್ಮ ಹೆಂಡತಿ ಕೊನೆಗೆ ಆಗುವಳು ಲೇಡಿ
ಆಮೇಲೆ ಸಿಗರೇಟುಗಳಿಗೆ ಆರಂಭ
ಹೋದಹೋದಲ್ಲಿ ಪರಿಮಳ ಬಾಯಿತುಂಬ.

## ೨೫೪೬. ಮಾಣಿಯ ನಿದ್ದೆ

ಓ ಮಾಣಿ ಪಂಚವಾರ್ಷಿಕದ ನಡುಮಧ್ಯೆ
ಕಣ್ಣು ತೆರೆಯೊ ಸ್ವಲ್ಪ! ಹೀಗೇಕೆ ನಿದ್ದೆ?
ನೋಡಿ ಸಾಕಾಯ್ತಣ್ಣ; ಗೊತ್ತಿಲ್ವೆ ನಿನಗೆ?
ಬಂದ ಚೀಲಗಳೆಲ್ಲ ಮಂತ್ರಿಗಳ ಮನೆಗೆ.

## ೨೫೪೭. ಸರಕಾರಿ ಹೈಸ್ಕೂಲು

ಓ ಮಗನೆ, ಹೇಗುಂಟು ಸರಕಾರಿ ಶಾಲೆ?
ಮೆಟ್ರಿಕ್ ಪರೀಕ್ಷೆಯಲಿ ಪೂರಾ ನಿಕಾಲೆ
ಕುಳಿತವರ ಪೈಕಿ ಪ್ರತಿಯೊಬ್ಬನಿಗೆ ನಾಮ
ದೊಡ್ಡ ಕುಂಬಳಕಾಯಿ! ಹೇ ರಾಮ ರಾಮ!!

## ೨೫೪೮. ಬಿರುದಾವಳಿ

ಓ ಮಗನೆ, ಸರಕಾರ ನೀಡಿದರೆ ಬಿರುದು.
ಇಟ್ಟುಕೊಳ್ಳದೆ ಹಂಗು ಹಾಕಿಬಿಡು ಹರಿದು
ಮನುಜನಿಗೆ ಬಿರುದಾವಳಿಯ ಉಪಧ್ವ್ಯಾಪ
ಹತ್ತಿದರೆ ಪಾತಾಳಕಿಳಿಯುವನು ಪಾಪ.

## ೨೫೪೯. ಜಪಾನಿ ಹೈಕು

ಓ ಮಗನೆ ಇದು ಜಪಾನಿನ ಕವಿತೆ ಹೈಕು
ಅರ್ಥವಾಗುವುದಿಲ್ಲ ಆದರೂ ಬೇಕು
ನಖಶಿಕಾಂತದವರೆಗೆ ಗಹನ ಗಂಭೀರ
ವೇದಾಂತ ಕೇಸರಿಗೆ ಇಡ್ಲಿ ಸಂಬಾರ.

## ೨೫೫೦. ಜೀವನದ ಸಂತೆ

ಕವಿಯಲ್ಲ, ನಾನೊಬ್ಬ ಪೋಕರಿ ಪಟಿಂಗ
ಎಂದು ಹೇಳುವರುಂಟು; ಸುಳ್ಳಲ್ಲ, ರಂಗ.
ಎಲ್ಲರೂ ಹಾಡಿದರೆ ಅಪ್ಪಂತರಂತೆ
ಸಪ್ಪೆಯಾಗುವುದು ಈ ಜೀವನದ ಸಂತೆ.

## ೨೫೫೧. ಬಹುಮಾನ

ಕವಿಗಳಿಗೆ ಬಹುಮಾನ ಕೊಡಬಾರದಂಥ
ಸಾರಿದನು ಮರದ ಮೇಲಿಂದ ಹನುಮಂತ
ಬಹುಮಾನ ಸಮಿತಿಯಲಿ ಕವಿಗಳೇ ಅಧಿಕ
ಹಂಚಿಕೊಂಡರು ಅವರು ಒಂದೊಂದು ಪದಕ

## ೨೫೫೨. ಕವಿ ಹೃದಯ

ಕವಿ ಹೃದಯ ನೀನರಿಯೆ ಏ ಹುಚ್ಚುಮುಂಡೆ
ನನ್ನ ಸುಖಕ್ಕಾಗಿಯೇ ನಾ ಬರೆದುಕೊಂಡೆ
ನಿನಗಾಗಿ ಬರೆದಿಲ್ಲ ಈ ಕಾವ್ಯವನ್ನು
ಬರವಣಿಗೆಯೇ ನನ್ನ ಜೀವನದ ಅನ್ನ.

## ೨೫೫೩. ಕವಿಗೆ ಗೌರವ

ಕವಿಗೇಕೆ ಹೂಮಾಲೆ ಬೇಕೇ ಸತ್ಕಾರ
ಕೃತಿಯನೋದದೆ ಪಾಪ! ಹಾಕುವರು ಹಾರ
ಕವಿಯ ಗೌರವಿಸಲಿಕೆ ಒಂದು ಉಪಾಯ.
ಅವನ ಕೃತಿಗಳನೋದಿ ಸುಖಿಸು, ಮಾರಾಯ.

## ೨೫೫೪. ಕವಿಪುಂಗವನ ಮಗಳು

ಕವಿಪುಂಗವನ ಮಗಳು ಹತ್ತಿದರೆ ಬೆನ್ನು
ಸ್ಫೂರ್ತಿ ಪಡೆಯುವುದು ನೂತನ ಕವಿಯ ಪೆನ್ನು
ಈ ಪೆನ್ನು ಬಸುರಾಗಿ ಝೇಂಕರಿಸಿದೊಡನೆ
ಜನ್ಮ ತಾಳಿದ ಮರಿಯ ಹೆಸರು, ಅನುಕರಣೆ.

## ೨೫೫೫. ಮಂತ್ರಿಪದದ ಬಾಸಿಂಗ

ಕಟ್ಟಿಕೊಂಡರೆ ಮಂತ್ರಿಪದದ ಬಾಸಿಂಗ
ದೇಶ ಸೇವೆಯ ದೀಕ್ಷೆಪಡೆದಂತೆ, ರಂಗ.
ದೊರೆಯುವುದು ಪುಣ್ಯವಂತರಿಗೆ ಈ ಸಂಧಿ
ಇದನೆಲ್ಲ ಮರೆಯಬಾರದು ಪಾಪಿ ಮಂದಿ.

## ೨೫೫೬. ಕಚ್ಚಾ ಸರಕು

ಕವಿಶ್ರೇಷ್ಠನಿಗೆ ಸಿಕ್ಕಿದರೆ ಸ್ವಲ್ಪ ಬೆಲ್ಲ
ಬಿಳಿಪಾಕವಾಗಿ ಅರಳುವುದು ರಸಗುಲ್ಲಾ
ಮಂಗನಿಗೆ ಸಿಕ್ಕಿದರೆ ಹಸಿ ಜಾಜಿಕಾಯಿ
ಚುಟಕಗಳ ಬರೆದಂತೆ ನಮ್ಮ ದೇಸಾಯಿ.

## ೨೫೫೭. ಆಭರಣಗಳ ಇತಿಹಾಸ

ಕೈಯೊಳಗೆ ಕಡಮೆಯಾಗಲು ಬಂಡವಾಳ
ಕರಗಿಹೋದವು ಸೊಂಟಕ್ಕಿದ್ದ ನೇವಾಳ
ದಿನ ಹೋದಹಾಗೆಲ್ಲ ಹೆಚ್ಚಾಗಿ ತೆರಿಗೆ
ಮಾಯವಾದವು ಮುದುಕಿಯರ ನಾಗಮುರಿಗೆ.

## ೨೫೫೮. ಕುಲಗೆಟ್ಟ ಜಾತಿ

ಕಬ್ಬಿಣಕೆ ಕಬ್ಬಿಣಕೆ ಹಿಡಿದಿತ್ತ ತಂಟೆ
ನಾನಂದೆ : ನಿಮ್ಮೊಳಗೂ ಜಾತಿಗಳು ಉಂಟೇ ?
ಕುಳದ ಸ್ಪಷ್ಟೀಕರಣ ಇತ್ತು ಈ ರೀತಿ;
ಕೋವಿಯೊಳಗಿನ ಉಕ್ಕು ಕುಲಗಟ್ಟ ಜಾತಿ.

## ೨೫೫೯. ಕತ್ತಲೆಯ ಹೂವುಗಳು

ಕತ್ತಲೆಗೆ ಹೂವು ಅರಳಿದ ಸುದ್ದಿ ಗೊತ್ತೇ ?
ನಿಮ್ಮ ಚೇಷ್ಟೆಗೆ ನಾನು ಪೂರ್ಣ ಬೇಸತ್ತೆ.
ಬೇಸರೇತಕೆ, ಚೆನ್ನಿ ? ಹೇಳುವೆನು ಕೇಳು :
ಕಪ್ಪು ಮೋರೆಗೆ ನಿನ್ನ ಕಣ್ಣುಗಳೇ ಹೂವು !

## ೨೫೬೦. ನಮ್ಮೂರಿನ ಕ್ರಾಂತಿಕಾರ

ಕಂಕುಳಕೆ ಯಾವಾಗಲೂ ಕೆಂಪು ಅರಿವೆ
ಯಾವ ಕೆಲಸದ ಬಗ್ಗೆಯೂ ಇಲ್ಲ ಪರಿವೆ.
ತಲೆಯೊಳಗೆ ಹೊಸ ಮಾದರಿಯ ನೆಗಡಿ ಕೆಮ್ಮು
ಪ್ರತಿಯೊಂದು ಮಾತಿಗೂ ಸೋಷಾಲಿಜಮ್ಮು

### ೨೫೬೧. ಕಾವ್ಯ ಲೋಕದಲ್ಲಿ

ಕಡಲಾಚೆಯಿಂದ ಬೀಸಿತು ಭರ್ತಿ ಗಾಳಿ
ಗಾಳಿಯೊಂದಿಗೆ ತೇಲಿ ಬಂತು ಹೊಸ ಕೇಳಿ
ಪಾಪ! ಈ ಕುಕ್ಕುಟಕೆ ಆ ಹವಾಮಾನ
ಪಚನವಾಗದೆ ಕಂಠದೊಳಗಿಲ್ಲ ತ್ರಾಣ.

### ೨೫೬೨. ಅರ್ಥಮಂತ್ರಿ ಹೇಳಿದ್ದು

ಕಲ್ಯಾಣ ರಾಜ್ಯ ಕಟ್ಟಿದರೆ ಸರಕಾರ
ಆಕಾಶಕೇರಿ ನಿಲ್ಲುವುದು ಕರಭಾರ.
ಮೇಲೆ ಒಂದು ದಿನ ಮಳೆಯಾಗಿ, ಕಂದ,
ತೆರಿಗೆಯೆಲ್ಲ ಭೂಮಿಗಿಳಿದು ಆನಂದ.

### ೨೫೬೩. ನನ್ನ ತೋಟದಲ್ಲಿ

ಕಾಲು ಶತಮಾನ ಮಾಡಿದೆನು ತೋಟ
ತನಿವಣ್ಣು ಕಾಣಿಸದು ಕೋತಿಗಳ ಕಾಟ
ಕಾಣಿಸದು ರಸಬಾಳೆ ದ್ರಾಕ್ಷಿ ದಾಳಿಂಬೆ
ಪ್ರತಿಯೊಂದು ರಂಬೆಯಲಿ ಹುಳಿರಸದ ನಿಂಬೆ.

### ೨೫೬೪. ಕಾವ್ಯಮಯ ಸರಕಾರ

ಕಾವ್ಯವಾಯಿತು ಮಗನೆ ನಮ್ಮ ಸರಕಾರ
ಮುಕ್ತಛಂದದ ಹಾಗೆ ಅದರ ದರಬಾರ.
ಕಪ್ಪುಬಾವುಟ ಹಿಡಿದು ಮೂಡಿದರೆ ಸದ್ದು.
ಮುಖ್ಯಮಂತ್ರಿಗೆ ನೀವು ಕೊಡಬಹುದು ಮದ್ದು.

### ೨೫೬೫. ರಮಣಿಯ ಸೀರೆ

ಕಾವ್ಯ ರಮಣೀಯ ಸೀರೆಗಿರಬೇಕೆ ಪ್ರಾಸ ?
ಅವರವರ ರುಚಿಯಂತೆ ಅದರ ವಿನ್ಯಾಸ
ಕೆಲವರಿಗೆ ಬೇಡಂತೆ ಬಾರ್ಡರಿನ ಸೀರೆ.
ಆಕಾಶದಂತಿರಲಿ ಎನ್ನುವರು, ನೀರೆ.

## ೨೫೬೬. ಕವಿಯ ಅಮಲು

ಕಾವ್ಯವೆಂಬುದು ಕೊನೆಗೆ ಕುಡಿದಂತೆ ಮದ್ಯ
ತಲೆಗೇರಿದರೆ ಸುಮ್ಮನಿರುವುದು ಅಸಾಧ್ಯ
ಬ್ಯಾಲೆನ್ಸುತಪ್ಪಿ ಹಿಡಿದಾಗ ಪೆನ್ಸಿಲ್ಲು
ತಲೆಯೊಳಗೆ ಜೀವಂತವಾಗುವುದು ಹುಲ್ಲು.

## ೨೫೬೭. ಕುರ್ಚಿಗಳ ಜಿಗುಟು

ಕುರ್ಚಿಗಳಿಗೆ ಅಂಟಿಕೊಂಡಿದೆಯಂತೆ ಜಿಗುಟು
ಈ ಪ್ರಜಾರಾಜ್ಯದಲಿ ಇದೇ ಒಂದು ಒಗಟು!
ಜನರೆಲ್ಲ ಬೇಸತ್ತು ಹಾಕಿದರೂ ಕೇಕೆ
ಒಮ್ಮೆ ಕುಳಿತವರು ಏಳುವುದಿಲ್ಲ ಜೋಕೆ!

## ೨೫೬೮. ನೃಪತಿ ಕೇಳೆಂದ

ಕೈಯೊಳಗೆ ಹಿಡಕೊಂಡು ಕಾಯಿದೆಯ ಕೋಲು
ರಾಜ್ಯಾದಾದ್ಯಂತ ಹಾಕಿದರು ಕಂಟ್ರೋಲು
ಏಳೆಂಟು ಸೆಟ್ಟರನು ಹಿಡಿದು ಎಳೆತಂದ
ಕಾಳುಕಡಿ ಸಿಗಲಿಲ್ಲ! ನೃಪತಿ ಕೇಳೆಂದ.

## ೨೫೬೯. ಸತ್ಯ

ಕೊನೆಗೆ ನಿಲ್ಲುವುದೊಂದೆ; ಜೀವನದ ಸತ್ಯ
ಸತ್ಯವಿದ್ದರೆ ಮಾತ್ರ ಬದುಕು ಕೃತಕೃತ್ಯ
ಉಳಿದುದೆಲ್ಲಾ ಹಾರಿ ಹೋಗುವುದು ಮಗನೆ
ಗಾಳಿಪಟವಾಗುವುದು ಜೀವನದ ರಚನೆ.

## ೨೫೭೦. ನಿಸರ್ಗದ ಕವಿಗೆ

ಕೋಗಿಲೆಯ ಉಲಿ ಸಾಕು; ಹುಲಿ ಬಂತು ನೋಡು.
ಊರಲ್ಲ, ಮಾರಾಯ! ಸುತ್ತಲೂ ಕಾಡು!
ಈ ಕಾಡಿನೊಳಗಿಂದ ಪಾರಾದ ಬಳಿಕ
ಕೋಗಿಲೆಯ ಪದ ಹಾಡಿ ಮಾಡೋಣ ಜಳಕ.

## ೨೫೭೧. ಕೋಪ

ಕೋಪವೆಂಬುದು, ಮಗಳೇ, ಮಾನಸಿಕ ಬೆಂಕಿ
ಬೆಂಕಿಯುರಿದರೆ ಮಾತು ಡೊಂಕಾಗಿ ವಂಕಿ
ಈ ವಂಕಿ ತೊಡಿಸಿಕೊಂಡರೆ ಪತಿಗೆ ಸಿಟ್ಟು
ಒಟ್ಟಿನಲಿ ಸಂಸಾರ ಹೋಗುವುದು ಸುಟ್ಟು.

## ೨೫೭೨. ಕೋಪ

ಕೋಪವೆಂಬುದು ಹಾಳು! ಆದರೂ ಕೂಡ
ಫಲಕಾರಿಯಾದಾಗ ದುಃಖ ಪಡಬೇಡ.
ಒಮ್ಮೊಮ್ಮೆ ಬಂದುಬಿಟ್ಟರೆ ಕವಿಗೆ ಸಿಟ್ಟು
ಸಾಹಿತ್ಯ ಲೋಕದಲಿ ಜೀವನದ ಹಿಟ್ಟು.

## ೨೫೭೩. ಒಂದು ಆತ್ಮಕಥನ

ಖಾದಿ ಬೋರ್ಡಿಗೆ ನಾನು ಅಧ್ಯಕ್ಷನಿದ್ದೆ
ಅಪ್ರತಿಮವಾಗಿ ಬೆಳೆಯಿತು ನನ್ನ ಗದ್ದೆ.
ಆಹಾರ ಪ್ರಶ್ನೆ ಬಗೆಹರಿದು ಈ ರೀತಿ
ನನಗಿಲ್ಲ ಕ್ಷಾಮ ಬಾಧೆಯ ಯಾವ ಭೀತಿ.

## ೨೫೭೪. ಹೊಲಿದಷ್ಟು ಕಡಿಮೆ

ಗರಗರನೆ ಮೊರೆಯುತಿದೆ ಹೊಲೆಗೆಯಂತ್ರ
ಪ್ರತಿಯೊಬ್ಬನಿಗೆ ಕೇಳಿಸಲಿ ಇದರ ಮಂತ್ರ;
ಇಂದಿನ ಪ್ರಪಂಚವನು ಹೊಲದಷ್ಟೂ ಕಡಿಮೆ
ಚಿಂದಿಯಾಗಿದೆ ನೋಡು ಮಾನವನ ಮಹಿಮೆ.

## ೨೫೭೫. ರಾಸಾಯನಿಕ ಗೊಬ್ಬರ

ಗದ್ದೆಯೆತ್ತರ ಬೆಳೆದರೂ ಕಾಳು ಕಡಿಮೆ
ಇದುವೇ ರಾಸಾಯನಿಕ ಗೊಬ್ಬರದ ಮಹಿಮೆ
ಕೃತ್ರಿಮವ ಬಳಸಿ ಕೈಗೂಡುವುದೇ ಸಿದ್ಧಿ?
ಎಲೆ ಕವಿಯೇ, ಈಗಲಾದರೂ ಬಂತೆ ಬುದ್ಧಿ?

## ೨೫೭೬. ಕವಯಿತ್ರಿಗೆ

ಚೆನ್ನಾಗಿ ಬೇಯಿಸಿದರೂ ಹಾಕಿ ಬೆಲ್ಲ
ಹದತಪ್ಪಿ ಹೋಗಿ ಪಾಯವಾಗಲಿಲ್ಲ.
ಇಂಥ ಅಡಿಗೆಯ ನೋಡಿದರೆ ನಿನ್ನ ಗಂಡ
ಹೇಳುವನು ! ನನ್ನ ಹೆಂಡತಿ ಬ್ರಹ್ಮದಂಡ

## ೨೫೭೭. ಚುಟಕದ ಭಾಷೆ

ಚುಟಕದಲಿ ಹೊಂದಿಕೊಳ್ಳದು ಕಾವ್ಯಭಾಷೆ
ಗದ್ಯಮಯವಾಗಿಯೇ ಇರಬೇಕು ಮೀಸೆ
ಮೀಸೆ ಬೋಳಿಸಿಕೊಂಡ ಸ್ತ್ರೀ ಶೈಲಿಯಿಂದ
ಚುಟಕದ ನಡಾವಳಿಗೆ ಶೋಭೆಯಿಲ್ಲೆಂದ.

## ೨೫೭೮. ರೋಗ ನಿವಾರಣೆಗಾಗಿ

ಚುಟಕಗಳ ಬರೆಯುವುದು ಇನ್ನೆಷ್ಟು ದಿವಸ ?
ಏನು ಹೇಳಲಿ, ಮಗನೆ ? ನನಗಿಲ್ಲ ಕೆಲಸ.
ಮಾಯವಾಗಲಿ ಪುಢಾರಿಗೆ ಹಿಡಿದ ರೋಗ
ಆತನಕ ನನಗಿಲ್ಲ ಬೇರೆ ಉದ್ಯೋಗ.

## ೨೫೭೯. ನವ್ಯದ ಅಭಾವ

ಚುಟಕದೊಳಗಿಲ್ಲ, ಮಗು, ಯಾವುದೂ ನವ್ಯ
ಸರ್ವಜ್ಞ ಬರೆಯಲಿಲ್ಲವೇ ಚುಟಕ ಕಾವ್ಯ
ಈ ಚುಟಕಗಳು ಧರಿಸಿಕೊಂಡಿರುವ ಡ್ರೆಸ್ಸು
ಆಧುನಿಕವಲ್ಲ; ಪ್ರಾಚೀನ ಛಂದಸ್ಸು.

## ೨೫೮೦. ಚುಟಕಗಳ ಬರೆಯಲಿಕೆ

ಚುಟಕಗಳ ಬರೆಯಲಿಕೆ ಬೇಡ ತಾಕತ್ತು
ಸಾಮಾನ್ಯ ಪ್ರತಿಭೆಯೂ ಗೀಚಬಹುದಿತ್ತು.
ಕಣ್ದೆರೆದು ಸುತ್ತಲೂ ನೋಡಿದರೆ ಸಾಕು
ಚುಟಕವಾಗುವುದುಂಟು ಪ್ರತಿಯೊಂದು ಜೋಕು.

### ೨೫೮೧. ಗಂಡನ ಮೀಸೆ

ಚುಟುಕಮ್ಮ, ನಿನ್ನ ಗಂಡನಿಗುಂಟೇ ಮೀಸೇ ?
ಆ ಮೀಸೆ ನೋಡಿದರೆ ತುಂಬಾ ತಮಾಷೆ
ಅದರ ಉದ್ದಳತೆ, ಮಗು, ಇಂಚು ಹದಿನೆಂಟು
ದೋಸೆ ತಿನುವಾಗ ಮೀಸೆಗೆ ಭರ್ತಿ ಅಂಟು.

### ೨೫೮೨. ನೆರಮನೆಯ ಬಿರುಗಾಳಿ

ಜೋರು ಜೋರಾಗಿ ಝುಂಝಾವಾತ ಬೀಸಿ
ತರತರದ ಹಣ್ಣುಗಳು ಉದುರಿದವು ರಾಶಿ
ಇದು ಯಾವ ಕಡೆಯಿಂದ ಬಂದ ಬಿರುಗಾಳಿ
ಎಂದು ನೋಡಿದರೆ ನೆರೆಮನೆಯ ಮಂಕಾಳಿ.

### ೨೫೮೩. ತಾಯ ಮಂಗಳಕಾಗಿ

ತಾಯ ಮಂಗಳಕಾಗಿ ಬೇಕಂತೆ ಚಿನ್ನ
ತೆಗೆದುಕೊಳಿ ನನ್ನ ಮಂಗಳಸೂತ್ರವನ್ನ
ನನ್ನ ಮೈಮೇಲಿಲ್ಲ ಬೇರೆ ಬಂಗಾರ.
ನನಗೆ ನೀವೇ ಒಲಿದ ಶ್ರೀಂಗಾರ.

### ೨೫೮೪. ಜಗತ್ತಿನ ಭವಿಷ್ಯ

ತಾರೆಗಳು ಕಣ್‌ಸನ್ನೆ ಮಾಡಿದವು ನಿನ್ನೆ
ಹೇಳಿದವು ಎಲ್ಲಿ ಹೋದಳು ನಿನ್ನ ಕನ್ಯೆ ?
ಆಕೆಯನು ಬೇಗ ಕರಕೊಂಡು ಬಾ ಇಲ್ಲಿ
ಪ್ರಳಯ ಸಂಭವಿಸಲಿದೆ ಭೂಲೋಕದಲ್ಲಿ.

### ೨೫೮೫. ಪ್ರಗತಿಯ ಕೋಲಾಟ

ತಕ ಧಿನ್ನ ಥೈ ದಿನ್ನ ಕೋಲೆನ್ನ ಕೋಲೆ
ಭಾರತದ ಪ್ರಗತಿ ಎಲ್ಲರಿಗಿಂತ ಮೇಲೆ
ಕೂಳಿಲ್ಲದಿದ್ದರೂ ನಿತ್ಯ ಈ ಗಾನ
ಹಿಂದೆ ಬಿದ್ದವು ಬ್ರಹ್ಮದೇಶ ಭೂತಾನ.

೨೫೮೬. ಪ್ರಾಚೀನ ಕವಿ

ತರತರದ ಹೂವುಗಳ ಕಾವ್ಯದಲಿ ಹಾಕಿ
ಯಾವುದನ್ನೂ ಇವನು ಇಡಲಿಲ್ಲ ಬಾಕಿ
ಪ್ರತ್ಯಕ್ಷ ಕಂಡ ಹೂಗಳ ಸಂಖ್ಯೆ ಕಡಮೆ
ಆದರೂ ಬಿಡಲಿಲ್ಲ! ಇದು ಮಹಾಮಹಿಮೆ!

೨೫೮೭. ಭಾಷೆಗಳು

ತೊಟ್ಟಿಲವ ತೂಗಲಿಕೆ ತಾಯ್ನುಡಿಯ ಧಾಟಿ
ಹಿಂದಿ ಎಂಬುದು ನೂಲುತೆಗೆಯಲಿಕೆ ರಾಟಿ
ಶ್ರಾದ್ಧಕ್ಕೆ ಕುಳಿತಾಗ ಗಿರ್ವಾಣ ಭಾಷೆ
ಆಂಗ್ಲನುಡಿ ಎನ್ನವುದು ನೌಕರಿಯ ಆಸೆ.

೨೫೮೮. ದೊಡ್ಡಣ್ಣನವರು

ದೊಡ್ಡಣನವರೀಗ ಮತ್ತಷ್ಟು ಜೋರು
ಒಬ್ಬೊಬ್ಬ ಅಳಿಯನಿಗೆ ಒಂದೊಂದು ಕಾರು
ಮನೆಯ ಅಂಗಳದಲಿ ಸಹ್ಯಾದ್ರಿ ಬೆಟ್ಟ
ಸೋವಿ ದರದಲಿ ಮಂತ್ರಿ ಕಂತ್ರಾಟು ಕೊಟ್ಟ.

೨೫೮೯. ಕೃಷ್ಣಶರ್ಮರ ಲೇಖ

ಧರ್ಮವೆಂದರೆ ನಿತ್ಯವೂ ದೇವಪೂಜೆ
ಕಾಣಬಾರದು ನಾಡಿನಲಿ ಬಾಟ್ಲಿ ಹೂಜೆ
ಹೀಗೆಂದು ಲೇಖ ಬರೆದರು ಕೃಷ್ಣಶರ್ಮ
ಪಾನಪ್ರತಿಬಂಧವೆಂಬುದೆ ಆರ್ಯಧರ್ಮ.

೨೫೯೦. ವಿಮರ್ಶೆ

ಧರಿಸಿದರೆ ಲಂಗೋಟಿ ಸರ್ವಜ್ಞನಂತೆ
ಮರಿಚುಟಕಗಳ ಬರೆದು ಸಾಯಬೇಕಂತೆ
ಕಾವ್ಯ ರಚನೆಯ ಶಕ್ತಿ ಡ್ರೆಸ್ಸಿಗೂ ಉಂಟು
ನವ್ಯ ಕವಿಯಾಗುವನು ಹಾಕಿದರೆ ಪ್ಯಾಂಟು.

### ೨೫೯೧. ದುಡಿಮೆ

ದೇವ ಸನ್ನಿಧಿಯಲ್ಲಿ ಮಾಡಿದರೆ ಭಜನೆ
ಯಾವ ನೆಲವೂ ಕೊಡದು ನೀರುಳ್ಳಿ ಬದನೆ
ಗಿಡಬಳ್ಳಿಗಳ ಹಚ್ಚಿ ಹನಿಸಿದರೆ ನೀರು
ವಾಂಛಿತವ ನೀಡುವುದು ಸಂತಸದ ಬೇರು.

### ೨೫೯೨. ಆಹಾರ ಧಾನ್ಯ ಪರಿಷತ್ತು

ದೆಹಲಿಯಲ್ಲಿ ನಡೆದಿತ್ತು ಧಾನ್ಯ ಪರಿಷತ್ತು
ಯಾರ ಬಾಯಲಿ ಕೊನೆಗೆ ಏನೇನು ಬಿತ್ತು ?
ಸಿಟ್ಟಾಗಬೇಡಯ್ಯ ಹೇಳಿದರೆ ಸತ್ಯ
ಮಂತ್ರಿಗಳ ಬಾಯೊಳಗೆ, ಸಂಚಾರಿ ಭತ್ಯ.

### ೨೫೯೩. ಸಂಸಾರ ಸಾಗರ

ದಂಡೆಯಲಿ ನಿಂತು ನೋಡಿದರೆ ವೈರಾಗ್ಯ
ಕಡಲೊಳಗೆ ಮುಳುಗೇಳಿದರೆ ಪರಮಭಾಗ್ಯ
ಮುಳುಗಿದವನಿಗೆ ತಿಳಿಯುವುದು ಅದರ ಗುಟ್ಟು
ಉಳಿದವರ ಬಾಯೊಳಗೆ ಹಸಿ ಕಡ್ಲೆಹಿಟ್ಟು.

### ೨೫೯೪. ಗೋಡೆಗಳು

ದೇಶಗಳ ಸುತ್ತಲೂ ಹಾಕಿದರು ಗೋಡೆ
ಹೀಗಾಗಿ ಭೂಮಂಡಲದ ಮೇಲೆ ಪೀಡೆ
ಗೋಡೆಗಳನೆಲ್ಲವನು ಕೆಡವಿ ಹಾಕಿದರೆ
ಸರಿಯಾಗಿ ಓಡುವುದು ಮಾನವನ ಕುದುರೆ.

### ೨೫೯೫. ಧನಲಕ್ಷ್ಮಿಯ ಪ್ರತಾಪ

ಧನಲಕ್ಷ್ಮಿ ಕಿಸೆಯೊಳಗೆ ಹಾಕಿದರೆ ಮೊಟ್ಟೆ
ಸರ್ಕಸಿನ ಡೇರೆಯುಂತಾಗುವುದು ಹೊಟ್ಟೆ.
ಈ ಹೊಟ್ಟೆ ಧರಿಸಿಕೊಂಡರೆ ಉದ್ದಕೋಟು
ರಾಜಕಾರಣದೊಳಗೆ ಇನ್ನೊಬ್ಬ ಸೇಟು.

### ೨೫೯೬. ವಜ್ರಪಾಕ

ದೊಡ್ಡ ಹೋಳಿಗೆಯಿಲ್ಲ; ಇದು ಸಣ್ಣ ಲಾಡು.
ವಜ್ರಪಾಕದ ತಿಂಡಿ, ಸವಿದು ರುಚಿನೋಡು
ಆಗಬಹುದಲ್ಲವೇ ಸರಿಯಾಗಿ ಪಚನ ?
ಜೀರ್ಣಶಕ್ತಿಗೆ ಕಷ್ಟ ಅಲ್ಲಮನ ವಚನ.

### ೨೫೯೭. ಕನ್ನಡಾಂಬೆಯ ಕೊರಗು

ನೀನೇಕೆ ಸೊರಗಿದ್ದಿ ? ಏನಾಯಿತವ್ವಾ ?
ನನ್ನ ಮನೆಯಲ್ಲಿಯೇ ನಾನಾದೆ ದೆವ್ವ.
ಬೆಂಗಳೂರಲಿ ತಮೀಳರೇ ಹೆಚ್ಚುಮಂದಿ
ಅಂಗಡಿಯ ಮಾರವಾಡಿಗಳೆಲ್ಲ ಹಿಂದಿ.

### ೨೫೯೮. ರಾಷ್ಟ್ರಪಕ್ಷಿಗೆ

ನನ್ನ ಪ್ರೀತಿಯ ನವಿಲೆ, ಹೇ ರಾಷ್ಟ್ರಪಕ್ಷಿ,
ನಿನ್ನ ಗರಿಗಳ ತುಂಬ ಎಷ್ಟೊಂದು ಅಕ್ಷಿ !
ಇದ್ದಷ್ಟು ಕಡಿಮೆಯಲ್ಲವೆ ? ನಮಗೆ ಕಣ್ಣು
ಅಧಿಕಾರ ತಲೆಗೇರಿ ಕಾಣಿಸದು ಕಣ್ಣು.

### ೨೫೯೯. ಕಂಟ್ರಾಕ್ಟರ ಹೇಳಿದ್ದು

ನಿಜವೇನು, ರಾಜಿನಾಮೆಗಳ ನಿರ್ಧಾರ ?
ಆಮೇಲೆ, ಯಾರು ನಡೆಸುವರು ಸರಕಾರ ?
ಇವರ ವಿನಾ ರಾಜ್ಯ ನಡೆಸುವುದು ಕಷ್ಟ !
ಓ ಮಗನೆ, ಮುಗಿದಂತೆ ನನ್ನ ಅದೃಷ್ಟ.

### ೨೬೦೦. ಸಾಹಿತಿಗಳು

ನಮ್ಮ ಕವಿಗಳ ಪೈಕಿ ಕವಿಶ್ರೇಷ್ಠನಾರು ?
ಹೆಸರು ಹೇಳಿದರೆ ಬರಬಹುದು ತಕರಾರು
ಶ್ರೇಷ್ಠ ಕತೆಗಾರ ಯಾರೆಂಬುದನು ಹೇಳು
ಹೇಳಿದರೆ ನಾಲಗೆಗೆ ಕಡಿಯುವುದು ಚೇಳು.

## ೨೬೦೧. ನಿಜವಾದ ಕಾರಣ

ನಮ್ಮ ಆಡಳಿತಕ್ಕೆ ಚುರುಕಿಲ್ಲವೇಕೆ ?
ಇದಕೆ ಕಾರಣ ಮತ್ತೆ ನಾನೆ ಕೊಡಬೇಕೆ ?
ಹೇಳುತಿದ್ದಾರಲ್ಲ ಅವರು ಆಗಾಗ್ಗೆ
ಬೆಂಗಳೂರಿನ ಹವಾಮಾನವೇ ಹೀಗೆ.

## ೨೬೦೨. ನಾನಲ್ಲ ಪ್ರತಿಗಾಮಿ

ನಾನಲ್ಲ ಪ್ರತಿಗಾಮಿ, ನಾ ಕ್ರಾಂತಿಕಾರ
ಯಾವಾಗಲೂ ನಾನು ತಿನ್ನುವುದು ಖಾರ
ಚಹ ಕಾಫಿ ಕುಡಿಯುವುದಿಲ್ಲ ನಾನು
ನನಗೆ ಬೇಕಾದದ್ದು ಭಟ್ಟಿಗಳ ಜೇನು.

## ೨೬೦೩. ಕುಡಿಯುವ ನೀರಿನ ಹೊಂಡ

ನಮ್ಮ ಈ ಹಳ್ಳಿಯೆಂದರೆ ಪುಣ್ಯಭೂಮಿ
ಹೊಂಡದೊಳಗಿನ ಮಡ್ಡು ಚೊಕಲೇಟು, ಸ್ವಾಮಿ
ಪಾತಾಳಗಂಗೆ ಮುಖ ತೋರಿಸುವವರೆಗೆ
ಕಂದು ಬಣ್ಣದ ಕಾಫಿ ಅನಿವಾರ್ಯ ನಮಗೆ.

## ೨೬೦೪. ಕುಡಿಯುವ ನೀರು

ನಮ್ಮ ಹಳ್ಳಿಯಂದರೆ ಪುಣ್ಯಭೂಮಿ
ಹೊಂಡದೊಳಗಿನ ಮಣ್ಣು ಚಾಕಲೇಟು ಸ್ವಾಮಿ
ಪಾತಾಳಗಂಗೆ ಮುಖ ತೋರಿಸುವವರೆಗೆ
ಹೊಂಡದೊಳಗಿನ ಕಾಫಿ ಅನಿವಾರ್ಯ ನಮಗೆ.

## ೨೬೦೫. ನನ್ನ ಕಾವ್ಯ ಸಂಪತ್ತು

ನಾ ಬರೆದುದೆಲ್ಲವೂ ಅಲ್ಲ ಸಂಪತ್ತು
ಹುಡುಕಿದರೆ ಸಿಗಬಹುದು ಒಂದೆರಡು ಮುತ್ತು
ಉಳಿದುದೆಲ್ಲ ಚಿಪ್ಪು; ಚೆನ್ನಾಗಿ ಕಾಸಿ
ಒಣಗಿಸಿಟ್ಟರೆ ಸುಣ್ಣವಾಗುವುದು ರಾಶಿ.

### ೨೬೦೬. ಆರ್ಥಿಕ ಸ್ಥಿತಿ

ನಮ್ಮ ಜಿಲ್ಲೆಯ ಒಟ್ಟು ಗ್ರಾಮಗಳ ಪೈಕಿ
ಶೇಕಡಾ ತೊಂಬತ್ತರಲಿ ಸಾಲ ಬಾಕಿ.
ಬೆಲೆ ಏರಿಕೆಗೆ ಮೊದಲು ಹಾಕಲಿ ಲಗಾಮು
ಆಮೇಲೆ ಮಾಡೋಣ ಮಂತ್ರಿಗೆ ಸಲಾಮು.

### ೨೬೦೭. ಕವಿ ಮತ್ತು ವಿಮರ್ಶಕ

ನನ್ನಷ್ಟು ಜಾಣರಿದ್ದಾರೇನು, ಹೇಳು ?
ತಲೆಯೊಳಗೆ ಯಾವಾಗಲೂ ಅವರೇ ಕಾಳು.
ಹೇಗುಂಟು ನನ್ನ ಲೇಖನಿಯೊಳಗೆ ಸ್ಫೂರ್ತಿ ?
ಶಾಯಿ ಹೆಚ್ಚಾಗಿ ಕವಿತೆಗೆ ಮಂಗಳಾರ್ತಿ.

### ೨೬೦೮. ವೈದ್ಯರ ಸಲಹೆ

ನುಂಗಿದ್ದು ಆಗದಿದ್ದರೆ ನಿಮಗೆ ಜೀರ್ಣ
ಮಾತ್ರೆಗಳ ಹೊರತಾಗಿ ಉಂಟು ಬಿಳಿಚೂರ್ಣ
ಸರಕಾರಿ ಸೌಧದಲಿ ನೆರೆದಾಗ ಜಾತ್ರೆ
ಬಹಳಷ್ಟು ಖರ್ಚಾಗುತಿವೆ ನಮ್ಮ ಮಾತ್ರೆ.

### ೨೬೦೯. ಕವಿ

ನುಡಿಯ ದಾರಗಳಿಂದ ಹೊಲಿಯುವನು ಅಂಗಿ
ಕವಿಕಟ್ಟಿಸಿದ ಮನೆಗೆ ನುಡಿಯ ಇಟ್ಟಂಗಿ
ಕವಿಗೆ ಬೇಕಾಗಿಲ್ಲ ಕಬ್ಬಿಣ ಸಿಮೆಂಟು
ಎಲ್ಲವೂ ಇವನ ಜೋಳಿಗೆಯಲ್ಲಿ ಉಂಟು.

### ೨೬೧೦. ಉಪಮಂತ್ರಿಯ ತಲೆನೋವು

ನಿನ್ನ ತಲೆನೋವು ಹೋದದ್ದು ಹೇಗಣ್ಣ
ದಾಸಾಳವಾಗಿ ಅರಳಿದೆ ಮುಖದ ಬಣ್ಣ.
ಮದ್ದುಮಾಡದೆ ಹೋಯ್ತು ತನ್ನಾರೆತಾನೆ
ಉಪಮಂತ್ರಿಯಾದದ್ದೇ ತಲೆಗಿಲ್ಲ ಬೇನೆ.

## ೨೬೧೧. ಸರ್ವಜ್ಞನ ಸಂದೇಶ

ನಿನ್ನೆ ರಾತ್ರಿಗೆ ನಿದ್ದೆಯಿಂದೇಳುವಾಗ್ಗೆ
ಸರ್ವಜ್ಞ ಕವಿ ಬಂದು ಹಾಡಿದನು ಹೀಗೆ:
ಎಲ್ಲ ದಾನಗಳಲ್ಲಿ ಶ್ರಮದಾನ ಲೇಸು
ರಾಷ್ಟ್ರೀಯ ಯೋಜನೆಗೆ ಬೇಡ ಹಣಕಾಸು.

## ೨೬೧೨. ಅನ್ನಮಂತ್ರಿಯ ಪ್ರಕಟಣೆ

ನಿಮಗಿರಲಿ ಕೋಳಿ ಸಾಕಣೆಯ ಹವ್ಯಾಸ
ಸರಿಯಾಗಿ ಹೊಂದುವುದು ಜೀವನದ ಪ್ರಾಸ
ನಿತ್ಯವೂ ತಿನಬಹುದು ಏಳೆಂಟು ಮೊಟ್ಟೆ
ಅಕ್ಕಿ ಸಿಗದಿದ್ದರೂ ತುಂಬುವುದು ಹೊಟ್ಟೆ.

## ೨೬೧೩. ಅಜ್ಜಿ

ರವಿ ಬರುವ ಮೊದಲು ಅವಳೆದ್ದು,
ಮರಿಮಕ್ಕಳಿಗೆ ಕೊಡಲು ಒಂದೊಂದು ಮುದ್ದು
ಸಂಜೆಯಾಗುವವರೆಗೆ ತಣಿಯುವುದು ಜೀವ
ಅಜ್ಜಿ ಇದ್ದರೆ ಸಾಕು, ಬೇಡ ಮಾದೇವ.

## ೨೬೧೪. ನಿಗ್ರೋಗಳ ಹಾಡು

ನೆಮ್ಮದಿಯ ರಾತ್ರಿಯೇ ನಮ್ಮ ಮೈಬ್ಬಣ
ನಮ್ಮ ಮಂದಸ್ಮಿತವೇ ಮುಂಜಾವು ಅಣ್ಣ.
ನಮ್ಮ ಗುಂಗುರು ಕೂದಲೇ ತಿರೆಯ ಚಿಹ್ನ
ನಮ್ಮ ಬೆವರಿನ ಧಾರೆಯಲಿ ಧರೆಯ ಅನ್ನ.

## ೨೬೧೫. ಉತ್ತರ ಕನ್ನಡದ ಪದ

ನರನಿಗಿಂತಲು ಮುಖ್ಯ ಪುರಸಾಗವಾನಿ
ಮುಖ್ಯಮಂತ್ರಿಗೆ ಬೆಟ್ಟದಲಿ ಮೇಜವಾನಿ
ರಾಜ್ಯಪಾಲರು ಬರಲು ಹುಲಿ ಕರಡಿ ಹಂದಿ-
ಗಳಿಗಿಂತಲೂ ಕಡಿಮೆ ಸಾಮಾನ್ಯ ಮಂದಿ.

## ೨೬೧೬. ಖಾರ-ರೋಗ

ನಾನು ಯಾವಾಗಲೂ ತಿನ್ನುವುದು ಖಾರ
ಆದರೂ ನಾಲಗೆಗೆ ಇಲ್ಲ ಬೇಜಾರ.
ಇದಕೆ ಕಾರಣ ನನಗೆ ಸಕ್ಕರೆಯ ರೋಗ
ಸವಿತಿಂಡಿ ರವೆಯಷ್ಟು ತಿಂದರೂ ಆಗ.

## ೨೬೧೭. ವೈವಿಧ್ಯ

ನಾನಾ ನಮೂನೆಯಲಿ ಪ್ರಾಸಗಳ ಕಟ್ಟಿ
ಕವನ ಬರೆದರೆ ರಸಿಕರಂಗನಿಗೆ ರೊಟ್ಟಿ
ಒಮ್ಮೊಮ್ಮೆ ಊಟದೊಂದಿಗೆ ಇರಲಿ ಬ್ರೆಡ್ಡು
ನಿತ್ಯವೂ ತಿನ್ನಬಾರದು ರವೆಯ ಲಡ್ಡು.

## ೨೬೧೮. ಪಕ್ಷಾಂತರ

ನಾ ಸಂಧಿಸಾಧಕನೆ ? ಇದು ಪೂರ್ಣ ಸುಳ್ಳು
ನನಗೆ ಬೇಕಾದದ್ದು ಸಕ್ಕರೆಯ ಎಳ್ಳು
ಪ್ರತಿಪಕ್ಷದಲಿ ಉಂಡೆ ಸಿಗಲಿಲ, ಕಂದ
ಸರಕಾರ ಸೇರಿದೆನು ಅಡಿಗೆಮನೆಯಿಂದ.

## ೨೬೧೯. ಗಂಡನ ಪೇಚಾಟ

ನನ್ನ ಹೆಂಡತಿ ಪ್ರಾಯದಲಿ ಬಹಳ ಸಣ್ಣ
ಹೀಗಾಗಿ ನೆತ್ತಿಗೇರಿದೆ ಅವಳ ಬಣ್ಣ
ಏನು ಮಾಡಲಿ ಹೇಳು ? ಉಂಟೇ ಉಪಾಯ
ಮಾಯವಾಗಲಿ ಮೊದಲು ನಿಮ್ಮ ಮುದಿಪ್ರಾಯ.

## ೨೬೨೦. ಸತ್ಯಸಂದ ಹೇಳಿದ್ದು

ನಾನೊಬ್ಬ ನವಭಾರತದ ಕಾರ್ಯಕರ್ತ
ಯಾವುದಕ್ಕೂ ಮೊದಲು ನೋಡುವೆನು ಮೂರ್ತ.
ಮೂರ್ತ ಸರಿಯಾಗಿರಲು ಕಿಸೆಯೊಳಗೆ ಫಾಯ್ದೆ
ಫಾಯ್ದೆ ಇದ್ದರೆ ಮಾತ್ರ ಮಾಡುವೆನು ಕಾಯ್ದೆ.

## ೨೬೨೧. ಸಾಹಿತ್ಯ ಸಮ್ಮೇಳನ

ನಡುಬೀದಿಯೊಳಗಿತ್ತು ದೊಡ್ಡ ಪೆಂಡೂಲು
ಮೆರವಣಿಗೆಯೊಳಗಿತ್ತು ಸಂಭ್ರಮದ ಡೋಲು
ವೇದಿಕೆಯ ಮೇಲೆ ಮಂತ್ರಿಗಳ ವ್ಯಾಖ್ಯಾನ
ಸಾಹಿತ್ಯಪುಂಗವರು ಹಾಕಿದರು ತಾನ.

## ೨೬೨೨. ನನ್ನ ಹೆಂಡತಿಗೆ

ನಿನ್ನ ಮುಡಿಯೊಳಗಿಲ್ಲ ಮಲ್ಲಿಗೆಯ ದಂಡೆ
ಪ್ರಾಚೀನ ಕಾವ್ಯದಲಿ ಬಹಳಷ್ಟು ಕಂಡೆ
ನಮ್ಮ ಕವಿ ಶ್ರೇಷ್ಠರನು ಓದುವುದರಿಂದ
ಆಗಲೇಬೇಕಲ್ವೇ ಹೆಚ್ಚು ಆನಂದ ?

## ೨೬೨೩. ಉಗ್ರಗಾಮಿ ಘೋಷಣೆ

ನಾವು ಸಿಕ್ಕಾಪಟ್ಟೆ ಮಾಡಿದರೆ ಸದ್ದು
ಆಳ ಸಂದೆಯಾಗಿ ಬಿಡುವುದು ಕಪ್ಪು ಉದ್ದು!
ಆಮೇಲೆ ಕಾಳಸಂತೆಗೆ ಇಲ್ಲ ಜಾಗ
ಎಲ್ಲರೂ ಒದರಾಡಿ! ಮಾಡಿ ತುಸು ತ್ಯಾಗ!

## ೨೬೨೪. ಅನುಕರಣೆ

ಪುಟ್ಟಪ್ಪನಾಗಬೇಕೆಂಬ ಹವ್ಯಾಸ
ಇಟ್ಟುಕೊಂಡರೆ ಕೆಟ್ಟು ಹೋಗುವುದು ಪ್ರಾಸ
ಬೇಂದ್ರೆಯಾಗುವೆನೆಂದು ಕಟ್ಟಿದರೆ ಪದ್ಯ
ರಸಿಕರಂಗನು ಸಿಟ್ಟಿಗೇಳುವುದು ಸಾಧ್ಯ.

## ೨೬೨೫. ಅವಿವಾಹಿತ ಹುಡುಗಿ

ಪಾರಿಜಾತವು ಪೂರ್ಣ ಅರಳಿದರೂ, ನೀರೇ,
ನೀರಡಿಕೆಯಿಂದ ಬಾಡಿದ ಇವಳ ಮೋರೆ.
ಜಲವ ಸಿಂಪಡಿಸಲಿಕೆ ಪತಿ ಬೇಡವೇನೇ ?
ಪಶು ಪಕ್ಷಿಗಳಿಗಿಲ್ಲ ಈತರದ ಬೇನೆ.

## ೨೬೨೬. ಸಭಾತ್ಯಾಗ

ಪ್ರತಿವಾರವೂ ಮಾಡಿದರೆ ಸಭಾತ್ಯಾಗ
ಗುಣ ಹೊಂದುವುದು ರಾಜಕಾರಣಿಯ ರೋಗ
ಈ ರೀತಿ ವಾಸಿಯಾಗಲು ಹಿಡಿದ ಬೇನೆ
ಮುಂದಿನ ಚುನಾವಣೆಗೆ ಅನುಕೂಲ ತಾನೆ?

## ೨೬೨೭. ಸಭಾತ್ಯಾಗದ ರಹಸ್ಯ

ಪರಿಷತ್ತಿನಲಿ ಮೊದಲು ವಹಿಸಿದರು ಭಾಗ
ಆಮೇಲೆ ಮಾಡಿಬಿಟ್ಟರು ಸಭಾತ್ಯಾಗ
ಅನಬೇಡ: ಇದು ಒಂದು ವ್ಯರ್ಥ ಹುಚ್ಚಾಟ
ಬೇಕೆಮಗೆ ಈ ತರದ ಕಣ್ಣು ಮುಚ್ಚಾಟ.

## ೨೬೨೮. ಪತ್ರಿಕೆಯ ಅವಶ್ಯಕತೆ

ಪತ್ರಿಕೆಗೆ ಬೇಕಾದದ್ದು ವಾರದ ಭವಿಷ್ಯ
ಧರೆಗಿಳಿದ ತಾರೆಯರ ತುಟಿಗಳ ರಹಸ್ಯ
ಇವು ಇದ್ದ ಹೊರತು ಪತ್ರಿಕೆಗಿಲ್ಲ ಜೀವ
ನಿನ್ನ ಫೋಟೋ ಹಾಕಿದರೂ ವ್ಯರ್ಥ, ದೇವ.

## ೨೬೨೯. ಚುನಾವಣೆಗೆ ನಿಂತಾಗ

ಪಾರ್ಲಿಮೆಂಟಿಗೆ ಅವನು ಮೊನ್ನೆ ನಿಂತಾಗ
ಜನರು ಹೇಳಿದರು : ನಿನಗೂ ಬಂತೇ ಈ ರೋಗ?
ನಿನಗೇಕೆ? ಒಣಉಸಾಬರಿ ಆ ಸೀಟು
ಇಲ್ಲಿಯೇ ಬಿಸಿಮಾಡಿಕೊ ನಿನ್ನ ಕೋಟು.

## ೨೬೩೦. ಬೆಲೆಯ ಕೋತಿ

ಪೂರ್ಣ ಇಳಿಮುಖವಾಗಿ ಪ್ರತಿಯೊಂದು ಕಾಳು
ಪಾತಾಳ ಸೇರಿದರೆ ರೈತನಿಗೆ ಗೋಳು.
ಭರಭರನೆ ಗಗನಕೇರಿದರೂ ಫಜೀತಿ
ಎರಡು ಟೊಂಗೆಯ ನಡುವೆ ಕುಳಿತಿರಲಿ ಕೋತಿ.

### ೨೬೩೧. ಪ್ರಶಸ್ತಿಗಾಗಿ

ಪಡೆಯಲಿಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ
ಜೋರುಜೋರಾಗಿ ನಡೆಯುವುದುಂಟು ಕುಸ್ತಿ.
ಐನೂರು ಪುಟದ ಪುಸ್ತಕ ಮಾಡಿ ಪ್ರಿಂಟು.
ಡೋಲು ಬಡೆದರೆ ಸಿಗುವ ಸಂದರ್ಭವುಂಟು.

### ೨೬೩೨. ಕಂದಾಯ ವಸೂಲಿ

ಪ್ರತಿವರುಷ ಕಂದಾಯ ಹೆಚ್ಚಿಗೆ ವಸೂಲಿ
ಹೀಗಾಗಿ ಸೊರಗಿ ಹೋದನು ಹೊಲದ ಕೂಲಿ
ಕೂಲಿ ಸೊರಗಿದರೇನು ? ಕೊಬ್ಬಿದವು ಕರಡಿ
ನೋಡಲೇಬೇಕೆನ್ನುವವರು ನನ್ನೊಡನೆ ಹೊರಡಿ.

### ೨೬೩೩. ಅತಿವೃಷ್ಟಿ ಹಾವಳಿ

ಪರಿಷತ್ತುಗಳನೆಲ್ಲ ಮುಕ್ತಾಯಗೊಳಿಸಿ
ವ್ಯಾಖ್ಯಾನ ನಿಷ್ಣಾತರನು ಮನೆಗೆ ಕಳಿಸಿ
ಇವರ ವ್ಯಾಖ್ಯಾನಗಳ ಅತಿವೃಷ್ಟಿಯಿಂದ
ಬೆಳೆಯೆಲ್ಲ ಹಾಳಾಗಿ ಕಾಳಿಲ್ಲ ಕಂದ.

### ೨೬೩೪. ಎರಡು ಮುಖಗಳು

ಪ್ರತಿಯೊಂದು ನಾಣ್ಯಕ್ಕೆ ಎರಡುಮುಖ ತಾನೇ ?
ಇದನು ತಿಳಿದರೆ ಹಗುರವಾಗುವುದು ಬೇನೆ
ಕಾಳಸಂತೆಯ ಬಗ್ಗೆ ನಿಮಗೇಕೆ ಕೋಪ ?
ರಾತ್ರಿಯಲ್ಲೇ ಬೆಳಗುವುದು ಮನೆಯ ದೀಪ.

### ೨೬೩೫. ಪ್ರಾಚೀನ ಕಾವ್ಯ

ಪ್ರಾಚೀನ ಕಾವ್ಯದೊಳಗೇನೇನು ಉಂಟು ?
ಜೀವಂತ ಪಂಕ್ತಿಗಳು ಮೂರು ಪರ್ಸೆಂಟು
ಉಳಿದದ್ದು ಗೋಂದು, ಶಾಯಿಯ ಕೆಮ್ಮು ನೆಗಡಿ
ಹದಿನೆಂಟು ವರ್ಣನೆಯ ಜರತಾರಿ ಪಗಡಿ.

### ೨೬೩೬. ಬೇಂದ್ರೆ ಮತ್ತು ಪುಟ್ಟಪ್ಪ

ಪುನಃ ಪುನಾಃ ಬೇಂದ್ರೆ ಮತ್ತೆ ಪುಟ್ಟಪ್ಪ
ಉಳಿದವರ ಗತಿಯೇನು ? ಸ್ವಲ್ಪ ಹೇಳಪ್ಪ
ಉಳಿದವರು ಕೊಟ್ಟರೂ ಒಂದೆರಡು ಹಣ್ಣು
ಇವರು ತಂದದ್ದು ಮಾವನ ಮನೆಯ ಹೆಣ್ಣು.

### ೨೬೩೭. ತಮಾಷೆ

ಬಲುದೊಡ್ಡ ಅಧಿಕಾರಿಯಾಗಿದ್ದೆ ನಾನು.
ನೆತ್ತಿಯೊಳಗೇ ಬಂದು ಕೂತಿದ್ದ ಭಾನು
ಪೆನಶನ್ನು ಸಿಕ್ಕಿದ್ದೆ ಕವಿಯಿತು ಅಮಾಸೆ
ವೇದಾಂತ ಸುಳ್ಳಲ್ಲ! ಜೀವನ ತಮಾಷೆ

### ೨೬೩೮. ಕವಿಯ ನಿರಾಶೆ

ಭಾಯಿಭಾಯಿಗಳೆಂದು ಬರೆದಿದ್ದ ಕವನ
ಈಗೆ ನೋಡಿದರೆ ಗಿರಿಶೃಂಗದಲಿ ಕದನ
ಮೂರು ಸಾವಿರವರ್ಷಗಳ ಸ್ನೇಹಭಾವ
ತೀರಿ ಹೋಗುವುದೊಳಿತೆ, ಹೇ, ಬುದ್ಧದೇವ ?

### ೨೬೩೯. ಕರಾವಳಿಯ ಅತಿಥ್ಯ

ಭೋಜನಕೆ ಕರೆದಾಗ ಹಿಗ್ಗಿದನು ಅವನು
ಬಡಿಸಿದರು ಘೋರವಾಸನೆಯ ಒಣಮೀನು
ಕನ್ನಡ ಕರಾವಳಿಯ ಆದರಾತಿಥ್ಯ
ಧಾರವಾಡದ ಭಟ್ಟರಿಗೆ ಆತ್ಮಹತ್ಯ!

### ೨೬೪೦. ಕಾವ್ಯಧಾರೆ

ಬಲುರಭಸದಲಿ ಸುರಿಯುತಿದೆ ಕಾವ್ಯಧಾರೆ
ತಡಮಾಡಬೇಡ, ಛತ್ರಿಯ ಕೆಳಗೆ ಬಾರೆ.
ಬರಿ ಧಾರೆಯಲ್ಲ ಗುಡುಗೂ ಸಿಡಿಲು ಮಿಂಚು.
ಈ ತನಕ ಬಿದ್ದದ್ದು ಇನ್ನೂರು ಇಂಚು.

## ೨೬೪೧. ಸಚಿವರ ಸೃಷ್ಟೀಕರಣ

ಬಂದಿತ್ತು ಮೂರುಸಾವಿರ ಚೀಲ ಅಕ್ಕಿ
ಗೋದಾಮಿನಲ್ಲಿ ತಿಂದು ಹಾಕಿದವು ಹಕ್ಕಿ.
ಬಂದಿತ್ತು ಆರುಸಾವಿರ ಚೀಲ ಜೋಳ
ರಸ್ತೆಯಲಿ ತಿಂದು ಹಾಕಿತು ಒಂದು ತೋಳ.

## ೨೬೪೨. ರಕ್ಷಣಾ ಕಾನೂನು

ಭಾರತದ ರಕ್ಷಣಾ ಕಾನೂನಿನಿಂದ
ಮಂತ್ರಿಗಳ ಬೇಳೆಯೂ ಬೇಯುತ್ತಿದೆ ಕಂದ
ಮೈಗೆ ಚುಚ್ಚಿದ ಮುಳ್ಳುಗಳನ್ನೆಲ್ಲ ಹಿಡಿದು
ನೆರೆಮನೆಯ ಕೋಣೆಯಲಿ ಹಾಕುವರು ಜಡಿದು.

## ೨೬೪೩. ಉದ್ದ ಬಾಲ

ಬೆನ್ನು ಮೂಳೆಯ ಮಧ್ಯದಲಿ ಉದ್ದಬಾಲ
ಇದಕೆನ್ನುವರು, ಮಗಳೇ, ಅಮೆರಿಕದ ಸಾಲ
ಮೈಯಿಗಿಂತಲು ಬಾಲ ಒಜ್ಜೆಯಾದೊಡನೆ
ಪ್ರತಿಯೊಂದು ಎಲುಬು ನಡುಗುವುದು ಗಡಗಡನೆ

## ೨೬೪೪. ಪಾನ ಪ್ರತಿಬಂಧ

ಭಾರತದ ಆದ್ಯಂತ ಪಾನ ಪ್ರತಿಬಂಧ
ಮೆರೆದಾಡುತಿದೆ ಕಾಗದದ ಮೇಲೆ ಚೆಂದ
ಕಾಗದದ ಕೆಳಗಡೆಗೆ ಇಣುಕಿ ನೋಡಿದರೆ
ಬೀದಿಬೀದಿಯ ಮೂಲೆಯೊಳಗುಂಟು ಮದಿರೆ.

## ೨೬೪೫. ಬಣ್ಣದ ಭಾಷಣ

ಭಾಷಣಕೆ ನಿತ್ಯವೂ ಹಾಕಿದರೆ ಬಣ್ಣ
ನೀನೊಂದುದಿನ ಮಂತ್ರಿಯಾಗಬಹುದಣ್ಣ.
ಹಾಕಿದರೆ ಬಣ್ಣ ಬದಲಾಯಿಸಿದ ಕೋಟು
ನಿನ್ನ ಪೆಟ್ಟಿಗೆಯೊಳಗೆ ಸಾಕಷ್ಟು ಓಟು.

## ೨೬೪೬. ನನ್ನ ಉದ್ದೇಶ

ಮಂಗಳವ ಹಾಡಲಿಕೆ ನನಗಿಲ್ಲ ಬಾಯಿ
ಯಾವಾಗಲೂ ಕಾವಲಿಡಬೇಕು ನಾಯಿ
ಸ್ತುತಿಪಾಠ ಅತಿಯಾಗಿ ಹಾಳಾಯ್ತು ದೇಶ
ಬೊಗಳಬೇಕೆನ್ನುವುದೆ ನನ್ನ ಉದ್ದೇಶ.

## ೨೬೪೭. ಶಾಸ್ತ್ರಿಗಳು ಹೇಳಿದ್ದು

ಲಂಡನ್ನಿಗೆ ಹೋದರೂ ಹಸಿ ಬೆಂಡಿಕಾಯಿ
ಬೇರೆ ಯಾವುದಕೂ ಹಚ್ಚುವುದಿಲ್ಲ ಬಾಯಿ
ಇದಕೆನ್ನುವರು ನನ್ನ ಜೀವನದ ರಹಸ್ಯ
ಮಾಡಬಾರದು ನೀವು ನನ್ನ ಅಪಹಾಸ್ಯ.

## ೨೬೪೮. ಪಾನೀಯಗಳು

ಮಜ್ಜಿಗೆಯ ನೀರೆನ್ನುವುದು ಬರೀ ಚೇಷ್ಟೆ
ಬಿಸಿಕಾಫಿ ಕೊಟ್ಟರೂ ಹಣೆಬರಹ ಅಷ್ಟೇ.
ಟೀ ಎನ್ನುವುದು ಕುಡಿಯುವವನ ಅವಮಾನ
ವಿಸ್ಕಿ–ಸೋಡಾ ಮಾತ್ರ ನಿಜವಾದ ಪಾನ.

## ೨೬೪೯. ಖಾದಿ ಭವಿತವ್ಯ

ಮುದುಕನೆಂದನು : ನಾನು ಧರಿಸುವೆನು ಖಾದಿ
ಯುವಕನೆಂದನು : ನನಗೆ ಬೇಡ ಈ ವ್ಯಾಧಿ
ಅತ್ತೆ ಅಂದಳು : ಖಾದಿ ಧರಿಸಿದರೆ ಹುಡುಗಿ,
ಅಡಿಗಿ ಮನೆಯಲಿ ಕುಳಿತುಕೊಳ್ಳುವಳು ಅಡಗಿ.

## ೨೬೫೦. ಕಾವ್ಯದ ಭಾಷೆ

ಮುದುಕನಿಗೆ ಎಂದು ಬರೆಯುವದನ್ನು ಬಿಟ್ಟು
ಮುದುಪಂಗೆ ಎಂದು ಬರೆದನು ನಮ್ಮ ಕಿಟ್ಟು
ಹೀಗೇಕೆ ಎಂದು ಕೇಳಿದರೆ ಅಂತಾನೆ :
ನನಗೂನು ಕಾವ್ಯ ಬರೆಯುವ ಚಪಲತಾನೆ ?

### ೨೬೫೧. ಭರವಸೆ

ಮಂತ್ರಿಗಳು ನಮಗಿತ್ತ ಭರವಸೆಯ ನಂಬಿ
ಒಡೆದು ನೋಡಿದೆವು ಪ್ರತಿಯೊಂದು ಗೋಡಂಬಿ
ಒಂದರಲ್ಲೂ ಬೀಜ ಸಿಗಲಿಲ್ಲ ಪಾಪ !
ಎಲ್ಲವೂ ಒಣಬಾಯಿ ಮಾತಿನ ಪ್ರತಾಪ.

### ೨೬೫೨. ಬ್ಯಾಂಕಿನ ಜಾಹೀರಾತು

ಮನೆಯೊಳಗೆ ಖಾಲಿ ಇದ್ದರೆ ನಿಮ್ಮ ದುಡ್ಡು.
ವೃದ್ಧನಾರಿಯ ಹಾಗೆ ಸಂಪೂರ್ಣ ಗೊಡ್ಡು
ಬ್ಯಾಂಕಿನಲಿ ತಂಬಿದರೆ ಯೌವನದ ಪ್ರಾಯ
ಪ್ರತಿವರ್ಷ ಮರಿ ಹಾಕಿ ಭರ್ತಿ ಆದಾಯ.

### ೨೬೫೩. ಪುಢಾರಿಯ ತ್ಯಾಗಬುದ್ಧಿ

ಮಂತ್ರಿಮಂಡಳದಲ್ಲಿ ನನಗೊಂದು ಜಾಗ
ಸಿಕ್ಕಿದರೆ ಮಾಡಬೇಕೆನ್ನುವೆನು ತ್ಯಾಗ
ನನ್ನ ಪೂರಾ ವೇಳೆ ಸಂಚಾರಕಾಗಿ
ರಸ್ತೆಗಳ ಧೂಳು ತಿನ್ನುವೆನು ನಿಮಗಾಗಿ.

### ೨೬೫೪. ಮಂತ್ರಿ ಹೇಳಿದ್ದು

ಮಂಜು ಮುಸುಕಿದರೇನು ? ಅಂಜುವುದ ಗಿರಿಯು ?
ರಾಜಕಾರಣದೊಳಗೆ ನಾನೊಂದು ನರಿಯು
ದೇಶ ಹಾಳಾದರೂ ನಾನು ಸಾಬೀತು
ಕೊನೆಯವರೆಗೂ ಊಟ ಮಾಡುವೆನು ಕೂತು.

### ೨೬೫೫. ಮನದನ್ನೆಗೆ

ಮನದನ್ನೆ, ನೀ ನನ್ನ ಜೀವನದ ಪದ್ಯ
ಉಳಿದ ಹೆಂಗಸರೆಲ್ಲರೂ ಬರೀ ಗದ್ಯ
ಪದ್ಯದೊಳಗುಂಟಲ್ವೇ ಹಲವಾರು ಜಾತಿ ?
ಭಾವಗೀತೆಯ ಹಾಗೆ ಸವಿ ನಿನ್ನ ಪ್ರೀತಿ.

### ೨೬೫೬. ಚಿತ್ರರಂಗದ ರಹಸ್ಯ

ಮನರಂಜನೆಗೆ ಬೇಕು ಚಿತ್ರಮಯ ರಂಗ
ಒಮ್ಮೊಮ್ಮೆ ಪರದೆಗಳ ಮೇಲೆ ಕಿರುಮಂಗ
ಈ ಮಂಗವೆನ್ನುವುದೆ ಜೀವನದ ವೇಷ
ವೇಷ ನೋಡಿದರೇನೆ ಜನಕೆ ಸಂತೋಷ.

### ೨೬೫೭. ಪಾನೀಯಗಳು

ಮಜ್ಜಿಗೆಯ ನೀರೆನ್ನುವುದು ಬರೀ ಚೇಷ್ಟೆ
ಬಿಸಿ ಕಾಫಿ ಕೊಟ್ಟರೂ ಹಣೆಬರಹ ಅಷ್ಟೆ
ಟೀ ಎನ್ನುವುದು ಕೂಡ ಶುದ್ಧ ಅವಮಾನ
ವಿಸ್ಕಿ–ಸೋಡಾ ಕೊಡಿಸಿದರೆ ಅವು ಮಾತ್ರ ಪಾನ.

### ೨೬೫೮. ತರುಣ ಕವಿಗಳಿಗೆ

ಮುಂಜಾವದಲಿ ಬ್ರೆಡ್ಡು ತಿಂದರೂ, ಅನ್ನ
ಬೇಕೆಂದು ಹೇಳುವುದು ಹೊಟ್ಟೆ ಮಧ್ಯಾಹ್ನ.
ಪ್ರತಿದಿವಸ ದೊರೆತರೂ ಆಂಗ್ಲೇಯ ಬೀರು.
ಭೋಜನಕೆ ಬೇಕು ಕನ್ನಡದ ಹುಳಿಸಾರು.

### ೨೬೫೯. ಮಾಮರದ ಕವಿ

ಮಾಮರದ ರೆಂಬೆಯಲಿ ಕೋಗಿಲೆಯ ಹಾಡು
ಬುಡಕ್ಕಿದ್ದ ಕವಿಯ ಕೈಯೊಳಗಿತ್ತು ಲಾಡು
ಹಾಡು ಕೇಳಿಸದಿದ್ದರೂ ಇಲ್ಲ ನಷ್ಟ
ಲಾಡು ಬಾಯೊಳಗಿಟ್ಟು ಕವಿ ಬರೆದುಕೊಟ್ಟ.

### ೨೬೬೦. ತಜ್ಞರ ಅಭಿಪ್ರಾಯ

ಮಾಡಿಕೊಂಡರೆ ಜನರು ಸಹಕಾರಿ ಸಂಘ
ಮೆಂಬರಾಗುವುದೊಳಿತು ಕಿಡಿಗೇಡಿ ಮಂಗ.
ಕೈಗೆ ಹತ್ತುವುದು ತೋಟದ ಬಾಳೆಕಾಯಿ
ಆಮೇಲೆ ಬೇಡ ಸರಕಾರದ ತಗಾಯಿ.

## ೨೬೬೧. ಗೋಕರ್ಣ ಮಹಾತ್ಮೆ

ಯಾತ್ರಿಕನೆ ಬಾ ಇಲ್ಲಿ, ಇದುವೆ ಗೋಕರ್ಣ
ಪ್ರತಿಯೊಂದು ಪಾಪಕ್ಕೆ ಉಂಟು ಗಜಕರ್ಣ
ಕೋಟಿತೀರ್ಥದಲಿ ಮಾಡಿದರೊಮ್ಮೆ ಸ್ನಾನ
ಕಜ್ಜಿಯಾಗುವುದಿಲ್ಲ; ಬೇಡ ಅನುಮಾನ.

## ೨೬೬೨ ಅನುಯಾಯಿಯ ಪದ

ಯಾವಾಗಲೂ ನಮಗೆ ಇವನೇ ಪುಢಾರಿ
ಇವನ ವಿನಹಾ ಬಾನು ಬೀಳುವುದು ಜಾರಿ
ಇದುವರೆಗೆ ಹಿಡಿದೆತ್ತಿ ನಿಂತವನೆ ಇವನು
ಪುನಹಾ ಪುನಹಾ ನಾನು ಹೇಳಬೇಕೇನು ?

## ೨೬೬೩ ನನ್ನ ವಿಶ್ವಾಸ

ಯೌವನದ ರಕ್ತ ನವಜೀವನದ ಶ್ವಾಸ
ಹೊಸಪೀಳಿಗೆಯ ಮೇಲೆ ನನ್ನ ವಿಶ್ವಾಸ
ದಿಲ್ಲಿಯಲ್ಲಿ ಕುಳಿತ ಮುದಿಗೂಬೆಗಳನೆಲ್ಲ
ಗದ್ದುಗೆಯಮೇಲಿಂದ ಕೆಳಗಿಳಿಸು, ಅಲ್ಲಾ.

## ೨೬೬೪. ಗ್ರಾಮೋದ್ಯೋಗದ ಜಾಹೀರಾತು

ಯಂತ್ರೋಪಕರಣ ತರಿಸಿದ ಮೂಲವ್ಯಾಧಿ
ಉಪಶಮನಗೊಳ್ಳುವುದು ಧರಿಸಿದರೆ ಖಾದಿ.
ಎರಡು ರಟ್ಟೆಗಳಿಂದ ಕುಟ್ಟಿದರೆ ಭತ್ತ
ಉಲ್ಲಾಸದಿಂದ ನಲಿದಾಡುವುದು ಚಿತ್ತ.

## ೨೬೬೫. ಭಾರತದ ಭವಿತವ್ಯ

ಯಾಕೆ ಗಡಿಬಿಡಿ, ಮಗನೆ ? ನಾಳೆ ಮುಂಜಾನೆ
ಯೋಜನೆಯ ಕತ್ತೆ ಆಗುವುದುಂಟು ಆನೆ.
ಪಂಚವಾರ್ಷಿಕಗಳಿಗೆ ಹಿಡಿದರೂ ಕೆಮ್ಮು
ವಾಸಿಯಾಗುವ ಮೊದಲೇ ಸೋಷಾಲಿಜಮ್ಮು

## ೨೬೬೬. ಚುನಾವಣೆಯಲ್ಲಿ ಕೇಳಿದ್ದು

ಯಾರು ಆರಿಸಿ ಬಂದರೂ ಬಿಸಿಲುತಾಪ
ಮಾಯವಾಗದು! ಜನಕೆ ಗೊತ್ತಿಲ್ಲ, ಪಾಪ!
ಓಟು ಹಾಕುವ ಕರ್ಕರೆಯ ಬದಲು, ಜಾಣಾ,
ಹಾಯಾಗಿ ವಿಶ್ರಮಿಸು ಕಾಫಿ ಕುಡಿಯೋಣ.

## ೨೬೬೭. ಮಿಡಿಗಾಯಿ

ರಸಪಾಕ ಹೊರಸೂಸುವುದೇ ಚುಟಕದಿಂದ
ಇದು ಬರೀ ಮಿಡಿಗಾಯಿ! ರಸವಿಲ್ಲ, ಕಂದ.
ಒಮ್ಮೊಮ್ಮೆ ವಗರು, ಒಮ್ಮೊಮ್ಮೆ ಹುಳಿ ಜಾಸ್ತಿ
ಇದಕೆನ್ನುವರು ನಿಮ್ಮ ದಿನಕರನ ಆಸ್ತಿ.

## ೨೬೬೮. ವಿಮರ್ಶೆ

ರಂಗಭೂಮಿಯ ಮೇಲೆ ಹಚ್ಚಿ ಗ್ಯಾಸಲೈಟು
ಸರಿಯಾಗಿ ನೋಡಿದರೆ ಕಾಣುವುದು ಗುಟ್ಟು
ಗಂಡಮೂಗಿಗೆ ತೊಡಿಸಿದರೂ ಚೆಂದನತ್ತು
ಯಾವ ರಸಋಷಿ ಬಂದು ಕೊಡಬೇಕು ಮುತ್ತು?

## ೨೬೬೯. ಪ್ರಶ್ನೋತ್ತರ

ರಾಜಕೀಯಕೆ ಬೀಳುವವರಾರು, ಸ್ವಾಮಿ?
ಸಾಕಷ್ಟು ಉದ್ಯೋಗವಿಲ್ಲದ ರಿಕಾಮಿ
ರೈತಾಪಿತನಕೆ ಬೀಳುವವರಾರು ಮತ್ತೆ?
ಯಾವಾಗಲೂ ದುಡಿಯಬೇಕೆಂಬ ಕತ್ತೆ.

## ೨೬೭೦. ಪ್ರತಿಜ್ಞಾ ವಿಧಿ

ರಾಜಕಾರಣವೆ ದೇವರ ದೊಡ್ಡ ಕೆಲಸ
ಭಯಭಕ್ತಿಯಿಂದ ನಡೆಸುವೆನು ಈ ಕೆಲಸ
ಹೀಗೆಂದು ಮಂತ್ರಿಯಾದನು ನಮ್ಮ ಹನುಮ
ಧನ್ಯವಾಯಿತು, ಮಗನೆ, ಮಾರುತಿಯ ಜನುಮ.

## ೨೬೭೧. ರಾಮರಾಜ್ಯದ ಹನುಮಂತ

ರಾಮರಾಜ್ಯದ ಮುಖ್ಯಮಂತ್ರಿ ಹನುಮಂತ
ಹಾರಾಟದಲ್ಲಿಯೂ ಬಲು ಬುದ್ಧಿವಂತ
ಮುಂಜಾನೆ ಮಂಡ್ಯ ಮಧ್ಯಾಹ್ನ ತುಮಕೂರು
ಸಂಜೆ ಗೋಕರ್ಣಕ್ಕೆ, ರಾತ್ರೆ ಮಂಗಳೂರು.

## ೨೬೭೨. ಹನುಮಂತನ ಗತಿ

ರಾಮರಾಜ್ಯದಲಿ ಶಿವಭಕ್ತರ ವಶೀಲಿ
ಅತಿಯಾಗಿ ಹನುಮಂತನೂ ಪೂರ್ಣಖಾಲಿ
ಪಾಪ ! ದಿಲ್ಲಿಯವರೆಗೆ ಹಾರಿದರು ವ್ಯರ್ಥ
ಸ್ಪಷ್ಟವಾಯಿತೆ ನನ್ನ ಚೌಪದಿಯ ಅರ್ಥ ?

## ೨೬೭೩. ಲೋಹಿಯಾ ಹೇಳಿದ್ದು

ರಾಜಕಾರಣದಲ್ಲಿ ಮಾತಿನ ಮಸಾಲೆ
ಇದ್ದ ಹೊರತೂ ಶೋಭಿಸದು ಪಾಕಶಾಲೆ
ಒಲೆಯ ಸೇರಿದ ಮಡಕೆಯೊಳಗಿರಲಿ ಖಾರ
ಚಲಿಸಿದರೆ ಜಾರಿಬೀಳುವುದು ಸರಕಾರ.

## ೨೬೭೪. ರಾಮರಾಜ್ಯದ ಪ್ರಗತಿ

ರಾಮರಾಜ್ಯದ ಪ್ರಗತಿ ನಿಮಗೇನು ಗೊತ್ತು ?
ನಡುದಾರಿಯಲಿ ರೈಲು ಹಳಿತಪ್ಪಿ ಬಿತ್ತು.
ಒಡನೆಯೇ ಆಂಜನಯ ಪುಣ್ಯದಿಂದ
ಮುಂದೆ ಸಾಗಿತು ಗಾಡಿ ! ಕತೆಯ ಕೇಳೆಂದ.

## ೨೬೭೫. ಭಾರತೀಯ ಸ್ಪುಟನಿಕ್

ರಾಜಕಾರಣಿಗೆ ಸಿಕ್ಕಿದರೆ ಅವಕಾಶ
ಅರೆಗಳಿಗೆಯಲಿ ಮುಟ್ಟಬಹುದು ಆಕಾಶ
ಇದಕೆನ್ನುವರು ಭಾರತೀಯ ಸ್ಪುಟನಿಕ್ಕು
ರಷ್ಯದಲ್ಲೂ ಇಲ್ಲ ಇಂಥ ತಾಕತ್ತು.

## ೨೬೭೬. ಕವಿಗಳ ಬೇಡಿಕೆ

ರಾಷ್ಟ್ರೀಯ ಯೋಜನೆಯ ಕೃತಿಗಳಿಸುವಾಗ
ಕವಿಯ ಉತ್ಪಾದನೆಗೆ ಸಿಗಬೇಕು ಜಾಗ.
ಪ್ರತಿವರುಷ ಕವಿಗಳಿಗೆ ಮಾಡಿ ಸನ್ಮಾನ
ಎರಡು ಕಿಸೆ ತುಂಬ ಕೊಡಬೇಕು ಬಹುಮಾನ.

## ೨೬೭೭. ಸಚಿವರ ಪ್ರತಿಜ್ಞಾವಿಧಿ

ರಾಜಕೀಯದ ಕೆಲಸ ದೇವರ ಪ್ರಸಾದ
ಗಪಗಪನೆ ಬಾಯೊಳಗೆ ಹಾಕುವೆನು ಸೀದಾ.
ಹೀಗೆಂದು ಮಂತ್ರಿಯಾದನು ನಮ್ಮ ಹನುಮ
ಧನ್ಯವಾಯಿತು, ಮಗನೆ, ಮಾರುತಿಯ ಜನ್ಮ

## ೨೬೭೮. ರಾಜಿನಾಮೆಗಳ ಬೆದರಿಕೆ

ರಾಜಿನಾಮೆಗಳ ಕೊಡತಾರಂತೆ ಇವರು
ಕೊಡುವ ಮೊದಲೇ ಪಾಪ ಮೈತುಂಬ ಬೆವರು
ಸರಿಯಾಗಿ ಬೇಯುವುದೇ ಈ ಬಾಳೆಕಾಯಿ ?
ಬೇಯದಿದ್ದರೆ ಮಗನೆ, ಹುಳಿ ಅಮಟೆಕಾಯಿ.

## ೨೬೭೯. ಪಾನ ಪ್ರತಿಬಂಧ

ಟ್ರಕ್ಕು ಹೊಡೆಯಿತು ಸೇತುವೆಯ ಮೇಲೆ ಡಿಕ್ಕಿ
ನೀರಪಾಲಾಗಿ ಮುಳುಗಿತು ತಂದ ಅಕ್ಕಿ
ಡ್ರೈವರ ಮಹಾಶಯನು ಕುಡಿದುಕುಳಿತಿದ್ದ
ಇದಕೆನ್ನುವರು ಪಾನಪ್ರತಿಬಂಧ ಯುದ್ಧ.

## ೨೬೮೦. ವ್ಯಾಪಾರಿ ಭಜನೆ

ಲೈಸನ್ಸು ಪರ್ಮಿಟ್ಟುಗಳ ಹೊರತು, ದೇವ,
ಪರದೇಶಿಯಾಗುವುದು ಮಾನವನ ಜೀವ.
ನೀ ಕೂಡ ಹೊರಟು ಹೋಗುವೆ ಕೈಯಬಿಟ್ಟು
ಶ್ರೀ ಪುರಂದರ ವಿಠಲ ಬೇಕು ಪರ್ಮಿಟ್ಟು.

## ೨೬೮೧. ಮೊನ್ನೆ ಕೇಳಿದ್ದು

ವೋಟು ಹಾಕುವ ಕರ್ಕರೆಯ ಬದಲು, ಜಾಣಾ,
ಹಾಯಾಗಿ ವಿಶ್ರಮಿಸಿ ಕಾಫಿ ಕುಡಿಯೋಣಾ
ಯಾರು ಆರಿಸಿ ಬಂದರೂ ಅಷ್ಟೆ ತಾನೆ ?
ಭರ್ತಿಯಾಗುವುದು ಶ್ರೀಮಂತರ ಖಜಾನೆ.

## ೨೬೮೨. ವಿಜ್ಞಾನಯುಗ

ವಿಜ್ಞಾನ ಹೆಚ್ಚಾಗಿ ನೂರಾರು ಶೋಧ
ಚಂದ್ರಲೋಕವನೇರಿ ಮರಳಿದನು ಯೋಧ
ವಿಜ್ಞಾನ ಫಲಿಸಿದರೆ ನಮಗಿಲ್ಲ ಭೀತಿ
ಬಾಂಬು ಬಿದ್ದರೆ ಮಾತ್ರ ತುಂಬಾ ಫಜೀತಿ.

## ೨೬೮೩. ಮಾತು ಮತ್ತು ಕೃತಿ

ವಿಶ್ವಪರಿಷತ್ತು ಸೇರಲು ನಿನ್ನೆ ಸಂಜೆ,
ಮಾತಾಡಿ ಮಾತಾಡಿ ಭೂವಲಯ ಬಂಜೆ.
ಮುಂಜಾನೆ ಗದ್ದೆ ಹೂಡಲು ಎರಡು ಎತ್ತು
ಸಂಜೆಯಾಗುವತನಕ ಬಾಯೊಳಗೆ ತುತ್ತು.

## ೨೬೮೪. ಪುಢಾರಿ

ವೇದಿಕೆಯ ಮೇಲೆ ಸಿಕ್ಕಿದರೊಮ್ಮೆ ಸ್ಥಾನ
ಹೊಳೆಯಾಗಿ ಹರಿಯುವುದು ದೇಶಾಭಿಮಾನ
ಮೈತುಂಬ ಕಂಗೊಳಿಸುವುದು ಶುಭ್ರ ಅಂಗಿ
ಮತ್ತೆಲ್ಲಿಯೂ ಕಾಣೆ ಇಂಥ ಲಫಂಗಿ.

## ೨೬೮೫. ಸಾಹಿತ್ಯ

ವಜ್ರಕ್ಕಿಂತಲೂ ವಿರಳವೆಂಬೆ ಸಾಹಿತ್ಯ
ಒಮ್ಮೆ ಹುಟ್ಟಿದ ಬಳಿಕ ಉಳಿಯುವುದು ನಿತ್ಯ
ಉಳಿದುದೆಲ್ಲಾ ಗುಳ್ಳೆ, ಕಾಗದದ ಬದನೆ
ಗಾಳಿಯೊಂದಿಗೆ ಹಾರಿ ಹೋಗುವುದು, ಮಗನೆ.

## ೨೬೮೬ ಅವಾಸನ ಕಾಲ

ಶ್ರೇಷ್ಠ ಮಂಗಲಮೂರ್ತಿಯಾದರೂ ಗಣಪ
ಬಂದ ಮರುದಿವಸವೇ ತೆರಳುವನು ಪಾಪ!
ದೊಡ್ಡವರಿಗೂ ಉಂಟು ಅವಸಾನ ಕಾಲ
ಮುಖ್ಯಮಂತ್ರಿಗೆ ತಿಳಿಯದೇನು, ಗೋಪಾಲ?

## ೨೬೮೭. ಶಾರದಾಂಭೆಗೆ

ಶಾರದೆಯೆ, ನಾನಿನ್ನ ಸ್ತುತಿ ಮಾಡಲಿಲ್ಲ!
ಸಿಟ್ಟಾಗಬೇಡಮ್ಮ; ಕೊಡು ಸ್ವಲ್ಪಬೆಲ್ಲ.
ತುಟ್ಟಿಯಾದರೆ ಬೆಲ್ಲ ಕೊಡಬಹುದು ಖಾರ.
ಈ ಖಾರದಿಂದ ಮಾಡುವೆನು ಸಂಚಾರ.

## ೨೬೮೮. ನಮ್ಮ ಕವಿಪುಂಗವರು

ಶಬ್ದಗಳ ರಸದಿಂದ ಮಾಡಿದರು ರೊಟ್ಟಿ
ಮಂತ್ರಿವರ್ಯರು ಹೊಗಳಿದರು ಬೆನ್ನುತಟ್ಟಿ
ಭಾರತಕೆ ಇನ್ನಿಲ್ಲ ಧಾನ್ಯಗಳ ಕೊರತೆ
ಹೀಗುಂಟು ಕವಿಪುಂಗವರ ಲೋಕಚರಿತೆ.

## ೨೬೮೯. ಶಿವಭಕ್ತ ಹೇಳಿದ್ದು

ಶಿವಪೂಜೆಗಾಗಿಯೇ ಉಂಟು ಈ ಹೂವು
ನೀನು ಮುಡಿದರೆ ರಮಣಿ, ಮೈಯೊಳಗೆ ಕಾವು
ಹೆಂಗಸಿಗೆ ಗೊತ್ತಿಲ್ಲ ಹೂವಿನುಪಯೋಗ
ಯಾವಾಗಲೂ ಶಿವನ ತಲೆಯಿದಕೆ ಜಾಗ.

## ೨೬೯೦. ಗೌಡನ ಪ್ರಶ್ನೆ

ಸಾಲೆಯಲಿ ಕುಳಿತು ಕಲಿತೆನು ಬರಹ ವಿದ್ಯೆ
ಮನೆಗೆ ಬರುವಾಗ ನಡುರಸ್ತೆಯಲಿ ಬಿದ್ದೆ
ಬದಿಗೆ ನಿಂತಿದ್ದ ಶಿವಗೌಡ ಹೀಗೆಂದ :
ಸಾಲೆ ಕಲಿತರೆ ಕಾಲುಜಾರುವುದೆ ಕಂದ?

### ೨೬೯೧. ಸರಕಾರಿ ಬಹುಮಾನ

ಸರಕಾರದಿಂದ ಬಹುಮಾನ ಸಿಗಬೇಕೆ ?
ಬೆಂಗಳೂರಿಗೆ ಹೋಗಿ ಆಗಿಬಿಡಿ ಮೇಕೆ.
ಸಿಗದಿದ್ದರೂ ಜೀವನದ ಚಮಟಿ ಉಪ್ಪು
ತಿನ್ನಲಿಕೆ ದೊರಕುವುದು ತರತರದ ಸೊಪ್ಪು.

### ೨೬೯೨. ಕಾರವಾರದಲ್ಲಿ ಕೇಳಿದ್ದು

ಸ್ವರ್ಗದೊಳಗುಂಟು ತರತರದ ಹೆಜ್ಜೇನು
ನರಕದೊಳಗುಂಟು ವಿವಿಧ ಹಸಿಮೀನು
ನಿನಗೇನು ಬೇಕು, ಸ್ವರ್ಗವೋ ? ನರಕ, ಕಂದ ?
ಯಾವಾಗಲೂ ತನಗೆ ನರಕ ಇರಲೆಂದ.

### ೨೬೯೩. ಗ್ರಾಮೋದ್ಯೋಗದ ಜಾಹಿರಾತು

ಸೊಸೆಗಳೆಲ್ಲರೂ ನಿತ್ಯ ಕುಟ್ಟಿದರೆ ಭತ್ತ
ಅಲ್ಹಾದಗೊಳ್ಳುವುದು ಅತ್ತೆಯರ ಚಿತ್ತ
ರೇಷ್ಮೆ ಸೀರೆಯ ಬದಲು ಧರಿಸಿದರೆ ಖಾದಿ
ಗೋಣಿ ಚೀಲದ ಹಾಗೆ ದೇಹದ ಬುನಾದಿ.

### ೨೬೯೪. ಸಂರಕ್ಷಣಾ ಕಾನೂನು

ಸಂಸ್ಥೆಯಲಿ ಅಡಗಿಕೊಂಡಿದ್ದರೂ ಚಿರತೆ
ಆಗಲಾರದು ನಮಗೆ ಧಾನ್ಯಗಳ ಕೊರತೆ.
ಮಂತ್ರಿಗಳ ಕೈಯೊಳಗೆ ಉಂಟು ಬಂದೂಕು
ಗುಂಡು ಹಾರುವ ತನಕ ಸುಮ್ಮನಿರಬೇಕು.

### ೨೬೯೫. ರಾಜಕಾರಣಿಯ ಸ್ಮಾರಕ

ಸತ್ತರೂ ಈತನಿಗೆ ಸಿಗಲಿಲ್ಲ ಸ್ವರ್ಗ.
ಕೊನೆಗೆ ಲಭಿಸಿದ್ದು ಈ ಡಾಂಬರದ ಮಾರ್ಗ.
ನಡುರಸ್ತೆಯಲಿ ನಿಂತು ತಿನ್ನುವನು ಧೂಳು.
ಇವನ ಯೋಗ್ಯತೆಗೆ ತಕ್ಕಂತೆ ಈ ಕೂಳು.

## ೨೬೯೬. ಸರಕಾರದ ಬೆಲೆ

ಸುಪ್ರೀಮಕೋರ್ಟು ಬೆಲೆಕಟ್ಟಿದ ಪ್ರಕಾರ
ಎಷ್ಟು ಕಾಸಿಗೆ ಕೊಳ್ಳಬಹುದು ಸರಕಾರ ?
ಒಂದು ಪೈಸೆಗೆ ತೆಗೆದುಕೊಂಡರೂ ತುಟ್ಟಿ
ಮಾರಾಟವಾಗದೆಂದನು ನಮ್ಮ ಶೆಟ್ಟಿ.

## ೧೬೯೭. ವಿದ್ಯಾವಿಕಾಸ

ಸೇಕಡಾ ತೊಂಬತ್ತುಮೂರು ನಾಪಾಸು
ಧನ್ಯವಾಯಿತು ಶಿಕ್ಷಣಕೆ ತೆತ್ತ ಕಾಸು.
ಪಾಸಾದ ಹುಡುಗರೂ ಒಂದೆರಡು ವಾಕ್ಯ
ಸರಿಯಾಗಿ ಬರೆದದ್ದು, ಕಾಣಲು ಅಶಕ್ಯ.

## ೨೬೯೮. ಸರ್ಕಸ್ಸಿನ ಡೇರೆ

ಸರಕಾರ ಎನ್ನುವುದು ಸರ್ಕಸ್ಸಿನ ಡೇರೆ,
ಇದಕೆರಡು ಕಂಬಗಳು ! ಗೊತ್ತಾಯ್ತೆ ನೀರೆ ?
ಒಂದು ಕಂಬದ ಹೆಸರು ಪುಢಾರಿ.
ಇನ್ನೊಂದು ಕಂಬ ಭಟ್ಟಿಗಳ ವ್ಯಾಪಾರಿ.

## ೨೬೯೯. ಸಚಿವರ ಖುಲಾಷೆ

ಸಂಪೂರ್ಣ ಮಾಯವಾಗಿದೆ ಕಳ್ಳಪೇಟೆ
ಇರಬಹುದು ಅಲ್ಲಲ್ಲಿ ವರ್ತಕರ ಬೇಟೆ.
ಬೇಟೆಯಾಡುವುದು ಆಗುವುದಿಲ್ಲ ಗುನ್ನೆ.
ಇದನ್ನೆಲ್ಲ ಸ್ಪಷ್ಟಪಡಿಸಿದ್ದೇವೆ ಮೊನ್ನೆ.

## ೨೭೦೦. ಗಂಧದ ಸಾಬೂನು

ಸಂಪೂರ್ಣ ಪರಿಶುದ್ಧವಾಗುವುದು ಚರ್ಮ
ಹೊರಸೂಸಿ ಹೋಗುವುದು ಗೈದವರ್ಮ
ಸಚಿವಸಂಪುಟದ ಪ್ರತಿಯೊಬ್ಬ ಯಜಮಾನ
ಇದರಿಂದಲೇ ನಿತ್ಯ ಮಾಡುವನು ಸ್ನಾನ.

## ೨೭೦೧. ಸುಖ ಕೊಡುವ ಪ್ರಾಣಿ

ಸಕಲರಿಗೆ ಸುಖಕೊಡುವ ಪ್ರಾಣಿಯೊಂದುಂಟು
ನನಗೂನು ಒಂದು ದಿನ ಬೀಳುವುದು ನಂಟು.
ಆಮೇಲೆ ಸುರಿಸಬೇಕಾಗಿಲ್ಲ ಬೆವರ
ಮರಣವೇ ಈ ಪ್ರಾಣಿ, ನೆಮ್ಮದಿಯ ತವರು.

## ೨೭೦೨. ಬಾಪೂಜಿ ಹೇಳಿದ್ದು

ಸ್ವಾತಂತ್ರ್ಯದುತ್ಸವಕೆ ಬಾಪೂಜಿ ಬಂದು
ಈ ರೀತಿ ಹೇಳಿದರು ವಿಪರೀತ ನೊಂದು :
ಸಿಕ್ಕಿದೆಲ್ಲವ ತಿನಲು ನೋಡುತಿವೆ ಹಂದಿ
ಭಾರತಕೆ ಬೇಕೀಗ ಎತ್ತರದ ಮಂದಿ.

## ೨೭೦೩. ಅಜಾಗರೂಕತೆ

ಸುಟ್ಟು ಹೋಯಿತು ನಿನ್ನೆ ಆಕಾಶದೂತ
ಪೆಟ್ರೋಲಿನಲಿ ಕುಳಿತುಕೊಂಡಿತ್ತು ಭೂತ
ಭೂತವೆನ್ನುವುದು ಮಾನವನ ನಿಷ್ಕಾಳಜಿ
ನಿಷ್ಕಾಳಜಿಯಿಂದ ಮೈಗೆ ಭರ್ತಿ ಕಜ್ಜಿ,

## ೨೭೦೪. ಪಂಚಶೀಲದ ಮಾವು

ಸೊಗಸಾಗಿ ಹೂ ಬಿಟ್ಟರೂ ಪಂಚಶೀಲ
ನಡುವೆಯೇ ಬಂದುಬಿಟ್ಟಿತು ಕೆಟ್ಟ ಕಾಲ.
ಹಿಮಗಿರಿಯಮೇಲೆ ಕಾರ್ಮೋಡ ಕವಿದಾಗ
ಮಿಡಿಗಾಯಿ ಉದುರಿಹೋಯಿತು ಹಿಡಿದುರೋಗ.

## ೨೭೦೫. ಸಭೆ ಮತ್ತು ಮಂತ್ರಿ

ಸಾಹಿತ್ಯ ಸಭೆಯ ಉದ್ಘಾಟನೆಗೆ ಯಾರು ?
ಮಂತ್ರಿ ಬಂದರೆ ನಮಗೆ ಉತ್ಸಾಹ ಜೋರು.
ವಿಜ್ಞಾನಿಗಳ ಸಭೆಗೆ ಯಾರು ಬೇಕಣ್ಣ ?
ಸಚಿವ ಬಂದರೆ ಸಾಕು ವಿಪರೀತ ಬಣ್ಣ.

### ೨೭೦೬. ಸಾಬೂನಿನ ಜಾಹೀರಾತು

ಹಳ್ಳಿಯೊಳಗೋಡಲಿಕೆ ಬೇಕು ಜೀಪು
ಧೂಳು ಎದ್ದರೆ ಬೇಕು ಸ್ನಾನಕ್ಕೆ ಸೋಪು
ಈ ಸೋಪಿನಿಂದಲೇ ಕೈಗಳನು ಉಜ್ಜಿ,
ಲಂಚತಿಂದರು ಕೂಡ ಮೈಗಿಲ್ಲ ಕಜ್ಜಿ

### ೨೭೦೭. ದರ್ಪ

ಹನುಮಂತರಾಯರಿಗೆ ಕಡಿದರೂ ಹಾವು
ಕೊನೆಯವರೆಗೂ ಮಗನೇ ಬರಲಿಲ್ಲ ಸಾವು !
ಪ್ರಾಣನೀಗಿತು ಪಾಪ ಆ ಕೃಷ್ಣಸರ್ಪ !
ಹಾವಿಗಿಂತಲೂ ಉಗ್ರ ಮಾನವನ ದರ್ಪ.

### ೨೭೦೮. ದುರ್ಗಾಬಾಯಿ ಹೇಳಿದ್ದು

ಹೆಣ್ಣು ಮಕ್ಕಳಿಗಾಗಿ ಬೇರೆ ಹೈಸ್ಕೂಲು.
ತೆರೆಯದಿದ್ದರೆ ಧರ್ಮಗ್ಲಾನಿ ಹೋಲಸೇಲು
ಬಾಲಕನ ಜೊತೆಗೆ ಸುಳಿದಾಡಿದರೆ ಬಾಲೆ
ಆರ್ಯಧರ್ಮದ ಹೆಸರು ಪೂರಾ ನಿಕಾಲೆ.

### ೨೭೦೯. ಸಿಗರೇಟಿನ ಜಾಹೀರಾತು

ಹೆಂಗಸರಿಗಾಗಿ ಪ್ರತ್ಯೇಕ ಸಿಗರೇಟು
ಇದಕೆನ್ನುವರು ಅವರು : ತಾವರೆಯ ದೇಟು.
ಸೇದಿ ಬಿಟ್ಟರೆ ತೇಲಿ ಬರುವ ಹೊಗೆಯಿಂದ
ಕಮಲಮುಖಿಯಾಗಿ ಕುಣಿಯುವುದು ಆನಂದ.

### ೨೭೧೦. ತಿರುಪತಿ ತೈಲ

ಹಾಕಿಕೊಂಡರೆ ಮಲಗುವಾಗ ಈ ತೈಲ
ಕನಸಿನಲಿ ನಿತ್ಯ ಕಾಣುವುದು ಶ್ರೀಶೈಲ
ಎಚ್ಚರವಾಗಲು ಮತ್ತೆ ನಿತ್ಯ ವ್ಯವಹಾರ
ಹಿಡಿಯಬೇಕಾಗಿಲ್ಲ ಯಾರ ದರಕಾರ.

### ೨೭೧೧. ಪ್ರಖ್ಯಾತಿ

ಹೆಸರಾಂತ ಕವಿ ಬರೆದ ಕಾವ್ಯವನು ಕೊಂಡು
ಓದಿ ನೋಡಲು ಒಳಗೆ ಇತ್ತು ಬರಿಬೆಂಡು
ಗುಡಿಗಾರ ರಂಗಯ್ಯನಿಗೆ ಒಳ್ಳೆ ಸಂಧಿ
ಮರುಳಾಯ್ತು ಚೆಂಡು ಹೂವಿಗೆ ನೆರೆದ ಮಂದಿ.

### ೨೭೧೨. ಸರಕಾರದ ಬದಲಾವಣೆ

ಹಳೆ ಮಂತ್ರಿಮಂಡಳದ ಆಡಳಿತದಲ್ಲಿ
ಆಹಾರ ಬಿಕ್ಕಟ್ಟು ಮತ್ತೆ ಕರಭಾರ
ಹೊಸ ಮಂತ್ರಿಮಂಡಳದ ಹೊಸ ರಾಜ್ಯದಲ್ಲಿ
ಕರಭಾರವಿದ್ದರೂ ಇಲ್ಲ ಆಹಾರ.

### ೨೭೧೩. ಶೈಲಿ

ಹೊಸ ಶೈಲಿಯೊಂದು ಓಡಾಡಿದರೆ ಕೆಟ್ಟೆ
ಅರೆಗಳಿಗೆಯಲಿ ಹರಿದು ಹೋಗುವುದು ಬಟ್ಟೆ
ಹಳೆಶೈಲಿಯೆಂದರೂ ತುಂಬಾ ಫಜೀತಿ
ಶೈಲಿಯೊಳಗಿರಲಿ ಮಾತಿನ ಸಹಜ ರೀತಿ.

### ೨೭೧೪. ನಿಲುಮೆ

ಹೇಗುಂಟು ರಾಜ್ಯಸರಕಾರಗಳ ನಿಲುಮೆ ?
ಏನು ಹೇಳಲಿ, ಮಗನೆ ? ಅದು ಒಂದು ಚಿಲುಮೆ !
ಈ ಚಿಲುಮೆಯಲಿ ಹಾಕಿದರೆ ಮಸೀಕೆಂಡ
ನಮ್ಮ ರಾಜ್ಯದ ಜನರ ತಂಬಾಕು ದಂಡ.

### ೨೭೧೫. ತಿನ್ನುವ ಕದೀಮರು

ಹೇಗೆಂಟು ಈ ಪ್ರಜಾರಾಜ್ಯದ ಭವಿಷ್ಯ
ತಿನ್ನುವ ಕದೀಮರಿಗೆ ಪೂರ್ಣ ಆಯುಷ್ಯ.
ತಿನ್ನದವರಿಗೆ ಪಾಪ ನಿತ್ಯ ಅಮವಾಸ್ಯೆ
ತಿನ್ನು ಮಗನೇ, ತಿನ್ನು, ಇಲ್ಲ ಸಮಸ್ಯೆ.

## ೨೭೧೬. ತಾಂಬೂಲದ ಜಾಹಿರಾತು

ಹೆಂಡತಿಯ ಜೊತೆಗೆ ಹಾಕಿದರೆ ಎಲೆ ಅಡಕೆ
ತುಂಬಿ ತುಳುಕಾಡುವುದು ಜೀವನದ ಮಡಕೆ
ಮಾತು ಮಾತಿಗೆ ಸ್ವಲ್ಪ ಬೆರೆಸಿದರೆ ಸುಣ್ಣ
ಸಂಪೂರ್ಣ ಬದಲಾಗುವುದು ತುಟಿಯ ಬಣ್ಣ.

## ೨೭೧೭. ಚುಟಕದ ಅಮಟೆಕಾಯಿ

ಹಣ್ಣು ಹಂಪಲವಲ್ಲ! ಇದು ಅಮಟೆಕಾಯಿ.
ಗೊಜ್ಜು ತಿನಬೇಕೆಂದು ಬಯಸಿದರೆ ಬಾಯಿ,
ಹುಳಿಯೊಳಗೆ ಸರಿಯಾಗಿ ಬೆರೆಸಿಬಿಡಿ ಬೆಲ್ಲ
ಇದರಷ್ಟು ರಸಭರಿತ ಯಾವುದೂ ಇಲ್ಲ.

## ೨೭೧೮. ಗ್ರಾಮಾಭಿವೃದ್ಧಿ

ಹಳ್ಳಿಯಲಿ ತಲೆ ಎತ್ತಿದರೆ ಕಾರಖಾನೆ
ಬಡಬಗ್ಗರಿಗೆ ಪರಮ ಸಂತೋಷ ತಾನೆ?
ಮಾರವಾಡಿಗೆ ಮಾತ್ರ ತುಂಬಾ ಸಂತೋಷ.
ಆ ಹಳ್ಳಿಯಾಗುವುದು ಕೊಳಚೆಯ ಪ್ರದೇಶ.

## ೨೭೧೯. ಭಟ್ಟಿಯ ವಿಕಾಸ

ಬೀದಿ ಬೀದಿಯಲಿ ಕುದಿಯುತಿದೆ ಕಳ್ಳಭಟ್ಟಿ
ಈ ಭಟ್ಟಿಯಿಂದ ಪೋಲಿಸರಿಗೆ ರೊಟ್ಟಿ
ಖಾದಿ ಮುಂತಾದ ಗ್ರಾಮೋದ್ಯೋಗ ದಂಧೆ
ಹಿಂದೆ ಸರಿಯಿತು ಮಗನೆ, ಭಟ್ಟಿಗಳ ಮುಂದೆ.



ಅನುಬಂಧ :

## ಅಕಾರಾದಿ ಶಬ್ದಸೂಚಿ


ಅ

ಅಗರಬತ್ತಿ : ೧೬೪೭

ಅಜ್ಜ : ೧೫೮, ೪೩೬

ಅಣುಬಾಂಬು : ೨೪೩೦, ೨೪೧೭

ಅಣುಯುಗ : ೧೮೦, ೨೭೭, ೨೯೮, ೫೦೪, ೫೫೨, ೭೬೦, ೮೭೧, ೧೦೭೯, ೧೭೦೫, ೨೧೫೧, ೨೨೭೦, ೨೨೮೫

ಅಧಿಕಾರ : ೨೩೫೧, ೨೩೮೨, ೨೪೯೫

ಅಧಿಕಾರಿ : ೩೯, ೧೧೮೪

ಅನ್ನ : ೨೩೭೮

ಅನಾವೃಷ್ಟಿ : ೧೭೬೯, ೧೭೭೪

ಅನುಮಾನ : ೩೧೮, ೧೪೬೩, ೧೫೨೭, ೧೯೨೫

ಅಭಿರುಚಿ : ೧೯೦೮

ಅರಸು : ೧೭೦೮

ಅವಕಾಶ : ೨೧೨೫

ಅವಳಿ ಜವಳಿ : ೨೨೦, ೪೨೬

ಆಳು : ೮೪

ಅಂಚೆಖಾತೆ : ೮೮, ೨೨೦೨

ಅಂತರಿಕ್ಷಯಾನ : ೯೦, ೯೨, ೧೧೦, ೪೩೩ ೪೭೬, ೮೧೦, ೮೫೮, ೧೧೬೦, ೧೪೬೯, ೧೫೦೩, ೧೬೫೫, ೧೭೭೬, ೧೮೪೫

ಆ

ಆಕಾಶ : ೧೦೫, ೧೧೧, ೬೬೬, ೭೧೨, ೭೭೯, ೧೦೭೧, ೧೮೮೯,

ಆಕಾಶವಾಣಿ : ೧೦೧, ೧೦೨, ೧೦೩, ೧೦೪, ೧೧೯೧, ೧೩೨೭

ಆಡಂಬರ : ೨೩೩೯, ೨೩೬೨, ೨೪೭೬, ೨೪೯೬

ಆಡಳಿತ : ೨೬, ೨೭, ೩೮, ೪೧, ೪೩, ೫೯, ೭೨, ೭೯, ೧೦೮, ೧೧೭, ೧೧೯, ೧೩೧, ೧೫೪, ೧೬೧, ೨೨೩, ೨೭೦, ೩೪೧, ೩೫೧, ೩೮೦, ೩೯೦, ೩೯೧, ೪೦೧, ೪೦೪, ೪೨೫, ೪೨೭, ೪೩೮, ೪೫೩, ೫೧೪, ೫೫೦,೬೪೫, ೬೯೫, ೭೩೮, ೭೩೯, ೭೫೭, ೮೨೭, ೯೧೮, ೯೨೨, ೯೫೨, ೯೫೨, ೯೬೦, ೯೮೭, ೯೯೨, ೧೦೦೬, ೧೦೧೨, ೧೦೨೨, ೧೦೩೪, ೧೦೪೮, ೧೦೪೯, ೧೦೫೦, ೧೦೭೫, ೧೧೭೬, ೧೧೭೭, ೧೧೮೫, ೧೨೦೪, ೧೨೦೫, ೧೪೪೫, ೧೪೪೬, ೧೪೪೯, ೧೪೭೦, ೧೫೩೪, ೧೫೮೮, ೧೬೧೪, ೧೬೧೭, ೧೬೪೧, ೧೬೪೬, ೧೬೬೧, ೧೬೮೦, ೧೬೮೧, ೧೬೮೫, ೧೭೨೬, ೧೭೪೩, ೧೭೫೧, ೧೭೬೫, ೧೭೭೧, ೧೭೪೮, ೧೭೮೪, ೧೭೯೨, ೧೮೦೧, ೧೮೦೪, ೧೮೨೬, ೧೮೨೭, ೧೯೧೦, ೧೯೧೧, ೧೯೧೨, ೧೯೬೦, ೧೯೪೪, ೧೯೫೩, ೧೯೭೫, ೧೯೮೨, ೧೯೯೩, ೧೯೯೬, ೨೦೦೨, ೨೦೨೬, ೨೦೩೦, ೨೦೩೨, ೨೦೬೬, ೨೦೯೪, ೨೧೧೮, ೨೧೨೦, ೨೧೩೪, ೨೧೩೬, ೨೧೩೭, ೨೧೩೮, ೨೧೫೦, ೨೧೫೩, ೨೧೫೪, ೨೧೬೦, ೨೧೬೬, ೨೧೬೮, ೨೧೮೫, ೨೧೮೬, ೨೧೮೭, ೨೨೦೮, ೨೨೩೪, ೨೨೩೬, ೨೨೩೮, ೨೨೫೧, ೨೨೬೧, ೨೨೬೩, ೨೨೬೭, ೨೨೬೮, ೨೨೭೨,

೨೩೦೮, ೨೩೧೪, ೨೩೫೨, ೨೩೫೪, ೨೩೫೫, ೨೩೮೦, ೨೩೮೩, ೨೩೯೨, ೨೪೦೪, ೨೪೪೬, ೨೪೭೪, ೨೪೮೦, ೨೪೮೧, ೨೪೯೨

ಆತ್ಮ : ೧೮೪೨

ಆತ್ಮ ಕಥನ : ೫, ೭೮, ೧೨೫, ೨೫೨, ೨೫೩, ೨೭೫, ೩೭೬, ೩೭೭, ೪೪೫, ೪೯೮, ೫೩೮, ೫೫೬, ೫೬೫, ೫೬೬, ೫೬೮, ೫೮೦, ೫೮೨, ೫೮೩, ೬೬೪, ೬೯೨, ೮೪೦, ೯೨೮, ೯೪೯, ೯೫೯, ೧೦೪೨,೧೦೮೩, ೧೦೯೪, ೧೧೧೬, ೧೧೧೯, ೧೧೨೦, ೧೧೨೨, ೧೨೧೭, ೧೨೨೦, ೧೧೨೨, ೧೨೧೭, ೧೨೨೦, ೧೨೩೬, ೧೨೩೭, ೧೨೩೮, ೧೨೪೦, ೧೨೪೪, ೧೨೪೯, ೧೨೫೦, ೧೨೫೧, ೧೨೫೪, ೧೨೬೪, ೧೨೮೫, ೧೨೮೭, ೧೩೦೦, ೧೬೧೧, ೧೬೧೫, ೧೬೨೪, ೧೬೩೧, ೧೭೨೯, ೧೭೮೦, ೧೮೬೦, ೧೮೮೫, ೧೮೮೬, ೧೮೮೭, ೧೯೩೭, ೨೦೫೮, ೨೦೫೯, ೨೧೩೩, ೨೩೦೪, ೨೩೫೯, ೨೩೭೪, ೨೭೫೮.

ಆತ್ಮವಿಶ್ವಾಸ : ೧೫೬೦

ಆದರ್ಶ : ೭೬, ೧೧೨, ೧೫೦, ೧೬೨, ೩೯೭, ೩೯೯, ೫೬೭, ೫೮೧, ೫೮೪, ೬೪೨, ೬೭೯, ೬೯೯, ೭೨೪, ೭೬೧, ೮೧೬, ೮೩೧, ೮೬೫, ೯೩೯, ೯೫೫, ೧೦೧೫, ೧೦೪೪, ೧೦೮೦, ೧೦೮೬, ೧೦೯೦, ೧೨೨೫, ೧೩೦೨, ೧೪೧೬, ೧೪೩೧, ೧೪೬೮, ೧೫೧೮, ೧೬೦೯, ೧೬೬೨, ೧೬೬೫, ೧೭೦೯, ೧೭೧೬, ೧೯೦೦, ೧೯೦೧, ೧೯೭೨, ೨೦೧೬, ೨೦೪೫, ೨೦೮೬, ೨೧೫೯, ೨೧೯೯, ೨೨೨೦, ೨೨೨೬, ೨೨೨೭, ೨೨೩೯, ೨೨೫೯, ೨೩೧೧, ೨೩೪೪, ೨೩೮೫, ೨೪೧೧, ೨೪೩೦

ಆದಿಪಂಪ : ೪೫೪, ೯೨೦

ಆದಿವಾಸಿಗಳು : ೧೯೦೯

ಆಧುನಿಕತೆ : ೭೬೩

ಆಮರಣದ ಉಪವಾಸ : ೩೦೪, ೧೭೫೮

ಆಸ್ಪತ್ರೆ : ೧೩೬, ೧೮೪೯

ಆಹಾರ ಸಮಸ್ಯೆ : ೧, ೬೭, ೫೬೯, ೨೦೨೭, ೨೧೨೯

ಆಹ್ವಾನ : ೧೬೬೦

ಇ

ಇಣಚಿ : ೩೨

ಇತಿಹಾಸ : ೬೧೭, ೬೯೧, ೭೬೮, ೮೩೨, ೮೩೫, ೯೭೪, ೧೧೮೧, ೧೩೬೯, ೧೪೭೬, ೧೫೨೯, ೧೬೧೨, ೧೭೪೯, ೧೮೨೧, ೧೯೨೪, ೨೦೭೫, ೨೦೯೫, ೨೦೯೭, ೨೨೦೯, ೨೨೭೯, ೨೪೦೨, ೨೪೧೩, ೨೪೫೭

ಇರುವೆ : ೧೮೩೨

ಉ

ಉತ್ತರ ಕನ್ನಡ : ೫೬೨, ೧೦೯೮, ೧೮೪೬, ೨೦೬೪, ೨೩೬೭

ಉತ್ಸಾಹ : ೧೯೬೨

ಉಳ್ಳಾಗಡ್ಡೆ (ನೀರುಳ್ಳಿ) : ೨೪೩

ಉಳಿತಾಯ : ೨೪೬, ೨೦೪೦

ಎ

ಎಮ್ಮೆ : ೪೭೭

ಎಲ್ಲಮ್ಮ : ೪೩೪

ಔದ್ಯಮೀಕರಣ : ೫೭೩, ೨೪೩೩

ಔದಾರ್ಯ : ೪೬೮

ಕ

ಕತ್ತೆ : ೭೪೨

ಕನಸು : ೬೨೪, ೬೨೫, ೬೨೬, ೧೩೩೨, ೨೨೨೯

ಕರ್ನಾಟಕ : ೪, ೧೨೭, ೧೫೧, ೬೩೪, ೧೩೧೮

ಕಪ್ಪು ಬಣ್ಣ : ೬೧೩

ಕಮಲ : ೭೨೯

ಕಲಬೆರಕೆ : ೫೨೨, ೧೫೪೩, ೧೬೨೭, ೧೬೮೬, ೨೧೨೬

ಕಲ್ಯಾಣ ಕೇಂದ್ರ : ೪೫೮, ೬೪೧, ೬೮೬

ಕವಿ : ೨೫, ೧೦೦, ೧೬೪, ೧೯೫, ೨೧೮, ೨೫೧, ೩೮೪, ೪೦೨, ೪೪೨, ೪೪೭, ೪೬೨, ೪೬೩, ೪೬೫, ೪೬೬, ೪೯೩, ೬೨೩, ೯೪೦, ೧೦೩೬, ೧೦೩೭ಮ ೧೩೭೮, ೧೪೨೮, ೧೬೧೩, ೧೬೫೯, ೧೬೬೩, ೧೭೩೭,೧೭೩೯, ೧೮೨೦, ೧೮೨೨, ೨೦೧೯, ೨೦೬೫, ೨೧೨೧, ೨೧೬೨, ೨೨೮೩, ೨೩೬೦, ೨೩೯೧, ೨೪೦೫, ೨೪೦೭

ಕವಿ ಸಮಯ : ೮೦, ೭೦೫, ೧೭೬೬

ಕಸಬರಿಗೆ : ೧೩೨೩, ೧೬೭೬

ಕಳ್ಳ ಸಾಗಾಟ : ೨೧೫೭

ಕಾಗೆ : ೪೩೧, ೪೩೨, ೬೮೮, ೬೧೪, ೬೫೬, ೧೫೧೫

ಕಾನೂನು : ೨೩೩, ೨೧೨, ೬೯೩, ೬೯೭, ೯೨೧, ೧೫೮೧, ೨೧೪೬, ೨೪೭೧,

ಕಾರವಾರ : ೪೩೭, ೬೯೮, ೬೯೯, ೧೪೭೭

ಕಾರು : ೧೮೪, ೨೩೦, ೭೨೩, ೯೯೯, ೧೨೨೪

ಕಾವಲು : ೧೩೭೫, ೧೭೧೪

ಕಾವ್ಯ : ೧೦, ೨೮, ೨೯, ೩೦, ೩೧, ೩೭, ೪೪, ೪೭,೪೯, ೮೧, ೧೬೬, ೨೩೧, ೨೭೮, ೩೦೦, ೩೨೫, ೩೯೮, ೪೬೧, ೮೬೪, ೪೬೯, ೫೨೮, ೫೩೧, ೫೫೭, ೫೫೯, ೫೮೫, ೫೯೧, ೫೯೭, ೬೦೭, ೬೧೪, ೬೨೦, ೬೩೯, ೬೪೬, ೬೫೧, ೬೫೫, ೬೬೦, ೬೬೧, ೬೬೨, ೬೬೩, ೭೦೩, ೭೦೭, ೭೦೮, ೭೧೦, ೭೧೧, ೭೩೧, ೭೮೬, ೭೮೮, ೮೧೫, ೮೩೭, ೯೬೪, ೧೦೬೩, ೧೦೭೦, ೧೦೮೨, ೧೦೮೭, ೧೦೮೮, ೧೧೧೮, ೧೧೨೮, ೧೧೫೭, ೧೨೦೯, ೧೨೨೮, ೧೩೮೮, ೧೩೯೩, ೧೩೯೬, ೧೪೨೯, ೧೪೩೦, ೧೪೯೯, ೧೮೯೨, ೨೦೩೩, ೨೦೮೮, ೨೦೯೯, ೨೧೪೦, ೨೨೦೪, ೨೨೦೭, ೨೨೧೯, ೨೨೩೨, ೨೨೫೪, ೨೩೧೨, ೨೩೨೬, ೨೩೬೧, ೨೪೦೯, ೨೪೬೮

ಕಾಳುಸಂತೆ : ೧೩, ೧೮, ೪೫, ೮೯, ೧೩೮, ೩೦೫, ೩೬೮, ೪೨೯, ೪೮೫, ೬೩೮, ೭೧೩, ೭೧೪, ೮೧೨, ೮೩೪, ೯೩೨, ೯೩೫, ೯೪೭, ೧೦೫೬, ೧೦೫೭, ೧೨೨೧, ೧೨೪೧, ೧೩೯೧, ೧೫೨೩, ೧೫೩೦, ೧೬೩೩, ೧೬೫೨, ೧೭೩೧, ೨೦೪೩, ೨೧೨೮, ೨೧೭೨, ೨೨೭೮, ೨೪೦೩, ೨೪೬೨

ಕ್ರಾಂತಿ : ೬೪೩, ೧೧೬೭, ೧೨೮೩

ಕ್ರಾಂತಿಕಾರ : ೪೦೩, ೭೧೬

ಕೀರ್ತಿ : ೭೨೨

ಕುರುಡರು : ೧೪೪೮

ಕೂಸು (ಮಗು) : ೬೨೨, ೧೨೪೮, ೧೮೬೧, ೧೯೫೫, ೨೦೬೮

ಕೆನಡಿ : ೨೦೭

ಕೋಪ : ೪೯೯, ೭೭೩

ಕೋರ್ಟು : ೫೮, ೯೧೫, ೧೩೦೫

ಕೋರಿಕೆ : ೫೮, ೯೧೫, ೧೩೦೫

ಕೋರಿಕೆ (ಬಯಕೆ) : ೧೫೯, ೫೦೫, ೬೦೨,

೨೩೦೮, ೨೩೧೪, ೨೩೫೨, ೨೩೫೪, ೨೩೫೫, ೨೩೮೦, ೨೩೮೩, ೨೩೯೨, ೨೪೦೪, ೨೪೪೬, ೨೪೭೪, ೨೪೮೦, ೨೪೮೧, ೨೪೯೨

ಆತ್ಮ : ೧೮೪೨

ಆತ್ಮ ಕಥನ : ೫, ೭೮, ೧೨೫, ೨೫೨, ೨೫೩, ೨೭೫, ೩೭೬, ೩೭೭, ೪೪೫, ೪೯೮, ೫೩೮, ೫೫೬, ೫೬೫, ೫೬೬, ೫೬೮, ೫೮೦, ೫೮೨, ೫೮೩, ೬೬೪, ೬೯೨, ೮೪೦, ೯೨೮, ೯೪೯, ೯೫೯, ೧೦೪೨,೧೦೮೩, ೧೦೯೪, ೧೧೧೬, ೧೧೧೯, ೧೧೨೦, ೧೧೨೨, ೧೨೧೭, ೧೨೨೦, ೧೧೨೨, ೧೨೧೭, ೧೨೨೦, ೧೨೩೬, ೧೨೩೭, ೧೨೩೮, ೧೨೪೦, ೧೨೪೪, ೧೨೪೯, ೧೨೫೦, ೧೨೫೧, ೧೨೫೪, ೧೨೬೪, ೧೨೮೫, ೧೨೮೭, ೧೩೦೦, ೧೬೧೧, ೧೬೧೫, ೧೬೨೪, ೧೬೩೧, ೧೭೨೯, ೧೭೮೦, ೧೮೬೦, ೧೮೮೫, ೧೮೮೬, ೧೮೮೭, ೧೯೩೭, ೨೦೫೮, ೨೦೫೯, ೨೧೩೩, ೨೩೦೪, ೨೩೫೯, ೨೩೭೪, ೨೭೫೮.

ಆತ್ಮವಿಶ್ವಾಸ : ೧೫೬೦

ಆದರ್ಶ : ೭೬, ೧೧೨, ೧೫೦, ೧೬೨, ೩೯೭, ೩೯೯, ೫೬೭, ೫೮೧, ೫೮೪, ೬೪೨, ೬೭೯, ೬೯೯, ೭೨೪, ೭೬೧, ೮೧೬, ೮೩೧, ೮೬೫, ೯೩೯, ೯೫೫, ೧೦೧೫, ೧೦೪೪, ೧೦೮೦, ೧೦೮೬, ೧೦೯೦, ೧೨೨೫, ೧೩೦೨, ೧೪೧೬, ೧೪೩೧, ೧೪೬೮, ೧೫೧೮, ೧೬೦೯, ೧೬೬೨, ೧೬೬೫, ೧೭೦೯, ೧೭೧೬, ೧೯೦೦, ೧೯೦೧, ೧೯೭೨, ೨೦೧೬, ೨೦೪೫, ೨೦೮೬, ೨೧೫೯, ೨೧೯೯, ೨೨೨೦, ೨೨೨೬, ೨೨೨೭, ೨೨೩೯, ೨೨೫೯, ೨೩೧೧, ೨೩೪೪, ೨೩೮೫, ೨೪೧೧, ೨೪೩೦

ಆದಿಪಂಪ : ೪೫೪, ೯೨೦

ಆದಿವಾಸಿಗಳು : ೧೯೦೯

ಆಧುನಿಕತೆ : ೭೬೩

ಆಮರಣದ ಉಪವಾಸ : ೩೦೪, ೧೭೫೮

ಆಸ್ಪತ್ರೆ : ೧೩೬, ೧೮೪೯

ಆಹಾರ ಸಮಸ್ಯೆ : ೧, ೬೭, ೫೬೯, ೨೦೨೭, ೨೧೨೯

ಆಹ್ವಾನ : ೧೬೬೦

ಇ

ಇಣಚಿ : ೩೨

ಇತಿಹಾಸ : ೬೧೭, ೬೯೧, ೭೬೮, ೮೩೨, ೮೩೫, ೯೭೪, ೧೧೮೧, ೧೩೬೯, ೧೪೭೬, ೧೫೨೯, ೧೬೧೨, ೧೭೪೯, ೧೮೨೧, ೧೯೨೪, ೨೦೭೫, ೨೦೯೫, ೨೦೯೭, ೨೨೦೯, ೨೨೭೯, ೨೪೦೨, ೨೪೧೩, ೨೪೫೭

ಇರುವೆ : ೧೮೩೨

ಉ

ಉತ್ತರ ಕನ್ನಡ : ೫೬೨, ೧೦೯೮, ೧೮೪೬, ೨೦೬೪, ೨೩೬೭

ಉತ್ಸಾಹ : ೧೯೬೨

ಉಳ್ಳಾಗಡ್ಡೆ (ನೀರುಳ್ಳಿ) : ೨೪೩

ಉಳಿತಾಯ : ೨೪೬, ೨೦೪೦

ಎ

ಎಮ್ಮೆ : ೪೭೭

ಎಲ್ಲಮ್ಮ : ೪೩೪

ಔದ್ಯಮೀಕರಣ : ೫೭೩, ೨೪೩೩

ಔದಾರ್ಯ : ೪೬೮

ಕ

ಕತ್ತೆ : ೭೪೨

ಕನಸು : ೬೨೪, ೬೨೫, ೬೨೬, ೧೩೩೨, ೨೨೨೯

ಕರ್ನಾಟಕ : ೪, ೧೨೭, ೧೫೧, ೬೩೪, ೧೩೧೮

ಕಪ್ಪು ಬಣ್ಣ : ೬೧೩

ಕಮಲ : ೭೨೯

ಕಲಬೆರಕೆ : ೫೨೨, ೧೫೪೩, ೧೬೨೭, ೧೬೮೬, ೨೧೨೬

ಕಲ್ಯಾಣ ಕೇಂದ್ರ : ೪೫೮, ೬೪೧, ೬೮೬

ಕವಿ : ೨೫, ೧೦೦, ೧೬೪, ೧೯೫, ೨೧೮, ೨೫೧, ೩೮೪, ೪೦೨, ೪೪೨, ೪೪೭, ೪೬೨, ೪೬೩, ೪೬೫, ೪೬೬, ೪೯೩, ೬೨೩, ೯೪೦, ೧೦೩೬, ೧೦೩೭ಮ ೧೩೭೮, ೧೪೨೮, ೧೬೧೩, ೧೬೫೯, ೧೬೬೩, ೧೭೩೭,೧೭೩೯, ೧೮೨೦, ೧೮೨೨, ೨೦೧೯, ೨೦೬೫, ೨೧೨೧, ೨೧೬೨, ೨೨೮೩, ೨೩೬೦, ೨೩೯೧, ೨೪೦೫, ೨೪೦೭

ಕವಿ ಸಮಯ : ೮೦, ೭೦೫, ೧೭೬೬

ಕಸಬರಿಗೆ : ೧೩೨೩, ೧೬೭೬

ಕಳ್ಳ ಸಾಗಾಟ : ೨೧೫೭

ಕಾಗೆ : ೪೩೧, ೪೩೨, ೬೮೮, ೬೧೪, ೬೫೬, ೧೫೧೫

ಕಾನೂನು : ೨೩೩, ೨೧೨, ೬೯೩, ೬೯೭, ೯೨೧, ೧೫೮೧, ೨೧೪೬, ೨೪೭೧,

ಕಾರವಾರ : ೪೩೭, ೬೯೮, ೬೯೯, ೧೪೭೭

ಕಾರು : ೧೮೪, ೨೩೦, ೭೨೩, ೯೯೯, ೧೨೨೪

ಕಾವಲು : ೧೩೭೫, ೧೭೧೪

ಕಾವ್ಯ : ೧೦, ೨೮, ೨೯, ೩೦, ೩೧, ೩೭, ೪೪, ೪೭,೪೯, ೮೧, ೧೬೬, ೨೩೧, ೨೭೮, ೩೦೦, ೩೨೫, ೩೯೮, ೪೬೧, ೮೬೪, ೪೬೯, ೫೨೮, ೫೩೧, ೫೫೭, ೫೫೯, ೫೮೫, ೫೯೧, ೫೯೭, ೬೦೭, ೬೧೪, ೬೨೦, ೬೩೯, ೬೪೬, ೬೫೧, ೬೫೫, ೬೬೦, ೬೬೧, ೬೬೨, ೬೬೩, ೭೦೩, ೭೦೭, ೭೦೮, ೭೧೦, ೭೧೧, ೭೩೧, ೭೮೬, ೭೮೮, ೮೧೫, ೮೩೭, ೯೬೪, ೧೦೬೩, ೧೦೭೦, ೧೦೮೨, ೧೦೮೭, ೧೦೮೮, ೧೧೧೮, ೧೧೨೮, ೧೧೫೭, ೧೨೦೯, ೧೨೨೮, ೧೩೮೮, ೧೩೯೩, ೧೩೯೬, ೧೪೨೯, ೧೪೩೦, ೧೪೯೯, ೧೮೯೨, ೨೦೩೩, ೨೦೮೮, ೨೦೯೯, ೨೧೪೦, ೨೨೦೪, ೨೨೦೭, ೨೨೧೯, ೨೨೩೨, ೨೨೫೪, ೨೩೧೨, ೨೩೨೬, ೨೩೬೧, ೨೪೦೯, ೨೪೬೮

ಕಾಳುಸಂತೆ : ೧೩, ೧೮, ೪೫, ೮೯, ೧೩೮, ೩೦೫, ೩೬೮, ೪೨೯, ೪೮೫, ೬೩೮, ೭೧೩, ೭೧೪, ೮೧೨, ೮೩೪, ೯೩೨, ೯೩೫, ೯೪೭, ೧೦೫೬, ೧೦೫೭, ೧೨೨೧, ೧೨೪೧, ೧೩೯೧, ೧೫೨೩, ೧೫೩೦, ೧೬೩೩, ೧೬೫೨, ೧೭೩೧, ೨೦೪೩, ೨೧೨೮, ೨೧೭೨, ೨೨೭೮, ೨೪೦೩, ೨೪೬೨

ಕ್ರಾಂತಿ : ೬೪೩, ೧೧೬೭, ೧೨೮೩

ಕ್ರಾಂತಿಕಾರ : ೪೦೩, ೭೧೬

ಕೀರ್ತಿ : ೭೨೨

ಕುರುಡರು : ೧೪೪೮

ಕೂಸು (ಮಗು) : ೬೨೨, ೧೨೪೮, ೧೮೬೧, ೧೯೫೫, ೨೦೬೮

ಕೆನಡಿ : ೨೦೭

ಕೋಪ : ೪೯೯, ೭೭೩

ಕೋರ್ಟು : ೫೮, ೯೧೫, ೧೩೦೫

ಕೋರಿಕೆ : ೫೮, ೯೧೫, ೧೩೦೫

ಕೋರಿಕೆ (ಬಯಕೆ) : ೧೫೯, ೫೦೫, ೬೦೨,

೬೮೧, ೮೦೬, ೮೨೩, ೯೨೫, ೧೦೬೮, ೧೦೯೧, ೧೦೯೨, ೧೧೦೭, ೧೧೧೩, ೧೧೧೪, ೧೧೩೧, ೧೨೭೧, ೧೨೮೬, ೧೨೮೮, ೧೩೮೩, ೧೭೧೩, ೧೯೫೦, ೨೦೭೩, ೨೧೪೩, ೨೨೨೫, ೨೨೫೩, ೨೩೯೯

ಕೋಳಿಮೊಟ್ಟೆ : ೪೫೭

ಗ

ಗಡಿ ಜಗಳ : ೧೬೩೭, ೧೬೩೮

ಗಣಪತಿ : ೩೬೪, ೪೬೯, ೪೭೦, ೭೧೫, ೭೮೧, ೭೮೨, ೭೮೩, ೭೮೪, ೧೦೫೫, ೧೭೨೨

ಗಾಲೀಬ ಕವಿ : ೧೮೬೩

ಗಾಳಿ : ೭೯೯, ೧೪೨೬

ಗ್ರಾಮೋದ್ಯೋಗ ಕೇಂದ್ರ : ೯೧೧

ಗ್ರಾಮಪಂಚಾಯತು : ೮೧೦

ಗುಡುಗು : ೨೫೬

ಗೇಣಿ ಪದ್ಧತಿ : ೪೦೭

ಗೊತ್ತುವಳಿ : ೪೧೮, ೧೪೦೩, ೧೫೩೭, ೧೫೩೯

ಗೊಂಬೆ : ೧೭೧೯, ೧೮೪೩

ಗೋವೆ : ೨೨೨೪

ಚ

ಚಂದ್ರ : ೧೭, ೭೫, ೯೧, ೧೭೬, ೨೯೧, ೪೦೬, ೮೪೨, ೮೪೩, ೮೪೫, ೮೪೬, ೧೭೧೧, ೧೯೨೮

ಚಂದ್ರಯಾನ : ೩೯೪, ೪೫೬, ೭೭೫, ೮೪೪, ೮೪೭, ೮೪೮, ೮೪೯, ೮೫೦, ೮೫೧, ೮೫೨, ೮೫೩, ೮೫೪, ೮೫೫, ೮೫೬, ೮೫೭, ೮೫೯, ೮೬೦, ೯೫೭, ೧೪೬೪, ೧೭೭೯, ೧೯೩೪, ೧೯೪೦, ೧೯೬೬, ೨೧೦೧, ೨೨೭೩, ೨೪೫೦

ಚುಟಕ : ೨೦ ೩೬, ೧೩೪, ೧೭೭, ೨೭೧, ೨೭೨, ೨೮೮, ೩೫೯, ೩೮೬, ೪೪೯, ೪೯೭, ೫೩೨, ೫೫೩, ೫೭೪, ೬೮೯, ೭೦೧, ೭೨೮, ೭೪೭, ೭೫೧, ೭೫೨, ೮೦೯, ೮೧೧, ೮೩೭, ೮೭೪, ೮೭೫, ೮೭೬, ೮೭೭, ೮೭೮, ೮೭೯, ೮೮೦, ೮೮೧, ೮೮೨, ೮೮೩, ೮೮೪, ೮೮೫, ೮೮೬, ೮೮೭, ೮೮೮, ೮೮೯, ೮೯೦, ೮೯೧, ೮೯೨, ೮೯೩, ೮೯೪, ೮೯೫, ೮೯೬, ೮೯೭, ೮೯೮, ೮೯೯, ೯೦೦, ೯೦೧, ೯೦೨, ೯೦೩, ೯೦೫, ೯೦೬, ೯೦೭, ೯೦೮, ೯೦೯, ೯೧೦, ೧೦೦೮, ೧೦೦೯, ೧೦೧೬, ೧೦೩೩, ೧೦೪೧, ೧೦೪೭, ೧೦೭೪, ೧೦೮೪, ೧೦೮೫, ೧೦೮೬, ೧೧೦೧, ೧೧೦೩, ೧೧೦೫, ೧೧೦೬, ೧೧೧೫, ೧೧೩೫, ೧೨೩೩, ೧೨೫೬, ೧೨೫೭, ೧೨೬೮, ೧೨೬೯, ೧೨೭೦, ೧೨೭೨, ೧೨೭೬, ೧೨೯೩, ೧೨೬೪, ೧೨೯೫, ೧೩೦೯, ೧೩೮೦, ೧೫೪೮, ೧೫೫೩, ೧೫೫೫, ೧೫೫೮, ೧೫೬೧, ೧೬೨೧, ೧೬೩೪, ೧೮೫೦, ೧೮೭೫, ೧೮೮೦, ೧೯೩೮, ೧೯೪೩, ೨೦೮೫, ೨೨೭೫, ೨೨೭೭, ೨೪೧೮, ೨೪೨೯

ಚುನಾವಣೆ : ೨೩, ೧೧೫, ೧೧೬, ೨೬೦, ೨೭೩, ೨೭೪, ೨೭೬, ೩೫೫, ೫೨೫, ೫೬೯, ೭೪೦, ೮೬೯, ೧೦೫೪, ೧೭೨೩, ೧೮೯೭, ೧೯೪೫, ೨೧೭೪, ೨೨೧೭, ೨೪೮೮

ಚುಂಬನ : ೬೧, ೨೬೪, ೪೮೯, ೫೩೭, ೫೪೩, ೯೪೩, ೯೪೫, ೮೯೯, ೯೯೦, ೯೯೧, ೯೯೩, ೧೦೦೧, ೧೧೦೮, ೧೧೦೯, ೧೧೧೦, ೧೧೨೪, ೧೧೩೩, ೧೩೪೯, ೧೩೫೦, ೧೭೩೩, ೧೮೭೬, ೧೮೭೭, ೧೮೭೮, ೧೮೭೯, ೧೮೮೫, ೨೩೧೯

ಚೇತನ : ೯೧೨

ಚೇಷ್ಟೆ : ೧೫, ೧೨೦, ೩೮೯, ೪೪೦, ೪೭೯,

೪೮೩, ೫೨೭, ೬೨೯, ೬೩೦, ೭೧೭, ೭೫೮, ೭೮೯, ೭೯೦, ೭೯೬, ೭೯೮, ೮೦೪, ೮೧೮, ೮೨೬, ೮೩೮, ೧೦೯೬, ೧೧೩೪, ೧೨೦೩, ೧೩೩೦, ೧೩೩೬, ೧೩೪೦, ೧೩೫೩, ೧೩೫೪, ೧೩೫೬, ೧೩೫೭, ೧೩೫೮, ೧೩೫೯, ೧೩೬೭, ೧೩೬೮, ೧೩೮೨, ೧೩೮೯, ೧೩೯೨, ೧೪೦೯, ೧೪೩೬, ೧೪೩೭, ೧೪೩೯, ೧೪೪೩, ೧೪೭೨, ೧೫೦೫, ೧೫೭೧, ೧೬೩೬, ೧೬೬೪, ೧೬೬೯, ೧೬೯೧, ೧೭೪೦, ೧೭೪೨, ೧೭೫೪, ೧೭೯೧, ೧೮೫೭, ೧೮೬೪, ೧೮೬೫, ೧೮೬೭, ೧೮೯೪, ೧೮೯೬, ೧೮೯೯, ೧೯೨೨, ೧೯೩೩, ೧೯೮೮, ೨೦೦೧, ೨೦೩೪, ೨೧೯೭, ೨೨೨೮, ೨೨೪೫, ೨೨೫೦, ೨೩೦೩, ೨೩೦೯, ೨೩೩೧, ೨೩೪೬, ೨೩೫೩, ೨೩೬೬, ೨೪೧೪, ೨೪೨೧, ೨೪೨೮, ೨೪೨೯, ೨೪೪೨

ಜ

ಜಗಳ : ೯೩೩, ೧೧೯೩, ೧೩೦೭

ಜಲಪಾತ : ೫೬, ೪೬೭, ೧೩೮೫, ೧೯೩೯, ೨೧೨೨

ಜಂಬ : ೧೪೨೦, ೧೪೨೩, ೧೩೩೬, ೧೪೩೨

ಜಾತಿ : ೬೨೮, ೭೬೬, ೧೧೬೨, ೧೨೨೯, ೧೨೩೦, ೧೯೩೧

ಜಾಹೀರಾತು : ೩೧೯, ೪೧೫, ೯೬೦, ೮೬೩, ೧೦೦೦, ೧೩೨೪, ೧೩೨೫, ೨೩೩೮, ೨೩೮೧

ಜೀವನ : ೩೩, ೨೯೨, ೩೬೦, ೩೬೬, ೩೯೨, ೪೦೯, ೪೧೩, ೪೧೬, ೫೦೧, ೫೭೦, ೫೯೨, ೭೯೨, ೭೯೩, ೮೬೭, ೯೧೩, ೯೩೭, ೯೪೧, ೯೪೨, ೯೭೫, ೧೧೧೭, ೧೧೨೭, ೧೨೧೪, ೧೨೧೫, ೧೨೧೬, ೧೨೨೨, ೧೨೩೪, ೧೨೩೫, ೧೨೯೯, ೧೩೦೬, ೧೩೧೬, ೧೩೪೬, ೧೪೪೦, ೧೫೧೨, ೧೫೪೨, ೧೫೬೬, ೧೬೦೧, ೧೬೦೩, ೧೭೦೬, ೧೭೧೫, ೧೭೨೭, ೧೭೨೮, ೧೭೩೮, ೧೭೫೬, ೧೭೬೩, ೧೮೫೬, ೧೮೬೬, ೧೯೦೭, ೧೯೭೦, ೧೯೭೭, ೨೧೪೧, ೨೨೪೧, ೨೨೪೬, ೨೨೪೭, ೨೨೪೮, ೨೩೭೦, ೨೩೭೭, ೨೩೯೬, ೨೪೨೩, ೨೪೨೬, ೨೪೨೭, ೨೪೩೫, ೨೪೭೫

ಜೂಜು : ೩೫೦

ಜೋಗವ್ವ : ೨೨೬೯, ೨೪೦೮

ಠ

ಠಕ್ಕರಬಾಪಾ : ೧೦೪೦

ಡ

ಡಾಕ್ಟರು (ವೈದ್ಯ) ೨೦೯೩, ೨೧೭೯, ೨೩೮೬

ತ

ತಗಣಿ : ೮೨೨

ತಾಯಿ : ೨೧೨೭

ತಾರುಣ್ಯ : ೧೪೩೩, ೧೫೧೧, ೧೯೭೧

ತ್ರಿಭುವನ : ೭೫೦, ೨೨೧೫

ತುಟ್ಟಿತನ : ೨, ೫೫, ೯೯, ೨೮೯, ೫೨೦, ೬೫೯, ೮೦೧, ೯೯೪, ೯೯೫, ೯೯೬, ೧೦೦೭, ೧೪೩೮, ೧೬೩೨, ೧೮೫೨, ೨೦೩೭, ೨೧೧೭, ೨೧೪೭, ೨೨೧೮, ೨೨೬೪, ೨೨೯೨, ೨೪೮೨

ತೆರಿಗೆ : ೪೯೦, ೫೭೯, ೬೩೨, ೬೩೩, ೯೪೬, ೧೦೧೭, ೧೪೮೦, ೧೭೫೫, ೧೮೦೩, ೧೯೩೫, ೨೧೭೬

ತೆಂಗಿನಕಾಯಿ : ೧೪೧೪

ದ

ದಣಪೆ : ೧೫೧೨

ದಂಗೆ : ೧೦೬೨, ೧೬೦೬

ದೀಪದ ಕಂಬ: ೧೧೭೨

ದೀಪಾವಳಿ : ೮೩, ೩೭೧, ೫೧೨, ೧೦೧೮, ೨೩೯೫

ದುಡಿತ : ೨೪೬೦

ದೇವದಾಸಿ : ೫೩೮, ೧೩೩೪

ದೇವರು : ೧೦೨೭, ೧೦೨೮, ೧೦೨೯, ೧೦೩೦, ೧೦೩೧, ೧೦೩೨, ೧೦೩೫, ೧೦೩೯, ೧೦೫೯, ೧೦೬೫, ೧೧೬೧, ೧೪೨೨, ೧೬೫೯, ೨೧೪೯, ೨೩೭೯, ೭೪೪೮, ೨೪೪೯, ೨೪೫೨, ೨೪೫೩, ೨೪೫೪, ೨೪೫೫, ೨೪೫೬

ದೇವಸ್ಥಾನ : ೪೪೮

ದೇಶಭಕ್ತಿ : ೧೮೫೯

ದೇಶಭಕ್ತರು : ೧೫೩, ೨೯೦, ೧೬೮೪, ೨೪೧೫, ೨೪೧೬

ಧ

ಧರ್ಮ : ೧೦೫೮

ಧಾನ್ಯ : ೧೮೮೧

ನ

ನಕ್ಷತ್ರ : ೬೦೪

ನಗು : ೭೭೨, ೫೦೮

ನರಕ : ೧೨೧೨, ೧೨೧೩

ನವ್ಯಕವಿ : ೬೫೨

ನಾಯಿ : ೪೭೩, ೧೬೪೦, ೨೨೧೬, ೨೨೯೫

ನ್ಯಾಟ್ ವಿಮಾನ : ೧೩೦೩

ನಿರುದ್ಯೋಗ : ೨೨, ೫೬೦, ೮೦೭, ೧೫೩೫, ೨೦೮೨, ೨೦೮೭, ೨೧೧೦, ೨೪೮೯,

ನಿವೇದನೆ : ೨೪೯, ೩೧೩, ೪೭೮, ೫೮೯, ೬೩೭, ೬೮೨, ೬೯೪, ೭೩೫, ೮೨೯, ೧೦೨೬, ೧೦೯೯, ೧೧೨೧, ೧೨೩೨, ೧೩೧೭, ೧೩೩೧, ೧೩೩೩, ೧೩೫೫, ೧೩೮೭, ೧೪೨೧, ೧೫೩೧, ೧೬೫೮, ೧೭೯೦, ೧೮೧೭, ೧೮೧೮, ೧೮೨೮, ೧೯೦೨, ೨೦೪೮, ೨೧೦೪, ೨೧೦೫, ೨೧೧೪, ೨೩೪೧, ೨೩೭೬

ನಿಸರ್ಗ : ೭೬೪, ೧೩೦೮, ೧೪೬೨, ೧೭೫೨, ೧೮೫೫, ೨೨೨೩

ನೆಗಡಲೆ : ೧೪೧೩

ನೆಲತಾಯಿ : ೨೭೯, ೨೮೦, ೩೬೨, ೭೩೨, ೭೫೬, ೭೮೭, ೧೩೩೮, ೧೩೪೫, ೧೭೦೭, ೧೭೧೨, ೨೦೯೬

ನೆಹರು : ೨೬೩, ೨೩೨೪, ೨೪೧೦

ಪ

ಪಕ್ಷಾಂತರ : ೭೧, ೯೬, ೯೮, ೧೬೯, ೧೭೦, ೧೭೧, ೧೭೨, ೧೭೩, ೧೭೪, ೧೭೫, ೨೧೨, ೨೯೪, ೨೯೫, ೩೨೦, ೩೨೩, ೩೮೨, ೪೨೦, ೫೧೩, ೮೧೩, ೧೩೯೭, ೧೩೯೮, ೧೪೧೯, ೧೫೪೪, ೧೬೪೫, ೧೭೬೦, ೧೮೦೯, ೨೦೦೯, ೨೦೨೦, ೨೧೦೭, ೨೧೦೮, ೨೧೮೨

ಪರಂಪರೆ : ೧೮೧೯, ೧೮೪೪, ೨೧೩೯

ಪರಾವಲಂಬನ : ೧೭೫೦

ಪರಿಷತ್ತು : ೨೩೩೩

ಪವಾಡ : ೨೨೯೦

ಪೃಥಿವಿ : ೨೯೭

ಪಂಚವಾರ್ಷಿಕ ಯೋಜನೆ : ೧೬೧, ೨೨೬, ೫೯೫, ೬೪೮, ೬೮೫, ೭೬೭, ೭೬೯, ೭೭೧, ೮೧೯, ೯೮೦, ೧೧೬೫, ೧೨೨೩, ೧೨೨೭, ೧೪೮೧, ೧೪೮೨, ೧೪೮೩, ೧೪೮೪,

೧೪೮೫, ೧೪೮೬, ೧೪೮೭, ೧೪೮೮, ೧೪೮೯, ೧೪೯೦, ೧೪೯೧, ೧೪೯೨, ೧೪೯೩, ೧೪೯೪, ೧೪೯೫, ೧೪೯೬, ೧೫೨೪, ೧೭೧೦, ೧೭೩೨, ೧೭೩೨, ೧೭೪೫, ೧೭೬೨, ೧೭೭೮, ೧೯೦೪, ೧೯೬೭, ೧೯೬೮, ೧೯೬೯, ೨೦೪೧, ೨೦೪೨, ೨೧೨೧, ೨೩೦೫, ೨೩೧೦, ೨೪೭೨, ೨೪೮೩

ಪ್ರಗತಿ : ೩೪೫, ೯೧೯, ೯೩೦, ೧೧೫೨, ೧೯೨೩, ೧೯೫೮

ಪ್ರಜಾವಾಣಿ : ೧೬೪೯

ಪ್ರಣಯ : ೭೭, ೧೩೨, ೧೬೩, ೩೪೪, ೩೫೨, ೩೮೭, ೪೨೧, ೪೬೦, ೫೬೩, ೫೭೧, ೬೫೩, ೭೪೫, ೭೯೧, ೮೦೮, ೯೧೬, ೧೧೦೨, ೧೦೦೩, ೧೧೧೦, ೧೧೧೨, ೧೧೨೯, ೧೧೩೦, ೧೧೩೨, ೧೧೫೯, ೧೨೩೧, ೧೨೯೭, ೧೩೧೪, ೧೩೨೯, ೧೩೩೫, ೧೩೪೮, ೧೩೬೩, ೧೪೨೭, ೧೫೨೮, ೧೬೫, ೧೬೨೨, ೧೬೫೩, ೧೭೨೫, ೧೭೩೪, ೧೭೪೧, ೧೭೪೪,೧೮೮೩, ೧೮೯೦, ೧೮೯೧, ೧೯೨೦, ೧೯೭೬, ೧೯೮೪, ೨೦೪೮, ೨೨೦೦, ೨೩೨೨, ೨೩೨೫, ೨೩೩೪, ೨೩೪೧, ೨೪೦೬

ಪ್ರಶಸ್ತಿ : ೬೫೦, ೬೫೮

ಪ್ರಸಿದ್ಧಿ : ೧೯೪೬

ಪಾಕಿಸ್ತಾ : ೭೩೪, ೧೬೪೩

ಪಾದರಕ್ಷೆ : ೪೭೪

ಪಾರಿಜಾತ : ೧೩೭೭, ೨೩೧೩

ಪ್ರೀತಿ : ೫೯೯, ೬೦೦, ೬೦೧, ೬೧೫, ೬೮೮, ೧೨೫೩, ೧೨೬೨, ೧೩೪೭, ೧೩೫೧, ೧೩೫೨, ೧೩೮೧, ೧೪೨೫, ೧೫೦೬, ೧೫೧೭, ೧೭೩೦, ೧೭೩೬, ೧೭೪೭, ೧೯೬೩, ೧೯೮೯, ೨೦೪೭, ೨೧೦೦

ಪುಢಾರಿ : ೧೬, ೩೪, ೧೮೧, ೧೮೩, ೧೯೪, ೨೨೯, ೨೧೬, ೨೧೭, ೩೩೬, ೩೩೭, ೧೦೫೧, ೧೦೬೯, ೧೦೭೮, ೧೧೬೪, ೧೨೪೫, ೧೨೪೭, ೧೪೪೪, ೧೬೧೮, ೧೬೧೯, ೧೬೪೪, ೧೬೭೩, ೧೭೭೭, ೨೪೬೫, ೨೪೮೭

ಪುಣ್ಯಕ್ಷೇತ್ರ : ೧೫೫, ೮೨೪, ೮೨೫, ೧೦೨೦, ೧೫೧೯

ಪೈರು : ೭೯೫

**ಫ**

ಫ್ಯಾಷನ್ನು : ೧೨೫೫, ೧೨೬೧, ೧೫೨೫, ೨೧೫೫, ೨೪೮೫

**ಬ**

ಬಜೆಟ್ಟು : ೧೪೭೫

ಬಡತನ : ೧೩೩, ೪೮೪, ೭೧೮, ೧೨೦೦, ೨೪೨೪

ಬದಲವಣೆ : ೧೧೦೨

ಬಸ್‌ಪ್ರಯಾಣ : ೨೨೪೪

ಬಸವಣ್ಣ : ೧೨೬೦

ಬಹುಮಾನ : ೯೫

ಬಂಗಾರ : ೧೫೭೨, ೧೫೭೩, ೧೫೭೫, ೧೫೭೬, ೧೫೭೭, ೧೫೭೮, ೧೫೭೯

ಬಂಧನ : ೧೬೨೦, ೨೩೪೨, ೨೩೪೩

ಬ್ರಹ್ಮಚಾರಿ : ೪೯೧

ಬ್ರಹ್ಮಾಂಡ : ೧೬೨೫

ಬಾಳೆ : ೪೭೫

ಬಿರುದು : ೧೧೮೨

ಬೂರಲಮರ : ೧೮೭೪

ಬೆಕ್ಕು : ೮೬೬, ೧೧೩೬, ೧೬೨೮, ೧೬೨೯, ೨೧೬೧

ಬೆಳದಿಂಗಳು : ೭೦

ಬೆಂಕಿ : ೧೯೫೬

ಬೇಹುಗಾರಿಕೆ : ೧೮೫೪

ಬೇಂದ್ರೆ : ೯೩, ೯೪, ೧೨೪೩

ಬ್ಲೇಕ್ ಕವಿ : ೧೪೪, ೪೯೩

ಭ

ಭಟ್ಟರು : ೨೬೬

ಭವಿಷ್ಯ : ೨೩೦೭

ಭ್ರಷ್ಟಾಚಾರ : ೪೬, ೮೨, ೧೨೧, ೧೩೫, ೨೧೯, ೨೨೪, ೨೨೫, ೨೮೧, ೩೦೭, ೩೦೯, ೩೧೦, ೩೧೫, ೩೧೮, ೩೩೫, ೩೩೭, ೩೩೮, ೩೪೨, ೩೪೬, ೩೪೮, ೩೬೧, ೩೭೯, ೪೩೦, ೪೫೦, ೫೧೫, ೫೨೪, ೫೪೧, ೫೪೪, ೫೮೬, ೬೦೩, ೬೪೦, ೬೭೫, ೭೨೦, ೭೨೭, ೭೪೫, ೮೧೭, ೮೨೦, ೮೨೭, ೮೨೮, ೯೦೪, ೯೩೬, ೯೪೮, ೯೨೯, ೯೯೨, ೧೦೪೫, ೧೦೪೬, ೧೦೬೬, ೧೦೭೭, ೧೩೧೯, ೧೩೨೨, ೧೩೨೬, ೧೩೯೯, ೧೪೧೫, ೧೬೪೪, ೧೪೩೮, ೧೫೮೪, ೧೫೮೭, ೧೬೦೦, ೧೬೪೮, ೧೬೬೮, ೧೬೭೪, ೧೬೯೨, ೧೭೧೯, ೧೭೨೦, ೧೭೨೧, ೧೭೮೮, ೧೮೦೭, ೧೮೦೮, ೧೮೬೧, ೧೯೧೩, ೧೯೧೬, ೧೯೨೧, ೧೯೨೮, ೧೯೭೫, ೧೯೮೩, ೧೯೯೪, ೨೦೦೦, ೨೦೦೬, ೨೦೧೨, ೨೦೧೩, ೨೦೩೧, ೨೦೫೫, ೨೦೫೬, ೨೦೫೭, ೨೦೮೧, ೨೦೯೧, ೨೦೯೨, ೨೧೮೮, ೨೨೦೫, ೨೨೦೬, ೨೨೩೫, ೨೨೭೪, ೨೨೯೧, ೨೩೦೦, ೨೩೪೭, ೨೩೫೭, ೨೪೪೭, ೨೪೬೪, ೨೪೬೬, ೨೪೭೦, ೨೪೮೪, ೨೪೯೪

ಭಾಷಣ : ೧೬೮೮, ೧೬೯೪, ೧೬೯೫, ೧೭೭೨, ೧೭೯೩

ಭಾಷೆ : ೧೪೫, ೫೭೯, ೬೦೮, ೬೧೦, ೬೧೧, ೬೧೮, ೬೨೧, ೬೮೭, ೬೯೧, ೬೭೩, ೧೧೦೦, ೧೪೯೭, ೧೪೯೮, ೧೫೭೪, ೧೬೨೬, ೧೬೫೪, ೧೬೯೬, ೧೬೯೭, ೧೬೯೮, ೧೬೯೯, ೧೭೦೦, ೧೭೦೧, ೧೭೦೨, ೧೭೦೩, ೧೭೦೪, ೧೮೪೦, ೨೩೬೩

ಭಿಕ್ಷೆ ೪೧೨

ಭೂತ : ೧೦೨೩

ಮ

ಮದ್ಯ : ೨೯೬, ೮೬೨, ೯೯೮

ಮದುವೆ : ೧೪೧, ೫೩೦, ೭೦೨, ೯೮೧, ೧೦೦೪, ೧೧೨೭, ೨೩೯೪

ಮನೆ : ೮೯೧

ಮರಣ : ೧೦೦೫

ಮಲೆನಾಡು : ೧೨, ೨೧೪೪

ಮಲೆನಾಡ ರಮಣಿ : ೧೭೬೭

ಮಳೆ : ೩೬೯ : ೩೭೦, ೫೫೧, ೫೫೫, ೧೬೧೬, ೧೭೭೦, ೧೭೭೫

ಮಹಾತ್ಮಾ ಗಾಂಧಿ : ೫೨, ೬೫, ೫೧೭, ೭೪೯, ೮೦೨, ೯೮೩, ೧೧೨೩, ೧೨೮೯, ೧೫೮೩, ೧೫೮೫, ೧೫೮೬, ೧೫೮೯, ೧೫೯೦, ೧೫೯೧, ೧೫೯೨, ೧೫೯೩, ೧೫೯೪, ೧೫೯೫, ೧೫೯೬, ೧೫೯೭, ೧೫೯೮, ೧೫೯೯, ೧೬೬೫೨, ೧೬೭೯, ೧೮೫೩, ೧೯೧೭, ೧೯೨೯, ೨೦೦೭, ೨೦೮೯, ೨೧೪೨

ಮಹಾಸಭೆ : ೩೪೦, ೧೪೩೪, ೧೪೫೦, ೧೪೫೧, ೨೨೯೬

ಮಂತ್ರಿ : ೯, ೨೩೪, ೨೫೦, ೨೫೭, ೩೦೮, ೪೫೫, ೫೦೨, ೧೨೪೬, ೧೪೪೧, ೧೪೭೮, ೧೬೬೬, ೧೬೬೭, ೧೬೮೨, ೧೬೮೩, ೧೬೮೯, ೧೬೯೩, ೧೭೫೭, ೧೭೮೬, ೧೭೮೭, ೧೭೯೫, ೧೭೯೮, ೧೭೯೯, ೧೮೦೦, ೧೮೦೨, ೧೮೧೦, ೧೮೧೧, ೧೮೧೩, ೧೮೧೫, ೧೮೧೬, ೧೮೭೦, ೧೮೭೧, ೧೮೯೮, ೧೯೮೬, ೨೦೨೮, ೨೦೩೫, ೨೧೬೯, ೨೩೨೩, ೨೩೮೮, ೮೬೨೪

ಮಾತು : ೨೧, ೧೮೨, ೨೧೭, ೨೨೮, ೨೩೬, ೩೪೩, ೩೫೮, ೩೬೭, ೬೭೮, ೮೨೦, ೮೩೬, ೯೨೩, ೧೦೮೧, ೧೨೨೬, ೧೫೪೦, ೧೮೨೯, ೧೮೩೦, ೧೮೩೧, ೧೮೩೩, ೧೮೩೫, ೧೮೩೬, ೧೮೩೭, ೧೮೩೮, ೧೮೩೯, ೧೮೪೧, ೧೯೯೨, ೨೧೫೬, ೨೨೫೨, ೨೨೫೮, ೨೩೧೬, ೨೩೮೪, ೨೪೩೭, ೨೪೯೦

ಮಾನವ : ೭೭೮, ೧೦೨೫, ೧೫೭೦

ಮಾವೊ : ೨೨೭೧

ಮಿಸ್ ಪ್ರಿಂಟ್ : ೩೭೪, ೧೨೯೦, ೧೨೯೩

ಮಿಂಚುಹುಳು : ೧೭೭೩

ಮೀನುಗಾರ : ೬೧೯, ೯೨೭, ೧೫೬೩, ೧೯೯೦

ಮೀನುಗಾರಿಕೆ : ೧೪೯

ಮುಗುಳುನಗೆ : ೧೮೭೫

ಮುನ್ನುಡಿ : ೧೮೭೫

ಮುಪ್ಪು : ೬೩, ೧೮೮೪, ೧೮೮೮, ೧೮೯೩

ಮುಷ್ಕರ : ೧೧೯೨

ಮೂಢಭಕ್ತಿ : ೩೭೫, ೩೮೮

ಮೂಲಂಗಿ : ೨೪೧೨

ಮೌನ : ೫೯೩

ಯ

ಯುದ್ಧ : ೩೯೫, ೧೯೭೪, ೨೪೨೦

ರ

ರಾಗಿ : ೫೬೪

ರಾಜಕಾರಣ : ೭, ೧೧, ೨೪, ೬೬, ೯೭, ೧೨೨, ೧೭೮, ೧೭೯, ೨೨೧, ೨೨೨, ೨೩೫, ೨೫೪, ೨೫೫, ೨೬೮, ೨೬೯, ೨೯೩, ೩೦೧, ೩೦೨, ೩೨೧, ೩೨೨, ೩೨೪, ೩೩೦, ೩೫೪, ೩೫೬, ೩೭೨, ೩೯೩, ೪೦೦, ೪೦೮, ೪೧೪, ೪೧೭, ೪೨೪, ೪೨೮, ೫೩೧, ೫೩೩, ೫೩೬, ೫೩೯, ೫೮೮, ೬೦೬, ೬೩೧, ೬೭೦, ೬೭೬, ೬೭೭, ೭೪೧, ೭೪೮, ೭೫೫, ೭೭೬, ೭೮೫, ೭೯೭, ೮೪೧, ೯೨೪, ೯೩೮, ೯೫೩, ೯೫೮, ೯೬೫, ೧೧೬೮, ೧೧೯೪, ೧೧೯೫, ೧೨೧೯, ೧೩೩೭, ೧೩೬೦, ೧೪೨೪, ೧೪೩೨, ೧೪೬೫, ೧೫೦೧, ೧೫೨೬, ೧೫೩೬, ೧೫೩೮, ೧೫೮೦, ೧೬೫೧, ೧೬೭೨, ೧೭೪೬, ೧೭೯೪, ೧೭೯೬, ೧೮೦೫, ೧೮೦೬, ೧೮೫೮, ೧೮೬೨, ೧೯೧೪, ೧೯೧೮, ೧೯೨೬, ೧೯೨೭, ೧೯೫೨, ೧೯೯೧, ೧೯೯೫, ೧೯೯೭, ೧೯೯೯, ೨೦೦೪, ೨೦೧೦, ೨೦೧೧, ೨೦೧೪, ೨೦೧೫, ೨೦೧೮, ೨೦೨೧, ೨೦೨೨, ೨೦೨೩, ೨೦೨೪, ೨೦೨೭, ೨೦೮೩, ೨೨೯೪, ೨೩೫೬, ೨೪೪೪, ೨೪೪೫, ೨೪೭೬, ೨೪೭೭, ೨೪೭೮, ೨೪೯೭

ರಾಜ್ಯಪಾಲ : ೧೪೮, ೩೨೮, ೭೩೩, ೧೨೩೯, ೨೦೨೯

ರಾಷ್ಟ್ರಪತಿ : ೨೦೩೯

ರಾಷ್ಟ್ರಪತಿ ಭವನ : ೨೦೩೮

ರಾಷ್ಟ್ರಸಂಘ : ೫೯೦, ೭೯೪, ೧೦೬೪, ೧೮೪೭, ೨೨೮೨

ರೇಷನ್ನು : ೧೨೬, ೧೪೦, ೩೦೩, ೩೪೯, ೫೪೭, ೧೦೬೭, ೧೬೩೯, ೧೭೮೫, ೨೦೪೪, ೨೧೧೬, ೨೧೫೫, ೨೩೬೮

ರೈತ : ೧೬೪೨, ೧೨೮೭

ರೈಲುಗಾಡಿ : ೬, ೧೪೭೯

ರೋಗ : ೨೦೪೬

ರೋಟರಿ ಕ್ಲಬ್ಬು : ೧೧೭೪

ಲ

ಲಲಿತಾ : ೧೧೩೭, ೧೧೩೮, ೧೧೩೯, ೧೧೪೦, ೧೧೪೧, ೧೧೪೨, ೧೧೪೩, ೧೧೪೪, ೧೧೪೫, ೧೧೪೬, ೧೧೪೭, ೧೧೪೮, ೧೧೪೯, ೧೧೫೦, ೧೧೫೧, ೧೧೫೨, ೧೧೫೩, ೧೧೫೪, ೧೧೫೫, ೧೧೫೬

ಲಂಚ : ೩೫, ೪೦, ೪೨, ೫೭, ೬೮, ೨೫೯,

೨೬೧, ೨೬೫, ೨೬೭, ೨೮೭, ೩೧೧, ೩೩೪, ೩೫೭, ೩೮೫, ೪೧೯, ೪೮೦, ೪೮೮, ೫೨೬, ೫೪೦, ೬೧೬, ೬೭೧, ೬೭೨, ೭೪೬, ೭೬೨, ೭೭೦, ೭೭೪, ೯೩೪, ೯೬೯, ೯೭೭, ೯೭೮, ೯೮೬, ೧೨೫೨, ೧೪೫೯, ೧೫೪೧, ೧೬೭೦, ೧೬೭೧, ೧೭೮೩, ೧೮೧೪, ೧೯೫೪, ೨೦೧೭, ೨೧೩೧, ೨೧೩೫, ೨೨೦೩, ೨೨೩೭, ೨೩೦೧, ೨೩೦೨, ೨೩೪೮, ೨೩೬೪, ೨೪೧೯, ೨೪೫೧, ೨೪೭೯

ಲಿಪ್‌ಸ್ಟಿಕ್ : ೧೨೩

ಲೆಕ್ಕ : ೨೦೫೨

ಲೇಖನಿ : ೧೪೭, ೯೬೬, ೧೧೨೫, ೧೨೪೮, ೨೦೫೩, ೨೦೫೪

ವ

ವಕೀಲರು : ೩೬೩, ೮೧೪, ೯೬೭, ೧೩೨೦

ವರದಕ್ಷಿಣೆ : ೫೪೮

ವಶೀಲಿ : ೫೧೯, ೧೭೭೪, ೨೧೬೫, ೨೩೯೭

ವೃಕ್ಷ : ೪೭೨, ೫೮೭

ವೃತ್ತಪತ್ರಿಕೆ : ೧೩೨೮, ೧೮೬೯, ೨೦೬೯, ೨೯೭೦, ೨೦೭೧, ೨೩೧೫

ವೃತ್ತಿಗಳು : ೭೪

ವ್ಯಕ್ತಿಪರಿಚಯ : ೩, ೮, ೫೪, ೧೦೯, ೧೨೮, ೧೨೯, ೧೩೭, ೧೪೩, ೧೪೬, ೧೫೭, ೧೬೮, ೧೮೫, ೧೮೬, ೧೮೭, ೧೮೮, ೧೮೯, ೧೯೦, ೧೯೧, ೧೯೨, ೧೯೬, ೧೯೭, ೧೯೮, ೧೯೯, ೨೦೦, ೨೦೧, ೨೦೨, ೨೦೩, ೨೦೪, ೨೦೫, ೨೦೬, ೨೦೮, ೨೧೦, ೨೧೧, ೨೧೩, ೨೧೪, ೨೧೫, ೨೧೬, ೨೨೭, ೨೩೯, ೨೪೦, ೨೪೧, ೨೪೨, ೨೪೫, ೨೫೮, ೨೮೫, ೨೮೬, ೩೧೪, ೩೨೬, ೩೨೭, ೩೩೧, ೩೩೩, ೩೩೯, ೩೬೫, ೩೭೩, ೪೪೬, ೪೯೨, ೫೦೦, ೫೦೩, ೫೦೮, ೫೦೯, ೫೧೧, ೬೩೫, ೬೬೫, ೬೬೭, ೬೬೯, ೭೦೪, ೭೩೦, ೮೬೬, ೯೨೬, ೯೫೧, ೯೭೧, ೧೦೧೩, ೧೦೬೧, ೧೦೯೭, ೧೧೦೪, ೧೧೫೮, ೧೧೬೬, ೧೧೭೦, ೧೧೭೧, ೧೧೭೫, ೧೧೮೦, ೧೧೮೩, ೧೧೮೭, ೧೧೮೮, ೧೧೯೦, ೧೧೯೬, ೧೧೯೭, ೧೧೯೮, ೧೧೯೯, ೧೨೦೧, ೧೨೦೨, ೧೨೧೧, ೧೨೧೮. ೧೨೬೩, ೧೪೦೪, ೧೪೦೫, ೧೪೦೬, ೧೪೦೭, ೧೪೦೮, ೧೪೧೦, ೧೪೭೩, ೧೫೦೯, ೧೫೧೦, ೧೫೬೭, ೧೫೬೯, ೧೭೧೮, ೧೭೪೮, ೧೭೫೩, ೧೮೧೨, ೧೮೩೪, ೧೮೮೨, ೧೯೪೧, ೧೯೪೨, ೧೯೪೮, ೧೯೫೧, ೧೯೬೦, ೧೯೬೪, ೧೯೬೫, ೧೯೯೮, ೨೦೩೬, ೨೦೪೯, ೨೧೦೩, ೨೧೦೬, ೨೧೦೯, ೨೧೧೯, ೨೨೬೨, ೨೨೬೫, ೨೨೬೬, ೨೨೮೦, ೨೨೮೪, ೨೨೮೭, ೨೩೩೦, ೨೩೫೮, ೨೩೯೩, ೨೩೯೮, ೨೪೦೧, ೨೪೨೫, ೨೪೩೮, ೨೪೯೬

ವಂಕಿ : ೨೦೫೦, ೨೦೫೧, ೨೦೭೪

ವಂಚನೆ : ೭೩, ೮೭, ೨೩೭, ೨೩೮, ೨೪೪, ೧೩೧೫, ೧೬೨೩, ೨೧೫೨, ೨೧೭೩, ೨೧೭೮, ೨೨೦೧

ವ್ಯಾಪಾರ : ೪೩೯

ವಿಜ್ಞಾನ : ೨೦೭೯

ವಿದ್ಯಾರ್ಥಿ : ೨೯೭೮, ೨೦೭೯

ವಿದ್ಯುತ್ : ೧೨೦೮

ವಿದ್ಯೆ : ೧೩೭೩

ವಿದೇಶಿನೀತಿ : ೧೯, ೪೨೨, ೧೯೮೧, ೨೨೩೩

ವಿದೇಶಿ ನೆರವು : ೬೦, ೫೧೮, ೮೭೦, ೧೧೬೩, ೧೬೭೫, ೧೬೭೬, ೧೯೮೦, ೧೯೮೨, ೨೩೭೫, ೨೪೯೧

ವಿಮರ್ಶೆ : ೬೪೭, ೭೦೬, ೭೦೯, ೯೫೪, ೧೧೮೯, ೧೩೧೦, ೧೩೧೨, ೧೩೬೫,

೧೯೦೫, ೧೯೦೬, ೨೩೨೦
ವಿಮಾನ ಯಾನ : ೧೩೬೬
ವಿಶ್ವೇಶ್ವರಯ್ಯ : ೯೫೦
ವಿ.ಸೀ. : ೧೩೬೬
ವಿಶ್ವೇಶ್ವರಯ್ಯ : ೯೫೦
ವಿ. ಸೀ. : ೧೩೭೯
ವೇಶ್ಯಾಸ್ತ್ರೀ : ೧೦೭, ೧೧೭೯, ೧೫೦೮, ೨೪೬೭
ವೈವಿಧ್ಯ : ೬೭೩

ಶ

ಶನಿ : ೨೧೯೮
ಶ್ರಮದಾನ : ೨೦೭೭
ಶೃಂಗಾರ : ೨೩೦೬
ಶಾಸಕ : ೩೨೯, ೫೧೬, ೧೦೨೪, ೧೨೭೯, ೧೫೦೬, ೧೮೪೮, ೨೦೦೫, ೨೪೬೧
ಶಾಸನಸಭೆ : ೩೩೨, ೭೪೪, ೧೨೪೩, ೨೦೬೦, ೨೦೬೧, ೨೦೬೨, ೨೦೬೩
ಶ್ರಾದ್ಧ : ೨೧೪೬
ಶಾನುಭೋಗ : ೭೨೫, ೭೫೩, ೧೦೭೬
ಶಿಕ್ಷಣ : ೮೬, ೧೨೪, ೧೫೨, ೫೫೪, ೧೦೭೩, ೧೪೦೧, ೧೮೨೫, ೧೮೯೫, ೨೦೮೦, ೨೧೧೧, ೨೧೮೯, ೨೩೮೯, ೨೪೩೪
ಶಿಲ್ಪಕಲೆ : ೫೨೩, ೬೪೪
ಶಿಸ್ತು : ೪೪೪, ೧೬೭೮, ೨೧೧೨
ಶೂನ್ಯ : ೧೨೭೫, ೧೫೫೯
ಶೈಲಿ : ೫೦, ೫೧, ೫೦೭, ೬೨೭, ೬೪೮, ೬೮೯, ೬೫೩, ೬೫೪, ೬೫೭, ೬೮೩, ೭೦೦, ೯೬೨, ೧೦೯೩, ೧೨೭೩, ೧೨೭೪, ೧೨೯೧, ೧೨೯೬, ೧೨೯೮, ೧೩೦೧, ೧೩೧೧, ೧೩೧೩, ೧೩೭೬, ೧೩೯೪, ೧೩೯೫, ೧೪೧೨, ೧೪೫೩, ೧೪೫೪, ೧೪೫೫, ೧೪೫೬, ೧೪೫೭, ೧೫೧೩, ೧೫೧೪, ೧೫೪೫, ೧೫೪೬, ೧೫೪೭, ೧೫೪೯, ೧೫೫೦, ೧೫೫೨, ೧೫೫೪, ೧೫೫೭, ೧೫೮೨, ೧೭೮೧, ೧೮೨೭, ೨೧೨೩, ೨೪೪೩, ೨೪೫೯

ಸ

ಸತ್ಯನಾರಾಯಣ : ೧೧೩, ೨೧೪೮
ಸನ್ಯಾಸಿ : ೪೫೨, ೨೨೪೦, ೨೨೫೭
ಸಮರ್ಥನೆ : ೫೩, ೧೩೦, ೧೩೯, ೧೪೨, ೧೬೭, ೨೩೨, ೨೪೮, ೨೬೨, ೨೮೪, ೩೯೬, ೪೦೫, ೪೩೫, ೪೫೧, ೫೨೧, ೫೨೯, ೫೫೮, ೫೯೪, ೫೯೮, ೬೭೪, ೬೮೦, ೬೮೪, ೧೦೧೪, ೧೦೪೩, ೧೦೫೨, ೧೦೫೩, ೧೨೬೫, ೧೨೭೭, ೧೨೭೮, ೧೩೪೧, ೧೩೬೨, ೧೩೭೪, ೧೩೯೦, ೧೪೧೧, ೧೫೬೪, ೧೬೩೦, ೧೭೩೫, ೧೭೫೯, ೧೭೮೨, ೧೭೮೯, ೧೭೯೨, ೧೯೦೩, ೨೦೦೮, ೨೧೩೦, ೨೧೩೨, ೨೧೬೭, ೨೧೮೦, ೨೧೯೬, ೨೨೪೯, ೨೨೯೩, ೨೩೩೭, ೨೩೪೫, ೨೩೬೯
ಸಮಿತಿ : ೧೪೪೭, ೧೯೬೧, ೨೧೭೦,
ಸಮುದ್ರ : ೪೯೫, ೨೨೫೫, ೨೨೫೬
ಸಮ್ಮೇಲನ : ೧೧೪
ಸರಕಾರಿ ಅಂಗಡಿ : ೨೧೬೩
ಸರಕಾರಿ ಕಾಮಗಾರಿ : ೬೯, ೮೩೯, ೯೬೮, ೧೧೭೩, ೧೨೦೬, ೧೪೪೨, ೧೮೨೪
ಸರಳತೆ : ೭೨೬, ೧೮೫೧
ಸಲಹೆ : ೬೪, ೧೦೬, ೨೮೨, ೩೪೭, ೩೫೩, ೪೧೦, ೪೧೧, ೪೪೧, ೫೧೦, ೬೦೫, ೮೩೦, ೯೭೦, ೯೮೫, ೧೧೬೯, ೧೨೮೦, ೧೨೮೧, ೧೨೮೨, ೧೩೭೦, ೧೩೭೨, ೧೩೬೮, ೧೫೨೦, ೧೫೫೧, ೧೫೬೨, ೧೬೦೨, ೧೮೨೩, ೧೯೪೯, ೧೯೫೯, ೨೧೯೦, ೨೧೮೩
ಸರ್ವಜ್ಞ : ೯೮೨, ೧೩೭೧, ೨೧೯೦, ೨೧೯೧,

೨೯೯೨, ೨೯೯೩, ೨೯೯೪, ೨೯೯೫
ಸರ್ವಾಧಿಕಾರಿ : ೨೯೯೮
ಸಹಕಾರಿ ಸಂಘ : ೧೨೦೭, ೧೫೨೧, ೨೨೨೧, ೨೨೨೨
ಸಹ್ಯಾದ್ರಿ : ೨೨೩೧
ಸಂಗೀತ : ೧೨೧೦, ೨೨೮೧
ಸಂತತಿ ನಿಯಂತ್ರಣ : ೧೧೮, ೪೨೩, ೫೪೯, ೮೪೭, ೧೦೬೦, ೧೬೮೭, ೧೬೯೦, ೨೨೩೦, ೨೨೮೬, ೨೪೪೧
ಸಂಭಾವನಾ ಗ್ರಂಥ : ೨೧೨೪
ಸಂಶೋಧನೆ : ೯೪೪, ೧೦೨೧, ೨೪೩೬, ೨೪೬೪
ಸ್ಥಳ ಪರಿಚಯ : ೨೨೧೪, ೨೨೭೬
ಸ್ಥಳ ಪುರಾಣ : ೨೧೧೫
ಸ್ವರ್ಗ : ೧೩೦೪, ೧೪೩೫, ೧೬೫೭, ೨೨೧೦, ೨೨೧೧, ೨೨೧೨, ೨೨೧೩, ೨೩೧೮
ಸಾಮ್ರಾಜ್ಯ : ೪೪೩, ೪೫೯, ೨೨೮೯
ಸ್ಮಾರಕ : ೬೬೮, ೨೧೪೫, ೨೩೩೨
ಸಾಹಿತಿಗಳು : ೧೧೭೮
ಸಾಹಿತಿ : ೪೮, ೫೨೭, ೬೧೨, ೧೦೨೭, ೧೪೫೮, ೧೪೬೦, ೧೫೦೭, ೧೭೬೧, ೧೯೩೨, ೨೧೧೩, ೨೨೯೭, ೨೨೯೮, ೨೩೯೦
ಸ್ವಾರ್ಥ : ೧೬೩೨, ೧೯೪೭
ಸಿನೇಮಾ : ೮೪೯
ಸೂರ್ಯ : ೭೨೧, ೧೦೧೦, ೧೦೧೧, ೧೬೧೦, ೧೯೧೫, ೧೯೭೯, ೨೩೨೭, ೨೩೨೮, ೨೩೨೯, ೨೩೩೫,
ಸೂರ್ಯೋದಯ : ೧೬೫
ಸೇನೆ : ೧೫೬
ಸೇವೆ : ೫೪೨, ೫೭೭, ೫೭೮, ೯೧೭, ೨೦೨೫, ೨೨೮೮, ೨೩೬೫
ಸೋಫಾ : ೧೯೩೬

ಹ

ಹಕ್ಕಿ : ೭೮೦, ೧೯೫೭
ಹಕ್ಕಿಗೂಡು : ೧೪೦೨
ಹಣ : ೨೮೩, ೩೦೬, ೪೯೪, ೫೪೩, ೫೭೫, ೬೩೬, ೧೩೨೧, ೨೩೪೯, ೨೩೫೦
ಹಣದುಬ್ಬರ : ೬೭೫, ೨೪೬೩
ಹದ್ದು : ೧೪
ಹನುಮಂತ : ೧೩೮೪
ಹಬ್ಬ : ೯೭೬, ೧೧೮೬, ೨೦೬೭
ಹರಿಜನರು : ೭೪೭, ೨೩೭೧, ೨೩೭೨, ೨೩೭೩
ಹಾಲಕ್ಕಿ ಒಕ್ಕಲು, ೬೨, ೮೫, ೧೮೩, ೬೦೯, ೭೪೩, ೮೩೩, ೨೪೦೦
ಹಿಜಡಿ : ೫೦೬
ಹಿಪ್ಪಿಗಳು : ೭೭೭
ಹುಳ : ೨೪೩೧
ಹೂವು : ೪೮೧, ೪೮೨, ೫೩೪, ೮೦೩, ೯೨೯, ೯೩೧, ೧೫೦೪, ೧೭೬೪, ೨೨೬೦, ೨೩೧೭
ಹೆಣ್ಣು : ೭೯೫, ೧೪೭೪, ೨೨೪೨, ೨೪೪೦
ಹೆಂಡತಿ : ೧೦೩೮
ಹೊಗಳಿಕೆ (ಮುಕಸ್ತುತಿ) : ೯೭೨, ೧೩೬೪, ೧೪೭೦, ೧೫೨೨, ೨೦೦೩, ೨೫೦೦
ಹೊಲಿಗೆಯ ಯಂತ್ರ ೭೧೯, ೧೦೧೯
ಹೋರಾಟ : ೨೪೯೮, ೨೪೯೯

ದಿನಕರ ದೇಸಾಯರ ಚೌಪದಿಗಳ ವಸ್ತು ವೈವಿಧ್ಯ ಬೆರಗುಗೊಳಿಸುವಂತಿದೆ. ಬೇರೆ ಯಾವ ಕವಿಗಳ ಕಿರುಗವನಗಳಲ್ಲೂ ಇಷ್ಟು ದೊಡ್ಡ ಪ್ರಮಾಣದಲ್ಲಿ ವಸ್ತು ವೈವಿಧ್ಯ ಇರುವುದನ್ನು ಕಾಣಲು ಸಾಧ್ಯವಿಲ್ಲ. ಅವರು ಯಾರನ್ನೂ, ಯಾವುದನ್ನೂ, ತಮ್ಮ ಚುಟುಕಗಳಿಂದ ಹೊರಗಿಟ್ಟಿಲ್ಲ. ಸೂಳೆಯಿಂದ ಸನ್ಯಾಸಿಯವರೆಗೆ, ಕಡು ಬಡವರಿಂದ, ಆಗರ್ಭ ಶ್ರೀಮಂತರವರೆಗೆ ವಿವಿಧ ವೃತ್ತಿಗಳಲ್ಲಿ, ಕಸಬು–ಉಪಕಸಬುಗಳಲ್ಲಿ ತೊಡಗಿಕೊಂಡವರೆಲ್ಲ ಇವರ ಚುಟಕಗಳಿಗೆ ಆಹಾರವಾಗಿದ್ದಾರೆ. ರಾಜಕಾರಣಿಗಳು ಮತ್ತು ಸರಕಾರವನ್ನಂತೂ ಇವರು ಜಾಲಾಡಿಸಿದ ಹಾಗೆ ಇನ್ನಾವ ಕವಿಯೂ ಜಾಲಾಡಿಸಿದ್ದು ಕಂಡುಬರುವುದಿಲ್ಲ. ವ್ಯಂಗ್ಯ–ವಿನೋದ ಇವರಲ್ಲಿ ರಕ್ತಗತವಾಗಿದೆಯೋ ಎಂಬಂತೆ ಬರವಣಿಗೆಯಲ್ಲಿ ಮೂಡಿಬಂದಿದೆ. ಭ್ರಷ್ಟಾಚಾರದ ಬಗ್ಗೆ, ಆಡಳಿತಶಾಹೀ, ದರಬಾರುಗಳ ಬಗ್ಗೆ, ಕಾಳಸಂತೆಗಳಿಂದ ಜನಕಂಟಕರಾದವರ ಬಗ್ಗೆ, ಕೊಳಕು ಅಂಧಶ್ರದ್ಧೆಗಳ ಬಗ್ಗೆ, ಹೀಗೆ ಈ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಒಳ್ಳೆಯ ಸಂಗತಿಗಳನ್ನು ಮುಕ್ತವಾಗಿ ಮೆಚ್ಚುವ ಸಾವಿರಾರು ಚುಟುಕಗಳೂ ಇವೆ. ನಾಡು–ನುಡಿ ಅಭಿಮಾನ, ಸೇವೆ, ಜೀವನಾನುಭವ, ಪ್ರೀತಿ–ಪ್ರೇಮ–ಕಾಮ, ಸುಖದಾಂಪತ್ಯ, ವ್ಯಕ್ತಿಗಳ ಕುರಿತ ಗುಣ–ಗೌರವ ಭಾವನೆ, ನಿಸರ್ಗರಮ್ಯ ಸಂಗತಿಗಳು, ಶಿಕ್ಷಣ–ಸಂಸ್ಕೃತಿ ಹೀಗೆ ಈ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಇವರ ಚುಟಕಗಳ ಒಂದು ಗುಣವಿಶೇಷವೆಂದರೆ, ನಾಲ್ಕು ಸಾಲಿನಲ್ಲಿ ಕವಿಯ, ಅವನ ಕಾವ್ಯದ ವಿಮರ್ಶೆಯನ್ನೂ ಮಾಡಿ, ನಿಜವಾದ ಕವಿತೆ ಹೇಗಿರಬೇಕು ಎಂಬ ಕುರಿತಾಗಿ ಬರೆದ ಅನೇಕ ಚೌಪದಿಗಳನ್ನು ಕಾಣಬಹುದಾದದ್ದು. ಹೀಗೆ ಹನಿಗವನಗಳನ್ನು ಕವಿ–ಕಾವ್ಯ ವಿಮರ್ಶೆಗೆ ಬಳಸಿಕೊಂಡವರು ಕನ್ನಡದಲ್ಲಿ ಬಹಳ ಕಡಿಮೆ. ಅಲ್ಲಿ ಇಲ್ಲಿ ಕಂಡರೂ, ಅವರಿಗೆಲ್ಲಾ ದೇಸಾಯಿಯೇ ಮೇಲ್ಪಂಕ್ತಿ ಎನ್ನಬಹುದು.

–ಪ್ರಸ್ತಾವನೆಯಿಂದ